'ಶ್ರೀ ಜನ್ಮಶತಾಬ್ದಿ ಕೃತಿಮಾಲೆ - ೫'

# ಶ್ರೀನಿಧಿ

## ಬಿ. ಎಂ. ಶ್ರೀ. ಜನ್ಮ ಶತಮಾನೋತ್ಸವ ನೆನಪಿನ ಸಂಪುಟ

ಸಂಪಾದಕರು

ಡಾ॥ ಜಿ. ಎಸ್. ಶಿವರುದ್ರಪ್ಪ



ಪ್ರಕಾಶಕರು

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾ

ಗವಿಪುರಂ ವಿಸ್ತರಣ, ಬೆಂಗಳೂರು-೫೬೦

'ಶ್ರೀ ಜನ್ಮಶತಾಬ್ದಿ ಕೃತಿಮಾಲೆ – ೫'

# ಶ್ರೀನಿಧಿ

## ಬಿ. ಎಂ. ಶ್ರೀ. ಜನ್ಮ ಶತಮಾನೋತ್ಸವ ನೆನಪಿನ ಸಂಪುಟ

ಸಂಪಾದಕರು

ಡಾ॥ ಜಿ. ಎಸ್. ಶಿವರುದ್ರಪ್ಪ

ಪ್ರಕಾಶಕರು

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ

ಗವಿಪುರಂ ವಿಸ್ತರಣ, ಬೆಂಗಳೂರು-೫೬೦ ೦೧೯

SREENIDHI : B. M. Sri Centenary Volume. Published by B. M. Sri Smaraka Pratishthana, Gavipuram Extension, Bangalore-560 019. First Edition : 1985. Pages : 432 + XVI. Price : Rs. 60-00.





ಮೊದಲ ಮುದ್ರಣ : ೧೯೮೫

ಬೆಲೆ : ರೂ. ೬೦-೦೦



ಸಂಪಾದಕ ಮಂಡಲಿ :

ಸಂಪಾದಕರು

ಡಾ॥ ಜಿ. ಎಸ್. ಶಿವರುದ್ರಪ್ಪ

ಸಹಾಯಕ ಸಂಪಾದಕರು

ಡಾ॥ ಕೆ. ವಿ. ನಾರಾಯಣ

ಸದಸ್ಯರು

ಶ್ರೀ ಚನ್ನವೀರ ಕಣವಿ

ಪ್ರೊ॥ ಚಿ. ನ. ಮಂಗಳಾ

ಡಾ॥ ಸಿ. ಪಿ. ಕೃಷ್ಣಕುಮಾರ್

ಮುದ್ರಕರು :

ರಾಷ್ಟ್ರೋತ್ಥಾನ ಮುದ್ರಣಾಲಯ
ಕೆಂಪೇಗೌಡ ನಗರ
ಬೆಂಗಳೂರು-೫೬೦ ೦೧೯

# ಪ್ರಸ್ತಾವನೆ

**ನಾಡಿನುದ್ದಕೂ ಕಿರಣವ ಹರಡಿತು**
**ಬೆಳ್ಳೂರಿನ ಬೆಳಗು,**
**ಶ್ರೀ ಪ್ರಭೆಯಲಿ ಕಣ್ತೆರೆದವು ಕೋಟಿ ಕಂಠಗಳು**
**ನವೋದಯದ ಮೊಳಗು !**

ಹತ್ತೊಂಬತ್ತನೆಯ ಶತಮಾನದ ಕೊನೆಯ್ಯ ಮೂರು ದಶಕಗಳು ಮತ್ತು ಇಪ್ಪತ್ತನೆಯ ಶತಮಾನದ ಮೊದಲ ಒಂದು ದಶಕ – ಈ ನಾಲ್ಕು ದಶಕಗಳು (೧೮೭೦–೧೯೧೦) ಹೊಸಗನ್ನಡ ಸಾಹಿತ್ಯದ ದೃಷ್ಟಿಯಿಂದ, ಅದರಲ್ಲಿಯೂ ನವೋದಯವೆಂದು ಗುರುತಿಸುವ ಸಾಹಿತ್ಯಕ ಸಂದರ್ಭದಲ್ಲಿ, ಅತ್ಯಂತ ಮಹತ್ವದ ಸಾಹಿತಿಗಳಿಗೆ ಜನ್ಮಕೊಟ್ಟ ಒಂದು ಅಪೂರ್ವವಾದ ಕಾಲವಾಗಿದೆ. ಪಂಜೆ, ಪೈ, ಶ್ರೀ, ಕೈಲಾಸಂ, ಡಿ.ವಿ.ಜಿ., ಎ.ಆರ್.ಕೃ., ಮಾಸ್ತಿ, ಬೇಂದ್ರೆ, ವಿ.ಸೀ., ಕಾರಂತ, ಕುವೆಂಪು, ಶ್ರೀರಂಗ, ಪು.ತಿ.ನ., ಡಿ.ಎಲ್.ನ., ತೀ.ನಂ.ಶ್ರೀ., ಅ.ನ.ಕೃ., ಗೋಕಾಕ್ ಮತ್ತು ಇನ್ನೂ ಹಲವರು ಹುಟ್ಟಿದ್ದು ಈ ನಾಲ್ಕು ದಶಕಗಳಲ್ಲಿಯೇ. ಈ ಇವರೆಲ್ಲರ ಸಾಧನೆಯಿಂದ ಆಧುನಿಕ ಸಾಹಿತ್ಯ ಹಿಂದೆಂದೂ ಕಾಣದ ಸಮೃದ್ಧಿಯನ್ನೂ, ವೈವಿಧ್ಯವನ್ನೂ ಕಂಡಿದೆ. ಸುಮಾರು ಒಂದೂವರೆ ಸಾವಿರ ವರ್ಷಗಳ ಸುದೀರ್ಘ ಇತಿಹಾಸವಿರುವ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ, ನಿಜವಾದ ಅರ್ಥದಲ್ಲಿ ಸುವರ್ಣಯುಗವೆಂದು ಕರೆಯಬಹುದಾದ ಕಾಲವೆಂದರೆ, ನಿಸ್ಸಂದೇಹವಾಗಿಯೂ ಕಳೆದ ಆರೇಳು ದಶಕಗಳ ಹೊಸಗನ್ನಡ ಸಾಹಿತ್ಯದ ಕಾಲವೇ ಎಂದು ನನ್ನ ತಿಳಿವಳಿಕೆ. ಯಾಕೆಂದರೆ ಹಿಂದೆ ಎಂದೂ ಹೀಗೆ ಏಕಕಾಲಕ್ಕೆ ಈ ಎತ್ತರದ ಇಷ್ಟೊಂದು ಸಾಹಿತಿಗಳು ಇದ್ದುದಾಗಲಿ, ಈ ವೈವಿಧ್ಯಮಯವಾದ ಸಾಹಿತ್ಯ ನಿರ್ಮಿತಿಗೆ ತೊಡಗಿ ಸಾಹಿತ್ಯವನ್ನು ಬಹುಮುಖವಾಗಿ ಶ್ರೀಮಂತಗೊಳಿಸಿದ್ದಾಗಲಿ ಕಂಡುಬರುವುದಿಲ್ಲ. ಈ ಮಹನೀಯರಲ್ಲಿ ಶತಮಾನೋತ್ಸವದ ಗೌರವಕ್ಕೆ ಪಾತ್ರರಾದವರು, ಪಂಜೆ ಹಾಗೂ ಪೈ ಅವರು. ಇದೀಗ ಬಿ. ಎಂ. ಶ್ರೀ ಅವರ ಶತಮಾನೋತ್ಸವ ನಡೆದಿದೆ ; ಇನ್ನೂ ಹಲವರ ಶತಮಾನೋತ್ಸವ ದೂರವೇನಿಲ್ಲ.

ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ಬಿ. ಎಂ. ಶ್ರೀ. ಅವರದು ವಿಶಿಷ್ಟವಾದ ವ್ಯಕ್ತಿತ್ವ. ಅವರನ್ನು ನವೋದಯದ ಆಚಾರ್ಯರೆಂದು ಗುರುತಿಸಿ ಗೌರವಿಸಲಾಗಿದೆ. ಅಗಾಧವಾದ ವಿದ್ವತ್ತು, ಬಹುಭಾಷಾ ಪ್ರಭುತ್ವ, ಹೊಸಗನ್ನಡ ಕಾವ್ಯದ ಹೆದ್ದಾರಿಯನ್ನು ತೆರೆದಂಥ ಸೃಜನ ಹಾಗೂ ಪ್ರಯೋಗಸಾಮರ್ಥ್ಯ; ಅಪ್ರತಿಮವಾದ ಬೋಧನ ಪ್ರಾವೀಣ್ಯ ಮತ್ತು ಪ್ರಭಾವಶಾಲಿಯಾದ ವಾಗ್ಮಿತೆ ; ಕನ್ನಡದ ಮೇಲಿನ ಅನನ್ಯವಾದ ಪ್ರೀತಿ ; ಕನ್ನಡದ ಎಚ್ಚರಕ್ಕೆ ಹಾಗೂ ಏಕೀಕರಣಕ್ಕೆ ಅವರು ಪಟ್ಟ ಶ್ರಮ ; ತಮ್ಮ ವ್ಯಕ್ತಿತ್ವದ ಪ್ರಭಾವದಿಂದ ಅವರು ನಿರ್ಮಿಸಿದ ಹೊಸಗನ್ನಡ ಲೇಖಕರ ಒಂದು ಪರಂಪರೆ ; ಛಂದಸ್ಸು, ಗ್ರಂಥಸಂಪಾದನೆ, ಲಿಪಿಸುಧಾರಣೆ, ಸಾಹಿತ್ಯಚರಿತ್ರೆ, ಸಾಹಿತ್ಯವಿಮರ್ಶೆ, ಜಾನಪದ ಇತ್ಯಾದಿ ವಿವಿಧ ಕ್ಷೇತ್ರಗಳಲ್ಲಿ ಅವರು ಹಾಕಿಕೊಟ್ಟ

ಹೊಸ ದಾರಿಗಳು – ಈ ಎಲ್ಲವನ್ನೂ ನೆನೆದರೆ, ಅವರನ್ನು ಹೊಸಗನ್ನಡದ ಆಚಾರ್ಯಪುರುಷ ರೆಂದು ಕರೆದಿರುವುದು ಉತ್ಪ್ರೇಕ್ಷೆಯಲ್ಲ ಎಂದು ಇಂದು ಯಾರಿಗಾದರೂ ಅನ್ನಿಸದಿರದು.

"ಕನ್ನಡ ನಾಡಿಗೆ ಕನ್ನಡವೇ ಗತಿ. ಅನ್ಯಥಾ ಶರಣಂ ನಾಸ್ತಿ. ಸಂಸ್ಕೃತವಲ್ಲ, ಇಂಗ್ಲಿಷಲ್ಲ, ಹಿಂದಿಯಲ್ಲ, ಕನ್ನಡ" – ಎಂದು ಘೋಷಿಸಿದ ಈ ಇಂಗ್ಲಿಷ್ ಪ್ರಾಧ್ಯಾಪಕ ಬಿ. ಎಂ. ಶ್ರೀಕಂಠಯ್ಯನವರು ಅದುವರೆಗೂ ಸುಮಾರು ಎರಡು ಶತಮಾನಗಳಿಂದ ಸ್ಥಗಿತಗೊಂಡು ನಿಂತ ನೀರಾಗಿದ್ದ ಕನ್ನಡ ಸಾಹಿತ್ಯಕ್ಕೆ, ಹೊಸ ನೀರನ್ನು ನುಗ್ಗಿಸಿ, ಹೊಸ ಕಾಲುವೆಗಳನ್ನು ನಿರ್ಮಿಸಿ, ಹೊಸ ಬೆಳೆಯನ್ನು ಹೊಮ್ಮಿಸುವುದರ ಮೂಲಕ ಚಲನಶೀಲತೆಯನ್ನು ತಂದವರಲ್ಲಿ ಬಹುಮುಖ್ಯ ರಾದವರು. ಈ ಕಾರ್ಯದಲ್ಲಿ ಅವರ 'ಇಂಗ್ಲಿಷ್‌ಗೀತಗಳು' ವಹಿಸಿದ ಪಾತ್ರ ಅನನ್ಯವಾದದ್ದು. ಶ್ರೀ ಅವರ ಸಮಕಾಲೀನರಾದ ಇನ್ನೂ ಹಲವರು, ಇಂಗ್ಲಿಷಿನಿಂದ ಕನ್ನಡಕ್ಕೆ ಕವಿತೆಗಳನ್ನು ಅನುವಾದ ಮಾಡುವುದರ ಮೂಲಕ, ಕನ್ನಡ ಸಾಹಿತ್ಯದ ಸ್ಥಗಿತಗೊಂಡ ರೂಪಗಳನ್ನು ಮುರಿದು ಹೊಸ ರೂಪಗಳನ್ನು ಆವಿಷ್ಕಾರ ಮಾಡುವ ಪ್ರಯತ್ನದಲ್ಲಿ ತೊಡಗಿದ್ದರೂ, ಅವರ ಪ್ರಯೋಗಗಳೆಲ್ಲ ಹಳೆಯ ಬಂಧಗಳ ಬಂದಿವಾಸದಿಂದ ಕನ್ನಡ ಕವಿತೆಯನ್ನು ಯಶಸ್ವಿಯಾಗಿ ಪಾರುಮಾಡಲು ಸಾಧ್ಯವಾಗಲಿಲ್ಲ ; ಮತ್ತು ಶ್ರೀಯವರ 'ಇಂಗ್ಲಿಷ್ ಗೀತಗಳು' ಪಡೆದುಕೊಂಡ ಭಾಷೆಯ ಹಾಗೂ ರೂಪದ ಹೊಸತನ ಉಳಿದವರಲ್ಲಿ ಅಷ್ಟಾಗಿ ಕಾಣಿಸಲಿಲ್ಲ. ಯಾಕೆಂದರೆ ಶ್ರೀಯವರ ಇಂಗ್ಲಿಷ್‌ಗೀತಗಳು ಕೇವಲ ಅನುವಾದ ಗಳಾಗದೆ, ಕನ್ನಡ ಕಾವ್ಯಕ್ಕೆ ಹೊಸ ರೂಪ ಮತ್ತು ಭಾಷೆಯನ್ನು ಕೊಡುವ ಸೃಜನಾತ್ಮಕ ಪ್ರಯೋಗಗಳಾಗಿವೆ. ಇಂಗ್ಲಿಷ್‌ಗೀತಗಳನ್ನು ನೋಡಿದರೆ ಮುಖ್ಯವಾಗಿ ಕಂಡುಬರುವ ಸಂಗತಿ ಎಂದರೆ, ಅವು ಮೂಲದ ಇಂಗ್ಲಿಷ್ ಕವನಗಳ ಆಕೃತಿಗಳನ್ನೆ ಕನ್ನಡದಲ್ಲಿಯೂ ಪಡೆದುಕೊಂಡಿವೆ – ಪಾದಗಳ ಸಂಖ್ಯೆಯಲ್ಲಿ ಮತ್ತು ಪದ್ಯ ಬಂಧ ಕ್ರಮ (Stanza pattern) ದಲ್ಲಿ ಎನ್ನುವುದನ್ನು ಗುರುತಿಸಬಹುದು ; ಮತ್ತು ಈ ಆಕೃತಿಗಳು (ಷಟ್ಪದಿ, ಸಾಂಗತ್ಯ ಇಂಥವು ಹೊರತು) ಕನ್ನಡ ಸಾಹಿತ್ಯದಲ್ಲಿ ಅದುವರೆಗೂ ಇರಲಿಲ್ಲ ಎಂಬುದೂ ಮುಖ್ಯವಾದ ಸಂಗತಿ ಯಾಗಿದೆ. ಈ ದೃಷ್ಟಿಯಿಂದ ಮೂಲದ ಇಂಗ್ಲಿಷ್ ಕವಿತೆಗಳಿಗೆ ಸಂವಾದಿಯಾದ ಕನ್ನಡ ರೂಪ ಗಳನ್ನು ಸಿದ್ಧಮಾಡಿದ್ದು ಮತ್ತು ಅದಕ್ಕಾಗಿ ಅವರು ಅಳವಡಿಸಿದ ಛಂದೋ ವೈವಿಧ್ಯಗಳು ಹಾಗೂ ಅವುಗಳಲ್ಲಿನ ಭಾಷೆಯ ಲವಲವಿಕೆ – ಈ ಎಲ್ಲವೂ ನವೋದಯ ಕಾವ್ಯದ ಮೂಲ ಮಾದರಿ ಗಳಾಗಿವೆ. ಬಿ. ಎಂ. ಶ್ರೀಯವರ ಕಾವ್ಯ ಭಾಷೆ, ಕನ್ನಡದ ಪ್ರಾದೇಶಿಕ ವೈವಿಧ್ಯಗಳನ್ನೆಲ್ಲ ಒಳ ಕೊಳ್ಳುವಂಥ ಪ್ರಯೋಗಶೀಲತೆಯನ್ನು ಪ್ರಕಟಿಸದಿದ್ದರೂ, ಕರ್ನಾಟಕದ ಒಂದು ಭಾಗದ ಕವಿಗಳ ಭಾಷೆಯಾಗಿ ಮುಂದುವರಿಯುವ ಸ್ವರೂಪದ್ದಾಗಿದೆ ಎಂಬುದು ನಿಜ. ಇವತ್ತಿಗೂ ಶ್ರೀ ಅವರ ಇಂಗ್ಲಿಷ್‌ಗೀತಗಳನ್ನಾಗಲೀ ಮತ್ತು ಅವರ ಸ್ವತಂತ್ರ ಕವಿತೆ ('ಹೊಂಗನಸು') ಗಳನ್ನಾಗಲೀ ಓದಿದರೆ ಅವರ ಕವಿತೆಗಳಲ್ಲಿ ಕಂಡುಬರುವ ಮೊದಲ ಗುಣವೆಂದರೆ, ಅವುಗಳಲ್ಲಿ ಪುಟಿಯುವ ಭಾಷೆಯ ಹೊಸತನ. ಭಾಷೆಗೆ ಈ ಬಗೆಯ ಹೊಸತನ ಬರುವುದು, ಭಾಷೆಯನ್ನು ಸೃಜನಾತ್ಮಕವಾಗಿ ಬಳಸಿದಾಗಲೇ. ಪಂಪನ ಭಾಷೆಗೆ, ವಚನಕಾರರ ಭಾಷೆಗೆ ಇರುವ ಹೊಸತನ ಈ ಕಾರಣದಿಂದ ಪ್ರಾಪ್ತವಾದದ್ದೆ. ಮತ್ತೊಂದು ವಿಶೇಷವೆಂದರೆ, ವಸ್ತುನಿಷ್ಠ ಕಾವ್ಯಪರಂಪರೆಯ ಕನ್ನಡ ಸಾಹಿತ್ಯದಲ್ಲಿ, ವ್ಯಕ್ತಿನಿಷ್ಠವಾದ ವಸ್ತುಗಳು ಕಾವ್ಯವಾಗಬಲ್ಲವೆಂಬ ಸಾಧ್ಯತೆ ಹಾಗೂ ಧೈರ್ಯವನ್ನು ತಂದುಕೊಡುವುದರಲ್ಲಿ, ಇಂಗ್ಲಿಷ್‌ಗೀತಗಳಲ್ಲಿ ಕಂಡುಬರುವ ಕಾವ್ಯವಸ್ತುಗಳು, ಕನ್ನಡ ಕವಿಗಳಿಗೆ ಮಾರ್ಗದರ್ಶಕವಾದವು, ಎನ್ನುವುದು. ಹೀಗೆ ವಸ್ತು, ರೂಪ (ಆಕೃತಿ) ಮತ್ತು ಭಾಷೆ – ಈ ಮೂರು ದೃಷ್ಟಿಯಿಂದ ಶ್ರೀಯವರ 'ಇಂಗ್ಲಿಷ್‌ಗೀತಗಳು' ಹೊಸಗನ್ನಡ ಕಾವ್ಯದ ದಾರಿಯನ್ನು ತೆರೆದದ್ದು ಮಹತ್ವದ ಸಂಗತಿಯಾಗಿದೆ. ಈ ಕಾರಣದಿಂದ ಶ್ರೀ ಅವರ ಇಂಗ್ಲಿಷ್ ಗೀತಗಳನ್ನು, ಕೇವಲ ಅನುವಾದಗಳೆಂದು ಭಾವಿಸುವುದು ಅಸಮರ್ಪಕವಾದದ್ದು. ಅವರ ಮುಖ್ಯ ಉದ್ದೇಶ ಅನುವಾದಗಳನ್ನು ಸಿದ್ಧಪಡಿಸುವುದಾಗಿರಲಿಲ್ಲ ; ಕೇವಲ ಅನುವಾದಗಳನ್ನು

ಸಿದ್ಧಪಡಿಸುವುದೇ ಆಗಿದ್ದರೆ, ಅವರು ಇಂಗ್ಲಿಷ್ ಕಾವ್ಯದ ಅತ್ಯುತ್ತಮವಾದ ಪದ್ಯಗಳನ್ನು ಮಾತ್ರ ಆಯ್ದುಕೊಳ್ಳುವ ಕಡೆಗೆ ಅವರ ಗಮನ ಬಹುಶಃ ಕೇಂದ್ರೀಕೃತವಾಗುತ್ತಿತ್ತು. ಆದರೆ, ಅವರ ಇಂಗ್ಲಿಷ್‌ಗೀತಗಳಲ್ಲಿ ತಮ್ಮ ಪ್ರಯೋಗಗಳಿಗೆ ಆರಿಸಿಕೊಂಡ ಕವಿತೆಗಳು ಅವರೇ ಹೇಳಿಕೊಂಡಿರುವಂತೆ ಇಂಗ್ಲಿಷ್ ಕಾವ್ಯಮಾಲೆಯ ಅತ್ಯುತ್ಕೃಷ್ಟವಾದ ಪದ್ಯಗಳೇನಲ್ಲ. ಅವರಿಗೆ, ತಾವು ಆಯ್ದುಕೊಂಡ ಇಂಗ್ಲಿಷ್ ಕವಿತೆಗಳು ಅತ್ಯುತ್ತಮವಾದವುಗಳೇ ಅಲ್ಲವೇ ಎನ್ನುವುದು ಮುಖ್ಯವಾಗಲಿಲ್ಲ ; ಅವರಿಗೆ ಮುಖ್ಯವಾದದ್ದು ಇಂಗ್ಲಿಷ್ ಕಾವ್ಯದ ಪ್ರೇರಣೆಯಿಂದ ಕನ್ನಡದಲ್ಲಿ ಹೊಸರೂಪಗಳನ್ನು ಆವಿಷ್ಕಾರ ಮಾಡುವುದು ಹೇಗೆ ಎನ್ನುವುದು. ಈ ದೃಷ್ಟಿಯಿಂದ ಶ್ರೀ ಅವರ ಇಂಗ್ಲಿಷ್ ಗೀತಗಳನ್ನು ಕೇವಲ ಅನುವಾದಗಳೆನ್ನುವುದಕ್ಕಿಂತ, ಭಾರತೀಯ ಪರಿಸರದಲ್ಲಿ ಕನ್ನಡ ಕಾವ್ಯ ರೂಪುಗೊಳ್ಳಬೇಕಾದ ರೀತಿಯ ನಿರ್ದೇಶನ ಹಾಗೂ ನಿದರ್ಶನದ ಪ್ರಯೋಗಗಳೆಂದು ಭಾವಿಸುವುದು ಹೆಚ್ಚು ಸೂಕ್ತವಾದದ್ದೆಂದು ನನ್ನ ಅಭಿಪ್ರಾಯ. ಇಂಥ ಸೃಜನ ಸಾಮರ್ಥ್ಯ ಉಳ್ಳ ಈ ವ್ಯಕ್ತಿ ಸ್ವತಂತ್ರವಾದ ಕವಿತೆಗಳನ್ನು ಬರೆದದ್ದು ಎಷ್ಟೊಂದು ಕಡಮೆ (ಅವರ ಸ್ವತಂತ್ರ ಕವನಗಳು ಕೇವಲ ಹದಿನಾರು) ಎನ್ನುವುದು ಆಶ್ಚರ್ಯದ ಸಂಗತಿಯಾಗಿದೆ. ಇದಕ್ಕೆ ಕಾರಣ ಅವರು ಮೂಲತಃ 'ಪ್ರಯೋಗ ಪರಿಣತಮತಿ'ಗಳಾಗಿದ್ದರು, ಮತ್ತು ನವೋದಯದ ಅಂದಿನ ಸಂದರ್ಭದಲ್ಲಿ – ಕೇವಲ ಸೃಜನ ಸಾಹಿತಿಯಂತೆ ಹುತ್ತಗಟ್ಟಿ ಕುಳಿತುಕೊಳ್ಳುವ ವ್ಯವಧಾನವಿಲ್ಲದೆ – ಕನ್ನಡದ ಹಲವು ಹತ್ತು ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದು ಮುಖ್ಯವೆಂದು ಭಾವಿಸಿದ್ದರು. ಇದರಿಂದಾಗಿ, ಅನುವಾದ, ಅಳವಡಿಕೆ, ರೂಪಾಂತರ ಇತ್ಯಾದಿ ಪ್ರಯೋಗಗಳ ಮೂಲಕ ಹೊಸಗನ್ನಡ ಸಾಹಿತ್ಯದ ಹಲವು ಮೊದಲ ರೂಪಗಳನ್ನು – ಪ್ರಗಾಥ, ಭಾವಗೀತೆ, ರುದ್ರನಾಟಕ, ಸಾಹಿತ್ಯ ಚರಿತ್ರೆ, ಸಾಹಿತ್ಯ ವಿಮರ್ಶೆ – ಸಿದ್ಧಪಡಿಸುವ ಕಾಯಕದಲ್ಲಿ, ನಿಷ್ಠೆಯಿಂದ ತಮ್ಮನ್ನು ತೊಡಗಿಸಿಕೊಂಡರು.

ಆದರೂ ಅವರ ಸ್ವತಂತ್ರ ಕವಿತೆಗಳು, ನವೋದಯದ ಸಂದರ್ಭದಲ್ಲಿ ಅವರ ಇಂಗ್ಲಿಷ್ ಗೀತಗಳಷ್ಟು ಗಮನದ ಹಾಗೂ ಚರ್ಚೆಯ ವಿಷಯವಾಗದಿದ್ದರೂ, ಅವರ ಸ್ವತಂತ್ರ ಕವಿತೆಗಳ ಸಾಲಿನಲ್ಲಿರುವ 'ಪ್ರಗಾಥ'ಗಳು ನಿಸ್ಸಂದೇಹವಾಗಿಯೂ ಕನ್ನಡಕ್ಕೆ ಒಳ್ಳೆಯ ಕೊಡುಗೆಗಳಾಗಿವೆ. ಈ ಪ್ರಗಾಥಗಳೊಳಗಿನ ರಾಜನಿಷ್ಠ ಧೋರಣೆಯನ್ನು ಇಂದು ನಾವು ಮೆಚ್ಚದಿದ್ದರೂ, ಅವುಗಳ ಬಂಧ-ಶಿಲ್ಪ-ಛಂದಸ್ಸಿನ ವೈವಿಧ್ಯ ಹಾಗೂ ಅವುಗಳಲ್ಲಿ ಮಿಡಿಯುತ್ತಿರುವ ಕನ್ನಡದ ಪ್ರೇಮ ಇವುಗಳನ್ನು ಕಡೆಗಣಿಸಲು ಸಾಧ್ಯವೇ ಇಲ್ಲ. ಕನ್ನಡದಲ್ಲಿ ಅದುವರೆಗೂ ಇರದಿದ್ದ ಒಂದು ಹೊಸ ಕಾವ್ಯರೂಪವನ್ನೂ ಅದಕ್ಕೊಂದು ಹೊಸ ಹೆಸರನ್ನೂ ಕೊಟ್ಟು ರೂಢಿಸಿದವರು ಶ್ರೀಯವರು. ಅಷ್ಟೇ ಅಲ್ಲ, ಅವರ ಈ ಸ್ವತಂತ್ರ ಕವಿತೆಗಳಲ್ಲಿ ಅದರಲ್ಲಿಯೂ ಮುಖ್ಯವಾಗಿ ಅವರ ಪ್ರಗಾಥಗಳಲ್ಲಿ ಕಂಡುಬರುವ ನಿಸರ್ಗ ವರ್ಣನೆಯ ಸೊಗಸು, ಕನ್ನಡದ ಸಂದರ್ಭದಲ್ಲಿ ತೀರಾ ಹೊಸತು ಮಾತ್ರವಲ್ಲ, ಮುಂದಿನ ಕವಿಗಳಿಗೂ ನಿಸರ್ಗವನ್ನು ನೋಡುವ ಬಗೆಗೆ, ಹೊಸ ಕಣ್ಣನ್ನು ತೆರೆಯುವಂಥದ್ದಾಗಿದೆ. ಶ್ರೀ ಅವರು ಕನ್ನಡದ ಕೆಲಸಕ್ಕಾಗಿ ಊರೂರನ್ನು ಸುತ್ತುವಾಗ, ಊರೂರು ಕೇರಿಗಳಲ್ಲಿ ಹಗಲೆನ್ನದೆ ಇರುಳೆನ್ನದೆ ತಮ್ಮ ಭಾಷಣಗಳಿಂದ ಜನವನ್ನು ಬಡಿದೆಬ್ಬಿಸುವ ಸಂಚಾರದಲ್ಲಿ ತೊಡಗಿದಾಗ, ಅವರು ಕಂಡ ಕನ್ನಡ ನಾಡಿನ ಬಯಲುಗಳ, ಬೆಟ್ಟಗಳ, ಬಾನುಗಳ, ಕಾನುಗಳ, ಹೊಳೆ-ಹಳ್ಳ-ಕಡಲು-ನೀರ್‌ಬೀಳ್‌ಗಳ, ಜನದ ನಡೆ, ನುಡಿ, ಬಣ್ಣ ಬೆಡಗುಗಳ ಸೊಗಸು ಅವರ ನಿಸರ್ಗ ವರ್ಣನೆಗಳ ತುಂಬ ಚೇತೋಹಾರಿಯಾಗಿ ಮಡುಗಟ್ಟಿದೆ. 'ಏನು ಚೆಲುವಿನ ನಾಡು, ಚೆಲುವು ಚೆಲ್ಲುವ ನಾಡು, ಕನ್ನಡದ ನಾಡು' ಎಂಬ ಅವರ ಹರ್ಷೋದ್ಗಾರದ ಹಿಂದೆ ಈ ಅನುಭವವೆ ತುಂಬಿಕೊಂಡಿದೆ.

ಶ್ರೀ ಅವರು ಹೊಸಗನ್ನಡ ನಾಟಕ ಪರಂಪರೆಗೆ ಸಲ್ಲಿಸಿದ ಕೊಡುಗೆ ಕೂಡಾ ಗಮನಿಸು... ಕನ್ನಡದಲ್ಲಿ ನಾಟಕಗಳೇ ಇಲ್ಲದಿದ್ದ ಸಂದರ್ಭದಲ್ಲಿ ಪದ್ಯನಾಟಕಗಳ, ಅದರಲ್ಲಿಯೂ

ಗ್ರೀಕ್ ಮಾದರಿಯ ರುದ್ರನಾಟಕಗಳ ಸಂಪ್ರದಾಯವನ್ನು ಪ್ರಾರಂಭಿಸಿದವರು ಶ್ರೀ ಅವರು. ಅವರ ಅಶ್ವತ್ಥಾಮನ್, ಗದಾಯುದ್ಧ ಮತ್ತು ಪಾರಸಿಕರು – ಈ ಮೂರೂ ಅಳವಡಿಕೆ, ರೂಪಾಂತರ, ಹಾಗೂ ಅನುವಾದಗಳ ದೃಷ್ಟಿಯಿಂದ ಅಧ್ಯಯನ ಮಾಡತಕ್ಕವರಿಗೆ ಒಳ್ಳೆಯ ಅವಕಾಶಗಳನ್ನು ಒದಗಿಸುತ್ತವೆ. 'ಅಶ್ವತ್ಥಾಮನ್' ನಾಟಕ ಪರಂಪರಾಗತವಾದ ವಸ್ತುವೊಂದನ್ನು, ಗ್ರೀಕ್ ನಾಟಕದ ಚೌಕಟ್ಟಿನೊಳಗೆ ಅಳವಡಿಸಿದ್ದು ಮಾತ್ರವಲ್ಲ, ಪರಂಪರಾಗತವಾದ ನಂಬಿಕೆಗಳಿಗೂ ಒಂದು ಆಘಾತ (ಚಿರಂಜೀವಿಯೆಂದು ಭಾವಿಸಲಾದ ಅಶ್ವತ್ಥಾಮನ ಆತ್ಮಹತ್ಯೆಯಿಂದ) ವನ್ನು ತಂದು ಕೋಲಾಹಲಕ್ಕೆ ಕಾರಣವಾಯಿತು. ಆದರೆ ಅವರ 'ಗದಾಯುದ್ಧ ನಾಟಕಂ' ಕವಿ ರನ್ನನ ಕಾವ್ಯವಾದ ಗದಾಯುದ್ಧದಿಂದ ಬಿಡಿಸಿ ಹೊರತೆಗೆದದ್ದಾದರೂ, ಅದು ಕನ್ನಡ ನಾಟಕಗಳ ಬೇರೊಂದು ಪರಂಪರೆಯನ್ನೆ ರೂಢಿಸಿದ ಪ್ರಯೋಗವಾಗಿದೆ. ಯಾವಾಗ ರನ್ನನ ಕಾವ್ಯದ ಶರೀರದೊಳಗೊಂದು ನಾಟಕವಿದೆ ಎಂಬುದನ್ನು ಶ್ರೀ ಅವರು ತಮ್ಮ 'ಎಕ್ಸ್‌ರೇ' ದೃಷ್ಟಿಯಿಂದ ಕಂಡುಕೊಂಡರೋ, ಮತ್ತು ಅದನು ತಮ್ಮ ಕೌಶಲದಿಂದ ಬಿಡಿಸಿ ತೆಗೆದು ತೋರಿಸಿದರೋ, ಆಗ ಕನ್ನಡ ಕಾವ್ಯಗಳೊಳಗೆ ಇರುವ ನಾಟ್ಯದ ಸಾಧ್ಯತೆಯನ್ನು ಬಿಡಿಸಿ ತೆಗೆದು ರೂಪಿಸುವ ಕೆಲಸವೊಂದು ಕನ್ನಡದಲ್ಲಿ ಪ್ರಾರಂಭವಾಯಿತೆಂದು ತೋರುತ್ತದೆ. ಲಕ್ಷ್ಮೀಶನ ಜೈಮಿನಿ ಭಾರತದೊಳಗಿನ ಸೀತಾ ಪರಿತ್ಯಾಗ ಪ್ರಸಂಗವನ್ನು, ಕುವೆಂಪು ಅವರು 'ವಾಲ್ಮೀಕಿಯ ಭಾಗ್ಯ'ವೆಂಬ ನಾಟಕವನ್ನಾಗಿ ಬಿಡಿಸಿದರು ; ರಾಘವಾಂಕನ ಹರಿಶ್ಚಂದ್ರ ಕಾವ್ಯವನ್ನು ನಾಟಕಕ್ಕೆ, ನನಗೆ ತಿಳಿದಂತೆ ಹಲವರು ಅಳವಡಿಸಿದ್ದಾರೆ – ಅವುಗಳಲ್ಲಿ ಮುಖ್ಯವಾದುವು ಎಸ್. ವಿ. ರಂಗಣ್ಣನವರ ಹರಿಶ್ಚಂದ್ರ ರೂಪಕ, ಮತ್ತು ಪು.ತಿ.ನ. ಅವರ ಸತ್ಯಾಯನ ಹರಿಶ್ಚಂದ್ರ. ಜನ್ನನ ಯಶೋಧರ ಚರಿತೆಯಿಂದ, ಗಿರೀಶ ಕಾರ್ನಾಡರು 'ಹಿಟ್ಟಿನ ಹುಂಜ' ಎಂಬ ನಾಟಕವನ್ನು ರಚಿಸಿದ್ದಾರೆ ; ಪಂಪನ ಭರತಬಾಹುಬಲಿ ಪ್ರಸಂಗ 'ಪರಿವರ್ತನ' ಎಂಬ (ನಾದಸೇತು ಮತ್ತು ಇತರ ನಾಟಕಗಳು) ರೂಪಕವಾಗಿ ಆಕಾರಗೊಂಡಿದೆ ; ನಾಗಚಂದ್ರನ 'ಪಂಪರಾಮಾಯಣ'ದಲ್ಲಿನ 'ಉಪರಂಭೆಯ ಪ್ರಸಂಗ' ಒಂದು ಬಿಡಿನಾಟಕವಾಗಿ ಬಂದಿದೆ ಎಂದು ನನಗೆ ನೆನಪು. ಕನ್ನಡದಲ್ಲಿ ನಾಟಕಗಳೇ ಇಲ್ಲ ಎಂದು ಸುಮ್ಮನೆ ಹೇಳಲಾಗುತ್ತಿರುವ ಸಾಹಿತ್ಯಪರಂಪರೆಯಲ್ಲಿ ಹಿಂದಿನ ಕನ್ನಡ ಕಾವ್ಯಗಳ ಒಳಗೇ ನಾಟಕ ಅಥವಾ ನಾಟ್ಯಸಾಧ್ಯತೆ ಅಡಗಿದೆಯೆಂಬುದನ್ನು ತೋರಿಸಿದವರು, ಮತ್ತು ಆ ಬಗೆಯ ಪ್ರಯೋಗಗಳಿಗೆ ನಿರ್ದೇಶನ ನೀಡಿದವರು ಶ್ರೀ ಅವರು. ಶ್ರೀ ಅವರ ಎಲ್ಲ ನಾಟಕಗಳೂ, ರುದ್ರ ನಾಟಕಗಳೇ, ಟ್ರ್ಯಾಜಿಡಿಗಳೇ. ಶ್ರೀ ಅವರ ವೈಯಕ್ತಿಕ ಜೀವನವೇ ಒಂದು 'ರುದ್ರನಾಟಕ'ದಂತೆ ಇದ್ದದ್ದು, ಈ ಬಗೆಯ ನಾಟಕಗಳ ಬಗೆಗೆ ಅವರಿಗಿದ್ದ ಒಲವಿಗೆ ಒಂದು ಪ್ರತೀಕವಾಗಿದೆ.

ಈ ನಾಟಕಗಳ ಭಾಷೆಯನ್ನು ಕುರಿತು ಒಂದು ಮಾತು : ಶ್ರೀ ಅವರು ತಮ್ಮ ನಾಟಕಗಳಿಗೆ ಬಳಸಿದ್ದು ಹಳಗನ್ನಡವನ್ನು. (ಗದಾಯುದ್ಧದ ನಾಟಕದ ಭಾಷೆ ರನ್ನನದೇ). ಹಳಗನ್ನಡ ಅದುವರೆಗೂ ಕನ್ನಡ ಓದುಗರಿಗೆ ಪರಿಚಯವಾದದ್ದು ಮಾರ್ಗಕಾವ್ಯಗಳ ಭಾಷೆಯಾಗಿ. ಆದರೆ ಅದೇ ಭಾಷೆಯನ್ನು ಶ್ರೀ ಅವರು ನಾಟಕಗಳಿಗೆ ಬಳಸಿದಾಗ, ಬಹುಶಃ ಅವರ ಉದ್ದೇಶ ಗಂಭೀರವಾದ ಗ್ರೀಕ್ ಮಾದರಿಯ ನಾಟಕಗಳಿಗೆ ಒಂದು ಬಗೆಯ ಗಂಭೀರವಾದ ಭಾಷೆಯನ್ನು ಹಳಗನ್ನಡ ರೂಪಿಸಬಹುದೇ ಹೇಗೆ ಎಂಬುದನ್ನು ಪರೀಕ್ಷಿಸುವುದು ಒಂದು ; ಮತ್ತೊಂದು, ಹಳಗನ್ನಡವನ್ನು ನಾಟ್ಯಭಾಷೆಯನ್ನಾಗಿ ಮಾಡುವುದರ ಮೂಲಕ ಅದರ ಸಂವಹನದ ಸಾಧ್ಯತೆಗಳನ್ನು ತೆರೆಯಬಹುದೆಂಬ ಕುತೂಹಲ. ಈ ಎರಡೂ ಉದ್ದೇಶಗಳೂ ಶ್ರೀಯವರ ಈ ಪ್ರಯೋಗದಲ್ಲಿ ಈಡೇರಿವೆ. ಈ ನಾಟಕಗಳ ಪ್ರಯೋಗ ಸಂದರ್ಭದಲ್ಲಿ 'ಪಂಡಿತರ ಸವಾಲು'ಗಳಂತೆ ತೋರಿದರೂ, ಯಾವುದೇ ಹವ್ಯಾಸಿ ರಂಗಭೂಮಿಯವರೂ ಈ ನಾಟಕದ ಭಾಷೆಯ ಕಾರಣದಿಂದ ಅವುಗಳನ್ನು ಪ್ರಯೋಗಿಸಿ ತೋರಿಸಲು ಹಿಂಜರಿದರೂ, ಈ ನಾಟಕಗಳನ್ನು ರಂಗಪ್ರಯೋಗಕ್ಕೆ ಅಳವಡಿಸಿದಾಗ, ತಕ್ಕಷ್ಟು ಪೂರ್ವಸಿದ್ಧತೆ ಹಾಗೂ ಎಚ್ಚರಿಕೆಯಿಂದ ಮಾತುಗಳನ್ನು ಉಚ್ಚರಿಸಿದಾಗ, ರನ್ನ 'ಗದಾಯುದ್ಧ'ದ ಭಾಷೆ ಕಾವ್ಯದ ಸಂದರ್ಭದಲ್ಲಿ ಪಡೆದುಕೊಳ್ಳಲಾಗದಿದ್ದ ಸಂವಹ

ನಾಟಕಪ್ರಯೋಗದ ಸಂದರ್ಭದಲ್ಲಿ 'ಸಾಹಿತ್ಯೇತರ ವಿದ್ಯಾರ್ಥಿ'ಗಳಾದ ಪ್ರೇಕ್ಷಕರಲ್ಲಿ ಪಡೆದುಕೊಂಡದ್ದು ನನಗೆ ನೆನಪಿದೆ. ಆದರೆ ಶ್ರೀ ಅವರ ನಾಟಕಗಳು, ಒಂದು ಪರಂಪರೆಯಾಗಿ ಮುಂದುವರಿಯಲಿಲ್ಲ ಎಂಬುದು ನಿಜ.

ಕನ್ನಡಕ್ಕೆ ಶ್ರೀ ಅವರಿಂದ ಬಂದ ಪಾಶ್ಚಾತ್ಯ ರುದ್ರನಾಟಕಗಳ ಹಿನ್ನೆಲೆಯಿಂದ ಹೇಳಬಹುದಾದ ಮತ್ತೊಂದು ಮಾತೆಂದರೆ, ಶ್ರೀ ಅವರ ಸಾಹಿತ್ಯವಿಮರ್ಶೆ, ಕನ್ನಡ ಕಾವ್ಯಗಳಲ್ಲಿ ದುರಂತ ವಸ್ತು, ದುರಂತ ವಸ್ತು ವಿನ್ಯಾಸ ಹಾಗೂ ದುರಂತ ಪಾತ್ರ ಇತ್ಯಾದಿಗಳನ್ನು ಗುರುತಿಸಿ, ಚರ್ಚಿಸುವ ಕ್ರಮವೊಂದನ್ನು ಹಾಕಿಕೊಟ್ಟಿತೆಂಬುದು. ಶ್ರೀ ಅವರ ನಿಲುವು ಒಂದೊಂದು ಸಲ, ಪ್ರಾಚೀನ ಕನ್ನಡ ಕಾವ್ಯಪರಂಪರೆಯ ನಿರಾಕರಣೆಯೆಂಬ ಭ್ರಮೆಯನ್ನು ಹುಟ್ಟಿಸುವಂತೆ ತೋರಿದರೂ, ಪ್ರಾಚೀನ ಸಾಹಿತ್ಯ ಸಂಪ್ರದಾಯದ ಚರ್ವಿತಚರ್ವಣ ಲಕ್ಷಣಗಳನ್ನೂ, ಅದರ ಅನುಸರಣದಿಂದಾಗಲೀ, ಅನುಕರಣದಿಂದಾಗಲೀ ಆಗುವ ಅಪಾಯಗಳನ್ನು ವಿರೋಧಿಸುವಂಥದೇ ಹೊರತು, ಕಾವ್ಯಪರಂಪರೆಯ ಉತ್ತಮಾಂಶಗಳಿಗೆ ಹಾಗೂ ಅದರಿಂದ ನಾವು ಪಡೆಯಬಹುದಾದ ಪುಷ್ಟಿಗೆ ಖಂಡಿತ ವಿಮುಖವಾದದ್ದಲ್ಲ ಎಂಬುದನ್ನು, ಎಚ್ಚರದಿಂದ ಅವರ ಬರಹಗಳನ್ನು ಓದುವ ಯಾರೇ ಆಗಲಿ ಕಂಡುಕೊಳ್ಳಬಹುದು. ಈ ದೃಷ್ಟಿಯಿಂದ ನೋಡಿದರೆ ಶ್ರೀ ಅವರ ಸಾಹಿತ್ಯ ವಿಮರ್ಶೆ ಮುಖ್ಯವಾಗಿ ಪ್ರಾಚೀನ ಸಾಹಿತ್ಯ ಪರಂಪರೆಯನ್ನು ವರ್ತಮಾನದವರಿಗೆ ಪರಿಚಯ ಮಾಡಿಕೊಡುವ ವರ್ಣನಾತ್ಮಕ ವಿಧಾನದ್ದಾಗಿದ್ದರೂ, ನಮ್ಮ ಪ್ರಾಚೀನ ಸಾಹಿತ್ಯವನ್ನು ಪಾಶ್ಚಿಮಾತ್ಯ ಸಾಹಿತ್ಯ ತತ್ವಗಳ ಹಿನ್ನೆಲೆಯಿಂದಲೂ ನೋಡುವುದು ಲಾಭದಾಯಕವೆಂಬುದನ್ನು ತೋರಿಸಿತು. ಹೀಗಾಗಿ ದುರಂತ ವಸ್ತುವಿನ್ಯಾಸ, ಹಾಗೂ ದುರಂತ ಪಾತ್ರಕಲ್ಪನೆಗಳ ದೃಷ್ಟಿಯಿಂದ ಪಂಪ-ರನ್ನರ ದುರ್ಯೋಧನ, ಪಂಪನ ಕರ್ಣ ಹಾಗೂ ನಾಗಚಂದ್ರನ ರಾವಣ ಇಂಥ ಪಾತ್ರಗಳನ್ನು ತೌಲನಿಕವಾಗಿ ನೋಡುವ ಕ್ರಮಗಳನ್ನು ಅವರ ವಿಮರ್ಶೆಯ ಬರಹಗಳು ಸೂಚಿಸುತ್ತವೆ. ಕುವೆಂಪು ಅವರು ಬರೆದ 'ಕುಮಾರವ್ಯಾಸನ ದುರಂತ ಕರ್ಣ', ತೀ.ನಂ.ಶ್ರೀ ಅವರು ಬರೆದ 'ಕಾಳಿದಾಸನ ನಾಟಕಗಳಲ್ಲಿ ದುರಂತ ವಸ್ತುವಿನ್ಯಾಸ' ಎಂಬ ಲೇಖನಗಳೂ, 'ಪಂಪ ರಾಮಾಯಣ ಸಂಗ್ರಹ'ಕ್ಕೆ ಡಿ. ಎಲ್. ನರಸಿಂಹಾಚಾರ್ಯರು ಬರೆದ ವಿಮರ್ಶಾತ್ಮಕ ಪ್ರಸ್ತಾವನೆಯ ಧೋರಣೆಗಳೂ, ಬಿ. ಎಂ. ಶ್ರೀ ಅವರ ವಿಮರ್ಶೆಯ ಪರಿಣಾಮಗಳಾಗಿವೆ ಎಂದು ನಾನು ತಿಳಿದಿದ್ದೇನೆ. ಶ್ರೀ ಅವರು 'ಕನ್ನಡ ಕೈಪಿಡಿ'ಯಲ್ಲಿ ಪ್ರಕಟಿಸಿದ ಸಾಹಿತ್ಯ ಚರಿತ್ರೆಯ ಬರಹವಾಗಲೀ, ಹಿಂದಿನ ಕವಿಕೃತಿಗಳ ಸಂಗ್ರಹಗಳನ್ನು ಸಿದ್ಧಪಡಿಸುವ ಕಾರ್ಯಗಳಾಗಲಿ (ಇವಂತೂ ಒಂದು ಪರಂಪರೆಯೇ ಆಗಿದೆ), ವರ್ತಮಾನಕ್ಕೆ ಪರಂಪರೆಯೊಂದಿಗಿರುವ ಸಂಬಂಧವನ್ನು ಗಾಢವಾಗಿ ಸ್ಥಾಪಿಸುವ ಜವಾಬ್ದಾರಿಯನ್ನು ಪ್ರಕಟಿಸುತ್ತವೆ. ಕೇವಲ ತಮ್ಮ ಪರಿಸರದ್ದಲ್ಲ, ಜಗತ್ತಿನ ಬೇರೆ ದೇಶದ, ಬೇರೆ ಭಾಷೆಯ ಸಾಹಿತ್ಯದಲ್ಲಿ ಸತ್ವಯುತವಾದದ್ದು ಏನುಂಟೋ ಅದೆಲ್ಲದರಿಂದಲೂ ಕನ್ನಡಿಗನಾದವನು ತನ್ನ ಪುಷ್ಟಿಯನ್ನು ಗಳಿಸಿಕೊಳ್ಳಬೇಕೆಂಬ ನಿಲುವನ್ನು ಶ್ರೀ ಅವರು ಉದ್ದಕ್ಕೂ ಎತ್ತಿ ಹಿಡಿದರು. ಇದಕ್ಕೆ ಇರುವ ಮಾರ್ಗವೆಂದರೆ ತೌಲನಿಕ ಅಧ್ಯಯನ. ಜಗತ್ತಿನ ಹಲವಾರು ಸಾಹಿತ್ಯಗಳ ಅಧ್ಯಯನದಿಂದ ಒದಗುವ ತಿಳಿವು, ಮೂಡುವ ದೃಷ್ಟಿ ಎಂಥದೆಂಬುದನ್ನು ಸ್ವಾನುಭವದಿಂದ ಕಂಡುಕೊಂಡ ಶ್ರೀಕಂಠಯ್ಯನವರು, 'ಅವಳ ತೊಡಿಗೆ ಇವಳಿಗಿಟ್ಟು' ಹಾಡಬಯಸಿದ್ದು ಆಶ್ಚರ್ಯವೇನಲ್ಲ. ಶ್ರೀಯವರು ತೆರೆದ ನವೋದಯ, ಇಂಥ ತೌಲನಿಕ ಅಧ್ಯಯನಗಳ ಪರಿಣಾಮವಾಗಿದೆ. ತೌಲನಿಕ ಅಧ್ಯಯನದ ಬಗ್ಗೆ ಅವರಿಗಿದ್ದ ಆಲೋಚನೆಗಳು 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' ಎಂಬ ಬರೆಹದ ಉದ್ದಕ್ಕೂ ಹರಹಿಕೊಂಡಿವೆ. ಕನ್ನಡದಲ್ಲಿ ತೌಲನಿಕ ಅಧ್ಯಯನದ ಬೀಜಗಳನ್ನು ಮೊದಲು ಬಿತ್ತಿದವರು ಬಿ. ಎಂ. ಶ್ರೀ ಅವರೇ.

ಜಗತ್ತಿನ ಹಲವಾರು ಭಾಷೆ ಹಾಗೂ ಸಾಹಿತ್ಯಗಳ ಮೇಲಿನ ಅಭಿಮಾನದಿಂದ ಶ್ರೀ ಅವರು ಕನ್ನಡದ ಮೇಲಿನ ತಮ್ಮ ಪ್ರೀತಿಯನ್ನು ಎಂದೂ ಕಡಿಮೆ ಮಾಡಿಕೊಳ್ಳಲಿಲ್ಲ. ಕನ್ನಡದ ಪುನರುಜ್ಜೀವನ ಎನ್ನುವುದು ಅನ್ಯ ಭಾಷೆಗಳ ಅನುಕರಣದಿಂದಾಗಲಿ, ಅನುಸರಣದಿಂದಾಗಲಿ ಖಂಡಿತ

ಆಗುವಂಥದಲ್ಲ. ಅದು ಕನ್ನಡದಿಂದಲೇ ಸಾಧ್ಯ ಮತ್ತು ನಮ್ಮ ದೃಷ್ಟಿಯನ್ನು ಜಗತ್ತಿನ ಇತರ ಸಾಹಿತ್ಯಗಳ ತಿಳಿವಿನಿಂದ ವಿಶಾಲವನ್ನಾಗಿ ಮಾಡಿಕೊಳ್ಳುವುದರಿಂದ ಸಾಧ್ಯ ಎಂದು ನಂಬಿದವರು ಅವರು. ಆದ್ದರಿಂದ ಅವರು ಕೇಳಿಕೊಂಡ ಮೊದಲ ಪ್ರಶ್ನೆ ಎಂದರೆ, "ನಮ್ಮ ಪುನರುಜ್ಜೀವನಕ್ಕೆ ಯಾವ ಭಾಷೆ ಮಹತ್ವ ಉಳ್ಳದ್ದು?" ಎನ್ನುವುದು. ಅದಕ್ಕೆ ಉತ್ತರ, "ಇದು ಕಷ್ಟಪಟ್ಟು ನಮ್ಮ ಬುದ್ಧಿಶಕ್ತಿಯನ್ನೆಲ್ಲಾ ವೆಚ್ಚಮಾಡಿ ಕಲಿಯುವ ಭಾಷೆಯಿಂದ ನೆರವೇರುವುದಿಲ್ಲ: ಯಾವುದು ಸರಾಗವಾಗಿ ನಮ್ಮನ್ನು ಒಲಿದು ಬಂದಿರುತ್ತದೆಯೋ, ಯಾವುದು ನಮ್ಮನ್ನು ಬೆನ್ನಟ್ಟಿ ಬಂದು ರಕ್ತಗತವಾಗಿರುತ್ತದೆಯೋ ಅಂಥ ಭಾಷೆಯಿಂದ ಮಾತ್ರ ಸಾಧ್ಯ" (ಶ್ರೀ ಸಾಹಿತ್ಯ ೨೯೧) ಅಂಥ ಭಾಷೆ, ಕನ್ನಡಿಗರಿಗೆ, ಕನ್ನಡ ಎಂದು ಬೇರೆ ಹೇಳಬೇಕಾಗಿಲ್ಲ. ನವೋದಯದ ಆರಂಭ ಕಾಲದಲ್ಲಿ ಈ ಕನ್ನಡ ತೀರಾ ಶೋಚನೀಯ ಸ್ಥಿತಿಯಲ್ಲಿತ್ತು. ಕನ್ನಡ ನಾಡು ಹರಿದು ಹಂಚಿಹೋಗಿ, ಕನ್ನಡಿಗರಲ್ಲಿ ಅಭಿಮಾನಶೂನ್ಯತೆಯೂ, ಅನ್ಯಭಾಷೆಗಳ ಪ್ರಾಬಲ್ಯವೂ ಹೆಚ್ಚಾಗಿತ್ತು. ಕನ್ನಡ ಸಾಹಿತ್ಯವಂತೂ ತನ್ನ ಚಲನಶೀಲತೆಯನ್ನು ಕಳೆದುಕೊಂಡು ಸ್ತಬ್ಧವಾಗಿತ್ತು. ಕನ್ನಡಿಗರನ್ನು ಕವಿದಿದ್ದ ದುಃಸ್ಥಿತಿಯನ್ನು, ಕನ್ನಡಿಗರಿಗೆ ಆವರಿಸಿದ್ದ ಜಡತೆಯನ್ನು ಕಂಡು, 'ಕನ್ನಡ ಮಾತು ತಲೆ ಎತ್ತುವ ಬಗೆ' ಯಾವುದು ಎಂದು ಮೊದಲಿನಿಂದಲೂ ಅವರು ಯೋಚಿಸುತ್ತಿದ್ದರು. ಈ ಸಂಬಂಧದ ಅವರ ತಳಮಳಗಳು, ಮುಂದೆ ಅವರು ಬರೆದ 'ಕನ್ನಡ ತಾಯಿನೋಟ' ಎಂಬ ಕವಿತೆಯಲ್ಲಿ ಅತ್ಯಂತ ನಾಟ್ಯಮಯವಾಗಿ ಅಭಿವ್ಯಕ್ತಗೊಂಡಿವೆ. ಈ ಕವಿತೆಯಲ್ಲಿ ಶ್ರೀ ಅವರು ಕನ್ನಡ ತಾಯನ್ನು ಕಂಡು ಮಾತನಾಡುವುದು ಹಾಳು ಹಂಪೆಯ ಪರಿಸರದಲ್ಲಿ, ಎನ್ನುವುದು ಅತ್ಯಂತ ಅರ್ಥಪೂರ್ಣವಾಗಿದೆ. ಒಂದು ಕಾಲಕ್ಕೆ ಜಗದ್ವಿಖ್ಯಾತವಾದ ಸಾಮ್ರಾಜ್ಯದ ರಾಜಧಾನಿಯಾಗಿದ್ದ ವಿಜಯನಗರ, ಈಗ ಹಾಳು ಹಂಪೆಯಾಗಿ ಕರುಳಿರಿಯುವಂತೆಯೆ, ಕಾವೇರಿಯಿಂದ ಗೋದಾವರಿಯ ವರೆಗೆ ಹರಹಿಕೊಂಡು ಉಜ್ವಲವಾದ ಸ್ಥಿತಿಯಲ್ಲಿದ್ದ ಕನ್ನಡ ನಾಡು ಈಗ ಹರಿದು ಹಂಚಿಹೋಗಿ ಎಂಥ ದುಃಸ್ಥಿತಿಗೆ ಬಂದಿದೆ ಎನ್ನುವುದನ್ನು ಈ ಕವಿತೆಯಲ್ಲಿ ಚಿತ್ರಿಸಿರುವುದರ ಜತೆಗೆ, ಈ ಜನದ ಎಚ್ಚರ, ಅಭಿಮಾನ ಹಾಗೂ ಶ್ರದ್ಧೆಗಳಿಂದ ಈ ಕನ್ನಡದ 'ಹಳೆಯ ಮುತ್ತೈದೆ' ಭುವನೇಶ್ವರಿ ಯಾಗಿ ರಥವನ್ನೇರಿ ಮುನ್ನಿನ ವೈಭವದಿಂದ ರಾರಾಜಿಸುವಳೆಂಬ ಕಣಸನ್ನು ಶ್ರೀ ಅವರು ಕಂಡಿದ್ದಾರೆ. ಶ್ರೀ ಅವರು ಕನ್ನಡದ ಹೋರಾಟಗಾರರು ಮಾತ್ರವಲ್ಲ; ಕನಸುಗಾರರು ಕೂಡಾ ಆಗಿದ್ದರೆಂಬುದನ್ನು ಈ ಕವಿತೆಯಂತೆಯೆ ಅವರ ಇನ್ನಿತರ ಬರೆಹಗಳೂ ಸಮರ್ಥಿಸುತ್ತವೆ. ಕನ್ನಡ ನಾಡಿನಲ್ಲಿ ಕನ್ನಡದ ಸ್ಥಾನಮಾನದ ಸ್ವರೂಪವನ್ನು ಕುರಿತು ಅರ್ಧ ಶತಮಾನಕ್ಕೂ ಹಿಂದೆ ಅವರು ನಡೆಯಿಸಿದ ಚಿಂತನಗಳು, ಇಂದಿಗೂ ಅತ್ಯಂತ ಸುಸಂಗತವಾಗಿವೆ. ಶ್ರೀ ಅವರನ್ನು ಕುರಿತು ಬೇರೆ ಬೇರೆಯ ವಿಷಯಗಳಲ್ಲಿ ಹಲವಾರು ಆಕ್ಷೇಪಣೆಗಳಿದ್ದರೂ, ಅವರ ಕನ್ನಡ ಪ್ರೇಮವನ್ನು ಕುರಿತು ಯಾರೂ ಸಂದೇಹಪಡುವಂತಿಲ್ಲ.

ಆದರೆ ಅವರ ಕನ್ನಡ ನಾಡಿನ ಮೇಲಣ ಪ್ರೇಮ, ಕೇವಲ ಅಂದಿನ ಮಾದರಿ ಮೈಸೂರಿನ ಅಳರಸರ ಮೇಲಿನ ಅಭಿಮಾನದ ಜತೆಗೆ ಬೆರೆತುಕೊಂಡಿದ್ದರಿಂದ, ಅವರ ಕಾವ್ಯಜೀವನಕ್ಕೆ ಆದ ನಷ್ಟ ಬಹು ದೊಡ್ಡದು. ಭಾರತೀಯ ನವೋದಯದ ಪ್ರಮುಖವಾದ ಧಾರೆ ಎಂದರೆ ರಾಷ್ಟ್ರೀಯತೆ ಮತ್ತು ಆ ಮೂಲಕ ಎಚ್ಚರಗೊಂಡ ಸಾಮಾಜಿಕ ನಿಲುವುಗಳು. ಶ್ರೀ ಅವರಲ್ಲಿ ಕಂಡುಬರುವ ಸಾಮಾಜಿಕ-ಧಾರ್ಮಿಕ ಉದಾರವಾದ, ಇಂಗ್ಲಿಷ್ ಶಿಕ್ಷಣದ ಪರಿಣಾಮವೇ ಹೊರತು, ಅದು ರಾಷ್ಟ್ರಾದ್ಯಂತ ವ್ಯಾಪಿಸಿದ್ದ ರಾಷ್ಟ್ರೀಯತೆಯ ಪರಿಣಾಮದಿಂದ ರೂಪುಗೊಂಡದ್ದಲ್ಲ. ಅವರ ಸಮಕಾಲೀನರಾದ ಪಂಜೆ, ಗೋವಿಂದ ಪೈ, ಬೇಂದ್ರೆ, ಕುವೆಂಪು ಇಂಥ ಕವಿಗಳಲ್ಲಿ ಉಜ್ವಲವಾಗಿ ಹಾಗೂ ಧೈರ್ಯವಾಗಿ ರಾಷ್ಟ್ರೀಯ ಭಾವನೆಗಳು – ಮುಖ್ಯವಾಗಿ ಭಾರತೀಯ ಸ್ವಾತಂತ್ರ್ಯ ಸಂಪಾದನೆ, ಮತ್ತು ಚಳವಳಿಗಳನ್ನು ಕುರಿತು, ಆ ಚಳವಳಿಯಲ್ಲಿ ತೊಡಗಿದ ಮಹಾನಾಯಕರ ವ್ಯಕ್ತಿತ್ವವನ್ನು ಕುರಿತು – ಅಭಿವ್ಯಕ್ತವಾದಂತೆ, ಶ್ರೀಯವರಲ್ಲಿ ಅಭಿವ್ಯಕ್ತಗೊಳ್ಳಲಿಲ್ಲ ಅನ್ನುವುದು ತೀರಾ ವಿಲಕ್ಷಣವಾಗಿ ತೋರುತ್ತದೆ. ಹೀಗಾಗಿ ಶ್ರೀ ಅವರ

ನವೋದಯ, ನಿಜವಾದ ಅರ್ಥದಲ್ಲಿ ಪಡೆದುಕೊಳ್ಳಬಹುದಾಗಿದ್ದ ಆಯಾಮವನ್ನು ಪಡೆದುಕೊಳ್ಳಲಿಲ್ಲ. ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಕಾವಿನಲ್ಲೂ ಶ್ರೀ ಅವರು ಇಷ್ಟೊಂದು ತಣ್ಣಗಿರಬೇಕಾದ ಅಗತ್ಯವಿರಲಿಲ್ಲ. ಒಂದು ವೇಳೆ ಅವರ ಸಾಹಿತ್ಯ ಹಾಗೂ ವ್ಯಕ್ತಿತ್ವ ಭಾರತೀಯ ನವೋದಯದ ಮುಖ್ಯಧಾರೆಯಾದ ರಾಷ್ಟ್ರೀಯತೆಯನ್ನೂ ಒಳಗೊಂಡಿದ್ದರೆ, ಅವರ ಸಾಹಿತ್ಯಕ್ಕೆ ಪ್ರಾಪ್ತವಾಗಬಹುದಾಗಿದ್ದ ತೂಕ ಬೇರೆಯೇ ಆಗಬಹುದಾಗಿತ್ತು ಎಂದು ಭಾವಿಸುವುದು ಅನಿವಾರ್ಯವಾಗಿದೆ. ಆದರೂ, ಶ್ರೀಯವರ ವ್ಯಕ್ತಿತ್ವ ಹಾಗೂ ಸಾಹಿತ್ಯಕ ಸಾಧನೆಗಳ ತೂಕ ಇದರಿಂದ ಕಡಿಮೆಯೇನೂ ಆಗುವುದಿಲ್ಲ. ಕನ್ನಡಕ್ಕಾಗಿ ಅವರೇನು ಮಾಡಿದ್ದಾರೋ, ಅದರ ಪರಿಣಾಮ ತುಂಬ ಗಾಢವಾದದ್ದಾಗಿದೆ; ಪ್ರಾತಃಸ್ಮರಣೀಯವಾಗಿದೆ. ಶ್ರೀ ಅವರು "ಕನ್ನಡ ನವೋದಯಕ್ಕೆ ನಾಂದೀಸ್ವರೂಪರಾದವರು" ಎಂದು ಅವರ ಶಿಷ್ಯರಾದ ಶ್ರೀ ಕುವೆಂಪು ಅವರು ಹೇಳಿದ ಮಾತು ತುಂಬ ಅರ್ಥಪೂರ್ಣವಾಗಿದೆ.

* * *

'ಶ್ರೀನಿಧಿ' ಎಂಬ ಈ ಸಂಪುಟವು, ಶ್ರೀ ಅವರ ಜನ್ಮ ಶತಮಾನೋತ್ಸವದ ನೆನಪಿನ ಕಾಣಿಕೆಯಾಗಿದೆ. ಈ ಸಂಪುಟದ ಮೊದಲ ನೂರಾ ಇಪ್ಪತ್ತೈದು ಪುಟಗಳಲ್ಲಿ, ಶ್ರೀ ಅವರನ್ನು ಶಿಷ್ಯರಾಗಿ, ಸ್ನೇಹಿತರಾಗಿ, ಅಭಿಮಾನಿಗಳಾಗಿ ಹತ್ತಿರದಿಂದ ಕಂಡ ಹಲವರ ನೆನಪುಗಳಿವೆ. ಈ ಭಾಗವನ್ನು 'ಶ್ರೀಸ್ಮೃತಿ' ಎಂದು ಕರೆಯಲಾಗಿದೆ. ಎರಡನೆಯ ಭಾಗವಾದ 'ಸಾಹಿತ್ಯನಿಧಿ'ಯಲ್ಲಿ ಒಟ್ಟು ಹದಿನೇಳು ಲೇಖನಗಳು ಮತ್ತು ಶ್ರೀ ಸಾಹಿತ್ಯವನ್ನು ಕುರಿತು ಇದುವರೆಗು ಪ್ರಕಟವಾದ ಲೇಖನಗಳ ಸೂಚಿ ಇದೆ. ಮೊದಲನೆಯದು ಶ್ರೀ ಅವರ ವ್ಯಕ್ತಿಚಿತ್ರವನ್ನು ಕುರಿತದ್ದಾದರೆ, ಎರಡನೆಯದು ಅವರ ಸಾಹಿತ್ಯ ನಿರ್ಮಿತಿಯನ್ನು ಕುರಿತ ವಿಮರ್ಶೆಯಾಗಿದೆ. ವಿಮರ್ಶೆಯ ಈ ಭಾಗದಲ್ಲಿ ಶ್ರೀ ಅವರ ಸಾಹಿತ್ಯದ ನೆಲೆ-ಬೆಲೆಗಳನ್ನು, ಸರಿಯಾಗಿ ಗುರುತಿಸುವ ಪ್ರಯತ್ನವಿದೆ. ೧೯೪೧ರಲ್ಲಿ ಶ್ರೀ ಅವರಿಗೆ ಅವರ ಶಿಷ್ಯರೂ ಅಭಿಮಾನಿಗಳೂ ಅರ್ಪಿಸಿದ ಗೌರವ ಗ್ರಂಥ 'ಸಂಭಾವನೆ'ಯ ನಂತರ, ಅವರ ಜನ್ಮ ಶತಮಾನೋತ್ಸವದ ಸಂದರ್ಭದಲ್ಲಿ, ನಾಲ್ಕು ದಶಕಗಳ ನಂತರ, ಅವರ ನೆನಪಿಗೆ ಸಲ್ಲಿಸುತ್ತಿರುವ 'ಶ್ರೀನಿಧಿ' ಶ್ರೀ ಅವರ ವ್ಯಕ್ತಿತ್ವ ಹಾಗೂ ಸಾಹಿತ್ಯವನ್ನು ಬೇರೆಯ ನಿಟ್ಟಿನಿಂದ ವ್ಯಾಖ್ಯಾನಿಸುವ ಮಹತ್ವದ ಕೃತಿಯಾಗಿದೆ. 'ಸಂಭಾವನೆ' ಒಂದರ್ಥದಲ್ಲಿ ಸಂಕೀರ್ಣ ಸ್ವರೂಪದ ಗ್ರಂಥವಾಗಿದ್ದರೆ, 'ಶ್ರೀನಿಧಿ' ಕೇವಲ ಶ್ರೀ ಅವರ ವ್ಯಕ್ತಿತ್ವ ಹಾಗೂ ಸಾಹಿತ್ಯದ ಸಮೀಕ್ಷೆಗೆ ಬದ್ಧವಾದ ಕೃತಿಯಾಗಿದೆ.

ಇಂಥ ಒಂದು ಕೃತಿಯ ಸಂಪಾದಕತ್ವದ ಜವಾಬ್ದಾರಿಯನ್ನು ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನದ ಪದಾಧಿಕಾರಿಗಳಾದ ಹಿರಿಯರು ತುಂಬ ವಿಶ್ವಾಸದಿಂದ ನನಗೆ ವಹಿಸಿ, ಮಾರ್ಗದರ್ಶನಮಾಡಿ ಇಂಥ ಒಂದು ಕೃತಿಯ ಸಿದ್ಧತೆಗೆ ಕಾರಣರಾಗಿದ್ದಾರೆ. ಸಹಾಯಕ ಸಂಪಾದಕರಾಗಿ ಡಾ॥ ಕೆ. ವಿ. ನಾರಾಯಣ ಅವರು, ಸಂಪಾದಕ ಮಂಡಲಿಯ ಸದಸ್ಯರಾಗಿ ಶ್ರೀ ಚನ್ನವೀರ ಕಣವಿ, ಡಾ॥ ಸಿ. ಪಿ. ಕೃಷ್ಣಕುಮಾರ್ ಮತ್ತು ಶ್ರೀಮತಿ ಜಿ. ನ. ಮಂಗಳಾ ಇವರು ಈ ಸಂಪುಟದ ಯೋಜನೆಯಲ್ಲಿ ನೆರವಾಗಿದ್ದಾರೆ. ಕರ್ನಾಟಕದ ಹಿರಿಯ ಹಾಗೂ ಕಿರಿಯ ಲೇಖಕರೆಲ್ಲರೂ, ನಮ್ಮ ಕರೆಗೆ ಓಗೊಟ್ಟು ಈ ಸಂಪುಟಕ್ಕೆ ಲೇಖನಗಳನ್ನು ಬರೆದು ಕೊಟ್ಟಿದ್ದಾರೆ. ಇವರೆಲ್ಲರಿಗೂ ನನ್ನ ಕೃತಜ್ಞತೆಯ ವಂದನೆಗಳು.

ಈ ಸಂಪುಟವನ್ನು ತುಂಬ ಶ್ರದ್ಧೆ-ವಿಶ್ವಾಸಗಳಿಂದ, ಅಂದವಾಗಿ ಅಚ್ಚುಮಾಡಿ ಕೊಟ್ಟಿರುವ ರಾಷ್ಟ್ರೋತ್ಥಾನ ಮುದ್ರಣಾಲಯದ ಶ್ರೀ ರಾಘವೇಂದ್ರರಾವ್ ಮತ್ತಿತರರ ಸಹಕಾರವನ್ನು ನಾನಿಲ್ಲಿ ತುಂಬ ಸಂತೋಷದಿಂದ ನೆನೆಯುತ್ತೇನೆ.

ಜನವರಿ, ೧೯೮೫ — ಜಿ. ಎಸ್. ಶಿವರುದ್ರಪ್ಪ

# ಉಪಕಾರ ಸ್ಮರಣೆ

ಬಿ. ಎಂ. ಶ್ರೀ. ಜನ್ಮಶತಮಾನೋತ್ಸವವನ್ನು ನಡೆಸತಕ್ಕದ್ದೆಂದು ಪ್ರತಿಷ್ಠಾನದ ಕಾರ್ಯ ಸಮಿತಿ ನಿರ್ಧರಿಸಿ, ಅದನ್ನು ನಡೆಸಿಕೊಡುವ ಹೊಣೆಗಾರಿಕೆಯನ್ನು ವಹಿಸಿಕೊಳ್ಳಬೇಕೆಂದು ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರನ್ನು ಕೇಳಿಕೊಳ್ಳತಕ್ಕದೆಂದು ತೀರ್ಮಾನಿಸಿತು. ಪ್ರತಿಷ್ಠಾನದ ಪ್ರಾರ್ಥನೆಯನ್ನು ಮನ್ನಿಸಿ, ಶ್ರೀ ಜಿ. ನಾರಾಯಣ ಅವರು ಉತ್ಸವ ಸಮಿತಿಯ ಕಾರ್ಯಾಧ್ಯಕ್ಷರಾಗಿರಲು ಒಪ್ಪಿಕೊಂಡು, ಉತ್ಸವ ನಿರ್ವಹಣೆಯ ಸಮಸ್ತ ಕಾರ್ಯಭಾರವನ್ನೂ ಸಂತೋಷದಿಂದ ಒಪ್ಪಿಕೊಂಡು ಪ್ರತಿಷ್ಠಾನ ಮಾತ್ರವಲ್ಲ, ಕನ್ನಡಿಗರೆಲ್ಲರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಉತ್ಸವದ ಸಮಗ್ರ ಯೋಜನೆ ಅವರ ಚಿಂತನದ ಫಲ. ಸುಮಾರು ೫೦೦ ಪುಟಗಳ ಸಂಸ್ಮರಣ ಸಂಪುಟದ ಪ್ರಕಟನೆಯೂ ಯೋಜನೆಯಲ್ಲಿ ನಿರ್ದಿಷ್ಟವಾದ ಪ್ರಕಟನೆಗಳಲ್ಲಿ ಒಂದು.

ಈ ಸಂಪುಟವನ್ನು ಸಂಪಾದನೆಮಾಡಿ ಹೊರತರುವ ಸಲುವಾಗಿ ಉತ್ಸವ ಸಮಿತಿ ಒಂದು ಸಂಪಾದಕ ಮಂಡಲಿಯನ್ನು ನಿಯೋಜಿಸಿತು. (ಸಂಪಾದಕ ಮಂಡಲಿಯ ಸದಸ್ಯರ ಹೆಸರುಗಳನ್ನು ರಕ್ಷಾಪತ್ರದ ಒಳಮಡಿಕೆಯಲ್ಲಿ ಕಾಣಬಹುದು.) ಈ ಸಂಪಾದಕ ಮಂಡಲಿ ೪-೯-೧೯೮೩ರಲ್ಲಿ ಸಭೆ ಸೇರಿ, ಸಂಪುಟದ ಸ್ವರೂಪ, ಲೇಖನಗಳ ಹಾಗೂ ಲೇಖಕರ ಪಟ್ಟಿ, ಮುಂತಾದ ವಿಚಾರಗಳನ್ನು ಪರ್ಯಾಲೋಚಿಸಿ, ನಿರ್ದೇಶನ ನೀಡಿತು. ಅದರಂತೆ, ಸಂಪಾದಕರಾದ ಡಾ॥ ಜಿ. ಎಸ್. ಶಿವರುದ್ರಪ್ಪನವರು ಸಂಪುಟದ ಸಂಪಾದನಕಾರ್ಯದ ಹೊಣೆಗಾರಿಕೆಯನ್ನು ವಹಿಸಿಕೊಂಡು, ಲೇಖನಗಳನ್ನು ತರಿಸಿಕೊಳ್ಳುವುದರಿಂದ ಹಿಡಿದು ಕರಡು ತಿದ್ದುವವರೆಗೆ ಎಲ್ಲ ಕೆಲಸವನ್ನೂ ಅತ್ಯಂತ ಶ್ರದ್ಧೆಯಿಂದ ನಿರ್ವಹಿಸಿರುತ್ತಾರೆ. ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರದ ಪ್ರಕಟನೆಗಳಾದ 'ಸಾಧನೆ' ಮತ್ತು 'ಸಾಹಿತ್ಯ ವಾರ್ಷಿಕ'ಗಳ ಸಂಪಾದನಕಾರ್ಯದ ತಮ್ಮ ಪರಿಪಕ್ವ ಅನುಭವವನ್ನು ಈ ಸಂಪುಟದ ಸಂಪಾದನೆಗೆ ಧಾರೆಯೆರೆದುಬಿಟ್ಟಿದ್ದಾರೆ. ಅವರಿಗೆ ಪ್ರತಿಷ್ಠಾನ ಅತ್ಯಂತ ಋಣಿಯಾಗಿದೆ. ಈ ಕಾರ್ಯದಲ್ಲಿ ಸಹಕರಿಸಿದ ಸಂಪಾದಕ ಮಂಡಲಿಯ ಸದಸ್ಯರಿಗೂ, ವಿಶೇಷವಾಗಿ, ಸಂಪಾದಕರಿಗೆ ಅನೇಕ ವಿಧಗಳಲ್ಲಿ ನೆರವು ನೀಡಿದ ಡಾ॥ ಕೆ. ವಿ. ನಾರಾಯಣ ಅವರಿಗೂ ಪ್ರತಿಷ್ಠಾನ ಕೃತಜ್ಞವಾಗಿದೆ.

ಸಂಪುಟದ ಲೇಖನಗಳ ತಿರುಳೇನು, ಹುರುಳೇನು ಎಂಬ ಬಗೆಗೆ ನಾವು ಹೇಳಬೇಕಾದ್ದು ಏನೂ ಇಲ್ಲ. ಸಂಪಾದಕರ ಮುನ್ನುಡಿ ಅತ್ಯಂತ ಮನೋಜ್ಞವಾಗಿ ಆ ಕೆಲಸ ಮಾಡಿದೆ. ಡಾ॥ ಶಿವರುದ್ರಪ್ಪನವರು ಸೂಚಿಸಿ, ಸಂಪಾದಕ ಮಂಡಲಿ ಅನುಮೋದಿಸಿದ ಹೆಸರು 'ಶ್ರೀನಿಧಿ' ಎಷ್ಟು ಸೊಗಸಾಗಿದೆ, ಎಷ್ಟು ಅರ್ಥಪೂರ್ಣವಾಗಿದೆ ಎನ್ನುವುದನ್ನು ಮಾತ್ರ ಇಲ್ಲಿ ಎತ್ತಿ ಹೇಳ ಬಯಸುತ್ತೇವೆ. ಬಿ. ಎಂ. ಶ್ರೀ. ಅವರ ನೂರನೆಯ ಹುಟ್ಟುಹಬ್ಬದ ನೆನಪಿನ ತವನಿಧಿಯನ್ನು ಸಂಕೇತಿಸುವ ಈ ಹೆಸರು ಕನ್ನಡಿಗರಲ್ಲಿ ನಾಡುನುಡಿಗಳ ಅಭಿಮಾನಶ್ರೀಯನ್ನು ನೂರುಮಡಿಯಾಗಿ ಬೆಳಸಲಿ ಎಂದು ಪ್ರತಿಷ್ಠಾನ ಹಾರೈಸುತ್ತದೆ.

ಶ್ರೀಯವರ ವ್ಯಕ್ತಿತ್ವ-ವಿಚಾರ, ಸಾಧನೆ-ಸಿದ್ಧಿ, ನಡೆ-ನುಡಿ, ಪಾಠ-ಪ್ರವಚನ, ಕೃತಿ-ಮತಿ, ಕನ್ನಡಕ್ಕೆ ಅವರು ತೊಡಿಸಿದ ತೊಡಿಗೆ ಕೊಟ್ಟ ಕೊಡಿಗೆ – ಇವನ್ನು ಸಂಕ್ಷೇಪವಾದರೂ ಸಮೀಚೀನ

ವಾಗಿ ಸಮೀಕ್ಷಿಸುವ ಲೇಖನಗಳನ್ನು, ಆಪ್ತವಾಗಿ ನೆನಪಿಸುವ ನೆನಪುಗಳನ್ನು ಈ ಸಂಪುಟ ಸಮೃದ್ಧವಾಗಿ ಒಳಗೊಂಡಿದೆ. ಇನ್ನು ಮುಂದಿನ 'ಶ್ರೀ' ಜೀವನಚರಿತ್ರಕಾರರಿಗೆ ಇದೊಂದು ಬೆಲೆಬಾಳುವ ಆಕರಗ್ರಂಥವಾಗಿ ಉಳಿಯಲಿದೆ. ಸಂಪುಟದ ಈಗಿನ ಸ್ವರೂಪಕ್ಕೆ ಕಾರಣಭೂತರಾದವರು ಪೂಜ್ಯ ಲೇಖಕರು. ಶ್ರೀಯವರನ್ನು ಕುರಿತ ಕೃತಿಗಳು ಹಾಗೂ ಲೇಖನಗಳ ಸೂಚಿಗಳನ್ನು ಶ್ರೀ ಎಸ್. ಶಿವಣ್ಣನವರೂ ಶ್ರೀ ನಾ. ಗೀತಾಚಾರ್ಯರೂ ಶ್ರಮಪಟ್ಟು ಸಿದ್ಧಪಡಿಸಿಕೊಟ್ಟು ಉಪಕರಿಸಿದ್ದಾರೆ. ಇವರೆಲ್ಲರಿಗೂ ಪ್ರತಿಷ್ಠಾನದ ಕೃತಜ್ಞತೆಯು ವಂದನೆಗಳು ಸಲ್ಲುತ್ತವೆ.

ಸಂಪುಟವನ್ನು ವಿಲಂಬಮಾಡದೆ ತುಂಬ ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವವರು ರಾಷ್ಟ್ರೋತ್ಥಾನ ಪರಿಷತ್ತಿನ ಮುದ್ರಣಾಲಯ: ಅದರ ವ್ಯವಸ್ಥಾಪಕರಿಗೂ ಸಿಬ್ಬಂದಿಗೂ ಪ್ರತಿಷ್ಠಾನದ ವಂದನೆಗಳು.

ಸಂಪುಟದ ರಕ್ಷಾಪುಟದ ವಿನ್ಯಾಸ, ಮುದ್ರಣ ಅಶ್ವಘ್ ಪ್ರಿಂಟರ್ಸ್ ಅವರ ಕೊಡಿಗೆ. ಅವರಿಗೂ ನಮ್ಮ ವಂದನೆಗಳು.

ಈ ಸಂದರ್ಭದಲ್ಲಿ ಕರ್ನಾಟಕ ರಾಜ್ಯ ಸರ್ಕಾರದ ಉದಾರವಾದ ಪ್ರೋತ್ಸಾಹವನ್ನು ನಾವು ಮರೆಯುವಂತಿಲ್ಲ. ಬಿ. ಎಂ. ಶ್ರೀ. ಜನ್ಮಶತಮಾನೋತ್ಸವದ ಎಲ್ಲ ಚಟುವಟಿಕೆಗಳೂ ಸೇರಿದಂತೆ ಅದನ್ನು ಆಚರಿಸಲು ರಾಜ್ಯಸರ್ಕಾರ ತನ್ನ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಮೂಲಕ ಒಂದು ಲಕ್ಷ ರೂಪಾಯಿಗಳ ಅನುದಾನವನ್ನು ನೀಡಿ, 'ಶ್ರೀ'ಯವರ ವಿಷಯದಲ್ಲಿ ತನಗಿರುವ ಅಭಿಮಾನ ಗೌರವಗಳನ್ನು ಪ್ರಕಟಪಡಿಸಿತು. ಸರ್ಕಾರದ ಯುವಜನಸೇವಾ ಮತ್ತು ಕನ್ನಡ ಸಂಸ್ಕೃತಿ ಖಾತೆಗಳ ಸಚಿವರಾದ ಡಾ॥ ಜೀವರಾಜ ಆಳ್ವ ಅವರಿಗೂ, ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರಿಗೂ ಪ್ರತಿಷ್ಠಾನ ವಿಶೇಷ ಕೃತಜ್ಞತೆ ಋಣಿಯಾಗಿದೆ. ಆದರೆ, ಈ ಸಂಪುಟವನ್ನು ಮುದ್ರಣಕ್ಕೆ ಕಳಿಸುವ ವೇಳೆಗೆ ಹಣದ ಬಹುಭಾಗ ಇತರ ಬಾಬುಗಳಿಗೆ (ಕರ್ನಾಟಕದಲ್ಲಿ ಮತ್ತು ಕರ್ನಾಟಕದ ಹೊರಗೆ ನಡೆಸಿದ ಉತ್ಸವಗಳು ಮತ್ತು ಕೆಲವು ಕಿರುಹೊತ್ತಗೆಗಳ ಪ್ರಕಟನೆ, ಮುಂತಾದವಕ್ಕೆ) ವೆಚ್ಚವಾಗಿಹೋಗಿತ್ತು. ಉಳಿದಷ್ಟು ಹಣ ನೀಡಿದ ಅಲ್ಪ ಧೈರ್ಯವನ್ನೇ ಬಂಡವಾಳವಾಗಿಟ್ಟುಕೊಂಡು ಉತ್ಸವದ ಯೋಜನೆಯನ್ನು ರೂಪಿಸಿದಾಗಲೇ ನಿರ್ಧರಿಸಿದ್ದಂತೆ ಸಂಸ್ಮರಣ ಸಂಪುಟವನ್ನು ಹೊರತರುವ ನಿರ್ಧಾರವನ್ನು ಕೈಗೊಳ್ಳಲಾಯಿತು. ಕೊರತೆಬಿದ್ದ ಹಣವನ್ನು ಸ್ವಲ್ಪಮಟ್ಟಿಗಾದರೂ ತುಂಬಿಕೊಳ್ಳುವ ಉದ್ದೇಶದಿಂದ 'ಶ್ರೀನಿಧಿ'ಯ ಪ್ರಕಟನಪೂರ್ವ ರಿಯಾಯಿತಿ ಬೆಲೆಯನ್ನು ಗೊತ್ತುಪಡಿಸಿ, ಬೆಲೆ ಚೀಟಿಗಳನ್ನು ಮಾರಾಟ ಮಾಡುವ ವ್ಯವಸ್ಥೆ ಮಾಡಲಾಯಿತು. ಈ ಮಾರಾಟದ ಕಾರ್ಯದಲ್ಲಿ ನೆರವಾದ ಎಲ್ಲ ಮಹಿಳೆಯರಿಗೂ ಮಹನೀಯರಿಗೂ ಪ್ರತಿಷ್ಠಾನ ಋಣಿಯಾಗಿದೆ. ಹಾಗೆಯೇ, ಬೆಲೆ ಚೀಟಿಗಳನ್ನು ಕೊಂಡು ಸಹಕರಿಸಿದ ಎಲ್ಲ ಅಭಿಮಾನಿಗಳಿಗೂ ನಾವು ಕೃತಜ್ಞರು.

ಕನ್ನಡ ನಾಡು ನುಡಿಗಳ ಅಭಿಮಾನ ಈಗ ಬಾಯುಪಚಾರದ ಮಾತಾಗಿದೆ. ಈ ಸಂಪುಟದ ಲೇಖನಗಳನ್ನು ಓದಿ ಮನನ ಮಾಡುವುದರಿಂದ 'ಶ್ರೀ'ಯವರ ಜೀವನಾದರ್ಶಗಳನ್ನು ಓದುಗರು ಅರ್ಥಮಾಡಿಕೊಂಡು ಅವರ ಕೃತಿಗಳ ಮೇಲ್ಮೆಯನ್ನು ಅರಿತುಕೊಂಡು, ಶ್ರೀಯವರು ತೋರಿ ನಡೆದ ದಾರಿಯಲ್ಲಿ ಅವರೂ ಎಲ್ಲ ಕನ್ನಡಿಗರೂ ನಡೆಯುವಂತಾಗಲಿ ಎಂದು ಹಾರೈಸುತ್ತೇವೆ.

ಬೆಂಗಳೂರು – ೧೯
ಜನವರಿ ೧೯೮೫

ಎಂ. ವಿ. ಸೀತಾರಾಮಯ್ಯ
(ಪ್ರತಿಷ್ಠಾನದ ಪರವಾಗಿ)
ಸಂಸ್ಥಾಪಕ ಕಾರ್ಯದರ್ಶಿ
ಮತ್ತು
ಉತ್ಸವಸಮಿತಿಯ ಉಪಾಧ್ಯಕ್ಷ

# ಪರಿವಿಡಿ

## ಭಾಗ ಒಂದು : ಶ್ರೀಸ್ಮೃತಿ

## ಭಾಗ ಎರಡು : ಸಾಹಿತ್ಯನಿಧಿ

## ಅನುಬಂಧಗಳು

ಭಾಗ : ಒಂದು

# ಶ್ರೀಸ್ಮೃತಿ

“ನೆನಪಿನ ಓರಿಯೊಳಗ
ಮಿಣುಕ್ತಾವ ಎಣ್ಣೀ ದೀಪ
ಎಲ್ಲಿ। ಹೋದಾವೋ ಗೆಳೆಯ ಆ ಕಾಲಾ ?”

– ಬೇಂದ್ರೆ

# ಬಿ. ಎಂ. ಶ್ರೀಕಂಠಯ್ಯನವರು

– ಡಿ. ವಿ. ಜಿ.

ಶ್ರೀಕಂಠಯ್ಯನವರು ಬೆಂಗಳೂರಿನಲ್ಲಿ ಇದ್ದಷ್ಟು ದಿವಸವೂ ಅವರೂ ನಾನೂ ದಿನಕ್ಕೊಂದು ಸಾರಿಯಾದರೂ ಸೇರದೆ ಇದ್ದದ್ದು ಅಪರೂಪ. ಇಬ್ಬರೂ ಸೇರಿ ವಾಕಿಂಗ್ ಹೋಗುತ್ತಿದ್ದೆವು. ನನ್ನ ಮನೆಗೆ ಅವರು ಬಾರದಿದ್ದರೆ ನಾನು ಅವರ ಮನೆಗೆ ಹೋಗುತ್ತಿದ್ದೆ. ಒಂದು ದಿನ ಬೆಳಗ್ಗೆ ಸುಮಾರು ಏಳು-ಏಳೂವರೆ ಘಂಟೆಯ ಹೊತ್ತಿಗೆ ಅವರ ಮನೆಗೆ ಹೋದೆ. ಮೊಗಸಾಲೆಯಲ್ಲಿ ನಿಂತು ಅವರ ರೂಮಿನ ಕದವನ್ನು ತಟ್ಟಿದೆ. ಉತ್ತರ ಬರಲಿಲ್ಲ. ಆಲಿಸಿ ಕೇಳಿದೆ. ಏನೋ ಒಂದು ಹಾಡಿನ ಧ್ವನಿ ಕೇಳಿಬರುತ್ತಿತ್ತು. ಮತ್ತೊಮ್ಮೆ ಬಾಗಿಲು ತಟ್ಟಿದೆ. ತೆರೆಯಲಿಲ್ಲ. ಮೂರನೆಯ ಸಾರಿ ಗಟ್ಟಿಯಾಗಿ ಡಬಡಬ ಎಂದು ಕಟ್ಟಿಗೆಯಿಂದ ಬಾಗಿಲಮೇಲೆ ಬಾರಿಸಿದೆ. (ನನ್ನ ಇಂಥ ಚೇಷ್ಟೆಗಳು ಅವರಿಗೆ ಅಭ್ಯಾಸವಾಗಿದ್ದವು.) ಆಗ ಬಾಗಿಲು ತೆರೆದರು. ನಾನು ಮೊದಲ ಎರಡು ಸಲ ಮಾಡಿದ್ದ ಸದ್ದು ಅವರ ಕಿವಿಗೆ ಸೋಕಿರಲಿಲ್ಲ. ಅವರು ಮಾಡುತ್ತಿದ್ದುದೇನು ? ಡಾಂಟೆ ಕವಿಯ 'ಡಿವೈನ್ ಕಾಮೆಡಿ' ಕಾವ್ಯವನ್ನು ಸಣ್ಣ ಮೇಜಿನ ಮೇಲೆ ತೆರೆದಿಟ್ಟು ಅದರ ವಾಕ್ಯಗಳನ್ನೋದಿ ಬಾಯಿಗೆ ಗಟ್ಟಿಮಾಡಬೇಕೆಂದು ಅದರ ವಾಕ್ಯಗಳನ್ನು ನುಡಿಯುತ್ತಾ ಮುಂದಿನ ಕೋಣೆಯಿಂದ ಅದರ ಹಿಂದಿನ ಕೋಣೆಯ ಗೋಡೆಯವರೆಗೂ ಶತಪಥ ತುಳಿಯುತ್ತಿದ್ದರು. ಆ ವೇಳೆಗೆ ಶ್ರೀಕಂಠಯ್ಯನವರ ವಯಸ್ಸು ಐವತ್ತು ಮೀರಿತ್ತು. ಪೆನ್ಷನ್ ದಿನ ಹತ್ತಿರ ಹತ್ತಿರ ಬಂದಿತ್ತು.

ಇದು ಹುಟ್ಟು ವಿದ್ವಾಂಸನ ಲಕ್ಷಣ.

ಸ್ವಾಧ್ಯಾಯಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ
ತದ್ಧಿ ತಪಸ್ತದ್ಧಿ ತಪಃ

ಅಂಥಾದ್ದು ಶ್ರೀಕಂಠಯ್ಯನವರ ತಪಸ್ಸು.

*　　　*　　　*

ಬೆಂಗಳೂರಿಗೆ ಬರುವುದಕ್ಕೆ ಮುಂಚೆ ರಿಜಿಸ್ಟ್ರಾರ್ ಆಗಿದ್ದಾಗ ಶ್ರೀಕಂಠಯ್ಯನವರು ತಿಂಗಳಿಗೊಂದು ಸಾರಿಯಾದರೂ ತಮ್ಮ ಅಧಿಕಾರ ಕಾರ್ಯಕ್ಕಾಗಿ ಬೆಂಗಳೂರಿಗೆ ಬರಬೇಕಾಗಿತ್ತು. ತಮ್ಮ ಮೋಟಾರುಕಾರಿನಲ್ಲಿ ಬರುತ್ತಿದ್ದರು. ಬೆಂಗಳೂರು ಸೇರುವ ಹೊತ್ತನ್ನು ಮುಂಚಿತವಾಗಿ ನನಗೆ ತಿಳಿಸುತ್ತಿದ್ದರು. ಮೈಸೂರಿನಿಂದ ನೇರವಾಗಿ ನನ್ನ ಕೋಣೆಗೆ ಬರುತ್ತಿದ್ದರು. ಅಲ್ಲಿ ಕೊಂಚ ಉಪಾಹಾರವಾದ ಬಳಿಕ ಅವರೂ ನಾನೂ 'ಅರ್ನೆ ಕ್ಯಾಸಲ್' (ಜಯಮಹಲ್) ಆವರಣದೊಳಗಿನ ಅವರ ಬಿಡದಿಗೆ ಹೋಗುತ್ತಿದ್ದೆವು. ಅಲ್ಲಿ ನಾನು ಅವರಿಗಾಗಿ ಸಂಸ್ಕೃತ 'ಮಹಾಭಾರತ'ದ ದ್ರೋಣಪರ್ವ, ಶಲ್ಯಪರ್ವ, ಕರ್ಣಪರ್ವ, ಸೌಪ್ತಿಕಪರ್ವ – ಇವುಗಳ ಭಾಗಗಳನ್ನು ಓದುತ್ತಿದ್ದೆ. ಅವರು ನಡುನಡುವೆ ಟಿಪ್ಪಣಿ ಮಾಡುವರು, ಗುರುತು ಮಾಡಿಟ್ಟು ಕೊಳ್ಳುವರು. ಇದು ಅವರ ಪ್ರಸಿದ್ಧ ಕೃತಿಯಾದ 'ಅಶ್ವತ್ಥಾಮನ್' ನಾಟಕದ ರಚನೆಗೆ ಅವರು ಮಾಡಿಕೊಂಡ ಸಿದ್ಧತೆ.

ಅವರೂ ನಾನೂ ಸಂಗಡಿಗರಾಗಿ ವಾಕಿಂಗ್ ಹೋಗುತ್ತಿದ್ದೆವೆಂದು ಹೇಳಿದೆ. ಸಾಹಿತ್ಯ ಸಮ್ಮೇಳನಗಳಿಗೂ ನಾವು ಜೊತೆಯಲ್ಲಿ ಹೋಗುತ್ತಿದ್ದೆವು. ನಮ್ಮಿಬ್ಬರದೂ ಒಂದೇ ಕೋಣೆಯಲ್ಲಿ ಬಿಡಾರ. ನಡುರಾತ್ರಿಯ ಆಚೆನವರೆಗೂ ಮಾತುಕಥೆಗಳು. ಅದರಲ್ಲಿ ಬಹುಭಾಗ ಸಾಹಿತ್ಯಕ್ಕೆ ಸೇರಿದ್ದು. 'ರಾಮಾಯಣ' ಕವಿಯೂ ಹೋಮರ್ ಕವಿಯೂ ಒಬ್ಬರಿಂದೊಬ್ಬರು ಯಾಕೆ ವಿಷಯ ಕದ್ದಿರಬಾರದು ? ಅವರಲ್ಲಿ ಕದ್ದವರು ಯಾರು ? ಕೀಟ್ಸ್ ಕವಿಯು "ಟ್ರೂತ್ ಈಸ್ ಬ್ಯೂಟಿ" ಎಂದಾಗ ಅವನ ಮನಸ್ಸಿನಲ್ಲಿದ್ದದ್ದೇನು ? ಇಂಗ್ಲಿಷಿನ 'ರೇರ್' ಎಂಬುದಕ್ಕೆ ನಾವು 'ವಿರಳ' ಎಂದು ಪ್ರತಿಪದ ಮಾಡಿಕೊಳ್ಳಬೇಕೆ, 'ಅಪರೂಪ' ಎಂಬ ಮಾತನ್ನು ಉಳಿಸಬೇಕೆ ? ಇಂಥ ಪ್ರಶ್ನೆಗಳು ಎಷ್ಟೋ ಬರುತ್ತಿದ್ದವು. ಎಷ್ಟೋ ಸಮಯಗಳಲ್ಲಿ ಹಾಸ್ಯಪ್ರಸಂಗಗಳೂ, ಆಭಾಸ ಪ್ರಸಂಗಗಳೂ ಬರುತ್ತಿದ್ದವು. ಅವರು ಸೂತ್ರಗಳನ್ನೂ ಧಾತುಪಾಠಗಳನ್ನೂ ಹೇಳುತ್ತಿದ್ದರು.

* * *

**'ಇಂಗ್ಲಿಷ್ ಗೀತಗಳು'**

ಶ್ರೀಕಂಠಯ್ಯನವರ ಇಂಗ್ಲಿಷ್ ಗೀತಗಳಲ್ಲಿಯ ಕೆಲವು ಕವನಗಳು ಮೊದಲು 'ಕರ್ಣಾಟಕ ಗ್ರಂಥಮಾಲೆ' ಎಂಬ ಮಾಸಪತ್ರಿಕೆಯಲ್ಲಿ ಆಗಾಗ ಪ್ರಕಟವಾಗಿದ್ದವು. ಎನ್. ಎಸ್. ಸುಬ್ಬರಾಯರವರು ಅವುಗಳನ್ನು ನೋಡಿ ಮೆಚ್ಚಿಕೊಂಡು ನಮಗೆ ಹೇಳಿದರು. ಅವರು ಆ ಕವನಗಳನ್ನು ಸಂಗ್ರಹ ಮಾಡಿಟ್ಟು ಅಂದವಾಗಿ ಚಿನ್ನದ ಗಿಲ್ಟ್ ತಲೆಬರಹ ಹಾಕಿಸಿ ಬೈಂಡು ಮಾಡಿಸಿಟ್ಟುಕೊಂಡಿದ್ದರು. ಬೈಂಡಿನ ಮೇಲೆ ಸುಂದರವಾದ ಚಿನ್ನದ ಬಣ್ಣದ ಅಕ್ಷರಗಳಲ್ಲಿ ಹೆಸರು ಬರೆಯಿಸಿದ್ದರು. ಅದನ್ನು ನೋಡಿ ನನಗೆ ತುಂಬಾ ಹಿಗ್ಗಾಯಿತು.

ಕರ್ಣಾಟಕ ಗ್ರಂಥಮಾಲೆಯ ಸಂಪಾದಕರಾದ ಬಾಪು ಸುಬ್ಬರಾಯರನ್ನು ನಾನು ಕಂಡು ನನಗೆ ಒಂದು ಸೆಟ್ ಅನುಗ್ರಹಿಸಬೇಕೆಂದು ಬೇಡಿದೆ. ಬಾಪು ಸುಬ್ಬರಾಯರು ಮಹಾರಾಜ ಕಾಲೇಜಿನ ಹೈಸ್ಕೂಲ್ ತರಗತಿಯಲ್ಲಿ ನನಗೆ ಉಪಾಧ್ಯಾಯರಾಗಿದ್ದರು. ಆದರೆ ಅವರಿಗೆ ನನ್ನಲ್ಲಿದ್ದ ಅಭಿಮಾನ ನನ್ನ ವಿದ್ಯಾರ್ಥಿತ್ವದಿಂದುಂಟಾದದ್ದಲ್ಲ. ಅವರು ನೈಜವಾಗಿ ಮೃದು ಹೃದಯಿಗಳು, ವಿಶ್ವಾಸಪರರು. ಅವರು ದಯಮಾಡಿ ನನಗೆ 'ವಿದ್ಯಾದಾಯಿನಿ' ಪತ್ರಿಕೆಯ ಸಮಗ್ರ ಸಂಪುಟಗಳನ್ನೂ 'ಕರ್ಣಾಟಕ ಗ್ರಂಥಮಾಲೆ'ಯ ಸಮಗ್ರ ಸಂಪುಟಗಳನ್ನೂ ಕೊಟ್ಟರು. ನಾನು ಅವನ್ನೆಲ್ಲ ಬೈಂಡು ಮಾಡಿಸಿಟ್ಟುಕೊಂಡಿದ್ದೆ. ಆದರೆ ಆ ಕಾಲದಲ್ಲಿ ಬಿ. ಎಂ. ಶ್ರೀಕಂಠಯ್ಯನವರ ಇಂಗ್ಲಿಷ್ ಗೀತಗಳ ಪ್ರಭಾವ ಎಷ್ಟು ದೂರ ಹೋದೀತೆಂಬುದರ ಕಲ್ಪನೆ ನನಗೆ ಬಂದಿರಲಿಲ್ಲ. ಅದು ಒಂದು ಒಳ್ಳೆಯ ಎಕ್ಸ್‌ಪೆರಿಮೆಂಟ್ (ಪ್ರಯೋಗ ಪರೀಕ್ಷೆ) ಎಂದು ಭಾವಿಸಿದ್ದೆ.

ಇಂಗ್ಲಿಷ್ ಗೀತಗಳನ್ನು ಸಮಗ್ರ ಆಕಾರದಲ್ಲಿ ಮೊದಲು ಪ್ರಕಟ ಮಾಡಿದ ಕೀರ್ತಿ ಬೆಂಗಳೂರು ಕರ್ಣಾಟಕ ಸಂಘದ್ದು. ಅದು ಮುಖ್ಯವಾಗಿ ವೆಂಕಣ್ಣಯ್ಯ, ಕೃಷ್ಣಶಾಸ್ತ್ರಿ – ಇವರಿಬ್ಬರ ಕೆಲಸ. ಅವರಿಬ್ಬರೂ ಶ್ರೀಕಂಠಯ್ಯನವರ ಶಿಷ್ಯರು. ಇಬ್ಬರೂ ಸಾಹಿತ್ಯ ನಿಷ್ಣಾತರಾಗಿದ್ದರಿಂದ ಇಂಗ್ಲಿಷ್ ಗೀತಗಳ ಮೌಲ್ಯವು ಸಾಹಿತ್ಯದ ದೃಷ್ಟಿಯಿಂದ ಉತ್ಕೃಷ್ಟವಾದದ್ದೆಂದು ಅವರು ಉತ್ಸಾಹಪಟ್ಟು ಗುರುಗಳ ಒಪ್ಪಿಗೆಯನ್ನು ಪಡೆದರು. ಪುಸ್ತಕ ಮುದ್ರಿತವಾಗಿ ಬಂದ ಮೇಲೆ ಸೆಂಟ್ರಲ್ ಕಾಲೇಜಿನಲ್ಲಿ ಒಂದು ಸಂತೋಷಕೂಟವನ್ನು ಏರ್ಪಡಿಸಿದ್ದರು. ನಾನು ಅದಕ್ಕೆ ಹೋಗಿದ್ದೆ. ಆ ಸಮಾರಂಭ ಸೆಂಟ್ರಲ್ ಕಾಲೇಜಿನ ಎದುರಿನ ಡಿಸ್ಟ್ರಿಕ್ಟ್ ಆಫೀಸ್ ಆವರಣದಲ್ಲಿರುವ ಹೊಸ ಕಟ್ಟಡದ ಮಹಡಿಯ ಮೇಲೆ ಎಂದು ನನ್ನ ಜ್ಞಾಪಕ. ಆ ಹೊತ್ತಿನ ತಿಂಡಿಗಳು ಕೃಷ್ಣಶಾಸ್ತ್ರಿಗಳ ದರ್ಜೆಯನ್ನೂ ಮೀರಿಸು ವಂತಿದ್ದವು. ಹಣ್ಣುಗಳು, ಕಾಫಿ, ಲೆಮನೇಡ್ – ಎಲ್ಲ ಇದ್ದವು. ಸಭಿಕರು ಕೋರಿದಂತೆ ಶ್ರೀಕಂಠಯ್ಯನವರು ಕೆಲವು ಗೀತಗಳನ್ನು ಓದಿದರು.

ಬೇಟಕಾರ ಬಂದ ಮಾದ
'ಹಹ್ಹ! ಏನು ಬೇಟವೋ!

(ಬೇಟ ಎಂದರೆ ಪ್ರಣಯ.) ಇದನ್ನು ಓದಿದಾಗ ನಾನು ಒಂದು ಬಗೆಯಾಗಿ ಕಣ್ಣು ಮೊನಚು ಮಾಡಿ ಶ್ರೀಕಂಠಯ್ಯನವರ ಕಡೆ ನೋಡಿದೆ. ಅವರು ನನ್ನ ಕಡೆ ನೋಡಿ ನಕ್ಕು "ಇದರಲ್ಲಿ ಸ್ವಾನುಭವವೇನೂ ಇಲ್ಲ" ಎಂದರು. ನಾನು "ಹಾಗಾದರೆ ನಿಮಗೆ ಯಾಕೆ ಉಳುಕು?" ಎಂದೆ. ಆ ಹೊತ್ತು ನಗುವೇ ನಮ್ಮ ಭಾಷೆ.

ಅದಾದ ಮೇಲೆ ನಾನು ಮೆಲ್ಲಗೆ

**ಊಟಗಾರ ಗುಂಡ ಬಂದ**
**ಆಹಾ! ಏನು ಊಟವೋ!**

– ಇಂಥ ಮೂರು ನಾಲ್ಕು ಪಂಕ್ತಿಗಳನ್ನು ಸೇರಿಸಿದೆ. ಅವರಿಗೆ ಕೊಂಚ ಕೋಪ ಬಂತು.

"ಹೀಗೆ ಅಣಕಿಸುವುದಕ್ಕೆ ಶುರುಮಾಡಿದರೆ ನೀವು ಯಾವುದನ್ನು ಬಿಡುತ್ತೀರಿ ? What is safe ?"

"ಹಾಗಲ್ಲ ಸಾರ್. ಕನ್ನಡದಲ್ಲಿ ಪ್ರಾಸಸಂಪತ್ತು ಎಷ್ಟು ಹುಲುಸಾಗಿದೆ ಎಂಬುದನ್ನು ತೋರಿಸುವುದಕ್ಕೆ ಹೊರಟೆ."

ಅವರೂ ನಕ್ಕರು.

ಹುಲುಸು ಎಂಬುದು ಶ್ರೀಕಂಠಯ್ಯನವರಿಗೆ ಪದೇಪದೇ ಬರುತ್ತಿದ್ದ ಮಾತು.

ಇಂಗ್ಲಿಷ್ ಗೀತಗಳ ಮುಖಪತ್ರದ ಮೇಲೆ "ಬೆಳೆಯೇನೋ ಬೇಕಾದ ಹಾಗಿದೆ. ಕುಯ್ಯುವವರು ಕಡಮೆ" ಎಂಬ ಮಾತುಗಳಿಂದ ಒಂದು ಬೈಬಲಿನ ಸೂಕ್ತಿಯನ್ನು ಕೊಟ್ಟಿದ್ದರು. ಇದನ್ನು 'ಕೊರವಂಜಿ' ಮಹಾಶಯರು "ಕೊರಳೇನೋ ಉದ್ದವಾಗಿದೆ, ಕುಯ್ಯುವವರು ಕಡಮೆ" ಎಂದು ಅಣಕಿಸಿದರು.

ಮೇಲಿನ ನನ್ನ ಅಣಕದಿಂದ ಇನ್ನೂ ಹೆಚ್ಚು ಕೋಪಗೊಂಡವರು ವೆಂಕಣ್ಣಯ್ಯ. ಅವರ ಗುರುಭಕ್ತಿ ಮಿತಿಯಿಲ್ಲದ್ದು. ಅವರನ್ನು ಸಮಜಾಯಿಷಿ ಮಾಡುವುದು ನನಗೆ ಅಸಾಧ್ಯವಾದ ಕೆಲಸವಾಗಿರಲಿಲ್ಲ.

ಬಿ. ಎಂ. ಶ್ರೀಕಂಠಯ್ಯನವರು ಇಂಗ್ಲಿಷ್ ಗೀತಗಳ ಪೀಠಿಕೆ(ಕಾಣಿಕೆ)ಯಲ್ಲಿ

**ಹೀಗೆ ನನಗೆ ಹಬ್ಬವಾಗಿ,**
**ಇನಿಯರಿಬ್ಬರನ್ನು ತೂಗಿ,**
**ಇವಳ ಸೊಬಗನವಳು ತೊಟ್ಟು ನೋಡಬಯಸಿದೆ;**
**ಅವಳ ತೊಡಿಗೆ ಇವಳಿಗಿಟ್ಟು ಹಾಡಬಯಸಿದೆ.**

– ಎಂದಿತ್ತಷ್ಟೆ ? ಇದನ್ನು ಕುರಿತು ನಾನು "ಇದು ಬಹಳ ಚೆನ್ನಾಗಿದೆ ಸಾರ್, ಒಳ್ಳೆಯ ಏರ್ಪಾಟು. ನಮ್ಮ ಜನದ ಟೇಸ್ಟ್ (ಅಭಿರುಚಿ) ತಿದ್ದಬೇಕು ಸಾರ್" ಎಂದೆ. ಅವರು "ಏನು, ಕುಚೋದ್ಯ ಮಾಡುತ್ತೀರೇನಪ್ಪ ?" ಎಂದು ಮುನಿಸಿನ ಧ್ವನಿಯಲ್ಲಿ ಕೇಳಿದರು. ನಾನು "ಉಂಟೆ ? ವಿಷಯ ಚೆನ್ನಾಗಿ ಗೊತ್ತುಮಾಡಿ ಕೊಳ್ಳೋಣವೆಂದು ಕೇಳಿದೆ. ನೀವು ಉಡಿಸಿದ್ದಕ್ಕೆ ಅವರು ಒಪ್ಪಿಕೊಂಡರೋ ?" ಶ್ರೀ : "ಒಪ್ಪಿಕೊಳ್ಳದೆ ಏನು ಮಾಡುತ್ತಾರೆ ?"

ನಗುವಿನಲ್ಲಿ ಸಂಭಾಷಣೆ ಪರ್ಯವಸಾನವಾಯಿತು.

* * *

**ತಕರಾರುಗಳು**

ಬಿ. ಎಂ. ಶ್ರೀಕಂಠಯ್ಯನವರಿಗೂ ನನಗೂ ಅಭಿಪ್ರಾಯಭೇದ ಅಪರೂಪವೇನೂ ಅಲ್ಲ. ಎಷ್ಟೋ ವಿಷಯಗಳಲ್ಲಿ ತಕರಾರುಗಳು. ವ್ಯಾಕರಣ ವಿಷಯದಲ್ಲಿ, ಶಬ್ದ ಸೌಷ್ಠವದ ವಿಷಯದಲ್ಲಿ, ಅಕ್ಷರ ಪರಿಷ್ಕರಣದ ವಿಷಯದಲ್ಲಿ, ಅನ್ಯಭಾಷಾ ಸ್ವೀಕಾರ ವಿಷಯದಲ್ಲಿ, ಸಾಹಿತ್ಯದಲ್ಲಿ ಮೌಲ್ಯ ತಾರತಮ್ಯ ವಿಷಯದಲ್ಲಿ ಚರ್ಚೆಗಳು ಬರುತ್ತಿದ್ದವು. ಪರಿಷತ್ತಿನ ಸಮ್ಮೇಳನಕ್ಕೆ ಹೋದಾಗಲೋ ಬೇರೆ ಯಾವ ಸಂದರ್ಭದಲ್ಲಿಯೋ ನಾವಿಬ್ಬರು ಒಂದು ಘಂಟೆಯ ಕಾಲ ಕುಳಿತು ಮಾತನಾಡುವ ಅವಕಾಶ ದೊರೆತಾಗ ಯಾವುದೋ ಒಂದು ಚರ್ಚಾಘಟ್ಟ ತಲೆಯೆತ್ತುತ್ತಿತ್ತು. ಸಮ್ಮೇಳನಗಳಿಗೆ ಹೋದಾಗ ನಾವಿಬ್ಬರೂ ಬಹುಮಟ್ಟಿಗೆ ಒಂದೇ ಕೋಣೆಯಲ್ಲಿ ಬಿಡಾರ ಮಾಡುತ್ತಿದ್ದೆವಷ್ಟೆ. ಅದರಲ್ಲಿ ಕಾದಾಟದ ಆಕರ್ಷಣೆಯೂ ಒಂದು. ರಾತ್ರಿ ಹನ್ನೆರಡು ಒಂದು ಘಂಟೆಯವರೆಗೂ ನಡೆಯುತ್ತಿತ್ತು ಚರ್ಚೆ.

"'ರಾಮಾಯಣ'ದ ಕವಿಯು 'ಇಲಿಯಡ್'ನಿಂದ ಕದ್ದಿಲ್ಲವೆಂದು ಹೇಗೆ ಖಂಡಿತ ಪಡಿಸುತ್ತೀರಿ ?"

"ಹೋಮರ್ ಕವಿಯು 'ರಾಮಾಯಣ'ದಿಂದ ಪ್ರಭಾವಿತನಾಗಿಲ್ಲವೆಂದು ನೀವು ಹೇಗೆ ಸಿದ್ಧಾಂತಮಾಡುತ್ತೀರಿ ?"

"ಏಜಾಕ್ಸನನ್ನು ಅಶ್ವತ್ಥಾಮನನ್ನಾಗಿ ಏಕೆ ಪರಿವರ್ತಿಸಬೇಕು ? ಏಜಾಕ್ಸ್ ಆಗಿಯೇ ಏಕೆ ಉಳಿಯಬಾರದು ?"

"ಪ್ರೊಮೀಥಿಯಸ್ಸನನ್ನು ಮಾತರಿಶ್ವನೆಂದು ಏಕೆ ಹೇಳಬೇಕು ? ಉಷರ್ಬುಧನೆಂದು ಏಕೆ ಕರೆಯಬಾರದು ?"

– ಇಂಥವು ಪ್ರಶ್ನೆಗಳು : ಮುರಿದದ್ದಲ್ಲ ಹರಿದದ್ದಲ್ಲ ವಾಗ್ವಾದ. "ಇವಳ ತೊಡಿಗೆಯವಳಿಗುಡಿಸಿ" ನೋಡುವ ಪ್ರಕರಣಗಳು. ಅದರಲ್ಲಿ ಉಪಕಥೆಗಳೂ ಕುಚೋದ್ಯಗಳೂ ಬರುತ್ತಿದ್ದವು.

* * *

**'ಹೊಂಗನಸುಗಳು'**

'ಹೊಂಗನಸುಗಳು' ಎಂಬ ಚಿಕ್ಕ ಕವನಸಂಗ್ರಹವು ಪ್ರಕಟವಾದಾಗ ನಾನು ಶ್ರೀಕಂಠಯ್ಯನವರಿಗೆ ಪತ್ರ ಬರೆದದ್ದು ಜ್ಞಾಪಕವಿದೆ. ಆಗ ಅವರು ಎಲ್ಲಿಯೋ ದೂರದಲ್ಲಿದ್ದರು. ನನ್ನ ಮಾತುಗಳಿಂದ ತಮಗೆ ಸಂತೋಷವಾಯಿತೆಂದು ಅವರು ಹೇಳಿದರು. ನಾನು ಏನು ಬರೆದಿದ್ದೆನೋ ಆ ಮಾತುಗಳು ಈಗ ಜ್ಞಾಪಕವಿಲ್ಲ. ಆದರೆ ಅಭಿಪ್ರಾಯ ಹೀಗೆ: "ನೀವು ಅನೇಕ ಹೊಸ ಪ್ರಯೋಗಗಳನ್ನು ಮಾಡಿದ್ದೀರಿ. ನಿಮ್ಮ ಪಾಂಡಿತ್ಯದಿಂದಲೂ ಔಚಿತ್ಯ ವಿಚಕ್ಷಣೆಯಿಂದಲೂ ನಿಮ್ಮ ಪದ್ಯಗಳಿಗೆ ಓಜಸ್ಸೂ

ಕಾಂತಿಯೂ ಬಂದಿವೆ. ಆದರೆ ಅವು ಸುಲಭವಾಗಿರುವ ಕಾರಣದಿಂದ ಹಾಗೆ ಬರೆಯುವುದು ಸುಲಭವೆಂದು ಅಸಂಸ್ಕೃತರು ಭ್ರಮಿಸಿ ಮೋಸಹೋದಾರು. ನೀವು ಕೆಲವು ರೂಢಿಯಾದ ನಿಯಮಗಳನ್ನು ಒತ್ತಟ್ಟಿಗಿಟ್ಟಿದ್ದೀರಿ. ನಿಮ್ಮಂತೆ ಪೂರ್ವಸಾಹಿತ್ಯ ಪರಿಜ್ಞಾನವಿರುವವರು ಮಾತ್ರ ಹಾಗೆ ಮಾಡಬಹುದು. ಇತರರು ನಿಯಮೋಲ್ಲಂಘನೆ ಮಾಡುತ್ತ ಹೋದರೆ ಸಾಹಿತ್ಯಕ್ಕೆ ಹಾನಿಯಾದೀತು. ನಾವು ಹಳೆಯ ನಿಯಮಕ್ಕೆ ಗುಲಾಮರಾಗಿರಬೇಕಾದದ್ದಿಲ್ಲ. ಹೊಸ ಭಾವನೆಗಳಿಗೂ ಹೊಸ ವಿಚಾರಗಳಿಗೂ ಹೊಂದುವಂತೆ ಹೊಸ ನುಡಿಗಟ್ಟು ಬೇಕೇಬೇಕಾಗುತ್ತದೆ. ಆದರೆ ಅದನ್ನು ಮಾಡುವವರು ಭಾಷಾಮರ್ಮಜ್ಞರಾಗಿ ವಿಚಾರವಂತರಾಗಿರಬೇಕು. ಛಂದಸ್ಸಿನ ವಿಷಯಕ್ಕೂ ಈ ನನ್ನ ಮಾತು ಅನ್ವಯಿಸಬೇಕಾದದ್ದು. ನಿಮ್ಮಂತೆ ಹಳೆಗನ್ನಡದ ಗ್ರಂಥಗಳನ್ನೂ ಶಾಸನಸಾಹಿತ್ಯವನ್ನೂ ನಾನಾ ಪ್ರಾಂತಗಳ ಭಾಷಾ ರೂಢಿಯನ್ನೂ ಪರಾಮರ್ಶೆ ಮಾಡಿ ಇಂಗ್ಲಿಷ್ ಸಾಹಿತ್ಯದ ಧೋರಣೆಯನ್ನು ಸ್ವಾಧೀನಪಡಿಸಿಕೊಂಡಿರುವಂಥವರು ನಿಜವಾದ ಮಾರ್ಗದರ್ಶಕರು. ಅವರನ್ನನುಕರಣೆ ಮಾಡಹೊರಡುವವರು ಆ ವಿಧವಾದ ಸಂಸ್ಕಾರಯೋಗ್ಯತೆಯನ್ನು ಸಂಪಾದಿಸಿಕೊಳ್ಳದೆ ಬರೆಯಹೊರಟರೆ ಆ ಬರವಣಿಗೆಗೆ 'ಹೊಂಗನಸು'ಗಳ ಕಳೆ ಬರಲಾರದು."

ಅದು ಈ ಹೊತ್ತಿಗೂ ನನ್ನ ಅಭಿಪ್ರಾಯ.

* * *

### ವಾಗ್ಮಿತೆ

ಮೊದಮೊದಲು ಕನ್ನಡದಲ್ಲಿ ಭಾಷಣ ಮಾಡಲೊಲ್ಲೆನೆಂದು, ಭಾಷಣ ಮಾಡಲಾರೆನೆಂದು ಹೇಳಿ ವೆಂಕಟನಾರಣಪ್ಪನವರೊಡನೆ ನಿಷ್ಠುರ ಕಟ್ಟಿಕೊಂಡ ಬಿ. ಎಂ. ಶ್ರೀಕಂಠಯ್ಯನವರು ಬರುಬರುತ್ತಾ ಕನ್ನಡದ ಅಭಿಮಾನದ ಆವೇಶದಿಂದ ಎರಡು ಮೂರು ಘಂಟೆಗಳ ಕಾಲ ಕನ್ನಡದಲ್ಲಿ ಅವಿಚ್ಛಿನ್ನವಾಗಿ ಮಾತನಾಡಿ ಎನ್. ಎಸ್. ಸುಬ್ಬರಾವ್ ಮೊದಲಾದ ಸ್ನೇಹಿತರುಗಳಿಂದ ಹರಿಕಥಾ ಕಾಲಕ್ಷೇಪವೆಂದು ಹಾಸ್ಯ ಮಾಡಿಸಿಕೊಂಡರು. ಕಡೆಗೆ ಐದು ಘಂಟೆಗಳಷ್ಟು ದೀರ್ಘಕಾಲ ಪ್ರವಾಹಧೋರಣೆಯಿಂದ ಭಾಷಣ ಮಾಡುವವರಾದರು. ರಾಯಚೂರಿನಲ್ಲಿ ಅವರ ಭಾಷಣವನ್ನು ಮುಕ್ಕಾಲು ಘಂಟೆ ಕೇಳಿದ ಮೇಲೆ ನಾನೂ ಒಬ್ಬ ಸ್ನೇಹಿತರೂ ಉಪಾಹಾರಕ್ಕೆಂದು ಹೊರಕ್ಕೆ ಬಂದು ಮುಗಿಸಿಕೊಂಡು ಒಳಗೆ ಹೋಗಿ ಇನ್ನೂ ಭಾಷಣ ನಡೆಯುತ್ತಿದ್ದುದ್ದನ್ನು ನೋಡಿ ಮತ್ತೆ ಉಪಾಹಾರಕ್ಕೆ ಹೋಗಿ ಇನ್ನೊಂದು ಘಂಟೆಯಾದಮೇಲೆ ಸಭೆಗೆ ಹಿಂದಿರುಗಿದೆವು. ಭಾಷಣ ನಡೆಯುತ್ತಲೇ ಇತ್ತು. ವಿಷಯ ಹರಿಹರನ ರಗಳೆ.

ಬಿ. ಎಂ. ಶ್ರೀಕಂಠಯ್ಯನವರು ಕನ್ನಡದಲ್ಲಿ ಒಳ್ಳೆಯ ವಾಗ್ಮಿ. ನನ್ನ ಸ್ವಂತ ಅಭಿಪ್ರಾಯದಲ್ಲಿ ಅವರ ಇಂಗ್ಲಿಷ್ ಭಾಷಣ ಇನ್ನೂ ಗಂಭೀರವಾದದ್ದಾಗಿ ರಸವತ್ತಾಗಿರುತ್ತಿತ್ತು. ಇಂಗ್ಲಿಷ್ ಭಾಷೆಯಲ್ಲಿಯ ಪದಗಳ ಮರ್ಜಿ ಅವರಿಗೆ ಸಹಜವಾದದ್ದೋ ಎನ್ನಿಸುವಂತೆ ಸ್ವಾಧೀನವಾಗಿತ್ತು. ಪದಗಳ ಮತ್ತು ಪದ ಪ್ರಯೋಗಗಳ ನವುರುಗಳನ್ನು ತಿಳಿದು ವಾಕ್ಯರಚನೆ ಮಾಡುತ್ತಿದ್ದರು. ಅವರು ಲಾ ವ್ಯಾಸಂಗ ಮಾಡಿದ್ದದ್ದರಿಂದ ಆ ಶಾಸ್ತ್ರದ ಲ್ಯಾಟಿನ್ ಪರಿಭಾಷೆ ಅವರಿಗೆ ಚೆನ್ನಾಗಿ ತಿಳಿದಿತ್ತು. ಒಂದು ಸಾರಿ, ರಾಯಚೂರಿನ ಸಾಹಿತ್ಯ ಸಮ್ಮೇಳನದಲ್ಲಿ ಎಂದು ನನ್ನ ಜ್ಞಾಪಕ – ಅಲ್ಟ್ರಾ ವೈರಿಸ್ (Ultra vires) ಎಂಬ ಮಾತನ್ನು ಒಬ್ಬ ಸದಸ್ಯರು ಉಪಯೋಗಿಸಿದರು. ಅದು ಅಪಪ್ರಯೋಗವೆಂಬುವನ್ನು ಶ್ರೀಕಂಠಯ್ಯನವರು ಒಂದು ವ್ಯಾಖ್ಯಾನದಲ್ಲಿ ತೋರಿಸಿಕೊಟ್ಟರು. ಇಂಗ್ಲಿಷ್-ಕನ್ನಡ ನಿಘಂಟುವಿನ ಕೆಲಸದಲ್ಲಿ ನಾವು ಸಭೆ ಸೇರುತ್ತಿದ್ದಾಗ ಅವರ ಗ್ರೀಕ್, ಲ್ಯಾಟಿನ್ ಸಾಹಿತ್ಯಗಳ ಪರಿಚಯಂ ನಮಗೆ ಚೆನ್ನಾಗಿ ಗೋಚರವಾಗುತ್ತಿತ್ತು. ಹಾಗೆಯೇ ಅವರ ತಮಿಳು ತೆಲುಗುಗಳ ಪರಿಚಯ. ಕನ್ನಡ ವಿದ್ಯಾರ್ಥಿಗಳು ಮೇಲ್ತರಗತಿಗಳಲ್ಲಿ ತಮಿಳನ್ನು ಕಲಿಯಬೇಕೆಂದು ಒತ್ತಾಯಪಡಿಸುತ್ತಿದ್ದವರಲ್ಲಿ ಅವರು ಮುಖ್ಯರು.

ಒಂದು ಸಾರಿ ಅವರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಆಶ್ರಯದಲ್ಲಿ ತಮಿಳು ಮಹಾಕವಿ ತಿರುವಳ್ಳುವರ್ ಅವರನ್ನು ಕುರಿತು ಬಹು ಸೊಗಸಾದ ಉಪನ್ಯಾಸ ಮಾಡಿದರು. ನಾನು ಅದಕ್ಕೆ ಮನಸೋತು ಆ ಭಾಷಣದ ಗುರುತಿಗಾಗಿ ನನ್ನ ಪಾಕೆಟ್ ಬುಕ್ಕಿನಲ್ಲಿ ಒಂದು ಪಂಕ್ತಿಯನ್ನು ಬರೆಯಿಸಿಕೊಂಡೆ. ಒಂದು ಸೊಗಸಾದ ತಿರುವಳ್ಳುವರ ಪದ್ಯವನ್ನು ಬರೆದುಕೊಟ್ಟರು.

ಶ್ರೀಕಂಠಯ್ಯನವರ ಇಂಗ್ಲಿಷ್ ವಾಗ್ಮಿಯತೆಯನ್ನು ಕುರಿತು ಹೇಳಹೊರಟರೆ ನಷ್ಟೆ? ಒಂದು ಸಾರಿ ಅವರು ಮಿಥಿಕ್ ಸೊಸೈಟಿಯ ಡಾಲಿ ಮೆಮೋರಿಯಲ್ ಹಾಲ್‌ನಲ್ಲಿ 'The burden of the prophets' (ದೈವಪ್ರವಾದಿಗಳ ಪಲ್ಲವಿ) ಶೀರ್ಷಿಕೆಯಲ್ಲಿ ನಾಲ್ಕೈದು ಉಪನ್ಯಾಸಗಳನ್ನು ಕೊಟ್ಟರು. ಎಲ್ಲ ಇಂಗ್ಲಿಷಿನಲ್ಲಿ. ಅವುಗಳಲ್ಲಿ ಅದ್ಭುತವಾದ ವಾಕ್ಯಸೌಂದರ್ಯವಿತ್ತು. ಯಹೂದ್ಯರ, ಕ್ರಿಶ್ಚಿಯನ್ನರ, ಮುಸಲ್ಮಾನರ, ಹಿಂದುಗಳ ಮತಬೋಧಕರು ಹೇಳಿರುವ ಅತಿ ಮುಖ್ಯ ತತ್ವಗಳನ್ನು ಈ ಉಪನ್ಯಾಸಮಾಲೆಯಲ್ಲಿ ಅವರು ವಿಮರ್ಶೆ ಮಾಡಿ, ಹಾಗೆಯೇ ಇತರ ಮತ ಪ್ರಕ್ರಿಯೆಗಳನ್ನು ಸಂಗ್ರಹವಾಗಿ ಪ್ರಸ್ತಾವಮಾಡಿ, ಅವುಗಳ ಜೊತೆಗೆ ವರ್ಡ್ಸ್‌ವರ್ತ್, ಟೆನ್ನಿಸನ್, ಬ್ರೌನಿಂಗ್, ರುಪರ್ಟ್‌ಬ್ರೂಕ್ ಮೊದಲಾದ ಆಧುನಿಕ ಕವಿಗಳವರೆಗೂ ಭಗವದ್ವಿಷಯದಲ್ಲಿಯೂ ಜೀವಭವಿಷ್ಯದ ವಿಷಯದಲ್ಲಿಯೂ ಇರುವ ತತ್ವ ಪ್ರತಿಪಾದನೆಗಳನ್ನು ಸಂಗ್ರಹಿಸಿ, ಮನುಷ್ಯಜೀವನದ ಉದಾತ್ತ ಸ್ವರೂಪವನ್ನು ನಿದರ್ಶನ ಮಾಡಿಕೊಟ್ಟರು. ಆ ಉಪನ್ಯಾಸಗಳ ಇಂಗ್ಲಿಷ್ ವಾಗ್ಝರಣೆ, ಶೈಲಿಯ

ಗಾಂಭೀರ್ಯ ಮತ್ತು ಆ ವಿಮರ್ಶನದೃಷ್ಟಿಯ ಉದಾರತೆ – ಇವು ವಿಸ್ಮಯಾನಂದಕರ ಗಳಾಗಿದ್ದವು.

* * *

**ನೀತಿಗುಣ**

ಶ್ರೀಕಂಠಯ್ಯನವರ ಜೀವನ ಕರುಣಪ್ರಚೋದಕ ಸಂದರ್ಭಗಳಿಂದ ತುಂಬಿದ್ದು. ಅವರ ನಡುವಯಸ್ಸಿನ ಸುಮಾರಿನಲ್ಲಿ ವಿಪತ್ತುಗಳು ಒಂದರ ಹಿಂದೊಂದು ಬಂದು ಆ ಮನೆಯನ್ನು ದುಃಖಾವೃತವಾಗಿ ಮಾಡಿದ್ದವು. ಶ್ರೀಕಂಠಯ್ಯನವರು ಆ ವಿಪತ್ತು ಗಳನ್ನು ಧೈರ್ಯದಿಂದಲೂ, ತಾಳ್ಮೆಯಿಂದಲೂ ಸಹಿಸಿಕೊಂಡದ್ದು ಅವರ ಸಾಹಿತ್ಯ ಭಕ್ತಿಗೆ ಕಿರೀಟಪ್ರಾಯವಾದದ್ದು. ಅವರು ಗ್ರೀಕ್ ಸಾಹಿತ್ಯದ ರುದ್ರನಾಟಕಗಳಿಗೆ ಮನಸೋತಿದ್ದವರು. ವಿಧಿವಿಲಾಸ, ವಿಧಿಯ ಪೈಕಟ್ಟು ಎಷ್ಟು ಬಗೆಯದೆಂಬುದನ್ನು ಅವರು ಸಾಹಿತ್ಯದಲ್ಲಿ ಕಂಡು ತಮ್ಮ ಮನಸ್ಸಿನಲ್ಲಿ ಚಿಂತಿಸಿದ್ದವರು. ಕಷ್ಟಾನುಭವವು ಅವರ ಚಿತ್ತಸ್ಥೈರ್ಯವನ್ನೂ ಸಮತೆಯನ್ನೂ ಕೆಡಿಸಿರಲಿಲ್ಲ, ಅವರ ಮನಸ್ಸನ್ನು ವಿನಾಶಪಡಿಸಿರಲಿಲ್ಲ. ಅವರು ತಮ್ಮ ದುಃಖವನ್ನು ನುಂಗಿಕೊಂಡು ಕರ್ತವ್ಯನಿಷ್ಠೆ ಯಲ್ಲಿ ಅದನ್ನು ಮರೆತಿದ್ದರು. ಇದೇ ನನ್ನ ದೃಷ್ಟಿಯಲ್ಲಿ ನೀತಿಗುಣದ ಪರಾಕಾಷ್ಠೆ.

ಶ್ರೀಕಂಠಯ್ಯನವರು ಸ್ವಾಭಾವಿಕವಾಗಿ ಸರಳರು, ನಿಷ್ಕಪಟರು. ಉದಾರಿ ಗಳು. ಇತರರಿಗೆ ಸಹಾಯವಾಗುವುದರಲ್ಲಿ ಅವರಿಗೆ ಸಂತೋಷವಾಗುತ್ತಿತ್ತು. ಅವರು ಕಡೆಕಡೆಯ ದಿನಗಳಲ್ಲಿ ಅವರ ಆಗಿನ ಅನಾರೋಗ್ಯಸ್ಥಿತಿಯಲ್ಲಿ ಪರಸ್ಥಳ ಹೋದದ್ದು ನಮ್ಮಲ್ಲಿ ಕೆಲವರಿಗೆ ಇಷ್ಟವಾಗಲಿಲ್ಲ. ಕನ್ನಡಿಗರ ದುರ್ದೈವ ಅವರನ್ನು ಬೇರೆ ಕಡೆಗೆ ಎಳೆಯಿತು. *

---

* ಡಿ. ವಿ. ಜಿ.ಯವರ 'ಸಾಹಿತ್ಯೋಪಾಸಕರು ('ಜ್ಞಾಪಕ ಚಿತ್ರಶಾಲೆ' ಸಂಪುಟ ಮೂರು) ಕೃತಿಯಲ್ಲಿ 'ಬಿ. ಎಂ. ಶ್ರೀಕಂಠಯ್ಯನವರು' ಲೇಖನದಿಂದ (ಪುಟ ೨೧೮ – ೨೪೦) ಸಂಗ್ರಹಿಸಿ ಅಳವಡಿಸಲಾದ ಸಂಗತಿ.

# ಅಶ್ರುಬಿಂದುಗಳು

— ನಾ. ಕಸ್ತೂರಿ

ಈ ಸಲ ನಾನು ಜನ್ಮ ತಾಳಿದ್ದು ಕೇರಳದಲ್ಲಿ; ಆದರೆ, ಜೀವನದ ಮೊದಲಿನ ಇಪ್ಪತ್ತಮೂರು ಸಂವತ್ಸರಗಳು ಅಲ್ಲಿ ಕಳೆದದ್ದು. ತೊದಲಿದ್ದು. ನುಡಿದದ್ದು. ನಡೆದದ್ದು, ಕಲಿತದ್ದು, ಬಲಿತದ್ದು ಎಲ್ಲವೂ ಕನ್ನಡದ ಕಣ್ಮಣಿಗಳ ಸೇವೆಗಾಗಿಯೇ ಎಂಬುದು ವಿಧಿಯ ನಿರ್ಧಾರವಾಗಿತ್ತು. ೧೯೨೧ ಜೂನ್ ೮ನೆಯ ತಾರೀಖು, ಮೈಸೂರು ನಗರದ ಧರ್ಮಪ್ರಕಾಶ ಬನುಮಯ್ಯನವರ ಕಾಲೇಜಿಯೇಟ್ ಹೈಸ್ಕೂಲಿಗೆ ಚರಿತ್ರೆಯ 'ಉಪನ್ಯಾಸಕ'ನಾಗಿ, ನಾನು ನನ್ನ ಗೃಹಸ್ಥಜೀವನವನ್ನು ಪ್ರಾರಂಭಿಸಿದೆ. ನಗರದ ಪ್ರಶಾಂತ ಗಂಭೀರ ದಿವ್ಯ ಭವ್ಯ ವಾತಾವರಣ ನನ್ನೆದೆಯನ್ನು ಹದ ಮಾಡಿತು. ವಿಶ್ವವಿದ್ಯಾಲಯ ಪೀಠಗಳನ್ನಲಂಕರಿಸುತ್ತ, ಜಿಜ್ಞಾಸುಗಳನ್ನು ಸಂತೋಷದಿಂದ ಸ್ವಾಗತಿಸುತ್ತಿದ್ದ ಬ್ರಜೇಂದ್ರನಾಥ ಶೀಲ್, ರಾಧಾಕೃಷ್ಣನ್, ರಾಧಾಕುಮುದ ಮುಖರ್ಜಿ, ಕೇ. ಟಿ. ಷಾ, ಬಿ. ಎಂ. ಶ್ರೀಕಂಠಯ್ಯ ಮುಂತಾದ ವಿವಿಧ ಶಾಸ್ತ್ರವಿದಗ್ಧರು; ವೀಣೆ ಶೇಷಣ್ಣನವರು, ಬಿಡಾರಂ ಕೃಷ್ಣಪ್ಪನವರು, ಚಿಕ್ಕರಾಮರಾಯರು ಮುಂತಾದ ಅದ್ವಿತೀಯ ಕಲಾವಿದರು; ಶಾಕುಂತಳ, ಪ್ರಹ್ಲಾದ ಚರಿತ್ರೆ ಮುಂತಾದ ನಾಟಕಗಳನ್ನು ನಾನೆಂದೂ ಊಹಿಸದ ಉದಾತ್ತ ಮಟ್ಟದಲ್ಲಿ ಅಭಿನಯಿಸುತ್ತಿದ್ದ ವರದಾಚಾರ್ ಕಂಪನಿಯ ನಟರು, ಇವರೆಲ್ಲರೂ ನನ್ನ ಮೇಲೆ ಎಷ್ಟು ಪ್ರಭಾವ ಬೀರಿದರೆಂದರೆ, ನಾನು ಸಂಪೂರ್ಣ ಕನ್ನಡನಾಡಿಗೆ ಶರಣೆಂದೆ. ಕನ್ನಡ ಸಾಹಿತ್ಯವನ್ನಭ್ಯಾಸ ಮಾಡತೊಡಗಿದೆ. ಕನ್ನಡದಲ್ಲೇ ಮಾತನಾಡಲು ಸಂಕಲ್ಪಿಸಿದೆ. ಬನುಮಯ್ಯ ಸ್ಕೂಲಲ್ಲಿ ನನ್ನ ವಿದ್ಯಾರ್ಥಿಗಳಾಗಿದ್ದ ರಾಮರತ್ನಂ, ಕೆ. ವೆಂಕಟರಾಮಪ್ಪ ಇವರೊಂದಿಗೂ, ರಾಮಕೃಷ್ಣಾಶ್ರಮದ ಅಧ್ಯಕ್ಷರಾಗಿ ಬಂದಿದ್ದ ನನ್ನ ಬಾಲ್ಯಸ್ನೇಹಿತ ಸಿದ್ಧೇಶ್ವರಾನಂದರೊಂದಿಗೂ, ಆಶ್ರಮದಲ್ಲೇ ಇದ್ದ ಕೆ. ವಿ. ಪುಟ್ಟಪ್ಪ ಮತ್ತು ಅವರ ಸ್ನೇಹಿತರು ಮಾನಪ್ಪ, ಚಂದ್ರಶೇಖರ, [illegible] ಇವರೊಂದಿಗೂ ನಿಕಟ ಸಂಬಂಧ ಬೆಳೆಸಿದೆ. ಹಾಗೆಯೇ ಆಗಾಗ, ಬಿ. ಎಂ. ಶ್ರೀಕಂಠಯ್ಯನವರ [illegible]

ಹೋಗಿ ಸ್ಫೂರ್ತಿ ಪಡೆಯುತ್ತಿದ್ದೆ. ಅವರ ಉಪನ್ಯಾಸಗಳಲ್ಲೊಂದನ್ನೂ ಬಿಡದೆ, ಕೇಳಿ ನನ್ನ ಕಾತುರತೆಯನ್ನಭಿವೃದ್ಧಿಗೊಳಿಸಿದೆ.

ಮಹಾರಾಜಾ ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದಾಗ, ಶ್ರೀಯವರ 'ಪಾರಸಿಕರು' ಎಂಬ ನಾಟಕವನ್ನು ನಾರಾಯಣಶಾಸ್ತ್ರಿಯವರ ನೇತೃತ್ವದಲ್ಲಿ ಅಭಿನಯಿಸಲಾಯಿತು. ರಿಹರ್ಸಲ್ ನಡೆಯುತ್ತಿದ್ದಾಗ, ಶ್ರೀಯವರು ನಾಲ್ಕೈದು ಸಲ ಬಂದು ಸಲಹೆ ಗಳನ್ನಿತ್ತರು. ಕ್ಷಯಾರ್ಷನ ತಂದೆ ದರ್‍ಯವುಷ್‌ನ ಪಾತ್ರ ನನ್ನದಾಗಿತ್ತು. 'ಕ' ಎಂಬ ಅಕ್ಷರದ ಉಚ್ಚಾರಣೆಯಲ್ಲಿ ಈಷದಪಿ ದೋಷ ಪತ್ತೆಹಚ್ಚಿ, ಅದನ್ನು ನನ್ನ ನಾಲಗೆ ಯಿಂದ ತೊಡೆದುಹಾಕಿದರು. ಕಸ್ತೂರಿಯ ಕ, ಕನ್ನಡ ಕ ಅಲ್ಲ ಎಂದಾಗ ನನಗೆ ಸಂಕಟ ತುಂಬಿಬಂತು. ಅದನ್ನು ತಿದ್ದಿ ಕನ್ನಡಂ ಕತ್ತುರಿಯಲ್ತೆ, ಎಂಬುದನ್ನು ನಾನು ಸ್ಪಷ್ಟ ಉಚ್ಚರಿಸುವಂತೆ ಮಾಡಿದ ಗುರುಗಳು, ಬಿ.ಎಂ.ಶ್ರೀ. ಹಲವಾರು ವರ್ಷಗಳ ನಂತರ, ಧಾರ್ವಾಡದಲ್ಲಿ ಅವರು ಪ್ರೊಫೆಸರರಾಗಿ ನೆಲೆಸಿದಾಗ, ಒಮ್ಮೆ ಅವರ ಮನೆಗೆ ಹೋಗಿದ್ದೆ. ಊಟದ ನಡುವೆ ಮಾತು ಹತ್ತು ಮೂಲೆಗಳಿಗೆ ಹರಿದಾಗ, ಅವರು ಕಕಾರ ಸಮಸ್ಯೆಯನ್ನೆತ್ತಿ ನಗೆ ಎಬ್ಬಿಸಿದರು.

ಅಂತೂ ಅವರ ಆದರಾಭಿಮಾನಗಳಿಗೆ ಪಾತ್ರನಾದದ್ದು ನನ್ನ ಭಾಗ್ಯ. 'ಪ್ರಬುದ್ಧ ಕರ್ನಾಟಕ'ದಲ್ಲಿ ನನ್ನ 'ಕವನ' (ಅದೇ ಆ ಪತ್ರಿಕೆಗೆ ನನ್ನ ಕಾವ್ಯಶ್ರೀಯ ಏಕೈಕ ಕೊಡುಗೆ) ಪ್ರಕಟವಾದಾಗ, ಅದರ ಪ್ರತಿಯನ್ನವರಿಗೆ ಕಳುಹಿಸಿದ್ದು ಜ್ಞಾಪಕ. ವಿಶ್ವವಿದ್ಯಾಲಯ ಗ್ರಂಥಮಾಲೆಯಲ್ಲಿ 'ಅಶೋಕ' ಎಂಬ ಪುಸ್ತಕವನ್ನು ಸೇರಿಸಲು ಅವರೇ ನನ್ನನ್ನು ಪ್ರೋತ್ಸಾಹಿಸಿ ಬರೆಯಿಸಿದವರು. ಮಹಾರಾಜಾ ಕಾಲೇಜ್ ಅಧ್ಯಾಪಕ ಸಂಘದವರು ಮೈಸೂರಿನ ಮುಖ್ಯ ಪಟ್ಟಣಗಳಲ್ಲಿ ಸಂವತ್ಸರಕ್ಕೆರಡು ಮೂರರಂತೆ ನಡೆಯಿಸುತ್ತಿದ್ದ 'ಉಪನ್ಯಾಸ ಸಪ್ತಾಹ'ದಲ್ಲೂ ಬಿ. ಎಂ. ಶ್ರೀಯವರು ಪಾಲುಗೊಳ್ಳುತ್ತಿದ್ದರಲ್ಲದೆ, ಕ್ಯಾಂಪಲ್ಲೇ ನಮ್ಮೆಲ್ಲರೊಂದಿಗೂ ಇದ್ದು ಸರಳ ರೀತಿ ಯಲ್ಲಿ ಸರಸ ವಿನೋದ ಸಂಭಾಷಣೆ ಮಾಡುತ್ತಿದ್ದರು.

ಸರಸ ಸಂಭಾಷಣ ಎಂದಾಗ, ನಾನೂ ಅವರೂ, ಇಬ್ಬರು ಮಾತ್ರ, ಒಟ್ಟಿಗೆ, ಒಂದು ವಿಶೇಷ ಸನ್ನಿವೇಶದಲ್ಲಿ, ಮೂರು ದಿನ ಕಳೆದದ್ದು ನೆನಪಿನ ತೆರೆಯಲ್ಲಿ ಥಳ ಥಳ ಹೊಳೆಯುತ್ತದೆ. ೧೯೪೦ ಡಿಸೆಂಬರ್ ಕೊನೆಯವಾರ. ಚಳಿಚಳಿ. ತಿರುಪತಿ ಕ್ಷೇತ್ರ. ಬೆಟ್ಟದ ತಳ. ಅಖಿಲ ಭಾರತ ಓರಿಯಂಟಲ್ ಕಾನ್‌ಫರೆನ್ಸ್, ಹತ್ತನೆಯ ವಾರ್ಷಿಕ ಸಮ್ಮೇಳನ, ಪಂಡಿತ ಮದನಮೋಹನ ಮಾಲವೀಯಾ ಅವರ ಅಧ್ಯಕ್ಷತೆ ಯಲ್ಲಿ ತಿರುಪತಿಯಲ್ಲಿ ನಡೆಯಲು ಸಿದ್ಧತೆ ಮುಗಿದಿದೆ. ತಿರುಪತಿ ತಿರುಮಲೈ ದೇವಸ್ಥಾನದ ವತಿಯಿಂದ ಸ್ಥಾಪಿತವಾಗಿರುವ ಓರಿಯಂಟಲ್ ಇನ್‌ಸ್ಟಿಟ್ಯೂಟ್ (ಸಂಸ್ಕೃತ ಮಹಾಪಾಠಶಾಲಾ)ದವರೇ ಸಮ್ಮೇಳನವನ್ನು ತಿರುಪತಿಗೆ ಆಹ್ವಾನಿಸಿ ಆದರಿಸಿ ಸತ್ಕರಿಸಲು ತೀರ್ಮಾನಿಸಿದ್ದರು. ನಾನು ಎಂ. ಎ. ಕ್ಲಾಸಿನಲ್ಲಿದ್ದಾಗ, ನನ್ನನ್ನು

ಪ್ರೀತಿಸಿ ಪೋಷಿಸಿದ ಪ್ರೊಫೆಸರ್ ಕೆ. ವಿ. ರಂಗಸ್ವಾಮಿ ಅಯ್ಯಂಗಾರ್‌ರವರು ಆಗ ಆ ಓರಿಯಂಟಲ್ ಇನ್‌ಸ್ಟಿಟ್ಯೂಟಿನ ಮುಖ್ಯಾಧಿಕಾರಿಯಾಗಿ ಪ್ರಖ್ಯಾತಿ ಪಡೆದಿದ್ದರು. ಆದ್ದರಿಂದ, ಅವರು ನಿರ್ವಹಿಸುವ ಸಮ್ಮೇಳನದಲ್ಲಿ ನನ್ನ ಕೈಲಾದ ಸೇವೆ ಸಲ್ಲಿಸಿ ಅವರ ಅನುಗ್ರಹ ಸಂಪಾದಿಸುವುದಕ್ಕಾಗಿ ನಾನು ಎಂಟು ದಿನ ಮುಂಚಿತವಾಗಿಯೇ ಊರು ಸೇರಿ, ಸಮ್ಮೇಳನದ ಕಚೇರಿಯಲ್ಲಿ ಕುರ್ಚಿ ಮೇಜು ಸಂಪಾದಿಸಿಕೊಂಡೆ. ಸಮ್ಮೇಳನ ಹಲವಾರು ವಿಭಾಗಗಳ ಮೂಲಕ ಕೆಲಸ ಮಾಡುತ್ತದೆ ಎಂದೂ, ಕನ್ನಡ ಎಂಬ ಒಂದು ವಿಭಾಗ ಆ ವರ್ಷವೇ ಹೊಸದಾಗಿ ಸಮಾವೇಶಗೊಳ್ಳುವುದೆಂದೂ, ಬಿ. ಎಂ. ಶ್ರೀಯವರು ಅದರ ಅಧ್ಯಕ್ಷರಾಗಿ ನೇಮಕವಾಗಿದ್ದಾರೆ ಎಂದೂ ತಿಳಿಯಿತು. "ನೀನು ಆ ವಿಭಾಗದ ಕನ್‌ವೀನರಾಗಿ ಕೆಲಸಮಾಡು. ನಿಮ್ಮ ಶ್ರೀಕಂಠಯ್ಯನವರನ್ನು ನೀನೇ ನೋಡಿಕೊ. ಅವರಿಗಾಗಿ ನಿಯಮಿತವಾಗಿರುವ ಬಿಡಾರ, ಊಟದ ವ್ಯವಸ್ಥೆ, ಸಂಚಾರ ಸೌಕರ್ಯ, ಆ ವಿಭಾಗದ ಸಭೆ ಸೇರುವ ಸ್ಥಳ, ಅವರ ಕಾರ್ಯಕ್ರಮ ಎಲ್ಲ ನಿನ್ನ ಹೊಣೆಗಾರಿಕೆ. ನೀನು ಕೇಳಿದಾಗ, ಕೇಳಿದ್ದನ್ನೆಲ್ಲ ಕೊಡುವ ಜವಾಬ್ದಾರಿ ನನ್ನದು" ಎಂದರು ಗುರುಗಳು.

ಸಮ್ಮೇಳನ ಪ್ರಾರಂಭವಾಗುವ ಮೊದಲೇ ಅಪಶಕುನಗಳು ಆಡರಿದುವು. 'ತಿರುಪತಿ-ತಿರುಮಲೈ ದೇವಸ್ಥಾನಗಳ ರೈತರ ಸಭೆ'ಯೊಂದನ್ನೇರ್ಪಡಿಸಿ, ಸಾವಿರಾರು ಜನ ಸೇರಿ, ರಂಗಸ್ವಾಮಿ ಅಯ್ಯಂಗಾರರು 'ದೇವರ ಹಣವನ್ನು ಪೋಲು ಮಾಡುತ್ತಿದ್ದಾರೆ' ಎಂಬ ಗುಲ್ಲೆಬ್ಬಿಸಿದರು: ಕಪ್ಪುಬಾವುಟ ಹಿಡಿದು, ಕೂಗಾಡುತ್ತ, ಮೆರವಣಿಗೆ ಮಾಡಿದರು. ರೇಣಿಗುಂಟಾದಿಂದ ಪಾಕಾಲಾವರೆಗಿನ ರೈಲು ನಿಲ್ದಾಣಗಳಲ್ಲೆಲ್ಲ, ಸಮ್ಮೇಳನ ರದ್ದು, ಎಂಬ ಸುದ್ದಿ ಹರಡಿಸಿ ಅನೇಕರನ್ನು ಬಂದದಾರಿ ಹಿಡಿಸಿದರು. ಜಿಲ್ಲಾ ಪೊಲೀಸರ ಸಹಕಾರ ದೊರೆಯಲಾರದೆಂಬ ಅನುಮಾನದಿಂದ ನನ್ನ ಗುರುಗಳು ಕಡಪ ಕರ್ನೂಲು ಜಿಲ್ಲೆಗಳಿಂದ ಪೊಲೀಸು ಪಡೆಗಳನ್ನು ತರಿಸಿದರು. ಇನ್‌ಸ್ಟಿಟ್ಯೂಟಿನ ಸುತ್ತ ರಸ್ತೆಗಳ ಇಕ್ಕೆಲದಲ್ಲಿ ಬಿದ್ದಿದ್ದ ಜಲ್ಲಿಕಲ್ಲುಗಳನ್ನು ಲಾರಿಗಳಲ್ಲಿ ತುಂಬಿ ದೂರ ಸಾಗಿಸಿದರು. ಡೆಲಿಗೇಟುಗಳನ್ನು ಗುರುತಿಸಬಲ್ಲ, ಸ್ವಾಗತಿಸಿ, ಸ್ಟೇಷನ್ನುಗಳಿಂದ ಊರೊಳಕ್ಕೆ ಕರೆದು ತರಬಲ್ಲ ಧೀರರನ್ನಾರಿಸಿದರು. ಬ್ಯಾಡ್ಜುಗಳನ್ನು ಬಹಿರಂಗವಾಗಿ ಧರಿಸಬೇಕಾದ್ದಿಲ್ಲವೆಂದು ಅವರಿಗೆ ಸೂಚಿಸಲಾಯಿತು.

ಶ್ರೀಯವರನ್ನು ನಾನೇ ಸ್ವತಃ ನಿಲ್ದಾಣದಿಂದ ಸಮ್ಮೇಳನದ ಕಾರಿನಲ್ಲಿ ಕೂರಿಸಿಕೊಂಡು ಅವರಿಗಾಗಿ ಸಜ್ಜುಗೊಳಿಸಿದ್ದ ಬಂಗಲೆಗೆ ಕರೆದು ತಂದೆ. ಪ್ರಾರಂಭೋತ್ಸವಕ್ಕಾಗಿ ಹೋದಾಗ, ನನ್ನ ಗುರುಗಳು ಕಚೇರಿಯ ಬಳಿ ಅವರನ್ನು ಪ್ರೀತಿ ವಿಶ್ವಾಸಗಳಿಂದ ಸ್ವಾಗತಿಸಿದರು. ಪಂಡಿತ ಮದನಮೋಹನ ಮಾಲವೀಯಾ ಅವರು ಅನಾರೋಗ್ಯದ ನೆಪ ಹೂಡಿ, ತಾವು ಬರುವುದಿಲ್ಲವೆಂಬ ತಂತಿ ಕಳುಹಿಸಿದ್ದ ಸುದ್ದಿಯಿಂದ ಸಮ್ಮೇಳನದ ಆರೋಗ್ಯಕ್ಕೆ ಮತ್ತೊಂದು ಭಾರಿ ಪೆಟ್ಟು. ಪ್ರಪ್ರಥಮ

ಕಾರ್ಯಕ್ರಮವಾದ ಪ್ರಾರ್ಥನಾ ಗಾನವನ್ನು, ಪ್ರತಿಭಟನಾ ಪಟಾಟೋಪದ ಒಸ್ಲೆಲಿಯಲ್ಲಿ ಸಂಗೀತ ಕಲಾನಿಧಿ ಬ್ರಹ್ಮಶ್ರೀ ಶೆಮ್ಮಂಗುಡಿ ಶ್ರೀನಿವಾಸಯ್ಯರ್ ಅವರು ನೆರವೇರಿಸಿ ಕುಳಿತಾಗ, ತಿರುಪತಿ ಕ್ಷೇತ್ರ ತೆಲುಗರಿಗಿಂತ ತಮಿಳರಿಗೇ ಹೆಚ್ಚು ಆತ್ಮೀಯ, ಆದ್ದರಿಂದ ತಮಿಳಲ್ಲೂ ಒಂದು ಹಾಡು ಹೇಳಲೇಬೇಕೆಂದು, ಸಭಿಕರಲ್ಲಿ ಹಲವರು ವಾದಿಸಿ, ಸಾಧಿಸಿದರು. ಈ ನಮ್ಮ ಪರಿಸ್ಥಿತಿ ನೋಡಿ, "ಅಳಬೇಕೋ, ನಗಬೇಕೋ, ತಿಳಿಯದು" ಎಂದು ಶ್ರೀಯುವರು ನೊಂದುಕೊಂಡರು. 'ವಡ ವೇಗಡಂ ತೆನ್ ಕುಮರಿ' ಎಂಬ ಒಂದು ಪ್ರಾಚೀನ ತಮಿಳು ಕಾವ್ಯದ ಮಾತಿದೆ. ಬಡಗಣ ಗಡಿ ವೆಂಕಟಗಿರಿ, ತೆಂಕಣ ಗಡಿ ಕನ್ಯಾಕುಮಾರಿ. ಈ ನಡುವಣ ಪ್ರಾಂತವೇ ಅರವ ದೇಶ, ಈಗಿನ ಮತ್ಸರಕ್ಕೆ ಆಗಿನ ಮಾತು, ಎಂದು ಶ್ರೀಯವರು ಹೇಳಿಕೊಂಡರು. ದೇವಸ್ಥಾನದ ಆಡಳಿತಗಾರರಿಗೆ ಕಾರ್ಯಕ್ರಮದಲ್ಲೂ ಸಭಾಸ್ಥಾನದಲ್ಲೂ ಸೂಕ್ತ ಗೌರವ ಸಿಗಲಿಲ್ಲವೆಂದು ಈ ಮಧ್ಯ ಹಾಹಾಕಾರವೆದ್ದಿತು. ಮಾಲವೀಯಾರವರ ಪರವಾಗಿ ನನ್ನ ಗುರುಗಳೇ ಅಧ್ಯಕ್ಷ ಭಾಷಣವನ್ನು ಪೂರೈಸಿದರು.

ವೇದ, ಇತಿಹಾಸ, ದರ್ಶನಗಳು, ಕಾವ್ಯ, ಶಾಸನಗಳು, ಶಿಲ್ಪ, ನೃತ್ಯ ಪ್ರಾಕೃತ, ಜೈನ ಬೌದ್ಧ ಗ್ರಂಥಗಳು, ತಮಿಳು, ತೆಲುಗು, ಕನ್ನಡ ಎಂಬ ಪ್ರತ್ಯೇಕ ಪ್ರತ್ಯೇಕ ವಿಭಾಗಗಳು ಮುಂದಿನ ದಿನ ಬೇರೆ ಬೇರೆ ಕೋಣೆಗಳಲ್ಲಿ ವೇಳಾಪಟ್ಟಿಯ ಪ್ರಕಾರ ಸೇರಿ, ಅಧ್ಯಕ್ಷ ಭಾಷಣಗಳ ತರುವಾಯ, ವಿದ್ವಾಂಸರು ಕಳುಹಿಸಿರುವ ಸಂಶೋಧನಾ ಪೂರ್ವಕವಾದ ವ್ಯಾಸಗಳನ್ನು ಓದಿ ಚರ್ಚಿಸುವುದು ಕ್ರಮ. ಸಮ್ಮೇಳನದ ಕಚೇರಿಗೆ ಆಗಲೇ ಹಳಬನಾಗಿದ್ದ ನನಗೆ, ಕನ್ನಡ ವಿಭಾಗದಲ್ಲಿ ಮಂಡಿಸಲು ಒಬ್ಬರೂ ವ್ಯಾಸಗಳನ್ನು ಕಳುಹಿಸಿರಲಿಲ್ಲವೆಂಬುದು ತಿಳಿಯಿತು. ಶ್ರೀಯುವರಿಗೆ ಇದರಿಂದ ಆಶಾಭಂಗವಾಯಿತು. ಕನ್ನಡಭಾಷೆಗೆ ಬಹು ಪ್ರಯತ್ನದಿಂದ ಇತರ ದ್ರಾವಿಡ ಭಾಷೆಗಳಿಗಿರುವಷ್ಟು ಸ್ಥಾನವನ್ನು ಸಂಪಾದಿಸಿ, ಅದರ ಹಿರಿಮೆ ಗರಿಮೆಗಳನ್ನು ಸಾರಲು ಅವಕಾಶ ದೊರೆತಾಗ, ನಮ್ಮವರು ಓಗೊಡಲಿಲ್ಲವಲ್ಲಾ, ಎಂದು ಮರುಗಿದರು.

ಕನ್‌ವೀನರಾಗಿ ನೇಮಕವಾದ ನನಗೂ ಉತ್ಸಾಹ ಕುಗ್ಗಿತು. ಶ್ರೀಯವರು ದ್ರಾವಿಡ ಭಾಷಾಸಮೂಹದಲ್ಲಿ ಕನ್ನಡದ ಸ್ಥಾನ ಎಂಬ ವಿಷಯವಾಗಿ ವಿಪುಲ ಸಂಶೋಧನೆಯ ಫಲವಾದ ವಿದ್ವತ್ ಪರಿಪೂರ್ಣವಾದ ಅಧ್ಯಕ್ಷ ಭಾಷಣವನ್ನು ಸಿದ್ಧಪಡಿಸಿದ್ದರು. ಅದನ್ನು ಇತರ ಭಾಷಾಭಿಮಾನಿಗಳೂ, ಭಾಷಾಶಾಸ್ತ್ರವೇತ್ತರೂ ಕೇಳಲನುಕೂಲವಾಗುವಂತೆ ವೇಳಾಪಟ್ಟಿಯಲ್ಲಿ ಗುರುಗಳ ಸಮ್ಮತಿ ಪಡೆದು ತಿದ್ದುಪಾಟು ಮಾಡಿ, ಟೈಪು ಮಾಡಿದ ಆಹ್ವಾನಪತ್ರಿಕೆಗಳನ್ನು ಆಯಾ ಕೋಣೆಗಳ ಕನ್‌ವೀನರುಗಳ ಮೂಲಕ ಬಹುಮಂದಿಗೆ ತಲುಪಿಸಿದೆ. ಇನ್ನು ವ್ಯಾಸಗಳ ಕೊರತೆ ಏಕೆ, ಅಭಾವ ! ಸಂಸ್ಕೃತ ವಿಭಾಗಕ್ಕೆ ಸೇರಿದ್ದ ಪ್ರೊ॥ ಲಕ್ಷ್ಮೀನರಸಿಂಹಯ್ಯ, ಶಿವರಾಮ ಶಾಸ್ತ್ರಿ, ಶಿಲಾಶಾಸನ ಶಾಸ್ತ್ರ ವಿಭಾಗಕ್ಕಾಗಿ ಬಂದಿದ್ದ ಡಾ॥ ಪಂಚಮುಖಿ,

ಡಾ॥ ಎಂ. ಎಚ್. ಕೃಷ್ಣ ಮುಂತಾದವರು ತಂಗಿದ್ದ ಬಿಡಾರಗಳಿಗೆ ಹೋಗಿ, ರಾತ್ರೋರಾತ್ರಿ ಅವರ ಪಕ್ಕದಲ್ಲೇ ಕುಳಿತು, ಕನ್ನಡಭಾಷೆಯ ಪ್ರಪ್ರಥಮ ಶಿಲಾಶಾಸನ, ಕದಂಬರಾಜರು ಕನ್ನಡಕ್ಕೆ ನೀಡಿದ ಸೇವೆ, ಕನ್ನಡದಲ್ಲಿ ಭಾಸನಾಟಕ ಚಕ್ರ, ಕನ್ನಡ ಅಭಿಜ್ಞಾನ ಶಾಕುಂತಲ ಕೃತಿಯ ವೈಶಿಷ್ಟ್ಯ, ಮುಂತಾಗಿ ಹತ್ತು ಹನ್ನೊಂದು ವ್ಯಾಸಗಳ 'ಸಂಕ್ಷೇಪ' ರೂಪಗಳನ್ನು ಸಂಪಾದಿಸಿದೆ. ವಿವರವಾದ ವ್ಯಾಸಗಳನ್ನು ಅನಂತರ ಕಳುಹಿಸಿ ವರದಿಯಲ್ಲಿ ಅಚ್ಚು ಮಾಡಿಸಿಕೊಳ್ಳಬಹುದೆಂಬ ಭರವಸೆ, ಆಸೆ, ಹೊಣೆಗಾರಿಕೆ, ನನ್ನದು ಎಂದೆ. ನಾನು, 'ಕೇರಳ ಹಾಗೂ ಕರ್ನಾಟಕ – ಚರಿತ್ರೆಯಲ್ಲಿ ಸಂಪರ್ಕ,' 'ಕೊಡಗರ ನುಡಿಯಲ್ಲಿ ಭಗವದ್ಗೀತೆ' ಎಂಬ 'ಸಮ್ಮರಿ'ಗಳನ್ನೂ ಲಗತ್ತಿಸಿ ಪಟ್ಟಿಯನ್ನು ಉದ್ದ ಮಾಡಿದೆ.

ಶ್ರೀಯುವರಿಗೆ ಸಮಾಧಾನವಾಯಿತು. 'ಕನ್ನಡ ಸೆಕ್ಷನ್' ಕೋಣೆಯಲ್ಲಿ ಆಗಲೇ ಇಪ್ಪತ್ತು ಇಪ್ಪತ್ತೈದು ಜನ ನೆರೆದಿದ್ದರು. ವ್ಯಾಸಗಳ ಸಮರ್ಪಣೆಯ ಮುಹೂರ್ತಕ್ಕೆ ಸರಿಯಾಗಿ 'ಸಂಕ್ಷೇಪ' ಲಿಪಿಗಾರರೂ ಬಂದರು. ಟೈಪು ಲಿಸ್ಟ್‌ನಂತೆ ಡಾ॥ ಎಂ. ಎಚ್. ಕೃಷ್ಣ ಅವರು ಎದ್ದು, ಅಧ್ಯಕ್ಷರ ಬಳಿ ನಿಂತರು. ಆಗ ನಾನು "ನನ್ನದೊಂದು ಸಲಹೆ" ಎನ್ನುತ್ತ "ವ್ಯಾಸಗಳನ್ನು ಪೂರ್ತಿ ಓದಿ ಅನಂತರ ಅವುಗಳ ವಿಷಯ ಕುರಿತು ಸಭಿಕರಲ್ಲಿ ಚರ್ಚೆ, ಪ್ರಶ್ನೋತ್ತರಗಳು ಮುಂತಾದ್ದಕ್ಕೆ ಕಾಲಾವಕಾಶ ಸಿಗುವುದು ಕಷ್ಟ. ೧೫ ವ್ಯಾಸಗಳು ಬಂದಿವೆ. 'ಸಂಕ್ಷೇಪ' ಸಮ್ಮರಿಗಳೂ ಇವೆ. ಪ್ರತಿಯೊಬ್ಬರೂ ತಾವು ಬರೆದು ಕಳುಹಿಸಿರುವ ಪೇಪರುಗಳಲ್ಲಿನ ಮುಖ್ಯವಾದ ಒಂದೆರಡು ಅಂಶಗಳನ್ನು ಕುರಿತು ಮಾತನಾಡಿ ಮುಗಿಸಿದರೊಳ್ಳೆಯದಲ್ಲವೆ ?" ಎಂದೆ. ಶ್ರೀಯುವರು ತಥಾಸ್ತು ಎಂದರು. ಪ್ರತಿ ಒಬ್ಬರೂ ೧೦, ೧೫ ನಿಮಿಷ ಲಘೂಪನ್ಯಾಸವನ್ನಿತ್ತರು. ಕುಳಿತು ಕೇಳುತ್ತಿದ್ದ ನಾನು ಆ ಉಪನ್ಯಾಸವನ್ನೇ ಸಂಕ್ಷೇಪವಾಗಿ ಬರೆದಿರಿಸಿಕೊಂಡು ಹಲವರಿಗೆ 'ಸಮ್ಮರಿ' ತಯಾರಿಸಿಕೊಟ್ಟೆ. ಅಂತೂ ಇಂತೂ, 'ಕನ್ನಡ ಸೆಕ್ಷನ್' ಯಾವುದರಲ್ಲೂ ಹಿಂದೆ ಬೀಳದೆ, ಪತಾಕೆ ಹಾರಿಸಿತು.

ಶ್ರೀಯುವರೂ ನಾನೂ ಈ ನಾಟಕವನ್ನು ನೆನೆನೆನೆದು ನಮ್ಮ ಬಿಡಾರದಲ್ಲಿ ಕುಳಿತು ಹೊಟ್ಟೆ ತುಂಬಾ ನಕ್ಕೆವು. ಸಮ್ಮೇಳನದ 'ಕಾರ್‌ಪಾಸ್' ಅಂಟಿಸಿದ್ದ ವಾಹನದಲ್ಲಿ ನಾವಿಬ್ಬರೂ ಬೆಟ್ಟದ ಮೇಲಿನ ಗುಡಿಗೆ ಹೋದಾಗಲೂ, ಪದ್ಮಾವತಿ ದರ್ಶನಕ್ಕಾಗಿ ತಿರುಚ್ಚಾನೂರಿಗೆ ಹೋದಾಗಲೂ, ರೈತಸಂಘದವರ ಕಪ್ಪುಬಾವುಟ, ಧಿಕ್ಕಾರದ ಚೀರಾಟ, ಬೈಗಳು, ಉಗುಳು ಇವುಗಳನ್ನು ದಾಟಿ ಮುಂದುವರಿಯಬೇಕಾಯಿತು. ಶ್ರೀಯುವರಲ್ಲಿ ಆಗ ನಾನು ಕಂಡದ್ದು ಕೋಪ, ಆಕ್ರೋಶ, ಅಸಹನೆಗಳನ್ನಲ್ಲ ; ಮರುಕ, ಆಳವಾದ ಆವೇದನೆ, ಅವರ ನೆನೆದ ನಯನಗಳಲ್ಲಿ ತುಳುಕಿದ ಅಶ್ರುಬಿಂದುಗಳನ್ನು.

# ವಂದ್ಯ ಬಿ.ಎಂ.ಶ್ರೀ : ಎರಡು ಸಂದರ್ಭಗಳಲ್ಲಿ

**– ಶಂ. ಬಾ. ಜೋಶಿ**

೧

ಪ್ರೊ॥ ಅ. ತು. ಸಾಸನೂರರು, ಪೂಜ್ಯ ಶ್ರೀ ಅವರನ್ನು, ಕರ್ಣಾಟಕ ಸಂಘದ ಉತ್ಸವಕ್ಕಾಗಿ, ಧಾರವಾಡಕ್ಕೆ ಆಮಂತ್ರಿಸಿದ್ದರು. ೧೯೩೫-೩೬ರ ಸುಮಾರು ಇರಬಹುದು. 'ಇಂಗ್ಲಿಷ್ ಭಾಷೆಯ ಪ್ರಾಧ್ಯಾಪಕರೆಂದು ವಿಖ್ಯಾತರಾದ ಬಿ.ಎಂ.ಶ್ರೀ. ಕನ್ನಡದ ಹಿರಿಮೆಯ ಬಗೆಗೆ ಮಾತಾಡುತ್ತಾರೆ !' ಎಂಬ ಆಶ್ಚರ್ಯ-ಕುತೂಹಲ ಊರಲ್ಲಿ ಜನಮನವನ್ನು ಆಕರ್ಷಿಸಿತ್ತು. ಕನ್ನಡ ವ್ಯಾಖ್ಯಾನವಲ್ಲದೆ, ಷೇಕ್ಸ್‌ಪಿಯರನ ಬಗೆಗೂ ಅವರ ಅಮೋಘ ಉಪನ್ಯಾಸಗಳು ಆದುವು. ಇಂತಹ ಶ್ರೇಷ್ಠ ವಾಗ್ಮಿಗಳ ಭಾಷಣ ಕೇಳಲು ದೊರತುದಕ್ಕಾಗಿ ಆದ ಹಿಗ್ಗು ಅಷ್ಟಿಷ್ಟಲ್ಲ.

ಈ ಸಮಾರಂಭದ ನೆಪದಿಂದ ಪ್ರೊ॥ ಸಾಸನೂರರಿಗೆ ಶ್ರೀ ಅವರನ್ನು ಹತ್ತಿರ ದಿಂದ ಕಾಣುವ ಸಂಧಿ ದೊರೆತಿತು ; ಕನ್ನಡ ಸಾಹಿತ್ಯ, ಸಂಸ್ಕೃತಿಯ ಏಳ್ಗೆಯ ಬಗೆಗೆ ಚರ್ಚೆ ಆಯಿತಂತೆ. ಈ ಸಂದರ್ಭದ ಒಂದು ನೆನಪನ್ನು, ಪ್ರೊ॥ ಸಾಸನೂರರು, ನನಗೆ ಹೇಳಿದರು. ಆ ಸುಮಾರಿಗೆ (೧೯೩೪), ನಾನು ಬರೆದ **'ಮಹಾರಾಷ್ಟ್ರದ ಮೂಲ'** ಅಥವಾ **'ಮೂಲ ಮಹಾರಾಷ್ಟ್ರ,'** ಇದು ಪ್ರಕಟವಾಗಿತ್ತು, ಅದು ಅವರ ಕಣ್ಣಿಗೂ ಬಿದ್ದಿರಬೇಕು.

ಈ ಪುಸ್ತಿಕೆಯು ಶ್ರೀ ಅವರ ಗಮನ ಸೆಳೆದಿತ್ತೆಂಬುದು ಪ್ರೊ॥ ಸಾಸನೂರರ ಮಾತಿನಿಂದ ನನಗೆ ಗೊತ್ತಾಯಿತು. ಈ ಪುಸ್ತಿಕೆಯ ವಿಷಯವು ಕನ್ನಡದ ಬಗೆಗಿನ ಆಸ್ಥೆಯವರಿಗೆ ಸ್ವಲ್ಪ ಕುತೂಹಲಕಾರಿಯೇ ಇದೆ. ಇದಕ್ಕೂ ಮುಂಚೆ ಪ್ರಕಟವಾದ 'ಕಣ್ಮರೆಯಾದ ಕಂನಡ'ದ ಸಮಸ್ಯೆ ತೊಡಕಿನದಿತ್ತು : 'ಗೋದಾವರಿವರಂ ಇರ್ದ್ದ ಕನ್ನಡ'ದ ತೊಡಕನ್ನು ಬಿಡಿಸಿ ಅರಿವ ಪ್ರಯತ್ನವದು. ಈ 'ಕನ್ನಡ'ವು ಗೋದಾವರಿಯ ತಟಿಯಲ್ಲಿ ಇರಲು ಕಾರಣವೇನು ? ಶಾತವಾಹನ ಚಾಲುಕ್ಯಾದಿ ರಾಜರು ಗೆದ್ದುದರಿಂದ ಅಲ್ಲಿ 'ಕನ್ನಡ'ವು ಇತ್ತೆ ? ಅಥವಾ ಇಂದಿನ

ಕರ್ಣಾಟದತ್ತಣಿಂದ ಅಲ್ಲಿ ವಲಸೆ ಹೋದ ಕನ್ನಡರೆ, ಅವರು ? – ಈ ಪ್ರಶ್ನೆ ಸಂದಿಗ್ಧವೇ ಇತ್ತು.

ಆ ಭಾಗದ ಜನಗಣದಲ್ಲಿ, ಚಂದಾ, ನಾಗಪುರ ಭಾಗವಲ್ಲಿ 'ಕುರುಬರು', 'ಹೊಲೆಯರು' ಒಕ್ಕಲಾಗಿರುವ ಊರುಗಳು ಇವೆ (ಇದ್ದುವು?). ಅವರು ವಿಜಾಪುರದ ಆಡುನುಡಿಯನ್ನು ಹೋಲುವ ಮಾತಿನವರಾಗಿದ್ದರು! ಎಂಬ ಈ ಸಂಗತಿ 'Linguistic Survey of India IV'ದಲ್ಲಿ ನಮೂದು ಇದೆ. 'ಮಹಾರಾಷ್ಟ್ರ' ಎಂಬ ಭಾಗದಲ್ಲಿ ತಟ್ಟಿ, ಸೂಡಿ, ಹಟ್ಟಿ ಊರು, ವಾಡಿಗಳು ಇವೆ. ಸಂಸ್ಕೃತ ಭಾಷೆಯವು ಅಲ್ಲದ ಈ ಸ್ಥಳನಾಮಗಳನ್ನು ಕನ್ನಡದ ಮೂಲಿಗರೇ ರಚಿಸಿರಬೇಕಷ್ಟೆ? ಆ ಭಾಗದಲ್ಲಿ ಮೈಲಾರ, ಮಲ್ಲಾರಿ, ಕಲ್ಮೇಶ್ವರ, ಎಲ್ಲಮ್ಮ, ಏತ್ಮಲ ಇಂತಹ ಸಂಸ್ಕೃತೇತರ ಭಾಷೆಯ ದೇವರುಗಳುಂಟು.

ಆದಕಾರಣ 'ಮಹಾರಾಷ್ಟ್ರ' ಎಂಬ ಹೆಸರಿನ ಆ ನಾಡು, ಮೊತ್ತಮೊದಲಲ್ಲಿ 'ಆರಿಯರ' ನಾಡು ಆಗಿದ್ದಿಲ್ಲ. ಅದು ಕಂನಡದ ಮೂಲ ಪ್ರದೇಶವೇ ಆಗಿತ್ತು, ಎಂಬುದನ್ನು ಮನಗಾಣಿಸಿಕೊಡಲು ಬರೆದ ಆ ಹೊತ್ತಗೆ ಪೂಜ್ಯ ಬಿ.ಎಂ.ಶ್ರೀ. ಅವರ ಗಮನವನ್ನು ಸೆಳೆಯಲಿಕ್ಕೆ ಸಾಕು. ಪ್ರೊ॥ ಸಾಸನೂರರೊಡನೆ ಆದ ಸಂಭಾಷಣದಲ್ಲಿ ಅಂದು, ಈ ಪುಸ್ತಿಕೆ ಬರೆದವನ ಬಗೆಗೂ ವಿಚಾರಿಸಿದ್ದು, ಪ್ರೊ॥ ಸಾಸನೂರರಿಂದ ತಿಳಿಯಿತು. "ಯಾವ ಕಾಲೇಜಿನಲ್ಲಿ ... ಇದ್ದಾರೆ?" ಎಂಬ ಈ ಕುತೂಹಲ ರೂಪದ ಅವರ ಆಶೀರ್ವಾದವು ನನಗೆ ಸಂತೋಷ ತಂದಿತು.

೨

**'ಕಂನಡ ನುಡಿಯು ಹುಟ್ಟು'** ಈ ಪ್ರಕಟನೆಯ ಬಗೆಗೆ ದೊರೆತ ಆಶೀರ್ವಾದದ ಸುದ್ದಿ, ಕಲಕತ್ತೆಯಲ್ಲಿ ಇರುತ್ತಿದ್ದ ಮೈಸೂರಿನ ಶ್ರೀ ಅಯ್ಯರ್ ಎಂಬವರಿಂದ ತಿಳಿಯಿತು. ಇವರು ಆ ಬಳಿಕ ಸಂನ್ಯಾಸ ಸ್ವೀಕರಿಸಿ ಕರ್ಣಾಟಕ್ಕೆ ಬಂದದ್ದಾಯಿತು. ನನಗೆ ಅಯ್ಯರರ ಸ್ವಲ್ಪವೂ ಪರಿಚಯವಿರಲಿಲ್ಲ. ಆದರೂ ವಿಶ್ವಾಸದಿಂದ, ವಿನೋದದ ಕಾಗದ ಬರೆದು ಕೃಪೆ ಮಾಡಿದರು.

ಕಲಕತ್ತೆಯ, ಅಖಿಲ ಭಾರತೀಯ ಮಟ್ಟದ ಗ್ರಂಥಾಲಯದಲ್ಲಿ ಅಯ್ಯರ್ ಅವರಿಗೆ, ಆಗ, ಮೈಸೂರಿನ ಜನಗಣತಿಯ (ಸೆನ್‌ಸಸ್) ವರದಿ ದೊರಕಿತು. ಅದರಲ್ಲಿ (೧೯೪೧), ಕಳೆದ ಹತ್ತು ವರುಷಗಳಲ್ಲಿ ಆಗಿರುವ ಕನ್ನಡದ ಪ್ರಕಟನೆಗಳ ಸಮಾಯೋಜನವಿತ್ತು. ಈ ಸಮಾಯೋಜನದಲ್ಲಿ "'ಕಂನಡ ನುಡಿ ಹುಟ್ಟು' ಬರೆದವರು 'Sham, Ba. Joshi'" ಎಂದು ನಮೂದು ಇದೆ! ಇಂಗ್ಲಿಷಿನಲ್ಲಿ, ಈ **Sham, Ba. ಎಂದರೆ ಯಾರು ಎಂಬ ಸಂಶೋಧನ ಆಗಬೇಕಾದೀತು."**

"ಆದಕಾರಣ, ನೀವು ಬಿ. ಎಂ. ಶ್ರೀಯವರಿಗೆ ಬರೆದಂ, 'S. B. Joshi' ಎಂದಂ ನಿಮ್ಮ ಹೆಸರನ್ನು ತಿದ್ದಿಸಿಕೊಳ್ಳಿರಿ" ಎಂದು ಶ್ರೀ ಅಯ್ಯರರು ಸಲಹೆ ಮಾಡಿದ್ದರು. ಆದರೆ ನಾನು ಈ ನಿಟ್ಟಿನಲ್ಲಿ ಯಾವ ಪ್ರಯತ್ನವನ್ನೂ ಮಾಡಲಿಲ್ಲ.

ಪೂಜ್ಯ ಬಿ. ಎಂ. ಶ್ರೀ. ಅವರಂತಹ ಶ್ರೇಷ್ಠ ರಸಿಕ ವಿದ್ವನ್ಮಣಿಗಳ ಈ ಬಗೆಯು ಮೆಂಚ್ಚಿಗೆ-ಆಶೀರ್ವಾದವು – ನನ್ನ ಬೆನ್ನಿಗೆ ಇದ್ದ ಭಾಗ್ಯ ನನ್ನದು.

# 'ನೆನಪಿನ ದೋಣಿಯಲ್ಲಿ' ಬಿ.ಎಂ.ಶ್ರೀ.

– ಕುವೆಂಪು

೧೯೨೪ನೆಯ ಜೂನ್ ಕೊನೆಯಲ್ಲಿ ನಾನು, ಎಂಟ್ರೆನ್ಸ್‌ಗೆ ಐಚ್ಛಿಕವಾಗಿ ತೆಗೆದುಕೊಂಡಿದ್ದ ವಿಜ್ಞಾನ ವಿಷಯಗಳಾದ ಗಣಿತ, ರಸಾಯನ, ಭೌತಶಾಸ್ತ್ರಗಳನ್ನು ತ್ಯಜಿಸಿ, ಕಲಾವಿಷಯಗಳಾದ ರಾಜಕೀಯಶಾಸ್ತ್ರ, ಅರ್ಥಶಾಸ್ತ್ರ ಮತ್ತು ತತ್ತ್ವಶಾಸ್ತ್ರಗಳನ್ನು ತೆಗೆದುಕೊಂಡು ಮಹಾರಾಜಾ ಕಾಲೇಜಿಗೆ ಸೇರಿದೆ. ಕಾಲೇಜಿಗೆ ಸೇರಿದ ಪ್ರಾರಂಭದಲ್ಲಿ, ಅಂದರೆ ಜುಲೈ ತಿಂಗಳ ಉತ್ತರಾರ್ಧದಲ್ಲಿಯೊ, ಅಥವಾ ಆಗಸ್ಟ್ ಪೂರ್ವಾರ್ಧದಲ್ಲಿಯೊ ಒಂದು ಸ್ಮರಣೀಯವಾದ ಸ್ವಾರಸ್ಯ ಸಂಗತಿ ನಡೆಯಿತು. ಕಾಲೇಜಿನ ಯೂನಿಯನ್ನಿನಲ್ಲಿ ಪ್ರೊ॥ ವಿ. ಎಲ್. ಡಿಸೋಜರವರ ಚೊಚ್ಚಲು ಭಾಷಣ ಏರ್ಪಾಡಾಗಿತ್ತು. ಶ್ರೀ ಡಿಸೋಜ ಆಗತಾನೆ ತಮ್ಮ ಅಧ್ಯಯನವನ್ನು ಇಂಗ್ಲೆಂಡಿನಲ್ಲಿ ಪೂರೈಸಿ ಮೈಸೂರಿಗೆ ಹಿಂದಿರುಗಿ ಮಹಾರಾಜಾ ಕಾಲೇಜಿನಲ್ಲಿ ಪ್ರಾಧ್ಯಾಪಕ ಹುದ್ದೆಯಲ್ಲಿ ನಿಂತಿದ್ದರು. ಅವರ ಅಂದಿನ ಭಾಷಣದ ವಿಷಯ – ಇಂಗ್ಲೆಂಡಿನಲ್ಲಿ ತಮಗಾದ ಅನುಭವಗಳನ್ನು ಕುರಿತದ್ದಾಗಿತ್ತು.

ಯುವಕರೂ, ಉತ್ಸಾಹಿಗಳೂ, ವಾಗ್ಮಿಗಳೂ, ವಿನೋದಪ್ರಿಯರೂ ಭಾಷಣದ ಮಧ್ಯೆ ಮಧ್ಯೆ ಹಾಸ್ಯದ ಚಟಾಕಿಗಳನ್ನು ಹಾರಿಸಿ ವಿದ್ಯಾರ್ಥಿಗಳನ್ನು ನಗೆಗಡಲಿನಲ್ಲಿ ತೇಲಿಸುವಷ್ಟು ಸಮರ್ಥರೆಂದು ಹೆಸರುವಾಸಿಯಾಗಿದ್ದವರೂ ಆಗಿದ್ದ ಅವರ ಭಾಷಣಕ್ಕೆ ಸಭಾಂಗಣದ ಅಂಗಳವೂ, ಗ್ಯಾಲರಿಯೂ ಕಿಕ್ಕಿರಿದು ತುಂಬಿತ್ತು. ಹೊಸದಾಗಿ ಕಾಲೇಜು ಮೆಟ್ಟಿಲು ಹತ್ತಿದ ನನ್ನಂತಹ ತರುಣರ ಉತ್ಸಾಹಕ್ಕಂತೂ ಎಲ್ಲೆ ಇರಲಿಲ್ಲ.

ಭಾಷಣದ ಉದ್ದಕ್ಕೂ ನಗೆ, ಕೈಚಪ್ಪಾಳೆ, ಸಂತೋಷ, ಘೋಷಣೆಗಳು ತುಂಬಿದ್ದವು. ಭಾಷಣ ಮುಕ್ತಾಯವಾದಮೇಲೆ ಕಾರ್ಯದರ್ಶಿ "ಯಾರಾದರೂ ಏನಾದರೂ ಪ್ರಶ್ನೆ ಕೇಳುವುದಿದ್ದರೆ ಕೇಳಬಹುದು" ಎಂದು ಸಭೆಗೆ ತಿಳಿಸಿದರು.

ಹೆಚ್ಚಾಗಿ ಯಾರೂ ಪ್ರಶ್ನೆ ಕೇಳಲಿಲ್ಲ. ಒಂದಿಬ್ಬರು ಏನನ್ನೊ ಪ್ರಶ್ನೆ ಹಾಕಿದರು. ಅವಕ್ಕೆಲ್ಲಾ ಭಾಷಣಕಾರರು ನಗೆ ಚಿಮ್ಮಿಸುವ ಉತ್ತರಗಳನ್ನು

ಕೊಡುತ್ತಿದ್ದರು. ನಾನು ಎದ್ದು ನಿಂತೆ : "What position does Mysore hold in the mind of the British public?" ಎಂದು ಕೇಳಿದೆ.

"Cipher !" ಎಂಬ ಉತ್ತರ ಬಾಣದಂತೆರಗಿತು !

ಇಡೀ ಸಭೆಗೆ ಸಭೆಯೇ 'ಘೇ ಉಘೇ ಉಘೇ' ಎಂಬಂತೆ ನಗೆಯು ಚಪ್ಪಾಳೆಯು ಉತ್ಕಂಠ ಕೋಲಾಹಲದ ತುಮುಲ ಶಬ್ದಘೋಷ ಯೂನಿಯನ್ ಭವನದ ಗೋಡೆಗಳಲ್ಲೆಲ್ಲ ವಿಕಂಪಿಸಿ ಅನುರಣಿತವಾಗುವಂತೆ ಕಿವಿಗಳಿಗೆ ಅಪ್ಪಳಿಸಿಬಿಟ್ಟಿತು !

ಪ್ರಶ್ನೆ ಕೇಳಿ ಇನ್ನೂ ನಿಂತೇ ಇದ್ದ ನನಗೆ ತೇಜೋಭಂಗವಾಗಿ ಕಿಕ್ಕಿರಿದ ಸಭೆಯ ಸಾವಿರಾರು ಕಣ್ಣುಗಳ ಕುಹಕ ನೋಟದಿಂದ ಆದಷ್ಟು ಶೀಘ್ರ ತಪ್ಪಿಸಿಕೊಳ್ಳಲೆಂಬಂತೆ ದೊಪ್ಪನೆ ಕುಳಿತು ಹುದುಗಿಬಿಟ್ಟೆ !

ಸಮಾರಂಭ ಅಲ್ಲಿಗೇ ಮುಕ್ತಾಯವಾಯಿತು.

'ಬ್ರಿಟಿಷ್ ಸಾರ್ವಜನಿಕರ ಮನಸ್ಸಿನಲ್ಲಿ ಮೈಸೂರಿಗಿರುವ ಸ್ಥಾನವೇನು ?' ಎಂದು ನಾನು ಕೇಳಿದ ಪ್ರಶ್ನೆಗೆ ಶ್ರೀ ಡಿಸೋಜ ಅವರು 'ಸೊನ್ನೆ !' ಎಂದು ಕೊಟ್ಟಿದ್ದ ಉತ್ತರ ನೂರಕ್ಕೆ ನೂರು ಪಾಲೂ ಸತ್ಯವಾಗಿತ್ತು. ಆದರೆ ನನ್ನ ಸ್ವದೇಶ ಭಕ್ತಿಯ ತಾರುಣ್ಯಕ್ಕೆ ಆ ಉತ್ತರ ಅವಮಾನಕಾರವೂ ಅಪಹೇಳನ ಸ್ವರೂಪದ್ದೂ ಆಗಿ ತೋರಿತು. ನಮ್ಮ ಮೈಸೂರು ಅಷ್ಟೊಂದು ಯಃಕಶ್ಚಿತ್ ವಸ್ತುವಾಯಿತಲ್ಲಾ ಎಂದು ಮನಸ್ಸಿಗೆ ಖೇದವಾಯಿತು. ನಮ್ಮ ನಾಡಿನ ಕೀರ್ತಿ ಸರ್ವವ್ಯಾಪಕವಾಗುವಂತೆ ನಾವು ಮಾಡಲೇಬೇಕೆಂದು ಒಂದು ಬಾಲಿಶ ಮಹತ್ವಾಕಾಂಕ್ಷೆ ಹೃದಯದಲ್ಲಿ ಹೆಡೆಯೆತ್ತಿತು . . .

ಯಾವ ಸ್ನೇಹಿತರೊಡನೆಯೂ ನನ್ನ ನಿರ್ಧಾರವನ್ನು ಹೇಳದೆ ಸಂತೆಪೇಟೆಯ ಆನಂದ ಮಂದಿರದ (ಹೋಟೆಲಿನ) ನನ್ನ ಗಲೀಜು ಕೊಠಡಿಗೆ ಬಂದೆ. 'Cipher !' ಎಂಬ ಶೀರ್ಷಿಕೆ ಕೊಟ್ಟು ಒಂದು ತಕ್ಕಮಟ್ಟಿನ ದೀರ್ಘ ಲೇಖನ ಬರೆದೆ, ಇಂಗ್ಲಿಷಿನಲ್ಲಿ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೆ ! ಅದು ತುಂಬ ಭಾವಾತಿರೇಕ ಪ್ರಧಾನವಾಗಿತ್ತು. 'ನಾವು ಅನಾಮಧೇಯರಾಗಿರಬಾರದು. ಲೋಕದಲ್ಲಿ ನಾವೂ ಪ್ರತಿಷ್ಠಿತ ಜನಾಂಗವಾಗಬೇಕು. (Cipher) ಸೊನ್ನೆಗಳಾಗಿರಬಾರದು. ಅದಕ್ಕಾಗಿ ಸಾಹಸಿಗಳಾಗಬೇಕು, ದುಡಿಯಬೇಕು, ಎದ್ದುನಿಂತು ಜಗನ್ನಯನ ಕೇಂದ್ರಗಳಾಗಬೇಕು' ಎಂಬ ಭಾವನೆ ಆ ಲೇಖನದ ವಸ್ತುವಾಗಿತ್ತು. ಭಾಷೆಯೂ ಕಾವ್ಯ ಭಾಷೆಯ ಉಜ್ವಲ ರೀತಿಯದಾಗಿತ್ತು. ಆ ಲೇಖನದಲ್ಲಿ ಮಧ್ಯೆ ಮಧ್ಯೆ ಇಂಗ್ಲಿಷ್ ಕವಿತೆಯ ಉದ್ಧರಣೆಗಳನ್ನೂ ಸೇರಿಸಿದೆ. ಆ ಇಂಗ್ಲಿಷ್ ಕವಿತೆ ಬೇರೆ ಯಾವ ಮಹಾ ಕವಿಯದೂ ಆಗಿರಲಿಲ್ಲ, ನಾನೆ ಬರೆದದ್ದಾಗಿತ್ತು. ಆ ಸಂದರ್ಭಕ್ಕೆ ಕೆಲದಿನಗಳ ಹಿಂದೆ, ಅಂದರೆ ೧೭-೭-೧೯೨೪ ರಲ್ಲಿ, 'Maharaja's College'

ಎಂಬ ಶೀರ್ಷಿಕೆಯಲ್ಲಿ ನಾನು ಒಂದು ಸುದೀರ್ಘ ಕವನವನ್ನು ಬರೆದಿದ್ದೆ. ಆ ಕವನದಿಂದಲೆ ಅಲ್ಲಲ್ಲಿ ಕೆಲವು ಪಂಕ್ತಿಗಳನ್ನು ತೆಗೆದು ಉದ್ಧರಿಸಿದ್ದೆ...

'Cipher' ಲೇಖನದ ಹಸ್ತಪ್ರತಿ ಸಿದ್ಧಪಡಿಸಿ 'ಕಿಶೋರ ಚಂದ್ರ ವಾಣಿ' ಎಂಬ ಗುಪ್ತನಾಮದ ಮರೆಯಲ್ಲಿ, ಬೆಂಗಳೂರಿನಿಂದ ಹೊರಡುತ್ತಿದ್ದ Daily Mailಗೆ ಕಳಿಸಿದೆ. ಅದರ ಮರುದಿನವೊ ಅಥವಾ ಮರುದಿನವೊ ನಾನು ಬೆಳಿಗ್ಗೆ ಹನ್ನೊಂದು ಗಂಟೆಗೆ ಕಾಲೇಜಿಗೆ ಹೋದವನು ಮೊದಲನೆಯ ಪಿರಿಯಡ್ಡು ಕ್ಲಾಸು ಇರಲಿಲ್ಲವಾದ್ದರಿಂದ ಬಳಿಯಿದ್ದ ಯೂನಿಯನ್ ಕಟ್ಟಡಕ್ಕೆ ಹೋದೆ. ಅದರ ಉಪ್ಪರಿಗೆಯಲ್ಲಿದ್ದ ರೀಡಿಂಗ್‌ರೂಮಿನಲ್ಲಿ ದಿನಪತ್ರಿಕೆಗಳು ವಾರಪತ್ರಿಕೆಗಳು ಮಾಸಿಕಗಳು ಮತ್ತು ಲೈಬ್ರರಿ ಇದ್ದಿತ್ತಾದ್ದರಿಂದ ಮೆಟ್ಟಿಲು ಹತ್ತಿ ಮೇಲಕ್ಕೆ ಹೋದೆ. ಹೋಗಿ ನೋಡುತ್ತೇನೆ: ವಿದ್ಯಾರ್ಥಿಗಳು ಕಿಕ್ಕಿರಿದಿದ್ದಾರೆ! ಏನೋ ಗುಜುಗುಜು ಉದ್ವೇಗ ವ್ಯಾಪಿಯಾದಂತಿದೆ! ಅದರಲ್ಲಿಯೂ Daily Mail ಇದ್ದ ಉದ್ದನೆಯ ವಾಲುಮೇಜಿನ ಸುತ್ತ ಅತಿ ಹೆಚ್ಚು ಜನಸಂದಣಿ! ನನಗೂ ಇದೇಕೆ ಹೀಗೆ? ಎಂಬ ಕುತೂಹಲ ಉಕ್ಕಿ ಆ ಮೇಜಿನ ಬಳಿಗೇ ಹೋದೆ. ಹುಡುಗರು ಕುತ್ತಿಗೆ ನಿಕ್ಕುಳಿಸಿ ತುದಿಗಾಲ ಮೇಲೆ ನಿಂತು, ಏನನ್ನೊ ನೋಡಲು ಹವಣಿಸುತ್ತಾ ಮುಂದೆ ನಿಂತಿದ್ದವರನ್ನು ನೂಕುತಿದ್ದರು. ನಾನೂ ನಿಕ್ಕುಳಿಸಲು ಪ್ರಯತ್ನಿಸಿದೆ. ಪ್ರಯೋಜನವಾಗಲಿಲ್ಲ. ಬಳಿಯಿದ್ದವರೊಬ್ಬರನ್ನು ವಿಚಾರಿಸಿದೆ.

"ಮೊನ್ನೆ ಡಿಸೋಜ ಅವರ ಭಾಷಣ ಇತ್ತಲ್ಲಾ ಯೂನಿಯನ್‌ನಲ್ಲಿ ಅವರ ವಿದೇಶದ ಅನುಭವಗಳನ್ನು ಕುರಿತು, ಅದರ ವಿಚಾರವಾಗಿ 'Cipher' ಎಂದು ಅಗ್ರಲೇಖನ ಬಂದಿದೆ Daily Mailನಲ್ಲಿ."

"ಅಗ್ರಲೇಖನ (Editorial) ಬಂದರೆ ಯಾಕೆ ಇಷ್ಟೊಂದು ಗಲಾಟೆ ಗಲಿಬಿಲಿ?"

"ಆ ಅಗ್ರಲೇಖನ ಅದರ ಸಂಪಾದಕರೇ ಬರೆದದ್ದಲ್ಲಾರೀ. ನಮ್ಮವರೆ ಯಾವನೋ ಬರೆದದ್ದನ್ನು ಅವನು ಎಡಿಟೋರಿಯಲ್ಲಾಗಿ ಹಾಕಿ ಬಿಟ್ಟಿದ್ದಾನೆ."

"ಹಾಕಿದರೆ ಏನಂತೆ?"

"ಮೈಸೂರಿನ ಸ್ಥಾನ ಇಂಗ್ಲೆಂಡಿನಲ್ಲಿ ಸೊನ್ನೆ ಎಂದು ಮೈಸೂರಿನ ಪ್ರಜೆಯಾಗಿ, ಸರಕಾರದ ಅಧಿಕಾರಿಯಾಗಿ, ಅದರಲ್ಲಿಯೂ ವಿಶ್ವವಿದ್ಯಾಲಯದ ಒಬ್ಬ ದೊಡ್ಡ ಪ್ರೊಫೆಸರ್ ಆಗಿ ಹೇಳುವುದು ರಾಜದ್ರೋಹವೆ ಆಗುತ್ತದಂತೆ. ಅರಮನೆಯಲ್ಲೆಲ್ಲ ಅಲ್ಲೋಲಕಲ್ಲೋಲವಂತೆ. ಮಹಾರಾಜರೇ ವಿಶ್ವವಿದ್ಯಾಲಯಕ್ಕೆ ವಿವರಣೆ (Explanation) ಕೇಳಲು ಬರೆಸಿ ಬಿಟ್ಟಿದ್ದಾರಂತೆ! ಪಾಪ, ಡಿಸೋಜಗೆ ಏನಾಗುತ್ತದೆಯೋ" ಎಂದು ಮೊದಲಾಗಿ ಆ ಅಗ್ರಲೇಖನ ಬರೆದು ಪತ್ರಿಕೆಗೆ ಕಳಿಸಿದವನನ್ನು ಖಂಡಿಸಿ ಬೈದನು.

ಅಪರಾಧ ಮಾಡಿದವನನ್ನು ಹುಡುಕುತ್ತಾ ಮಧ್ಯೆಯಲ್ಲಿದ್ದ ಪೋಲೀಸು ಅಧಿಕಾರಿಯನ್ನು ಸಂಧಿಸಿ ಅವನೊಡನೆ ಸಂಪಾದಿಸುತ್ತಿದ್ದು, ಅವನು ಯಾರೆಂದು ಥಕ್ಕನೆ ತಿಳಿದುಕೊಂಡ ಅಪರಾಧಿಯಂತಾಯ್ತು ನನ್ನ ಸ್ಥಿತಿ. ಸದ್ಯಃ ಸಾಸೇ ಆ ಪ್ರಶ್ನೆಯನ್ನು ಕೇಳಿ ಆ ಉತ್ತರ ಪಡೆದವನು ಎಂದು ಇವರಾರಿಗೂ ನೆನಪಿಲ್ಲವಲ್ಲಾ? ಗೆದ್ದೆ? ಎಂದುಕೊಂಡು ಮುಂದಿನ ಪೀರಿಯಡ್ಡಿಗೆ ಕ್ಲಾಸಿಗೆ ಹೋದೆ ...

ಆ ದಿನದಂತೆ ಅದರ ಮರುದಿನವೂ 'ಸೊನ್ನೆ'ಯ ಆಂದೋಳನವೆ ಕಾಲೇಜಿನ ಮಾತಾಗಿತ್ತು ...

ಆಗ ಯೂನಿಯನ್ನಿನ ಅಧ್ಯಕ್ಷರಾಗಿದ್ದವರು ಪ್ರೊ॥ ಬಿ.ಎಂ. ಶ್ರೀಕಂಠಯ್ಯನವರು : ಇಂಗ್ಲಿಷಿನಲ್ಲಲ್ಲದೆ ಕನ್ನಡದಲ್ಲಿ ಮಾತನಾಡಲಾಗಲಿ ಭಾಷಣ ಮಾಡಲಾಗಲಿ ಎಂದಿಗೂ ಒಪ್ಪದಿರುತ್ತಿದ್ದ ಮಡಿವಂತಿಕೆಯ ಕಾಲವಾಗಿತ್ತು ಆಗ ಅವರದು! ಜೊತೆಗೆ ಅವರ ರಾಜಭಕ್ತಿಗೂ ರಾಜನಿಷ್ಠೆಗೂ ಮೇರೆಯಿರಲಿಲ್ಲ! ಮೈಸೂರು ಸಂಸ್ಥಾನದ ಕೀರ್ತಿಗೆ ಮಾಡಿದ ಅವಮಾನ ಮಹಾರಾಜರಿಗೇ ಮಾಡಿದ ಅವಮಾನವಾಗಿತ್ತು ಅವರ ಭಾಗಕ್ಕೆ. ಇಂಗ್ಲೆಂಡಿನ ಜನಮನದಲ್ಲಿ ಮೈಸೂರಿಗಿದ್ದ ಸ್ಥಾನ 'ಸೊನ್ನೆ' ಎಂಬ ಹೇಳಿಕೆಯಂತೂ ರಾಜನಿಂದೆಗೇ ಸಮಾನವಾಗಿ, ರಾಜದ್ರೋಹವೇ ಆಗಿತ್ತು ಅವರ ದೃಷ್ಟಿಯಲ್ಲಿ! ತಮ್ಮಂತಹ ರಾಜಸೇವಾಸಕ್ತರು ಅಧ್ಯಕ್ಷರಾಗಿದ್ದ ಯೂನಿಯನ್ ಏರ್ಪಡಿಸಿದ್ದ ಭಾಷಣದಲ್ಲಿ ಇಂತಹ ರಾಜನಿಂದಾ ಸದೃಶವಾದ ವ್ಯಾಪಾರ ನಡೆದದ್ದು ಅವರಿಗೆ ವೈಯ್ಯಕ್ತಿಕ ಆಘಾತವಾದಂತಿತ್ತು. ಯಾರು ಲೇಖನ ಕಳಿಸಿದವರು? ಎಂದು ಪತ್ತೆ ಹಚ್ಚಲು ಪ್ರಯತ್ನಪಟ್ಟುದೆಲ್ಲ ವ್ಯರ್ಥವಾಯಿತು. 'ಕಿಶೋರ ಚಂದ್ರ ವಾಣಿ' ಎಂಬ ಹೆಸರು ಕಾಲೇಜಿನ ಯಾವ ಹಾಜರಿ ರಿಜಿಸ್ಟರಿನಲ್ಲಿಯೂ ದೊರೆಯಲಿಲ್ಲ!

ಆ (ನನ್ನ) ಲೇಖನವನ್ನು ಆ ಪತ್ರಿಕೆಯ ಸಂಪಾದಕ, ಅಗ್ರಲೇಖನವನ್ನಾಗಿ ಪ್ರಕಟಿಸಿ, ಮಧ್ಯೆ ಮಧ್ಯೆ Bravo Lad! Applause! ಎಂಬೆಲ್ಲ ಮೆಚ್ಚುಗೆಯ ಘೋಷಗಳನ್ನೂ ಮಧ್ಯೆ ಮಧ್ಯೆ ಬ್ರಾಕೆಟ್ಟಿನಲ್ಲಿ ಹಾಕಿ, Cipher ಎಂದು ಉತ್ತರ ಹೇಳಿದ ಪ್ರಾಧ್ಯಾಪಕರನ್ನು ಖಂಡ ತುಂಡವಾಗಿ ಖಂಡಿಸಿ ತರಾಟೆಗೆ ತೆಗೆದುಕೊಳ್ಳುವ ಒಂದು ಸಣ್ಣ ಉಪ-ಅಗ್ರ ಲೇಖನವನ್ನೂ ಸೇರಿಸಿಬಿಟ್ಟಿದ್ದನು, ಗಾಯಕ್ಕೆ ಹುಳಿ ಹಿಂಡುವಂತೆ! ... ನಾನು ಅಕಾಡೆಮಿಕ್ ಅರ್ಥದಲ್ಲಿ ನಮ್ಮ ಮೈಸೂರಿನ ಕೀರ್ತಿ ಜಗತ್ ಪ್ರಸಿದ್ಧವಾಗಬೇಕೆಂದು ಪ್ರತಿಪಾದಿಸಿದ್ದರೆ, ಆತ (ಪತ್ರಿಕೆಯ ಸಂಪಾದಕ) ಮಿಲಿಟರಿ ದೃಷ್ಟಿಯಿಂದ ಮೈಸೂರು ಈಗಾಗಲೇ ಸುಪ್ರಸಿದ್ಧವಾಗಿದೆ ಎಂದು ವಾದಿಸಿ, ಅದಂ ಯಃಕಶ್ಚಿತ್, ಅನಾಮಧೇಯ, ಸೊನ್ನೆ, Cipher ಎಂದ ಪ್ರೊಫೆಸರ್ ಅವರನ್ನು ಖಂಡಿಸಿಬಿಟ್ಟಿದ್ದನು! ಅರಮನೆಯ ಕಡೆಯಿಂದಲೂ ಯಾರು? ಏಕೆ? ಎಂತು? ಎಂದು ತನಿಖೆಯ ರೂಪದ ಪರಿಶೀಲನೆ ಪ್ರಾರಂಭವಾಗಿತ್ತೆಂದು ತೋರುತ್ತದೆ. ಸಂಘದ ಅಧ್ಯಕ್ಷರಾಗಿದ್ದ 'ಬಿ. ಎಂ. ಶ್ರೀ'ಯವರು ಆ ಪತ್ರಿಕೆಗೆ ಉತ್ತರ

ರೂಪವಾಗಿ ಬರೆದಿದ್ದ ಕಾಗದವನ್ನೂ ಅದರ ಸಂಪಾದಕರು ಕಸದ ಬುಟ್ಟಿಗೆ ಹಾಕಿಬಿಟ್ಟರು ! ಅವರಿಗೆ ರಗಳೆಗಿಟ್ಟುಕೊಂಡಿತು.

ಹೀಗೆಯೆ ಮೂರು ನಾಲ್ಕು ದಿನಗಳು ಕಳೆದವು. ಅಷ್ಟರಲ್ಲಿ ನನ್ನ ಇಬ್ಬರು ಮೂವರು ಬಹಳ ಹತ್ತಿರದ ಗೆಳೆಯರಿಗೆ ಲೇಖನ ಬರೆದವನು ನಾನೆ ಎಂಬ ಗುಟ್ಟು ಗೊತ್ತಾಗಿ, ಒಂದು ದಿನ ಅಂಗಲಾಚಿ ಬೇಡಿಕೊಂಡರು : ಡಿಸೋಜ ಅವರಿಗೆ ತುಂಬ ಮನಸ್ಸು ನೊಂದು ಕಾತರರಾಗಿದ್ದಾರೆ, ಲೇಖನ ಬರೆದವನು ನಾನೆ ಎಂದು ನೀವೇ ಹೇಳಿಬಿಡಿ ಎಂದು ಆ ಮಿತ್ರರು ನನ್ನನ್ನು ಅವರ ಕೊಠಡಿಗೆ ಕರೆದೊಯ್ದು ಪರಿಚಯ ಮಾಡಿಸಿದರು.

ಆಗಲೇ ನನ್ನ ಹೆಸರಿನ ಪರಿಚಯವಿದ್ದ ಅವರು ನನ್ನನ್ನು ವಿಶ್ವಾಸದಿಂದ ಬರಮಾಡಿಕೊಂಡು ಪಕ್ಕದಲ್ಲಿದ್ದ ಕುರ್ಚಿ ತೋರಿ ಕುಳಿತುಕೊಂಡರು. ಲೇಖನವನ್ನು 'ಕಿಶೋರ ಚಂದ್ರ ವಾಣಿ'ಯ ಹೆಸರಿನಲ್ಲಿ ಬರೆದವನು ನಾನೆ ಎಂದು ತಿಳಿದು ಅದರ ಭಾಷೆಯ ಮತ್ತು ರೀತಿಯ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು. ಆ ಲೇಖನದಲ್ಲಿ ಉದ್ಧರಿಸಿದ್ದ ಕವನ ಪಂಕ್ತಿಗಳು ನನ್ನ ರಚನೆಗಳು ಎಂದು ತಿಳಿದ ಮೇಲೆ ತುಂಬ ಹೊಗಳಿದರು. ಆ ಲೇಖನದಲ್ಲಿ ನಿಂದಾತ್ಮಕವಾದುದು ಏನೂ ಇಲ್ಲ ಎಂಬುದನ್ನೂ ಒಪ್ಪಿದರು ...

"ನನಗೆ ಆಯಾಸವಾಗಿದ್ದರಿಂದ ಚುಟುಕದಲ್ಲಿಯೇ ಮುಗಿಸುವ ಉದ್ದೇಶದಿಂದ ಹಾಗೆ ಹೇಳಿಬಿಟ್ಟೆ. ಭಾಷಣ ಮುಗಿದ ಮೇಲೆ ನೀವು ನನ್ನನ್ನು ವಿಚಾರಿಸಿದ್ದರೆ ಸಾವಧಾನವಾಗಿ ವಿವರಿಸುತ್ತಿದ್ದೆ. ಈಗೇನು ಮಾಡುವುದು. ಆದದ್ದು ಆಗಿ ಹೋಯಿತು. ಸಂಘದ ಅಧ್ಯಕ್ಷರಾಗಿರುವ ಪ್ರೊ॥ ಬಿ. ಎಂ. ಶ್ರೀಕಂಠಯ್ಯನವರು ನೊಂದುಕೊಂಡಿದ್ದಾರೆ, ವಿಷಯ ಅರಮನೆಯವರಿಗೂ ಮುಟ್ಟಿ ಸ್ವಲ್ಪ ಗೊಂದಲ ಎಬ್ಬಿಸಿದೆಯಂತೆ ! ಅವರಲ್ಲಿಗೆ ನಿಮ್ಮನ್ನು ಕರೆದೊಯ್ದು ಪರಿಚಯಿಸುತ್ತೇನೆ. ಅವರು ಹೇಳುವಂತೆ ಮಾಡಿ ದಯವಿಟ್ಟು ..." ಎಂದು ಪ್ರೊ॥ ಡಿಸೋಜ ಅವರು ನನ್ನೊಡನೆ ಬಂದು ಅಲ್ಲಿಯೆ ಪಕ್ಕದಲ್ಲಿದ್ದ ಬಿ. ಎಂ. ಶ್ರೀ. ಅವರ ಕೊಠಡಿಗೆ ಪ್ರವೇಶಿಸಿ, ನನ್ನ ಪರಿಚಯ ಹೇಳಿ ವಿಷಯವೆಲ್ಲವನ್ನೂ ವಿವರವಾಗಿ ತಿಳಿಸಿದರು. ಬಿ. ಎಂ. ಶ್ರೀ. ನನ್ನನ್ನು ಒಂದು ಕುರ್ಚಿಯಲ್ಲಿ ಕುಳಿತುಕೊಳ್ಳ ಹೇಳಿದರು ; ಡಿಸೋಜ ತಮ್ಮ ಕೊಠಡಿಗೆ ಹಿಂತಿರುಗಿದರು.

ಬಿ. ಎಂ. ಶ್ರೀ. ಅವರು ಆಗ ತುಂಬ ಬಿಗುಮಾನದ ವ್ಯಕ್ತಿಯಾಗಿದ್ದರೆಂದು ನನ್ನ ಭಾವನೆ. ವೇಷ ಭೂಷಣ ಮಾತುಕತೆ ಎಲ್ಲದರಲ್ಲಿಯೂ ಭಾರತೀಯತ್ವಕ್ಕಿಂತಲೂ ಆಂಗ್ಲೇಯತ್ವವೆ ಅವರ ವ್ಯಕ್ತಿತ್ವದ ಹೊರಭಂಗಿಯಾಗಿತ್ತು. ಸಾರ್ವಜನಿಕ ವೇದಿಕೆಯಲ್ಲಾಗಲಿ ಕಾಲೇಜಿನ ಸಂಘ ಸಂಸ್ಥೆಗಳಲ್ಲಾಗಲಿ ಕಡೆಗೆ ಕಾಲೇಜು ವಿದ್ಯಾರ್ಥಿಗಳೊಡನೆಯೇ ಆಗಲಿ ಕನ್ನಡದಲ್ಲಿ ಮಾತನಾಡಿ ವ್ಯವಹರಿಸುವುದು ತಮ್ಮ ಅಂತಸ್ತಿಗೆ

ತಕ್ಕದಲ್ಲವೆಂಬಂತೆ ವರ್ತಿಸುತ್ತಿದ್ದರು. ಮುಂದೆ ಕೆಲವು ವರ್ಷಗಳಲ್ಲಿಯೆ ಅವರು ಕನ್ನಡದ ಕಣ್ವರಾದ ಮೇಲೆ ಎಷ್ಟು ತೆರೆದ ಹೃದಯರಾದರೋ ಎಷ್ಟು ಸರಳ ಮನಸ್ಕರಾದರೋ ಎಷ್ಟು ಸಾಮಾನ್ಯರೊಡನೆ ಸಾಮಾನ್ಯರಾಗಿ ಹೊಕ್ಕು ಬಳಸಲು ಕಲಿತರೋ ಅಷ್ಟು ತದ್ವಿರುದ್ಧವಾಗಿ ತೋರುತ್ತಿದ್ದರು ಆಗ !

ಅವರೂ ನನ್ನ ಲೇಖನದ ಭಾಷೆ, ಭಾವ, ಅಲ್ಲಿ ಉದ್ಧೃತವಾಗಿದ್ದ ಕವನದ ಭಾಗ ಇವುಗಳನ್ನೆಲ್ಲ ಮೆಚ್ಚಿದರು. "ಸರಕಾರದ ಅಧಿಕಾರಿಗಳಾಗಿರುವ ಒಬ್ಬ ಪ್ರಾಧ್ಯಾಪಕರು ಸಂಸ್ಥಾನದ ಹೆಸರಿಗೆ ಅವಹೇಳನವಾಗುವಂತೆ ಮಾತನಾಡಿದ್ದಾರೆ ಎಂಬ ಭಾವನೆ ಬರುವಂತೆ ಮಾಡಿಬಿಟ್ಟಿದ್ದಾನೆ ಆ ಸಂಪಾದಕ. ಅದಕ್ಕೆ ನೀವೆ ಒಂದು ಪತ್ರ ಬರೆಯಬೇಕು ಆತನಿಗೆ" ಎಂದು ಹೇಳಿ ಕಾಗದ ಲೇಖನಿಗಳನ್ನು ಮುಂದಿಟ್ಟರು.

"ಏನು ಬರೆಯಬೇಕೋ ನನಗೆ ತಿಳಿಯುವುದಿಲ್ಲ. ನೀವು ಹೇಳಿದಂತೆ ಬರೆಯುತ್ತೇನೆ" ಎಂದೆ.

ಅವರು ಹೇಳತೊಡಗಿದರು ; ನಾನು ಬರೆಯ ತೊಡಗಿದೆ. ಆದರೆ ಒಂದೆರಡು ವಾಕ್ಯಗಳಲ್ಲಿಯೇ ಹೇಳುವುದನ್ನು ನಿಲ್ಲಿಸಿ, ನನ್ನ ಕೈಯಿಂದ ಕಾಗದ ಲೇಖನಿಗಳನ್ನು ವಾಪಸು ತೆಗೆದುಕೊಂಡು ಅವರೇ ಬರೆದರು.

ಅವರು ಬರೆದು ಕೊಟ್ಟಿದ್ದನ್ನು ನಾನು ಓದಿದೆ. ಕೆಲವು ವಾಕ್ಯಗಳನ್ನು ಹೊಡೆದು ಹಾಕಲು ಹೇಳಿದೆ. ಆ ವಾಕ್ಯಗಳಲ್ಲಿ ನನ್ನ ಲೇಖನವನ್ನು ಸಂಪಾದಕನು ಅಗ್ರ ಲೇಖನವನ್ನಾಗಿ ಮಾಡಿಕೊಂಡದ್ದು ತಪ್ಪು ಎಂಬ ಅಭಿಪ್ರಾಯವೂ, ಅದಕ್ಕಾಗಿ ಅವನ ವರ್ತನೆ ಖಂಡನೀಯ ಎಂಬ ಭಾವನೆಯೂ ಧ್ವನಿಸುವಂತಿತ್ತು.

ಅವರು ಬರೆದು ಕೊಟ್ಟದ್ದಕ್ಕೆ ನಾನು ತೆಪ್ಪಗೆ ರುಜು ಹಾಕುತ್ತೇನೆ ಎಂಬುದು ಅವರ ಭಾವನೆಯಾಗಿತ್ತೆಂದು ತೋರುತ್ತದೆ. ಯಾವಾಗ ನಾನು ಹಾಗೆ ಮೊದಲು ಒಪ್ಪಲಿಲ್ಲವೋ ಅವರ ಅಭಿಮಾನ ತುಸು ಕೆರಳಿದಂತಾಯ್ತು, ಈಗ ತಾನೆ ಕಾಲೇಜು ಪ್ರವೇಶಿಸಿರುವ ಈ ಹುಡುಗ ಹಲವು ವರ್ಷಗಳ ಪ್ರಾಧ್ಯಾಪಕನಾಗಿ ವಿಶ್ವವಿದ್ಯಾನಿಲಯದಲ್ಲಿ ಸುಪ್ರತಿಷ್ಠಿತ ಸ್ಥಾನ ಸಂಪಾದನೆ ಮಾಡಿರುವ ತಮಗೆ ಸಲಹೆ ಕೊಡಲು ಬರುತ್ತಿದ್ದಾನಲ್ಲಾ ಎಂದು ! ಅವರು ಬರೆದಿದ್ದ ಆ ಪತ್ರವನ್ನು ನನ್ನ ಕೈಯಿಂದ ವಾಪಸು ತೆಗೆದುಕೊಂಡು "ಹೋಗಲಿ ಬಿಡಿ, ನಾನೇ ಸಂಘದ ಅಧ್ಯಕ್ಷನಾಗಿ ಸಂಪಾದಕನಿಗೆ ಬರೆಯುತ್ತೇನೆ" ಎಂದು ಇಂಗ್ಲಿಷ್‌ನಲ್ಲಿಯೆ ಹೇಳಿದರು. ನಾನು ಎದ್ದು ನಮಸ್ಕಾರ ಹೇಳಿ ಹೊರಗೆ ಬಂದೆ.

*   *   *

೧೯೨೬ನೆ ಜನವರಿ ೧೭ನೆ ಭಾನುವಾರದ ದಿನಚರಿ :

ಇಂದು ಕಾಲೇಜಿನ ಉಪನ್ಯಾಸಮಂದಿರದಲ್ಲಿ ತುಂಬ ರೋಮಾಂಚಕಾರಕವಾದ ಚರ್ಚೆ ಏರ್ಪಟ್ಟಿತ್ತು. ಮಹಾರಾಣಿ ಕಾಲೇಜಿನ ಪ್ರತಿನಿಧಿಗಳೂ ಪ್ರಪ್ರಥಮವಾಗಿ ಭಾಗವಹಿಸಿ ಎಲ್ಲರೂ ತಮ್ಮ ತಮ್ಮ ಭಾಷಣಗಳನ್ನು ಓದಿದರು. (ಇಂಗ್ಲಿಷಿನಲ್ಲಿ !) ಉಳಿದವರೂ ಚೆನ್ನಾಗಿ ಮಾತನಾಡಿದರು. ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಇಂಡಿಯಾ ಇನ್ನೂ ಸ್ವರಾಜ್ಯಕ್ಕೆ ಅರ್ಹವಾಗಿಲ್ಲ ಎಂದೆಲ್ಲ ಭಾಷಣ ಮಾಡಿದರು. ನನಗನ್ನಿಸಿತು, ಆ ಕಥೆಯನ್ನು ಹಿಂದೆ ಎಷ್ಟೋ ಸಾರಿ ಕೇಳಿಯೂ ಆಗಿದೆ ಮತ್ತು ಮರೆತೂ ಆಗಿದೆ. (Which I think is a tale long before heard and forgotten !)

* * *

೧೯೨೬ನೆ ಮಾರ್ಚಿ ೫ನೆಯ ಶುಕ್ರವಾರ : ನಮ್ಮ ತತ್ತ್ವಶಾಸ್ತ್ರ ಸಂಘದ (Philosophical Association) ವಾರ್ಷಿಕ ಸಮಾರಂಭ ಜರುಗಿತು. ಫೋಟೋ, ತಿಂಡಿ ಮತ್ತು ಭಾಷಣ. ಭಾಷಣಕಾರರು ಪ್ರೊ॥ ಬಿ. ಎಂ. ಶ್ರೀಕಂಠಯ್ಯನವರು. ಭಾಷಣದ ವಿಷಯ 'The Burden of the prophets'. ಆ ವಿಷಯದ ಮೇಲೆ ಬಹಳ ಚೆನ್ನಾಗಿ ಮಾತನಾಡಿದರು. ಪ್ರೊ॥ ವಾಡಿಯಾ ಅಧ್ಯಕ್ಷತೆ ವಹಿಸಿದ್ದರು ...

ಭಾಷಣಕ್ಕೆ ಸ್ವಾಮಿ ಸಿದ್ಧೇಶ್ವರಾನಂದರೂ ಇತರ ಆಶ್ರಮದ ಮಿತ್ರರೂ ಬಂದಿದ್ದಂತೆ ಜ್ಞಾಪಕ. ಸಂಘದ ಕಾರ್ಯದರ್ಶಿಯಾಗಿ ಅವರನ್ನೆಲ್ಲ ನಾನೆ ಆಹ್ವಾನಿಸಿದ್ದೆ.

* * *

ಎಂ.ಎ. ತೇರ್ಗಡೆಯಾದ ಮೇಲೆಯೂ ಮುಂದೇನು ಎಂಬ ವಿಚಾರದಲ್ಲಿ ನಾನು ನಿರಾಲೋಚನೆಯಿಂದಲೆ ಇದ್ದೆ...ಒಂದು ದಿನ ಸ್ವಾಮಿಜಿ (ಸ್ವಾಮಿ ಸಿದ್ಧೇಶ್ವರಾನಂದ) ಕೇಳಿದರು, "ವಿಶ್ವವಿದ್ಯಾನಿಲಯದಲ್ಲಿ ಒಂದು ಕನ್ನಡ ಲೆಕ್ಚರರ್ ಸ್ಥಾನವಿದೆಯಂತೆ ನೀವೇಕೆ ಅರ್ಜಿಹಾಕಿಕೊಳ್ಳಬಾರದು ಅದಕ್ಕೆ ?" ಎಂದು. ಆ ಸ್ಥಾನ ಇರುವುದೂ ನನಗೆ ಗೊತ್ತಿಲ್ಲ, ಆ ವಿಚಾರವಾಗಿ ನಾನು ಯೋಚಿಸಿಯೆ ಇಲ್ಲ ಎಂಬ ನನ್ನ ಉತ್ತರಕ್ಕೆ ಅವರು "ನಾನು ಅರ್ಜಿ ತರಿಸಿ ಕೊಡುತ್ತೇನೆ, ತುಂಬಿ ಕೊಡಿ" ಎಂದರು.

ಅಂತೂ ಸ್ವಾಮೀಜಿ ಅಪ್ಲಿಕೇಷನ್ ಫಾರ್ಮ್ ತರಿಸಿದರು. ನಾನು ಅದನ್ನು ಅವರ ಮಾರ್ಗದರ್ಶನದಲ್ಲಿಯೆ ತುಂಬಿಸಿದೆ. ವಿದ್ಯಾರ್ಥಿ ಶಿಷ್ಯನೊಬ್ಬನ ಕೈಲಿ ಅದನ್ನು ವಿಶ್ವವಿದ್ಯಾಲಯಕ್ಕೆ ಕಳುಹಿಸಿದರು. ಆಗ ರಿಜಿಸ್ಟ್ರಾರ್ ಆಗಿದ್ದರು ಬಿ. ಎಂ. ಶ್ರೀ. ...

ಬಿ. ಎಂ. ಶ್ರೀ. ಅವರಿಗೆ ನನ್ನ ಸಾಹಿತ್ಯಕ ಪ್ರತಿಭೆ ಚೆನ್ನಾಗಿ ತಿಳಿದಿತ್ತು. ಅವರು ಸರಳ ರಗಳೆಯಲ್ಲಿ ಅಶ್ವತ್ಥಾಮನ್ ಬರೆಯುವುದಕ್ಕೆ ಬಹು ಮುನ್ನವೆ ನಾನು ಜಲಗಾರ, ಯಮನ ಸೋಲು, ಮಹಾರಾತ್ರಿ, ಬಿರುಗಾಳಿಗಳನ್ನು ಬರೆದಿದ್ದು, ಬಹುಶಃ ಅವರಿಗೂ ನನ್ನ ಪ್ರಯೋಗವೆ ಪ್ರೇರಣೆಯಾಗಿದ್ದರೂ ಇರಬಹುದು. ನನ್ನ ಆ ನಾಟಕಗಳು ಮಹಾರಾಜಾ ಕಾಲೇಜಿನ ಅಂಗಳದಲ್ಲಿ ಅಭಿನಯಿಸಲ್ಪಟ್ಟಾಗ ಎಷ್ಟೋ ಸಾರಿ ಅವರೇ ಅಧ್ಯಕ್ಷತೆ ವಹಿಸಿ ಅವುಗಳನ್ನು ತುಂಬ ಮೆಚ್ಚಿ ಹೊಗಳಿ ಹರಸಿದ್ದರು. ಅಲ್ಲದೆ ನನ್ನ ಮೊದಲ ಕವನ ಸಂಗ್ರಹ 'ಕೊಳಲು' ಅವರಿಂದಲೆ ಮುನ್ನುಡಿಯ ಆಶೀರ್ವಾದ ಪಡೆದಿತ್ತು. ನನ್ನಿಂದ ಕನ್ನಡ ಸಾಹಿತ್ಯಕ್ಕೆ ಮಹೋನ್ನತ ಸೇವೆ ಒದಗುತ್ತದೆ ಎಂಬ ನಂಬುಗೆ ಅವರಿಗೆ ಮುಂಗಾಣ್ಕೆಯಾಗಿತ್ತೆಂದು ತೋರುತ್ತದೆ. ಆದ್ದರಿಂದಲೆ ಅವರು ರೂಢಿಯ ಸಾಮಾನ್ಯ ನಿಯಮಗಳನ್ನು ಬದಿಗೊತ್ತಿ, ಬರಬಹುದಾದ ಟೀಕೆಗಳಿಗೂ ಸೊಪ್ಪುಹಾಕದೆ ನನ್ನನ್ನು ನೂರು ರೂಪಾಯಿ ಸಂಬಳದ ಮೇಲೆ ಇಂಟರ್‌ಮೀಡಿಯೇಟ್ ಕಾಲೇಜಿನ (ಈಗಿನ ಯುವರಾಜಾ ಕಾಲೇಜು) ಲೆಕ್ಚರರ್ ಸ್ಥಾನಕ್ಕೆ ನೇಮಿಸಿದ್ದರು.

ನನ್ನ ನೇಮಕದ ಆರ್ಡರನ್ನು ಕಳುಹಿಸುವ ಮುನ್ನ ಆಫೀಸಿನ ಮುಖ್ಯ ಕರಣಿಕನು – Superintendent – ಆತ ಜಾತಿ ಬ್ರಾಹ್ಮಣ – ರಿಜಿಸ್ಟ್ರಾರ್ ಬಳಿಗೆ ನೇಮಕಾಜ್ಞೆಯನ್ನು ತೆಗೆದುಕೊಂಡು ಹೋಗಿ, ನಿಯಮ ಭಂಗವಾದದ್ದನ್ನು ತೋರಿಸಿ "ಸಾರ್, ರೂಲ್ಸಿನ ಪ್ರಕಾರ ಎಲ್ಲರನ್ನೂ ತಿಂಗಳಿಗೆ ೭೫ ರೂಪಾಯಿಯಂತೆ ನೇಮಕ ಮಾಡಬೇಕು. ಇವರಿಗೆ ೧೦೦ ರೂಪಾಯಿ ಮಾಡಿಬಿಟ್ಟಿದ್ದೀರಿ. ಆಮೇಲೆ 'ಅಬ್ಜೆಕ್ಷನ್' ಬರುತ್ತೆ..." ಎಂದೆಲ್ಲ ತನ್ನ ಕರ್ತವ್ಯ ಪ್ರಜ್ಞೆಯನ್ನು ಪ್ರದರ್ಶನ ಮಾಡಿದನಂತೆ. ಅದಕ್ಕೆ ಅವರು ಮುಗುಳು ನಗುತ್ತಾ ಹೇಳಿದರಂತೆ "ಮಿಸ್ಟರ್...ಯ್ಯ ಎಲ್ಲಿ ಸಿಗುತ್ತಾರ್ರಿ ನಿಮಗೆ ಅವರಂಥವರು, ಸಾವಿರ ರೂಪಾಯಿ ಕೊಟ್ಟರೂ ? ... ಇವೊತ್ತೇ ಆರ್ಡರ್ ಕಳಿಸಿಬಿಡಿ, ಆಶ್ರಮಕ್ಕೆ."

* * *

೬-೧೧-೧೯೩೨.

ಬೆಳಿಗ್ಗೆ ಬಿ. ಎಂ. ಶ್ರೀಯವರ ಮನೆಗೆ ಹೋದೆ. ಅವರು ತಮ್ಮ ಹೃದಯದ ತಾಪವನ್ನೆಲ್ಲ ತೋಡಿಕೊಂಡರು. ಕನ್ನಡ ಎಂದರೆ ಅವರಿಗೆ ಪ್ರಾಣ. ಅದರ ಗೆಲವೇ ಅವರ ಜೀವನದ ಕೊನೆಯ ಗುರಿ.

* * *

ಆ ವರ್ಷದ (೧೯೩೬) 'ಮಲೆನಾಡು ಒಕ್ಕಲಿಗರ ಯುವಕರ ಸಂಘ'ದ ವಾರ್ಷಿಕೋತ್ಸವವನ್ನು ಮೇ ತಿಂಗಳ ಕೊನೆಯ ಭಾಗದಲ್ಲಿ ಇಂಗ್ಲಾದಿಯಲ್ಲಿ ನಡೆಸಲು

ನಿಶ್ಚಯಿಸಿದ್ದರು. ಆ ಸಂದರ್ಭದಲ್ಲಿ ಅಧ್ಯಕ್ಷತೆ ವಹಿಸಿ ಉಪನ್ಯಾಸ ನೀಡಲು ಪೂಜ್ಯ ಬಿ. ಎಂ. ಶ್ರೀಕಂಠಯ್ಯನವರನ್ನು ಕೇಳಿಕೊಳ್ಳಲಾಗಿತ್ತು. ನವೋದಯದ ಆ ಕಾಲ ಬಿ. ಎಂ. ಶ್ರೀಯವರ ಜೀವನದಲ್ಲಿ ಎಂತಹದ್ದಾಗಿತ್ತೆಂದರೆ, ತಮ್ಮ ಹಿರಿಯತನ, ಆಯಾಸ, ವಯಸ್ಸು, ಅನಾನುಕೂಲ, ಪ್ರಯಾಣಶ್ರಮ, ಮೇಲು, ಕೀಳು, ವ್ಯಯ ಮತ್ತು ನಷ್ಟ ಯಾವುದನ್ನೂ ಲೆಕ್ಕಿಸದೆ, ಕನ್ನಡದ ಏಳಿಗೆಗಾಗಿ ಅವರು ಕರೆದಲ್ಲಿಗೆ ದುಂಬಾಲು ಬಿದ್ದು ಹೋಗುತ್ತಿದ್ದರು ! ಇನ್ನು ನಾವೆಲ್ಲ ಕೆಲವು ಶಿಷ್ಯರು ಜೊತೆ ಇದ್ದು ಭಾಗವಹಿಸುತ್ತೇವೆ ಎಂದು ಗೊತ್ತಾದ ಮೇಲೆ ಶಿಷ್ಯವಾತ್ಸಲ್ಯವಶರಾಗಿ ಒಪ್ಪದೆ ಇರುತ್ತಾರೆಯೆ ?

ಮರುದಿನ (೨೪-೫-೧೯೩೬) ಸಂಘದ ವಾರ್ಷಿಕೋತ್ಸವ. ಆದರೆ ಸಕಾಲಕ್ಕೆ ಬಿ. ಎಂ. ಶ್ರೀಯವರ ಆಗಮನವಾಗಲಿಲ್ಲ. ಅವರು ಬೆಳಗ್ಗೆಯೇ ಶಿವಮೊಗ್ಗದಿಂದ ಸಮಯಕ್ಕೆ ಸರಿಯಾಗಿ ಇಂಗ್ಲಾದಿ ತಲುಪಲು (ಸುಮಾರು ನಾಲ್ವತ್ತು ಮೈಲಿ) ಕಾರು ಗೊತ್ತು ಮಾಡಿ ಹೊರಟರಂತೆ. ಆದರೆ ಕಾರು ಮಂಡಗದ್ದೆಯ ಹತ್ತಿರ ತೊಂದರೆ ಕೊಟ್ಟಿತಂತೆ. ರಿಪೇರಿ ಮುಗಿಯುವಷ್ಟರಲ್ಲಿ ಸಾಯಂಕಾಲವೆ ಆಯಿತಂತೆ.

ಅತ್ತ ಇಂಗ್ಲಾದಿಯಲ್ಲಿ ಶ್ರೀಯವರಿಗಾಗಿ ಕಾದು ಕಾರ್ಯಕ್ರಮವನ್ನು ಒಂದು ಗಂಟೆಯ ಹೊತ್ತು ಮುಂದೂಡಿದೆವು. ಕಡೆಗೆ ಏನೋ ತೊಂದರೆಯಾಗಿರಬಹುದು, ತಡವಾಗಿ ಬಂದರೂ ಆಮೇಲೆ ಅವರನ್ನೇ ಅಧ್ಯಕ್ಷರನ್ನಾಗಿ ಮಾಡಬಹುದು ಎಂದು ನಿರ್ಣಯಿಸಿ, ಪೂಜ್ಯ ಸ್ವಾಮಿ ಸಿದ್ಧೇಶ್ವರಾನಂದರನ್ನೆ ಅಧ್ಯಕ್ಷತೆ ವಹಿಸುವಂತೆ ಕೇಳಿಕೊಂಡು ಕಾರ್ಯ ನೆರವೇರಿಸಿದೆವು.

ಅಂತೂ ಎಲ್ಲ ಮುಗಿದು ಬೈಗಾಗುತ್ತಿದ್ದಾಗ ಬಿ. ಎಂ. ಶ್ರೀಯವರು ಬಂದರು. ಶ್ರೀಯವರು ಮಾರ್ಗಾಯಾಸ ಪರಿಹಾರಕ್ಕಾಗಿ ಸ್ವಲ್ಪಮಟ್ಟಿನ 'ಅಜ್ಜಯ್ಯನ ಅಭ್ಯಂಜನ' ಸದೃಶವಾದ ಎಣ್ಣೆ ಸ್ನಾನವನ್ನೆ ಮಾಡಿ ವಿಶ್ರಮಿಸಿದರು.

ಆದರೆ ಆ ರಾತ್ರಿಯನ್ನೂ ನಿರುಪಯೋಗಗೊಳಿಸಲಿಲ್ಲ. ಗ್ಯಾಸ್‌ಲೈಟ್‌ಗಳ ಉಜ್ವಲ ಕಾಂತಿಯಲ್ಲಿ ಬೆಳಗಿನ ಸಭೆಯನ್ನೆ ಬಿ. ಎಂ. ಶ್ರೀಯವರ ಅಧ್ಯಕ್ಷತೆಯಲ್ಲಿ ಹ್ರಸ್ವವಾಗಿ ಮುಂದುವರಿಸಿ ಕೈಕೊಂಡೆವು. ಜೊತೆಗೆ ಭಾವಗೀತೆಗಳ ಹಾಡುವಿಕೆ, ಕೃಷ್ಣಗಿರಿ ಕೃಷ್ಣರಾಯರ ಭಾರತವಾಚನ ಇತ್ಯಾದಿ ಮನರಂಜನೆಯ ಕಾರ್ಯಗಳೂ ಜರುಗಿದವು.

ರಾತ್ರಿ ಮಲಗುವುದು ಸ್ವಲ್ಪ ಹೊತ್ತಾಗಿತ್ತಾದರೂ ಬೆಳಗ್ಗೆ ದುಂಡಿ ನವಿಲುಕಲ್ಲಿಗೆ ಹೋಗಿ ಸೂರ್ಯೋದಯ ನೋಡುವ ನನ್ನ ಉತ್ಸಾಹದ ಕಾರ್ಯಕ್ರಮಕ್ಕೆ ವಯಸ್ಕರಾಗಿದ್ದ ಬಿ. ಎಂ. ಶ್ರೀಯವರೂ ಹೃತ್ಪೂರ್ವಕ ಬೆಂಬಲ ವಿತ್ತರು.

ಬೆಳಗಿನಜಾವ ನಾಲ್ಕು ಗಂಟೆಗೇ ಎದ್ದು ಅವರೆಲ್ಲ ಗ್ಯಾಸ್‌ಲೈಟು ಹಿಡಿದಿದ್ದ ಆಳುಗಳೊಡನೆ ಕಾಡುದಾರಿಯಲ್ಲಿ ಹೊರಟರು ... ತುಸು ಸ್ಥೂಲಕಾಯರಾಗಿದ್ದು, ಆಯಾಸಗೊಂಡಿದ್ದರೂ ಬಿ. ಎಂ. ಶ್ರೀಯವರು ನಗೆ ಮಾತಾಡುತ್ತಾ ತರುಣರೆಂಬಂತೆ ಉತ್ಸಾಹದಿಂದಲೆ ಗಿರಿನೆತ್ತಿಗೆ ಏರಿದ್ದರು!

ಉಷೋದಯ ಅರುಣೋದಯ ಸೂರ್ಯೋದಯಗಳ ದಿವ್ಯಮುಹೂರ್ತಗಳಲ್ಲಿ ಮಲೆನಾಡಿನ ಕಾಡುಕಣಿವೆ ಮಂಜಿನ ಲೀಲೆಗಳು ದೃಗ್ಗೋಚರವಾಗುವ ಸ್ವರ್ಗೀಯ ಸೌಂದರ್ಯಾಸ್ವಾದನೆಯ ಅನಂತರ, ಹಕ್ಕಿಗಳಿಂಚರವನ್ನಾಲಿಸುತ್ತಾ ಮನೆಯ ಕಡೆಗೆ ಇಳಿದು ಬಂದೆವು. ಧನ್ಯವಾಗಿತ್ತು ಆ ೨೫-೫-೧೯೩೬ರ ಪ್ರಾತಃಕಾಲ!

ಆ ದಿನ ಪೂರ್ವಾಹ್ನದಲ್ಲಿ ವಾರ್ಷಿಕೋತ್ಸವದ ಸಭೆ ಎರಡನೆಯ ದಿನವೂ ಮುಂದುವರಿಯಿತು. ಬಿ. ಎಂ. ಶ್ರೀಯವರೆ ಅಧ್ಯಕ್ಷತೆ ವಹಿಸಿದ್ದರು. ಸ್ವಾಮೀಜಿಯವರೂ ಭಾಷಣ ಮಾಡಿದರು.

ಅವೊತ್ತೇ ಸಾಯಂಕಾಲ ಕುಪ್ಪಳಿಗೆ ಹೋಗುವ ಕಾರ್ಯಕ್ರಮವಿತ್ತು. ನನ್ನ ಅನೇಕ ಕವನಗಳಿಗೆ ಪ್ರೇರಕವೂ, ವಸ್ತುವೂ ಆಗಿದ್ದ 'ಕವಿಶೈಲ' ಮತ್ತು 'ಸಂಜೆಗಿರಿ'ಗಳು, 'ಕಾಡು ಮುತ್ತು ಕೊಡುತಲಿರುವ ಸೊಬಗು ವೀಡು ನನ್ನ ಮನೆ' – ಇವೆಲ್ಲವನ್ನೂ ನೋಡಬೇಕೆಂಬ ವಾತ್ಸಲ್ಯಪೂರ್ಣ ಕುತೂಹಲವಿತ್ತು ಬಿ. ಎಂ. ಶ್ರೀ. ಆದಿಯಾಗಿ ಅತಿಥಿಗಳಾಗಿ ಬಂದಿದ್ದ ಬಯಲುಸೀಮೆಯ ಮಿತ್ರರಿಗೆ.

ಕುಪ್ಪಳಿ ಮನೆಗೆ ಹೋದವರು ಮೊದಲು ಉಪ್ಪರಿಗೆಯ ಮೇಲೆ ಸ್ವಲ್ಪ ವಿಶ್ರಮಿಸಿಕೊಂಡರು. ಅನಂತರ ಇಡೀ ಗುಂಪು 'ಕವಿಶೈಲ'ಕ್ಕೆ ನಡೆದುಕೊಂಡೇ ಏರಿದೆವು. ಅದೊಂದು ದಿಬ್ಬಣವೆ ಆಗಿತ್ತು, ದಿಬ್ಬಣಗಲ್ಲು ಹೆಸರಿನ ಓರೆಯನ್ನು ಏರುವಾಗ!

ದಿಬ್ಬಣಗಲ್ಲಿನಿಂದ ಮುಂದೆ ನಡೆದು, ನಿಂತು, ದೂರದ ದಿಗಂತದಲ್ಲಿ ದಿಗ್ದಂತಿಯೆಂಬಂತೆ ಎದ್ದು ನಿಂತಿದ್ದ 'ಕುಂದದ ಗುಡ್ಡ'ವನ್ನು ಮೆಚ್ಚಿ ನೋಡಿದರು. ಅಲ್ಲಿಂದ ಮುಂದೆ ನನ್ನ 'ಶಿಲಾತಪಸ್ವಿ' ಎಂಬ ಕವನಕ್ಕೆ ಆವೇಶವಿತ್ತು ಒಂದು ಆಳೆತ್ತರ ನಿಂತ ಮನುಷ್ಯಾಕಾರದ ಕಲ್ಲನ್ನೂ ತೋರಿಸಿದೆ. ಮತ್ತೆ ಮುಂದೆ ನಡೆದು 'ಕವಿಶೈಲ' ಬಂಡೆಯ ಮೇಲೆ ಪಶ್ಚಿಮ ದಿಗಂತ ಮುಖಿಗಳಾಗಿ ಕುಳಿತೆವು. ಕುಪ್ಪಳಿ ಮನೆಯ ಇದಿರಿಗೇ ಗೋಡೆಯಂತೆ ನೇರವಾಗಿ ಎದ್ದಂತಿದ್ದ ಗುಡ್ಡವನ್ನು ಮುತ್ತಿದ್ದ, ಮುದ್ದೆ ಮುದ್ದೆ ಹಸುರನ್ನ ಮೆತ್ತಿದಂತಿದ್ದ, ಸಾರ್ವಕಾಲಿಕ ಶ್ಯಾಮಲ ಅರಣ್ಯಶ್ರೇಣಿ ಮೆರೆದಿತ್ತು. ಮುಳುಗುತ್ತಿದ ಸೂರ್ಯನ ಸುಂದರ ಶೋಭೆಯನ್ನು

ದೃಷ್ಟಿಸುತ್ತಾ 'ಕವಿಶೈಲ'ದ ಅರೆಬಂಡೆಯ ಮೇಲೆ ಬಿ. ಎಂ. ಶ್ರೀ. ಆದಿಯಾಗಿ ಎಲ್ಲರೂ ತಂತಮ್ಮ ಹೆಸರಿನ ಪ್ರಥಮಾಕ್ಷರಗಳನ್ನು ಕಲ್ಲುಗಳಿಂದ ಹೊಡೆದು ಕೆತ್ತಿದರು.*

---

* ಕುವೆಂಪು ಅವರ 'ನೆನಪಿನ ದೋಣಿಯಲ್ಲಿ' : ಪುಟ ೪೩೪–೪೪೬ ; ೫೬೨ ; ೫೪೯ ; ೮೪೫–೮೪೭ ; ೧೧೦೧, ೧೧೦೩–೧೧೦೬ ಈ ಪುಟಗಳಲ್ಲಿರುವ ವಿಷಯದ ಸಂಗ್ರಹ ರೂಪ.

# ಆಚಾರ್ಯ 'ಶ್ರೀ'ಯವರು

– ಎಸ್. ವಿ. ರಂಗಣ್ಣ

ಮಹಾನುಭಾವ ಬಿ. ಎಂ. ಶ್ರೀಕಂಠಯ್ಯನವರನ್ನು ನಿಜವಾದ ಅರ್ಥದಲ್ಲಿ 'ಆಚಾರ್ಯ'ರೆಂದು ಕರೆಯಬಹುದು; ಮಹಾಭಾರತದ ಭೀಷ್ಮ ದ್ರೋಣರಂತೆ ಅವರೂ ಉಪಮಾತೀತ ಆಚಾರ್ಯರು. ಕ್ಲುಪ್ತ ತರಗತಿಗಳಲ್ಲಿ ಕ್ಲುಪ್ತ ಘಂಟೆಗಳಲ್ಲಿ ಅವರ ಪಾಠವನ್ನು ಕೇಳುತ್ತಿದ್ದುದು ಹಾಗಿರಲಿ, ಅವರ ಸಾರ್ವಜನಿಕ ಭಾಷಣಗಳನ್ನು ಆಲಿಸುತ್ತಿದ್ದುದೂ ಹಾಗಿರಲಿ, ಅವರನ್ನು ನೋಡಿದೊಡನೆಯೇ ಒಂದು ಬಗೆಯ ಮಹದ್‌ಗೌರವ ನೋಟಕನನ್ನು ಹಿಡಿದು ಬಿಡುತ್ತಿತ್ತು, ಅಪೂರ್ವ ವ್ಯಕ್ತಿತ್ವದ ವ್ಯಕ್ತಿ ಶ್ರೇಷ್ಠನನ್ನು ಸಂದರ್ಶಿಸಿದಂತೆ ಭಾಸವಾಗುತ್ತಿತ್ತು. ಎಂದಮೇಲೆ ಅವರ ಸಾತ್ವಿಕ ಸಾರ್ವಭೌಮತ್ವಕ್ಕೆ ಯಾವ ಅಂಶದಲ್ಲೂ ಕುಂದು ಇರಲಿಲ್ಲ. ಎಲ್ಲೆಲ್ಲೂ ಅವರ ಮಾತೇ ಮಾತು, ಎಲ್ಲರೂ ಅವರಿಗೆ ತಲೆಬಾಗುವವರೇ! ನಾನು ಇಂಗ್ಲಿಷ್ ಎಂ. ಎ. ತರಗತಿಯಲ್ಲಿ ಅವರ ವಿದ್ಯಾರ್ಥಿಗಳಲ್ಲಿ ಒಬ್ಬನಾಗಿದ್ದೆ ಎರಡು ವರ್ಷ ಪೂರ್ತ. ಆಮೇಲೆ ಹಲವು ಸಂವತ್ಸರ ಅವರು ಅಧ್ಯಕ್ಷರಾಗಿ ನಡೆಸುತ್ತಿದ್ದ 'ಇಂಗ್ಲಿಷ್ ಸೆಮಿನಾರ್' ಎಂಬ ವ್ಯಾಸಂಗಗೋಷ್ಠಿಗೆ ನಾನು ಕಾರ್ಯದರ್ಶಿಯೂ ಖಜಾಂಚಿಯೂ ಆಗಿದ್ದೆ.

ನಾವಿಬ್ಬರೂ ಬಬ್ಬೂರು ಕಮ್ಮೆಯೆಂಬ ಒಂದೇ ಪಂಗಡಕ್ಕೆ ಸೇರಿದವರು. ಹೀಗೆ ನಮ್ಮಿಬ್ಬರ ಬಾಂಧವ್ಯ ನಿಕಟ ಬಾಂಧವ್ಯವಾಗಿತ್ತು, ವಿಶಿಷ್ಟತರಹದಾಗಿತ್ತು.

ಹೀಗಿರುವಾಗ ಅವರನ್ನು ವಿರೋಧಿಸುವುದು, ಅವರ ಅಭಿಮತಕ್ಕೆ ಎದುರಾಗಿ ನಡೆದುಕೊಳ್ಳುವುದು, ಅವರ ಅತಿ ಸೂಕ್ಷ್ಮ ಮನಸ್ಸಿಗೆ ಚಿಂತೆ ಉಂಟುಮಾಡುವುದು ಎಂದಿಗಾದರೂ ಸಾಧ್ಯವೆ? ಸಾಮಾನ್ಯವಾಗಿ ಅದು ಸಾಧ್ಯವಾಗುತ್ತಿರಲಿಲ್ಲ. ಆದರೂ ಕೆಲವೊಮ್ಮೆ ನಾನು ನನ್ನ ಆತ್ಮಸಾಕ್ಷಿಗನುಗುಣವಾಗಿ ವರ್ತಿಸಬೇಕಾಗಿ ಬಂದಿತ್ತು; ಹಾಗೇ ನಡೆದುಕೊಂಡೆ; ಅವರಿಂದ "ಏನಪ್ಪ ನೀವು, ಬಹಳ ಜಿಗುಟು, ಪಟ್ಟು ಹಿಡಿದದ್ದನ್ನು ಬಿಡುವುದೇ ಇಲ್ಲ!" ಎಂಬ ನಿಂದಾಸ್ತುತಿಯನ್ನೂ ಪಡೆದುಕೊಂಡೆ. ೧೯೩೬ರ

ಸುಮಾರಿನಲ್ಲಿ ಮೈಸೂರು ರಾಜ್ಯ ರಾಜಕೀಯ ಗೊಂದಲದಿಂದ ತುಂಬಿತ್ತು. ಕಾಂಗ್ರೆಸ್ ಮುಖಂಡರು ಸ್ವಾತಂತ್ರ್ಯ ಹೋರಾಟ ಹೂಡಿದ್ದರು. ಕಾಂಗ್ರೆಸ್ ಧ್ವಜವನ್ನು ಹಾರಿಸುವ ಪ್ರಯತ್ನ ನಡೆಸಿ ಲಾಠೀ ಚಾರ್ಜು ಗೋಲೀಬಾರ್ ಮುಂತಾದ ಕಹಿ ಪ್ರಸಂಗಗಳು ಜರುಗಿಹೋದವು. ಆ ಸಮಯದಲ್ಲಿ ಒಂದು ದಿವಸ 'ಶ್ರೀ'ಯವರು "ನಾವು ಕನ್ನಡ ಬಾವುಟವನ್ನು ಪರಿಷತ್ ಕಟ್ಟಡದ ಆವರಣದಲ್ಲಿ ಹಾರಿಸೋಣ !" ಎಂಬ ಸೂಚನೆಯನ್ನು ಕಾರ್ಯಸಮಿತಿಯ ಮುಂದಿಟ್ಟರು. ಎಂಟು-ಹತ್ತು ಸಮಿತಿ ಸದಸ್ಯರಲ್ಲಿ ಎಲ್ಲರೂ ಸುಮ್ಮನೆ ಕುಳಿತಿದ್ದರು. ಕಾರ್ಯದರ್ಶಿಯಾಗಿದ್ದ ನಾನು ಧೈರ್ಯದಿಂದ ನುಡಿದೆ, "ಸ್ವಾಮಿ ಈಗ ಆ ಕೆಲಸ ಬೇಡ, ಮುಂದೆ ಪರಿಸ್ಥಿತಿ ಅನುಕೂಲವಾದಾಗ ನೋಡೋಣ." ! ಇತರ ಸದಸ್ಯರಿಗೂ ಆಗ ಚಳಿ ಬಿಟ್ಟಿತು. ಒಬ್ಬೊಬ್ಬರಾಗಿ ನನ್ನ ಸಲಹೆಯನ್ನು ಅನುಮೋದಿಸಿದರು. ಧ್ವಜ ಏರಿಸುವ ಕಾರ್ಯ ಜನಿಸುವ ಮುಂಚೆಯೇ ಮೃತ್ಯು ವಶವಾಯ್ತು. 'ಶ್ರೀ'ಯವರು ಪಟ್ಟು ಹಿಡಿಯು ವುದರಲ್ಲಿ ನಿಸ್ಸೀಮರೇ. ಕನ್ನಡ ಸಾಹಿತ್ಯದಿಂದ ಆಯ್ದ ಭಾಗಗಳನ್ನು ಸಂಕಲಿಸಿ ಪುಸ್ತಕಕ್ಕೆ 'ಕನ್ನಡ ಬಾವುಟ' ಎಂಬ ಹೆಸರನ್ನಿಟ್ಟರು. ಅದು ನನಗೂ ತುಂಬಾ ಹರ್ಷವನ್ನು ತಂದುಕೊಟ್ಟಿತು ಎಂದು ಬೇರೆ ಹೇಳಬೇಕಾಗಿಲ್ಲ.

ಒಂದು ರಾತ್ರಿ ನಾನು ಟೆನಿಸ್ ಆಟವನ್ನೂ, ಸಂಗಾತಿಗಳೊಂದಿನ ಮಾತುಕತೆ ಯನ್ನೂ ಮುಗಿಸಿಕೊಂಡು ಮನೆಗೆ ಬಂದಾಗ ನನಗೊಂದು ಅತ್ಯವಸರದ ಕರೆ ಕಾದಿತ್ತು. ಶ್ರೀಕಂಠಯ್ಯನವರು ತಮ್ಮನ್ನು ಕೂಡಲೇ ಕಾಣಬೇಕೆಂಬ ಆದೇಶ. ಅವರು ಎರಡು ಬಾರಿ ದೂತನನ್ನು ಕಳಿಸಿದ್ದರಂತೆ. ಅವರ ಮನೆಗೆ ನಾನು ಹೋದದ್ದು ಸುಮಾರು ಹತ್ತು-ಹತ್ತೂವರೆ ಗಂಟೆ ಹೊತ್ತಿಗೆ. ಅವರು ಹೇಳಿದರು – "ಇನ್ನೇನು ಇಲ್ಲಪ್ಪಾ, ನಿಮ್ಮ ಸಲಹೆ ಕೇಳಲೇಬೇಕು ನಾನು, ಅದಕ್ಕೋಸ್ಕರ ಇಷ್ಟು ಆತುರ. ವೈಸ್‌ಛಾನ್ಸಲರ್ ಸೀಲ್ ಯೂನಿವರ್ಸಿಟಿ ರಿಜಿಸ್ಟ್ರಾರ್ ಹುದ್ದೆಯನ್ನು ನನಗೆ ಕೊಡಲು ಇಷ್ಟಪಟ್ಟಿದ್ದಾನೆ. ಒಪ್ಪಿಕೊಳ್ಳಲೇ ?" ಅವರಿಗಿಂತ ಎಷ್ಟೋ ಚಿಕ್ಕವನಾದ ನಾನು ನನ್ನ ಅಭಿಮತವನ್ನು ಹೇಳುವುದೇ ! ಅದನ್ನು ಅವರು ಕೇಳುವುದೇ ? ನನಗೆ ಕೊಂಚ ಭೀತಿಯೂ ಉಂಟಾಯಿತು. ಅದನ್ನು ಒತ್ತಟ್ಟಿಗೆ ಸರಿಸಿ ನಾನು ಸ್ಪಷ್ಟವಾಗಿ ಹೇಳಿದೆ. "ಎಲ್ಲಾದರೂ ಉಂಟೇ ಸಾರ್? ಸಾಹಿತ್ಯ ಸಂಸ್ಕೃತಿಗಳ ಬೋಧನೆಯ ಉತ್ಕೃಷ್ಟ ಕಾರ್ಯವನ್ನು ಅದ್ಭುತ ವಾಗಿ ನೆರವೇರಿಸುತ್ತಿದ್ದೀರಿ. ರಿಜಿಸ್ಟ್ರಾರ್ ಕಚೇರಿಯಲ್ಲಿ ಕುಳಿತು ಕಾರಕೂನನ ಇಂದ-ಗೆ ಕೆಲಸ ಮಾಡುವುದೇ." ಅವರಿಗೂ ನನಗೂ ಒಂದು ವಾಗ್ವಾದ ಹಲವು ನಿಮಿಷ ನಡೆಯಿತು. ಎರಡು ಮುಖ್ಯ ಅಂಶಗಳನ್ನು ನನ್ನ ಮುಂದಿಟ್ಟು ನನ್ನನ್ನು ಅವರು ಒಪ್ಪಿಸಿದರು. ಅವರ ಸಂಬಳ ತಕ್ಷಣ ರೂ. ೫೦೦–೧೦೦೦ ಶ್ರೇಣಿಗೆ ಬಡ್ತಿಹೊಂದು ವುದು; ಕನ್ನಡಕ್ಕೆ ಹೆಚ್ಚಿನ ಸ್ಥಾನಮಾನ ಗಳಿಸಿಕೊಡುವುದು. ಎರಡನೆಯ ಅಂಶವನ್ನು ಅವರು ನಿರೂಪಿಸಿದ ಕೂಡಲೇ ನಾನು "ಹಾಗಾದರೆ ರಿಜಿಸ್ಟ್ರಾರ್ ಕೆಲಸ ಒಪ್ಪಿಕೊಳ್ಳಿ !"

ಎಂದು ಹೇಳಿದಾಗ ಅವರಿಗೆ ತೃಪ್ತಿ ಉಂಟಾಯಿತು. ರಿಜಿಸ್ಟ್ರಾರ್ ಆದಮೇಲೆಯೇ ಕನ್ನಡ ಎಂ. ಎ. ಶುರುವಾಯಿತು. ಪ್ರಚಾರ ಪುಸ್ತಕ ಮಾಲೆ, ಕನ್ನಡ ಗ್ರಂಥ ಪ್ರಕಟನೆ ಮುಂತಾದುವು ಬಿರುಸಿನ ವೇಗದಲ್ಲಿ ನಡೆಯಲಾರಂಭಿಸಿದವು.

ಅವರ ಜೀವನದ ಕೊನೆಯ ದಿವಸಗಳಲ್ಲಿ ನನ್ನ ಕರ್ತವ್ಯವನ್ನು ಸಮರ್ಪಕವಾಗಿ ಎಸಗದೆ ಹೋದುದಕ್ಕಾಗಿ ನನ್ನ ವಿಷಾದ ಎಂದಿಗೂ ಕುಗ್ಗಲಾರದು. ನೌಕರಿಯಿಂದ ನಿವೃತ್ತರಾಗಿ ಅವರು ಹಾಯಾಗಿ ತಮ್ಮಲ್ಲಿಗೆ ಬಂದವರಿಗೆ ಜ್ಞಾನದಾನ ನೀಡುತ್ತಾ 'ನೂರುಕಾಲ' ಬಾಳಲಿ ಎಂಬ ಹಾರೈಕೆ ನನ್ನಂತಹ ಹಲವು ಮಂದಿಗೆ ಇತ್ತು. ಅದು ಸಫಲವಾಗಲಿಲ್ಲ. ವಿಧಾತನ ಹಂಚಿಕೆಯಿಂದ ಕಾಲೇಜಿನ ಪ್ರಾಧ್ಯಾಪಕರಾಗಿದ್ದಾಗ ಅವರಿಗೆ ಒಂದೆರಡು ಬಾರಿ ಪ್ರಾಂಶುಪಾಲರಾಗುವ ಅವಕಾಶ ಲಭ್ಯವಾಗಿತ್ತು. ಆದರೆ ಅವೆಲ್ಲ ಕೆಲವೇ ತಿಂಗಳು ಮಾತ್ರ. ಮೈಸೂರಿನಲ್ಲಿ ಆಗ ಬ್ರಿಟನ್ನಿನಿಂದ ಬಂದವರ ಕೈಯೇ ಮೇಲ್ಗೈಯಾಗಿತ್ತು, ಇಂಗ್ಲಿಷ್ ಪಾಠ ಹೇಳುವುದಕ್ಕೆ ಅಧ್ಯಾಪಕ ಇಂಗ್ಲೆಂಡ್‌ನಿಂದಲೇ ಬರಬೇಕು ಎಂಬ ವಿಕಾರ ತತ್ವ ಆಡಳಿತ ವರ್ಗದವರನ್ನು ಮರುಳುಮಾಡಿತ್ತು. ಒಬ್ಬಾನೊಬ್ಬ ಸ್ಕಾಟ್ಲೆಂಡ್‌ನವ ಹೇಗೊ ಇಂಗ್ಲಿಷ್ ಅಧ್ಯಾಪಕನಾಗಿ ಹುದ್ದೆ ಸಂಪಾದಿಸಿಕೊಂಡಿದ್ದ. ಅವನ ಪಾಂಡಿತ್ಯ ಅಷ್ಟಕ್ಕಷ್ಟೆ ಆದರೂ ಅವನೊಮ್ಮೆ ಶ್ರೀಯವರನ್ನ ಇಂಗ್ಲಿಷ್ ಪ್ರಾಧ್ಯಾಪಕರಾಗಿ ನೇಮಿಸಿದ್ದು ತಪ್ಪು ಎಂದು ಉದ್ಗಾರ ತೆಗೆದ. 'ಅಲ್ಪವಿದ್ಯಾ ಮಹಾಗರ್ವಿ.' 'ಶ್ರೀ'ಯವರ ಪರಿಸರ ವಾತಾವರಣಗಳಲ್ಲಿ ಇಂಥ ಅತಾರ್ಕಿಕ ಭಾವನೆಗಳೂ ತಾಂಡವವಾಡುತ್ತಿದ್ದವು. ಆದರೂ ವಿಚಾರವಂತರೆಲ್ಲರಿಗೂ ಶ್ರೀಯವರ ಎತ್ತರವೂ ಮಹಿಮೆಯೂ ಅಸಂದಿಗ್ಧವಾಗಿ ಅರಿಮೆಯಾಗಿತ್ತು. ವಿದೇಶಿಯರಲ್ಲಿಯೇ ಒಬ್ಬ "ಶ್ರೀಕಂಠಯ್ಯನವರು ದಿಟವಾಗಿ 'ಆಕ್ಸ್‌ಫರ್ಡ್'ನಲ್ಲೊ 'ಕೇಂಬ್ರಿಜ್'ನಲ್ಲೊ ಪ್ರೊಫೆಸರ್ ಆಗಿರಬೇಕಿತ್ತು" ಎಂದು ಘಂಟಾಘೋಷವಾಗಿ ಹೇಳಿದ. ಗುಣಕ್ಕೆ ಮತ್ಸರವೇಕೆ ? ಅದಂತಿರಲಿ, ಶ್ರೀಯವರಿಗೆ ಪ್ರಿನ್ಸಿಪಾಲಗಿರಿಯ ಹಂಬಲ ನಾಟಿ ಕುಳಿತಿತ್ತು ಎಂಬದು ನಿಜ. ಆ ಸಂದರ್ಭದಲ್ಲಿ ಧಾರವಾಡದ ಕೆಲವರು ಹೊಸದಾಗಿ ತೆರೆಯಲು ಅಪೇಕ್ಷಿಸಿದ ಕಾಲೇಜಿಗೆ ಸೂಕ್ತ ಪ್ರಾಂಶುಪಾಲರು ಅಗತ್ಯವಾಯಿತು. ಅವರು ಬೆಂಗಳೂರಿಗೆ ಬಂದು ಅಲ್ಲಿನ ಒಬ್ಬಿಬ್ಬರು ಮಹನೀಯರ ಬೆಂಬಲ ಪಡೆದು ಶ್ರೀಯವರನ್ನು ಸಂಧಿಸಿದರು. ಅದೊಂದು ವಿಚಿತ್ರ ಸಂಘಟನೆ. ನಾನೂ ನನ್ನ ಮಿತ್ರರೂ ಶ್ರೀಯವರನ್ನು ಭೇಟಿಯಾಗಿ ಅದೂ ಇದೂ ಮಾತಿನ ಜೊತೆಗೆ "ನೀವು ವಿಶ್ರಾಂತಿ ತೆಗೆದುಕೊಳ್ಳಿ" ಎಂದು ಹೇಳಿ ಅವರು ಅದಕ್ಕೆ ಒಪ್ಪಿಕೊಂಡರೆಂಬ ನೆಮ್ಮದಿಯಿಂದ ಇದ್ದೆವು. ಆದರೆ ಕೆಲವೇ ದಿವಸಗಳ ತರುವಾಯ ಅವರು ಧಾರವಾಡಕ್ಕೆ ತೆರಳಿದರೆಂಬ ಸುದ್ದಿ ನಮಗೆ ದಂಗುಬಡಿಸಿತು. ಒಂದೆರಡೇ ವರ್ಷಗಳಲ್ಲಿ ಅವರು ನಮ್ಮನ್ನೂ, ಇಹಲೋಕವನ್ನೂ ಅಗಲಿ ಕಣ್ಮರೆಯಾದರೆಂಬ ಕಟುಸತ್ಯ ಪ್ರಚಾರವಾದಾಗ ನಮ್ಮ ಶೋಕ ತೀವ್ರವಾಯಿತು.

ವಿಧಿಯ ಮುಂದೆ ನಾವು ಯಾರೇ ಆದರೂ ನಿರ್ಬಲರೆ ! ಇಡೀ ಧಾರವಾಡವೇ ಅವರ ಅಂತ್ಯಯಾತ್ರೆಯಲ್ಲಿ ಪಾಲ್ಗೊಂಡಿತ್ತು ಎಂಬ ಸಂಗತಿಯಿಂದ ನಮಗೆ ಕೊಂಚ ಸಮಾಧಾನ. ದೇವತೆಗಳಿಗೆ ಗುರುವಾದ ಬೃಹಸ್ಪತಿಯಂತೆ ದೇದೀಪ್ಯಮಾನರಾಗಿದ್ದರು 'ಶ್ರೀ'ಯವರು ; ಈಗಲೂ ಹಾಗೆಯೇ ಮೆರೆಯುತ್ತಿದ್ದಾರೆ ನಮ್ಮಂತಹ ಭಾವುಕರ ಮುಂದೆ !

## ನೆನಪುಗಳು

ಎ. ಎನ್. ಮೂರ್ತಿರಾವ್

ಸಮಾಜವೇನೋ ರಾಜಮಹಾರಾಜರುಗಳಿಗೆ ಮಹೋನ್ನತವಾದ ಸ್ಥಾನವನ್ನು ಬಿಟ್ಟುಕೊಡುತ್ತದೆ – ಅಥವಾ ಬಿಟ್ಟುಕೊಡುತ್ತಿತ್ತು. ಆದರೆ ಆ ಸ್ಥಾನದಲ್ಲಿರಬೇಕಾದವರಿಗೆ ಸ್ಥಾನಕ್ಕೆ ತಕ್ಕ ಠೀವಿ ಗಾಂಭೀರ್ಯಗಳನ್ನು ಕಾಪಾಡಿಕೊಳ್ಳುವುದು ಬಹುಶಃ ಸುಲಭದ ಕೆಲಸವಲ್ಲ. ಕನ್ನಡನಾಡು ಶ್ರೀಕಂಠಯ್ಯನವರನ್ನು ಗದ್ದುಗೆಯ ಮೇಲೆ ಕೂರಿಸಿತು. ಆ ಕಾಲದಲ್ಲಿ ಅಲ್ಲಿ ಕೂರಬಹುದಾದವರೆಂದರೆ ಶ್ರೀಕಂಠಯ್ಯನವರೊಬ್ಬರೇ. ಆದರೆ ಅವರನ್ನು ಸಿಂಹಾಸನದ ಮೇಲೆ ಕೂರಿಸಿದ್ದರಿಂದ ಅವರಿಗೂ ಪ್ರಜೆಗಳಿಗೂ ನಡುವೆ ಗೋಡೆಯೊಂದನ್ನು ಎಬ್ಬಿಸಿದಂತಾಯಿತು. ಈ ಅನುಭವ ಪ್ರಜೆಗಳಿಗೆ ಹೇಗೋ ಹಾಗೇ ಶ್ರೀಕಂಠಯ್ಯನವರಿಗೂ ಆಯಿತು. ತಮ್ಮ ವಿದ್ವತ್ತಿನಿಂದಲೂ ಭಾಷೆಗಾಗಿ ನಾಡಿಗಾಗಿ ಮಾಡಿದ ದುಡಿಮೆಯಿಂದಲೂ ಗಳಿಸಿದ ಸ್ಥಾನ ಅವರಿಗೆ ಸಂತೋಷವುಂಟುಮಾಡಿತೆಂಬುದು ನಿಜ – ಹಾಗೆ ಸಂತೋಷಪಡದಿರಬೇಕಾದರೆ ಮಾನವನ ಮಟ್ಟದಿಂದ ಮೇಲಿರುವವರಾಗಬೇಕು. ತಾವು ಮಾಡಿದ ಕೆಲಸ ತಮ್ಮ ಜನಕ್ಕೆ ಮೆಚ್ಚಿಕೆಯಾಯಿತೆಂಬ ಭಾವನೆ, ತಾವು ಜನಕ್ಕೆ ಕೊಟ್ಟ ಪ್ರೀತಿ ಅವರಿಂದ ತಮಗೆ ಮರಳಿ ಬಂದಿತೆಂಬ ಭಾವನೆ, ಆನಂದಕರವಾಗದೆ ಇದ್ದೀತೆ ? ಉನ್ನತ ಸ್ಥಾನದಲ್ಲಿದ್ದದ್ದರಿಂದ ಜನತೆಗಾಗಿಯೂ, ಸಾಹಿತ್ಯಕ್ಕಾಗಿಯೂ ಹೆಚ್ಚು ಫಲಪ್ರದವಾದ ಕೆಲಸ ಮಾಡುವುದು ಸಾಧ್ಯವಾಯಿತು ಎಂಬ ಅರಿವೂ ಅವರಿಗೆ ತೃಪ್ತಿ ಕೊಟ್ಟಿತು. ಆದರೂ ಆ ಪೀಠದಲ್ಲಿರುವುದು ಅವರಿಗೆ ಅನೇಕ ವೇಳೆ ಹಿತವಾಗಲಿಲ್ಲ. ಅವರಿಗೆ ಕೆಲವರು ಹತ್ತಿರದ ಸಂಗಡಿಗರಿದ್ದರು – ಅವರ ಜೊತೆಯಲ್ಲಿದ್ದಾಗ ಶ್ರೀಕಂಠಯ್ಯನವರು 'ಸರಿಸಮರದಲ್ಲಿ ಮೊದಲಿಗರು', ಆ ಕೆಲವರೊಡನೆ ಅವರು ತಡೆಯಿಲ್ಲದೆ ಮನಸ್ಸನ್ನು ಹರಿಯಬಿಟ್ಟು ಮಾತಾಡುತ್ತಿದ್ದರಲ್ಲದೆ ಹಾಸ್ಯ ಕುಚೋದ್ಯಗಳಲ್ಲಿ ಸಹ ಭಾಗಿಗಳಾಗುತ್ತಿದ್ದರು. ಡಾ॥ ಡಿ. ವಿ. ಗುಂಡಪ್ಪನವರು ಇಂಥ ಕೆಲವು ಸಂದರ್ಭಗಳನ್ನು ತಮ್ಮ 'ಸಾಹಿತ್ಯೋಪಾಸಕರು' ಎಂಬ ಪುಸ್ತಕದಲ್ಲಿ ಕಾಣಿಸಿದ್ದಾರೆ. ಆದರೂ ಸಾಮಾನ್ಯವಾಗಿ

ಶ್ರೀಕಂಠಯ್ಯನವರ ವಿಷಯದಲ್ಲಿ ಜನರ ಕಲ್ಪನೆ, ಅವರು ಯಾವಾಗಲೂ ಸಿಂಹಾಸನಕ್ಕೆ ಉಚಿತವಾದ ವೇಷಭೂಷಣ ಗಾಂಭೀರ್ಯಗಳೊಡನೆ ಇರುತ್ತಿದ್ದರೆಂದು. ಇದು ಶ್ರೀಕಂಠಯ್ಯನವರಿಗೆ ಹಿತವಾಗಲಿಲ್ಲ.

ಅದು ಹಿತವಾಗಲಿಲ್ಲವೆಂದು ನನ್ನ ಸ್ವಂತ ಅನುಭವದಿಂದಲೇ ಹೇಳಬಲ್ಲೆ. ಆ ಗಾಂಭೀರ್ಯವನ್ನು ಚೆಲ್ಲಿಕೊಟ್ಟು ಸರಳವಾಗಿಯೂ, ಆರಾಮವಾಗಿಯೂ ಇದ್ದುದನ್ನು ನೋಡುವ ಯೋಗ ನನಗೆ ಒಂದೆರಡು ವೇಳೆ ಲಭಿಸಿತು. ೧೯೪೨ರಲ್ಲಿ ಎಂದು ನೆನಪು – ನಾನು ಶಿವಮೊಗ್ಗ ಇಂಟರ್‌ಮೀಡಿಯೆಟ್ ಕಾಲೇಜಿನಲ್ಲಿ ಕೆಲಸ ಮಾಡುತ್ತಿದ್ದೆ. ಆ ವರ್ಷ ಕಾಲೇಜಿನ ಇಂಗ್ಲಿಷ್ ಇಲಾಖೆಯ ಕೆಲಸ ಕಾರ್ಯಗಳನ್ನು ಪರಿಶೀಲಿಸಿ ವರದಿ ಮಾಡುವ ಕೆಲಸವನ್ನು ವಿಶ್ವವಿದ್ಯಾಲಯವು ಶ್ರೀಕಂಠಯ್ಯನವರಿಗೆ ವಹಿಸಿಕೊಟ್ಟಿತ್ತು. ಅವರನ್ನು ಬರಮಾಡಿಕೊಂಡು ಸತ್ಕಾರ ಮಾಡಲು ನನಗಿಂತಲೂ ಎಷ್ಟೋ ಹೆಚ್ಚು ಗಣ್ಯರಾದ ನಾಲ್ಕಾರು ಜನ ಆತುರರಾಗಿದ್ದರೆಂಬುದು ನನಗೆ ತಿಳಿದಿತ್ತಾದರೂ ಧೈರ್ಯ ಮಾಡಿ "ತಾವು ಶಿವಮೊಗ್ಗಕ್ಕೆ ಬಂದಾಗ ನನ್ನ ಮನೆಯಲ್ಲೇ ಇಳಿದುಕೊಳ್ಳಬೇಕು" ಎಂದು ಪ್ರಾರ್ಥಿಸಿ ಅವರಿಗೆ ಕಾಗದ ಬರೆದೆ. ಅವರು ಒಪ್ಪಿಕೊಳ್ಳುತ್ತಾರೆಂಬ ನಂಬಿಕೆ ನನಗಿರಲಿಲ್ಲ. ಆದರೆ ಮರುಟಪಾಲಿಗೇ ಅವರಿಂದ ಕಾಗದ ಬಂತು – "ಸಂತೋಷದಿಂದ ಬರುತ್ತೇನೆ" ಎಂದು. ನನಗೆ ಮಿತಿಯಿಲ್ಲದ ಆಶ್ಚರ್ಯ ಮತ್ತು ಆನಂದ. ಹೀಗಾಗಿ ನನಗೆ ಅವರ ಸಹವಾಸ ಎರಡು ದಿನ ಸಂಪೂರ್ಣವಾಗಿ ದೊರಕಿತು. ಅವರ ಸ್ವಭಾವದ ಅಪರಿಚಿತ ಮುಖವೊಂದರ ಪರಿಚಯವಾಯಿತು. ಅವರು ಮನೆಗೆ ಬಂದಮೇಲೆ ಹತ್ತು ಹದಿನೈದು ನಿಮಿಷಗಳ ಕಾಲ ನಾವಿಬ್ಬರೂ ವಿಶ್ವವಿದ್ಯಾಲಯದ ಪ್ರಾಧ್ಯಾಪಕ, ಉಪಪ್ರಾಧ್ಯಾಪಕರಿಗೆ ಉಚಿತವಾದ (ಅಥವಾ ಸುತ್ತಣ ವಾತಾವರಣ 'ಇದು ಉಚಿತ' ಎಂದು ನಮ್ಮ ಮೇಲೆ ಹೇರಿದ್ದ) ಮರ್ಯಾದೆಯಿಂದ ನಡೆದುಕೊಂಡೆವು. ಅಪ್ಪಟ ಹದಿನಾರಾಣೆ 'ಕಿಂಗ್ಸ್ ಇಂಗ್ಲಿಷ್'(Kings English)ನಲ್ಲೇ ಮಾತಾಡಿದೆವು; ವಿದ್ಯುಕ್ತವಾಗಿ ಕೇಳಬೇಕಾದ ಪ್ರಶ್ನೆಗಳನ್ನು ಕೇಳಿದೆವು. ಕೊಡಬೇಕಾದ ಉತ್ತರಗಳನ್ನು ಕೊಟ್ಟೆವು. ಆಮೇಲೆ ಅಕಸ್ಮಾತ್ತಾಗಿ ನಮ್ಮಿಬ್ಬರಲ್ಲಿ ಒಬ್ಬರಿಂದ (ಯಾರಿಂದ ಎಂಬುದು ನೆನಪಿಲ್ಲ) ಒಂದೆರಡು ಕನ್ನಡ ಮಾತುಗಳು ಹೊರಬಿದ್ದವು. ಕೂಡಲೇ ವಾತಾವರಣ ಬದಲಾಯಿಸಿತು. ಊಟಕ್ಕೆ ಕುಳಿತುಕೊಳ್ಳುವ ವೇಳೆಗೆ ಬಿಗುವಿಗೆ ಬದಲಾಗಿ ಸಲಿಗೆ – ಅವರಿಂದ ಸಲಿಗೆ, ನನ್ನಿಂದ ವಿನಯ ಬೆರೆತ ಸಲಿಗೆ – ಬಂತು. ಸಾಹಿತ್ಯವನ್ನು ಬಿಟ್ಟು ಊಟಕ್ಕೆ ಬಾಳೆಯೆಲೆ ಹಿತವೋ ತಟ್ಟೆ ಉತ್ತಮವೊ, ಎಂಬ ಪಾಮರ ವಿಷಯವನ್ನು ಚರ್ಚಿಸುವ ಮಟ್ಟಿಗೆ ವಾತಾವರಣ ತಿಳಿಯಾಯಿತು.

ಅಂದು ಸಂಜೆ ಯುವಮಿತ್ರರೊಬ್ಬರು – ಅವರು ಶ್ರೀಕಂಠಯ್ಯನವರ ಶಿಷ್ಯರು, ನನ್ನ ಶಿಷ್ಯರೂ ಹೌದು – ಶ್ರೀಕಂಠಯ್ಯನವರನ್ನು ನೋಡಲು ಬಂದರು. ಅವರ

ನಡೆನುಡಿ ನಿರಾಳವಾಗಿರಲಿಲ್ಲ. "ನಾನು ಗುರುಗಳ ಬಳಿಗೆ ಬಂದಿದ್ದೇನೆ. ಭಕ್ತಿ ವಿನಯಗಳಿಂದ ನಡೆದುಕೊಳ್ಳಬೇಕು" ಎಂಬ ಮನೋಭಾವ ಸ್ಪಷ್ಟವಾಗಿ ಕಾಣುತ್ತಿತ್ತು. ಇದನ್ನು ಗಮನಿಸಿ ಶ್ರೀಕಂಠಯ್ಯನವರು ನಸುನಕ್ಕು "ಪುಟ್ಟನಂಜಪ್ಪ, ಭಕ್ತಿ ಕಡಿಮೆಯಾಗಿ ಸಲಿಗೆ ಹೆಚ್ಚಾದರೆ ಹಿತವಲ್ಲವೆ ?" ಎಂದರು. ಮಾತು 'ಅಶ್ವತ್ಥಾಮನ್' ನಾಟಕದ ಕಡೆ ತಿರುಗಿತು. ಪುಟ್ಟನಂಜಪ್ಪನವರು ಆ ನಾಟಕದಲ್ಲಿ ಒಂದೆರಡು ಸಾರಿ ಯಾವುದೋ ಪಾತ್ರವನ್ನು ವಹಿಸಿದ್ದರೆಂದು ನೆನಪು – ದೃಢವಾಗಿ ಹೇಳಲಾರೆ. ನಾನು ಶಿವಮೊಗ್ಗ ಕಾಲೇಜಿನ ಸಂಘದಲ್ಲಿ ಕೆಲವು ವಾರಗಳ ಹಿಂದೆ ಅಶ್ವತ್ಥಾಮನ್ ನಾಟಕವನ್ನು ಓದಿ ವ್ಯಾಖ್ಯಾನ ಮಾಡಿದ್ದೆ. ಪುಟ್ಟನಂಜಪ್ಪನವರು ಅದನ್ನು ಹೇಳಿದಾಗ ಶ್ರೀಕಂಠಯ್ಯನವರು ಹುಸಿಕೋಪದಿಂದ ನನ್ನನ್ನು ತರ್ಜನಿಯಿಂದ ತೋರಿಸಿ "ನೋಡಿ, ಪುಟ್ಟನಂಜಪ್ಪ, ಈತ ನನ್ನ ಶಿಷ್ಯ ಎಂದು ಹೇಳಿಕೊಳ್ಳುತ್ತಾನೆ. ಆದರೂ ನಾನು ಮಾಡಿದ ಕೆಲಸವನ್ನು ಹಾಳುಮಾಡುತ್ತಾನೆ" ಎಂದರು. ನನಗೆ ಅರ್ಥವಾಗಲಿಲ್ಲ. ಶ್ರೀಕಂಠಯ್ಯನವರು ವಿವರಣೆ ಕೊಟ್ಟರು : "ನಾನು ಅಶ್ವತ್ಥಾಮನನ್ನು ಕೊಂದುಹಾಕಿದೆ. ಸ್ವಲ್ಪ ಕಷ್ಟದ ಕೆಲಸವೇ ಆಯಿತು – ಆತ, ಚಿರಂಜೀವಿ, ನೋಡಿ, ಅಷ್ಟು ಕಷ್ಟಪಟ್ಟು ಕೊಂದವನನ್ನ ಈತ ಮತ್ತೆ ಎಬ್ಬಿಸಿ ಓಡಾಡಿಸುವುದೆ."

ಈ ಹಾಸ್ಯದ ಲಾಘವದಲ್ಲಿ ಬಹುಶಃ ಸ್ವಲ್ಪ ಭಾರವೂ ಸೇರಿತ್ತು ಎನ್ನಬೇಕು. ವಾಚಕರು ಈ ವಿರೋಧಾಭಾಸದ ಮಾತನ್ನು ಕ್ಷಮಿಸಲಿ. ಶ್ರೀಕಂಠಯ್ಯನವರು 'ಅಶ್ವತ್ಥಾಮನ್' ನಾಟಕದ ವಿಷಯದಲ್ಲಿ ನಡೆದಿದ್ದ (ಹಿಂದೆಯೇ ಪ್ರಸ್ತಾಪಿಸಿರುವ) ವಾಕ್ಕಲಹವನ್ನು ನೆನೆದು ಮೇಲೆ ಕಾಣಿಸಿರುವ ಮಾತನ್ನಾಡಿದರು. ಆದರೆ ಮುಂದೆ ಹೇಳುವ ಪ್ರಸಂಗದಲ್ಲಿ 'ಭಾರ' ಏನೂ ಇಲ್ಲ. ಇದು ಸುಮಾರು ನಲವತ್ತು ವರ್ಷದ ಹಿಂದಿನ ಮಾತು. ಶ್ರೀಕಂಠಯ್ಯನವರು, ನಾನು, ಇನ್ನಿಬ್ಬರು ನನ್ನ ವಯಸ್ಸಿನ ಮಿತ್ರರು (ಅವರೂ ಶ್ರೀಯವರ ಶಿಷ್ಯರು) ಯಾವುದೋ ವಾರ್ಷಿಕೋತ್ಸವಕ್ಕಾಗಿ ಚನ್ನರಾಯಪಟ್ಟಣಕ್ಕೆ ಹೋಗಿದ್ದು, ಅಲ್ಲಿಂದ ಗೋಮಟೇಶ್ವರನ ದರ್ಶನಕ್ಕಾಗಿ ಶ್ರವಣಬೆಳಗೊಳಕ್ಕೆ ಹೋದೆವು. ಅಲ್ಲಿಯ ಕೆಲಸ ಮುಗಿದ ಮೇಲೆ ಹೊರಡಲು ಎಲ್ಲರೂ ಸಿದ್ಧರಾದೆವು. ಒಬ್ಬ ಯುವಮಿತ್ರರು ೧೫-೨೦ ನಿಮಿಷ ತಡಮಾಡಿದರು. ಶ್ರೀಕಂಠಯ್ಯನವರು ತಾಳ್ಮೆಗೆಡಬಹುದು, ಬೇಸರವನ್ನು ತೋರಿಸಬಹುದು ಎಂದು ಕೊಂಡಿದ್ದೆ. ಅವರು ನಮ್ಮಿಬ್ಬರ ಕಡೆ ತಿರುಗಿ, ಚೇಷ್ಟೆಯ ನಗುವನ್ನು ನಕ್ಕು, "ಏನಪ್ಪ, ಇವರೇಕೋ ಹೊರಡುವ ಹಾಗೆ ಕಾಣಲಿಲ್ಲ. ಬನ್ನಿ, ದ್ವಾರಪಾಲಕರ ಹಾಗೆ ಎರಡು ಮಗ್ಗುಲಲ್ಲೂ ನಿಂತುಕೊಂಡು ಸುಪ್ರಭಾತ ಹಾಡೋಣ. ಹೂ, ಷುರುಮಾಡಿ, 'ಏಳಯ್ಯ ಬೆಳಗಾಯಿತು' ಎಂದರು. ನಾವು ಸುಪ್ರಭಾತವನ್ನು ಹಾಡಲಿಲ್ಲ. ಆದರೆ ಶ್ರೀಯವರು ನಮ್ಮೊಡನೆ ಅಷ್ಟು ಸಲಿಗೆಯಿಂದ ಮಾತಾಡಿದರಲ್ಲ ಎಂದು ನಮಗೆ ಆನಂದವಾಯಿತು.

ಸಾಹಿತ್ಯ ಪ್ರಪಂಚದಲ್ಲಿ ಅಷ್ಟು ಉನ್ನತ ಸ್ಥಾನವನ್ನು ಗಳಿಸಿದ್ದ ಶ್ರೀಕಂಠಯ್ಯನವರು ತಮ್ಮಿಂದ ತಮ್ಮ ಶಿಷ್ಯರಿಗೆ ಅನ್ಯಾಯವಾಯಿತೆಂದು ಕಂಡುಬಂದಾಗ ಕ್ಷಮೆ ಬೇಡಲು ಹಿಂಜರಿಯುತ್ತಿರಲಿಲ್ಲ. ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದಾಗ (ಆಗ ಪರಿಷತ್ತಿನ ಹೆಸರು 'ಕರ್ಣಾಟಕ ಸಾಹಿತ್ಯ ಪರಿಷತ್ತು' ಎಂದಿತ್ತು) ಆ ಸಂಸ್ಥೆಯ ಹೆಸರನ್ನು ನಿಯಾನ್ ದೀಪಗಳಲ್ಲಿ ಹಾಕಿಸುವ ಏರ್ಪಾಡು ಮಾಡಿದರು. ಅದಕ್ಕೆ ಅನುಕೂಲವಾಗಲೆಂದು 'ಕರ್ಣಾಟಕ' ಎಂಬ ಪದದಲ್ಲಿರುವ 'ಣ'ಕಾರಕ್ಕೆ ಬದಲು 'ನ'ಕಾರವನ್ನು ಉಪಯೋಗಿಸಬೇಕೆಂದು ನಿಶ್ಚಯಿಸಿದರು. ಆಗ ಪ್ರಾ॥ ಕೆ. ವಿ. ರಾಘವಾಚಾರ್ಯರು ಪರಿಷತ್ತಿನ ಕಟ್ಟಡದಲ್ಲೇ ಇದ್ದ ಇಂಗ್ಲಿಷ್ ಕನ್ನಡ ನಿಘಂಟಿನ ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದರು. ಅವರು "ಸಾರ್, ತಾವು ಸೂಚಿಸಿದ ಬದಲಾವಣೆಯನ್ನು ಮಾಡಹೋದರೆ ಕೆಲವು ತೊಂದರೆಗಳು ಬರಬಹುದು. ಈ ಪರಿಷತ್ತು ರಿಜಿಸ್ಟರಾಗಿರುವ ಸಂಘ, ರಿಜಿಸ್ಟರ್ ಮಾಡುವಾಗಿನ ಕಾಗದಪತ್ರಗಳಲ್ಲೆಲ್ಲ 'ಣ'ಕಾರವನ್ನು ಉಪಯೋಗಿಸಿರುತ್ತಾರೆ. ಪರಿಷತ್ತಿನ ಸಾಮಾನ್ಯ ಸಭೆ(General body)ಯ ಅನುಮೋದನೆಯಿಲ್ಲದೆ 'ಣ' ಕಾರವನ್ನು ತೆಗೆದು 'ನ'ಕಾರ ಹಾಕಿದರೆ ಕಾನೂನಿನ ದೃಷ್ಟಿಯಿಂದ ತಪ್ಪಾಗುತ್ತದೆ" ಎಂದು ಬಹಳ ವಿನಯದಿಂದಲೇ ಹೇಳಿದರು. ಅಲ್ಲಿದ್ದ ಇತರರಿಗೆ ಶ್ರೀ ರಾಘವಾಚಾರ್ಯರು ಧಾರ್ಷ್ಟ್ಯದಿಂದ ಮಾತಾಡಿದರು ಎನ್ನಿಸಿ ಅಸಮಾಧಾನವಾಯಿತು. ಶ್ರೀಕಂಠಯ್ಯನವರು ಏನೂ ಹೇಳಲಿಲ್ಲ; ಆದರೆ ಅವರಿಗೂ ಸ್ವಲ್ಪ ಕೋಪ ಬಂತೆಂಬುದೇನೋ ಸ್ಪಷ್ಟವಾಗಿತ್ತು. ಕೆಲವು ತಿಂಗಳು ಕಳೆದವು. ಆ ವೇಳೆಗೆ ಆ ಬದಲಾವಣೆ ದೊಡ್ಡ ಬಿರುಗಾಳಿಯನ್ನೇ ಎಬ್ಬಿಸಿತ್ತು. ಚರ್ಚೆ ಬಿಸಿ ಬಿಸಿಯಾಗಿದ್ದ ಕಾಲದಲ್ಲೇ ಒಂದು ದಿನ ಬೆಳಿಗ್ಗೆ ಶ್ರೀ ರಾಘವಾಚಾರ್ಯರ ಮನೆಯ ಮುಂದೆ ಶ್ರೀಕಂಠಯ್ಯನವರ ಕಾರು ಬಂದು ನಿಂತಿತು; ಚಾಲಕ ತನ್ನ ಯಜಮಾನರಿಂದ ಸಂದೇಶವೊಂದನ್ನು ತಂದಿದ್ದ: "ನಿಮಗೆ ಪುರುಸೊತ್ತಿದ್ದರೆ ದಯವಿಟ್ಟು ನನ್ನ ಮನೆಗೆ ಬನ್ನಿ. ನಿಮ್ಮೊಡನೆ ಮಾತಾಡಬೇಕಾದ್ದಿದೆ. ಕಾರು ನಿಮಗಾಗಿ ಕಾದಿರುತ್ತದೆ." ರಾಘವಾಚಾರ್ಯರು ಅವರ ಮನೆಗೆ ಹೋದಾಗ ಶ್ರೀಕಂಠಯ್ಯನವರು ಮೊದಲು ಆಡಿದ ಮಾತು: "ರಾಘವಾಚಾರ್ಯರೆ, ಅಂದು ನೀವು ಹೇಳಿದ್ದು ಸರಿ. ನಾನು ಮಾಡಿದ್ದು ತಪ್ಪು, ನೀವು ಕಾನೂನಿನ ಮಾತಾಡಿದಾಗ 'ಈತ ಎಲ್ಲಕ್ಕೂ ಆಕ್ಷೇಪಣೆ ಎತ್ತುವ ಸ್ವಭಾವದವನು' ಎಂದುಕೊಂಡೆ. ಅದು ತಪ್ಪು ಭಾವನೆ. ನನ್ನನ್ನು ಕ್ಷಮಿಸಿಬಿಡಿ."

ಆ ಕಾಲದಲ್ಲಿ ಯುವಕರಾಗಿದ್ದವರಿಗೆ ಶ್ರೀಕಂಠಯ್ಯನವರ ರಾಜಭಕ್ತಿಯೂ ಬ್ರಿಟಿಷ್ ಸಾಮ್ರಾಜ್ಯದ ವಿಷಯದಲ್ಲಿ ಅವರಿಗಿದ್ದ ನಂಬಿಕೆಯೂ ಹಿಡಿಸಲಿಲ್ಲ. "ಬ್ರಿಟಿಷರ ಆಳ್ವಿಕೆಯಿಂದ ತಾತ್ಕಾಲಿಕವಾಗಿ ಭಾರತದಲ್ಲಿ ರಾಜಕೀಯ ಐಕ್ಯ ಅನಿವಾರ್ಯ

ವಾಗಿ ಬಂದಿತಾದರೂ ನಾಡನ್ನು ಅವರು ಒಂದಾಗಿ ಬೆಸೆಯಲಿಲ್ಲ; 'ಒಡೆದು ಆಳು' ಎಂಬ ತತ್ವವನ್ನನುಸರಿಸಿದರು. ಅವರು ಬಿಟ್ಟು ಹೋದ ಕೂಡಲೆ ನಾಡು ಒಡೆದು ಹೋಗುತ್ತಿತ್ತು. ಅದನ್ನು ತಪ್ಪಿಸಿದವರು ನಮ್ಮ ನಾಯಕರು, ಬ್ರಿಟಿಷರಲ್ಲ; ಭಾರತ ದಲ್ಲಿ ಭಾವೈಕ್ಯ ಸ್ವಲ್ಪಮಟ್ಟಿಗೆ ಹಿಂದಿನಿಂದಲೂ ಇದ್ದದ್ದೇ; ಅದನ್ನು ಇತ್ತೀಚೆಗೆ ಬೆಳಸಿದ್ದಕ್ಕೆ ಕೀರ್ತಿ ಸಲ್ಲಬೇಕಾದದ್ದು ಸ್ವಾಮಿ ವಿವೇಕಾನಂದರಿಗೆ, ರವೀಂದ್ರನಾಥ ಠಾಕೂರರಿಗೆ, ಮಹಾತ್ಮ ಗಾಂಧಿಯವರಿಗೆ"– ಇದು ಈಗ ನಮ್ಮೆಲ್ಲರ ನಂಬಿಕೆ. ಈ ನಂಬಿಕೆಯನ್ನು ಶ್ರೀಕಂಠಯ್ಯನವರು ಪೂರ್ಣವಾಗಿ ಅನುಮೋದಿಸುತ್ತಿರಲಿಲ್ಲವಾದರೂ 'ಕಡಲ ರಾಣಿ'ಯಲ್ಲಿ ಕೊರತೆಗಳಿದ್ದುವೆಂದೇನೊ ಒಪ್ಪಿದ್ದರು; ಅದಕ್ಕೇ ಅವರು "ಅವಳ ಗುಣವನು ಮೆರೆಯಿರಿ – ಕಳೆದವಳ ಕೊರತೆಯ ಮರೆಯಿರಿ" ಎಂದು ಬೋಧಿಸಿದರು. ಹತ್ತಿರ ಹತ್ತಿರ ಒಂದು ಶತಮಾನದ ಕೆಳಗೆ ಹುಟ್ಟಿ, ಬ್ರಿಟಿಷರ ಸಂಸ್ಕೃತಿಯಲ್ಲಿ ಉತ್ತಮವಾದದ್ದರ ಸಾರವನ್ನು ಸವಿದವರಲ್ಲಿ ಇಂದಿನವರ ದೃಷ್ಟಿ ಯನ್ನು ನಿರೀಕ್ಷಿಸುವುದು ಸರಿಯಲ್ಲ. ಅಲ್ಲದೆ ಶ್ರೀಕಂಠಯ್ಯನವರು ದುಡಿದದ್ದು ರಾಜಕೀಯದಲ್ಲಲ್ಲ, ಸಾಹಿತ್ಯ-ಸಂಸ್ಕೃತಿಗಳ ಕ್ಷೇತ್ರದಲ್ಲಿ.

ಅವರು ಬುದ್ಧಿಪೂರ್ವಕವಾಗಿ ಸೀಮಿತ ಮಾಡಿಕೊಂಡ ಕ್ಷೇತ್ರದಲ್ಲಿ ಅವರ ಆದರ್ಶಗಳನ್ನೂ ಕಾರ್ಯವಿಧಾನವನ್ನೂ ಭಾರತದ ಹಿರಿಯ ನಾಯಕರು ಬಹುಶಃ ಒಪ್ಪುತ್ತಿದ್ದರು. ರಾಜಕೀಯ ಐಕ್ಯಕ್ಕೆ ಪೂರ್ವಭಾವಿಯಾಗಿ ಕರ್ಣಾಟಕದಲ್ಲಿ ಭಾವೈಕ್ಯ ವನ್ನು ಮೂಡಿಸಬೇಕೆಂದು ಅವರು ದುಡಿದರು. ಮತ ವೈಷಮ್ಯಕ್ಕೆ ಎಡೆಗೊಡ ಬಾರದು, ಸಹನೆಯಿಂದ ನಡೆದುಕೊಳ್ಳಬೇಕು ಎಂದು ಅವರು ತಮ್ಮ ಉಪನ್ಯಾಸ ಗಳಲ್ಲಿ ಬೋಧಿಸಿದರು – ಮಹಾತ್ಮ ಗಾಂಧಿಯವರು ಇದನ್ನು ಮನಸಾರ ಒಪ್ಪು ತ್ತಿದ್ದರೆಂದು ಮತ್ತೆ ಹೇಳಬೇಕಾಗಿಲ್ಲ. ಕನ್ನಡ ಭಾಷೆಯ ಬೆಳವಣಿಗೆಯ ವಿಷಯ ದಲ್ಲಿ ಸಾಹಿತ್ಯೋತ್ಸಾಹಿಗಳು ತಮ್ಮ ಮುಂದಿರಿಸಿಕೊಳ್ಳಬೇಕಾದ ಆದರ್ಶಗಳ ವಿಷಯದಲ್ಲಿ, ಅವರು ಆಗ ಹೇಳಿದ ಮಾತುಗಳು ಇಂದಿಗೂ ಸಾಧುವಾಗಿಯೇ ಕಾಣುತ್ತವೆ.

ಶ್ರೀಕಂಠಯ್ಯನವರು ತಮ್ಮ ಚಳವಳಿಯನ್ನು ಆರಂಭಿಸಿದಾಗ ಕನ್ನಡ ಸಾಹಿತ್ಯ ರಾಜ್ಯದಲ್ಲಿ ಬರಡಾಗಿದ್ದ ಕ್ಷೇತ್ರಗಳೆಲ್ಲ ಇಂದು ಫಲವತ್ತಾಗಿವೆ. ಕನ್ನಡ ಸಾಹಿತ್ಯ ಶ್ರೀಕಂಠಯ್ಯನವರ ಕನಸನ್ನು ನನಸುಮಾಡಿ ಅಲ್ಲಿಂದ ಮುಂದೆ ಎಷ್ಟೋ ದೂರ ಸಾಗಿದೆ. ಅವರು ನಾಯಕರಾಗಿ ನಿಂತು ನಡೆಸಿದ 'ರಮ್ಯ ಕ್ರಾಂತಿ' (The Romantic movement)ಗೆ ವಿರುದ್ಧವಾಗಿ ಕ್ರಾಂತಿ ನಡೆದಿದೆಯಾದರೂ ಈ ಹೊಸ ಕ್ರಾಂತಿಕಾರರು ಅವರ ಹಿರಿಮೆಯನ್ನೂ ಪ್ರಭಾವವನ್ನೂ ಒಪ್ಪುತ್ತಾರೆ. ಅವರು ಮೊದಲು ನಡೆಸಿದ ಕ್ರಾಂತಿಯಿಂದಾಗಿ ಈ ಕ್ರಾಂತಿ ಸಾಧ್ಯವಾಯಿತು. ಕಾಲ ಒಂದುರುಳು ಉರುಳಿ ಕ್ರಾಂತಿಕಾರರನ್ನು ಮಂದಗಾಮಿಗಳನ್ನಾಗಿ ಮಾಡುತ್ತದೆ; ಹೊಸ

ಕ್ರಾಂತಿಕಾರರು ಮುಂದೆ ಬರುತ್ತಾರೆ. ಶ್ರೀಕಂಠಯ್ಯನವರು ಈಗ ಇದ್ದಿದ್ದರೆ, "ತಥಾಸ್ತು, lest one good custom should corrupt the world," ಎನ್ನುತ್ತಿದ್ದರು.*

---

* ಪ್ರೊ॥ ಎ. ಎನ್. ಮೂರ್ತಿರಾವ್ ಅವರ 'ಬಿ. ಎಂ. ಶ್ರೀಕಂಠಯ್ಯ' (ಪ್ರ : ಕನ್ನಡ ಸಾಹಿತ್ಯ ಪರಿಷತ್ ೧೯೭೫) ಎಂಬ ಕೃತಿಯಿಂದ ಆಯ್ದ ಭಾಗ.

# ಆಚಾರ್ಯ ಬಿ.ಎಂ.ಶ್ರೀ. ಅವರ ಸ್ಮರಣೆ

– ಪು.ತಿ.ನ.

ನನ್ನ ಕಾಲೇಜು ಜೀವನದಲ್ಲಿ ನಾನು ಯಾವ ಉಪಾಧ್ಯಾಯರತ್ತಲೂ ಸಲಿಗೆಯನ್ನು ಬೆಳೆಸಿಕೊಳ್ಳಲಿಲ್ಲ. ನಾನು ಸ್ವಲ್ಪ ಸರಾಗವಾಗಿದ್ದದ್ದು ಪ್ರೊ॥ ಸಿ. ಆರ್. ನರಸಿಂಹಶಾಸ್ತ್ರಿಗಳ ಹತ್ತಿರ. ಮಿಕ್ಕ ಪ್ರಾಧ್ಯಾಪಕರು ನನಗೆ ದೂರದ ನಕ್ಷತ್ರಗಳು. ಅವರಲ್ಲಿ ಪ್ರೊ॥ ಹಿರಿಯಣ್ಣನವರು ಸೀರಿಯಸ್, ಉಜ್ವಲ ಆತ್ಮೀಯ ನಕ್ಷತ್ರವಾಗಿದ್ದರು. ನನಗೆ ಮೇಷ್ಟ್ರುಗಳನ್ನು ಕಂಡರೆ ಯಾವಾಗಲೂ ಹೆದರಿಕೆ. ನಮ್ಮೂರಿನ ಸಾಂಸ್ಕೃತಿಕ ಪರಿಸರ ಅಂಥದು. ನಮ್ಮೂರಿನ ಆಗಿನ ಹುಡುಗರಿಗೆ ಉಪಾಧ್ಯಾಯರನ್ನು ಕಂಡರೆ ಘನೀಭೂತವಾದ ಅಂಜಿಕೆ. ಅವರಲ್ಲಿ ಯಾರೊಬ್ಬರಾದರೂ ಆ ಬೀದಿಯ ಕೊನೆಯಲ್ಲಿ ಕಾಣಿಸಿಕೊಂಡರೆ ಈ ಬೀದಿಯಲ್ಲಿ ಮುಖ ಮರೆಸಿಕೊಂಡು ಓಡುತ್ತಿದ್ದೆವು. ಅವರ ಮಕ್ಕಳು, ನಮ್ಮ ಸಂಗಡಿಗರು, ಒಂದೇ ಮನೆಯಲ್ಲಿ ಅವರೊಂದಿಗೆ ಹೇಗೆ ಇರುತ್ತಾರೋ ಎಂಬುದೇ ನನಗೊಂದು ವಿಸ್ಮಯವಾಗಿತ್ತು. ಈ ಭಯ ಗೌರವದೊಂದಿಗೆ ಹೇಗೋ ಬೆರೆತುಹೋಗಿದ್ದ ನಾನು ಕಾಲೇಜಿನಲ್ಲಿ ವಿದ್ಯೆ ಪೂರೈಸಿ ಹೊರಗೆ ಬರುವವರೆಗೂ ಉಪಾಧ್ಯಾಯ ವಲಯದಿಂದ ಹೊರಗಡೆಯೇ ಉಳಿದೆ. ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು ನನಗೆ ಸಮೀಪಿಸಲಾಗದ ದೂರದ ನಕ್ಷತ್ರವಾಗಿದ್ದರು.

ಅವರ ಇಂಗ್ಲಿಷ್ ಬೋಧೆಯಿಂದ ಎಷ್ಟು ಪ್ರಭಾವಿತನಾದೆನೋ ನಾನು ಅದನ್ನೀಗ ಅಳೆಯಲಾರೆ. ನಾನು ಒಳ್ಳೆಯ ವಿದ್ಯಾರ್ಥಿಯಲ್ಲ. ಸಾಹಿತ್ಯ ಮತ್ತು ಸಂಗೀತದಲ್ಲಿನ ಪ್ರೀತಿ ನನಗೆ ನನ್ನ ಮನೆಯ ಮತ್ತು ನಮ್ಮೂರಿನ ಕೊಡಿಗೆ, ಹುಟ್ಟಿನಿಂದಲೇ ಪ್ರಾಪ್ತವಾದದ್ದು. ದೀರ್ಘ ಪ್ರವಚನಗಳ ಹಂಗಿಲ್ಲದೆ ನಾನು ಕವಿತೆಗಳ ಭಾವವನ್ನು ಗ್ರಹಿಸಬಲ್ಲವನಾಗಿದ್ದೆನೆಂದು ತೋರುತ್ತದೆ. ನನ್ನ ಆಪ್ತ ಮಿತ್ರರಾಗಿದ್ದ ನಂ. ಶಿವರಾಮಶಾಸ್ತ್ರಿಗಳು ನನ್ನ ಈ ಹುನ್ನಾರನ್ನು ಕಂಡು ಎಷ್ಟೋ ಬಾರಿ ವಿಸ್ಮಯಗೊಂಡಿದ್ದರು. ಪದ್ಯದ ಪದಗಳ ಅರ್ಥವಾಗಬಹುದು. ಆದರೆ ಭಾವ ಸ್ಫುರಿಸದೇ

ಹೋಗಬಹುದು. ಸಂಗೀತದ ವಿಷಯದಲ್ಲೂ, ಏಕೆ, ಎಲ್ಲ ಕಲೆಗಳ ವಿಷಯದಲ್ಲೂ ಈ ಮಾತನ್ನು ಹೇಳಬಹುದು. ಪ್ರೊ॥ ಬಿ. ಎಂ. ಶ್ರೀಕಂಠಯ್ಯನವರು ವರ್ಡ್ಸ್‌ವರ್ತ್ ಮತ್ತು ಬ್ರೌನಿಂಗ್ ಕವಿಗಳ ಕಾವ್ಯ ಕುರಿತಾಗಲಿ, ಷೇಕ್ಸ್‌ಪಿಯರ್ ಕವಿಯ ನಾಟಕಗಳನ್ನಾಗಲಿ ವ್ಯಾಖ್ಯಾನಿಸುತ್ತಿದ್ದ ಸುದೀರ್ಘ ಪ್ರವಚನಗಳಿಂದ ವಿದ್ಯಾರ್ಥಿಗಳಿಗೆ ಅವುಗಳ ಭಾವ ಎಷ್ಟರಮಟ್ಟಿಗೆ ಮನದಟ್ಟಾಯಿತೋ ನಾನರಿಯೆ. ಆ ಮಹಾಕವಿಯ ನಾಟಕಗಳ ಸ್ವಾರಸ್ಯವನ್ನು ಪ್ರೊ॥ ರೋಲೋ ಮಹಾಶಯನಿಂದಲೂ, ಇಂಗ್ಲಿಷ್ ಕವಿತೆಗಳ ಸ್ವಾರಸ್ಯವನ್ನು ಸಂ. ಶಿವರಾಮಶಾಸ್ತ್ರಿಗಳ ಸಹವಾಸದಿಂದಲೂ, ಸ್ವಂತ ಓದಿನಿಂದಲೂ ಪಡೆದುಕೊಂಡೆನೆಂದು ತೋರುತ್ತದೆ. ಬಾಲ್ಯದಲ್ಲಿಯೇ ಕಾಳಿದಾಸ. ಮಾಘ. ಭಾರವಿ. ನೈಷಧಾದಿಗಳ ಪರಿಚಯವಿಲ್ಲದಿದ್ದ ಪಕ್ಷದಲ್ಲಿ ನನ್ನ ಮನಸ್ಸು ಯಾವುದೇ ಕವಿತೆಯ ಭಾವಗ್ರಹಣದ ಕೌಶಲವನ್ನೂ, ನನ್ನ ವಿದ್ವನ್ಮಿತ್ರರಿಂದ ಹೊಗಳಿಸಿಕೊಳ್ಳುವ ಮಟ್ಟಕ್ಕೆ ಪಡೆಯುತ್ತಿದ್ದಿತೋ ಇಲ್ಲವೋ ಹೇಳಲಾರೆ.

ಆದರೆ ಪ್ರೊ॥ ಬಿ. ಎಂ. ಶ್ರೀ. ಅವರು ಕನ್ನಡ ಛಂದಸ್ಸುಗಳ ಮೇಲೆ ಕೆಲವೇ ಕೆಲವು ವಿದ್ಯಾರ್ಥಿಗಳಿಗಾಗಿ ಕೊಟ್ಟ ವಿಶೇಷೋಪನ್ಯಾಸಗಳ ವೈಖರಿಯೇ ಬೇರೆ ತರದ್ದು. ಈ ವಿಷಯದಲ್ಲಿ ಅವರದು ಪ್ರಗಲ್ಭ ಪಾಂಡಿತ್ಯ. ಅಪೂರ್ವವೂ ಪ್ರತಿಭಾ ಪ್ರಸೃತವೂ ಆದ ದೃಷ್ಟಿ. ಕನ್ನಡ ಷಟ್ಪದಿಗಳ ಕಟ್ಟಡಗಳನ್ನು ಒಡೆದು ವಿಷಯಕ್ಕೆ ತಕ್ಕಂತೆ ಸಣ್ಣ ಸಣ್ಣ ಪದ್ಯಗಳ ಕಟ್ಟೋಣಗಳನ್ನು ನಿರ್ಮಿಸಿಕೊಳ್ಳುವ ಹದವನ್ನು. ತಾವೇ ಲಕ್ಷ್ಯಗಳನ್ನು ಕಲ್ಪಿಸಿ, ತೋರಿಸಿಕೊಟ್ಟರು. ಅಂಶಗಣಗಳತ್ತ ಕಣ್ತೆರೆಸಿದರು. ದ್ರಾವಿಡ ಛಂದಸ್ಸಿನ ಸೊಗಸುಗಳನ್ನು ಮನಗಾಣಿಸಿದರು. ದೀರ್ಘವಾದ ಕಥನ ಕಾವ್ಯಕ್ಕೆ, ನಿಲ್ಲದೆ ಸಾಗುವ ಸರಳ ರಗಳೆಯೇ ಹೆಚ್ಚು ಸೂಕ್ತವೆಂದು ಮಾರ್ಗದರ್ಶನ ಮಾಡಿದರು. ಎರಡು + ಐದು ಮತ್ತು ಎರಡು ಮತ್ತು ನಾಲ್ಕು ಮಾತ್ರೆಗಳ ಛಂದೋಗತಿಗಳಿಗೆ ಚಾಲನೆ ಕೊಟ್ಟವರಲ್ಲಿ ಅವರೇ ಮೊದಲಿಗರೆಂದು ತೋರುತ್ತದೆ – "ಏಳು ಮಂಗಳದಿರು ಚೋಳರಾಯನಿಗೆ ಒಬ್ಬ ತಾಯ ಸಿರಿಮಕ್ಕಳು." "ಭಾರತದೀ ಸುಟಿಗಾಳಿಗೆ ಸಿಲ್ಕುತೆ ನಾನ್ ತಜಗಾದೆನ್" ಎಂಬಂಥವು. ಆದಿಪ್ರಾಸದಿಂದ ಅಂತ್ಯಪ್ರಾಸದೆಡೆಗೆ, ಒಳ ಪ್ರಾಸಗಳ ಕಡೆಗೆ ನಮ್ಮ ಗಮನವನ್ನು ಸೆಳೆದರು. "ಓಲೆಯಟ್ಟಿ ದೊರೆಯದೊರೆ, ತಲೆಯೊಳಿಟ್ಟು ನಡೆದು ಬರೆ. ಗಾಳಿ ಬೀಸೆ ಕೆರಳೆ ತೆರೆ. ಹೊಡೆದು ಚಿಮ್ಮಿ ಮಿನುಗೆ ನೊರೆ, ಬೀಸಿ ಬರ್ಪ ಕಡಲ ಘೋಷಲ್. ನೆಲವ ನುಂಗಿ ಕೊಳುವುದೆನಲ್. ನಾಡ ನಾಡರಾಯರೆಲ್ಲ, ಕೂಡ ಕೂಡ ನೆರೆದರೆಲ್ಲ" ಇತ್ಯಾದಿ. ಎಲ್ಲಕ್ಕಿಂತ ನನ್ನ ಮಟ್ಟಿಗೆ ಮುಖ್ಯವಾಗಿ ತೋರುವುದು ಅವರ ಪದ್ಯನಾಟಕಗಳ ಅಮೋಘವಾದ ರಚನೆಗಳು. ನಮ್ಮಲ್ಲಿ ಈ ಪ್ರಕಾರಗಳು ತೀರ ಹೊಸವು. ಗದ್ಯಪದ್ಯ ಮಿಶ್ರಿತ ನಾಟಕಗಳನ್ನು ಬಲ್ಲೆವು, ಆದರೆ ಮೊದಲಿನಿಂದ ಕೊನೆಯವರೆಗೆ ಛಂದಸ್ಸಿನ ವಿವಿಧ ಗತಿಯ ಕಟ್ಟೋಣಗಳು ಚೆಲ್ಲುವರಿದಿರುವ ಇಡೀ ದೃಶ್ಯಕಾವ್ಯಗಳು ಇಲ್ಲವೇ ಇಲ್ಲ. ಅವರ

ಯೂರೋಪಿನ ೧೬-೧೭-೧೮ರ ಶತಮಾನದಲ್ಲಿ ನಾಟಕಗಳೆಲ್ಲವೂ ಪ್ರಮುಖವಾಗಿ ಪದ್ಯದವುಗಳೇ – ಇದೊಂದು ಸೋಜಿಗ. ಈಗಲೂ ಪಾಶ್ಚಾತ್ಯ ದೇಶಗಳಲ್ಲಿ, ಅಮೆರಿಕಾದಲ್ಲಿ ಸಹ, ಪದ್ಯ ನಾಟಕಗಳಿಗೆಂದೇ ಮೀಸಲಾದ ರಂಗಸ್ಥಲಗಳಿವೆ. ನಮ್ಮಲ್ಲಿ ಇನ್ನೂ ಇವು ಮೂಡಬೇಕಾಗಿದೆ.

ಕನ್ನಡದ ಪ್ರಗತಿಗೆ ಆಚಾರ್ಯರು ಮಾಡಿದ ಕೆಲಸಗಳು ಒಂದೇ ಎರಡೇ. ಅವರು ಪ್ರಬಲವಾದ ಒಂದು ಹೊಸಗಾಳಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಬೀಸುವಂತೆ ಮಾಡಿ ಅದರ ಜಡತೆಯನ್ನು ನಾನಾ ಬಗೆಯಲ್ಲಿ ಮುರಿದರು. ಆದರೆ ಇದು ಹೊರ ನಾಡುಗಳ ಗಾಳಿ. ಈಗ ಅದು ಮಾಡುತ್ತಿರುವ ಹಾವಳಿಯನ್ನು ಅವರು ಕಂಡಿದ್ದರೆ, ಈಗಲೂ ಹೊಸ ಸಾಹಿತ್ಯ ಪ್ರಕಾರಗಳನ್ನು ಓದಿದ್ದರೆ ಏನು ಹೇಳುತ್ತಿದ್ದರೋ ಕಾಣೆ. ಇದರ ಬೇರುಡಿಸುವ ಬಿರುಸನ್ನು ಸ್ವಲ್ಪ ತಡೆಯುತ್ತಿದ್ದರೋ ಏನೋ.

ನಾನು ಅವರನ್ನು ಹತ್ತಿರದಿಂದ ಬಲ್ಲವನಲ್ಲ. ನನ್ನ ಗೆಳೆಯರು, ಮುಖ್ಯವಾಗಿ ತೀ. ನಂ. ಶ್ರೀ. ಅವರು ಅವರ ನೆಚ್ಚಿನ ಶಿಷ್ಯರಾಗಿದ್ದರು. ಇವರ ಮೂಲಕ ಹಾಗೂ ಇವರ ಜತೆಯಲ್ಲಿ, ನಾನು ಆಚಾರ್ಯರನ್ನು ಹಲವಾರು ಸಂತೋಷಕೂಟಗಳಲ್ಲಿ ಮತ್ತು ಸಭೆಗಳಲ್ಲಿ ಸಂಧಿಸುತ್ತಿದ್ದೆ. ನನ್ನ ಕೃತಿಗಳನ್ನೂ ಸಹ ಅವರ ಗಮನಕ್ಕೆ ತರಲು ನಾನು ಯತ್ನಿಸಿದ್ದು ನೆನಪಿಲ್ಲ. ನನ್ನ 'ಗೋಕುಲ ನಿರ್ಗಮನ'ವನ್ನು ಅವರು ಮೆಚ್ಚಿ ಕೊಂಡದ್ದನ್ನು ಬಲ್ಲೆ. ನನ್ನ ಮೊದಲೆರಡು ಕವನಗಳು 'ಕಿರಿಯರ ಕಾಣಿಕೆ'ಯಲ್ಲಿ ಸೇರಿ ಅವರಿಗೆ ಅಂಕಿತವಾಗಿವೆ. ಹೀಗೆ ಕವಿಯಾಗಿ ನನ್ನ ಮೊಟ್ಟಮೊದಲ ನಮಸ್ಕಾರ ಆಚಾರ್ಯರಿಗೆ ಸಂದಿದೆ. ಅವರ ಮುಚ್ಚುಕೋಟು, ಜರಿ ಮೈಸೂರು ರುಮಾಲನ್ನು ನಾನು ತುಂಬ ಮೆಚ್ಚಿಕೊಂಡಿದ್ದೆ. ಅವರು ಪಂಚೆ, ಒಳ ಅಂಗಿ, ಉತ್ತರೀಯದೊಂದಿಗೆ ಇದ್ದುದನ್ನು ನಾನು ಕಂಡದ್ದು ಒಂದೇ ಬಾರಿ. ಅದೊಂದು ಅಪೂರ್ವವಾದ ಆತ್ಮೀಯ ಸನ್ನಿವೇಶ. ಆಗ ಅವರು ಬಸವನಗುಡಿಯ ಒಂದು ಮನೆಯಲ್ಲಿ ವಿಶ್ರಾಂತ ಜೀವನ ನಡೆಸುತ್ತಿದ್ದರು. ಧಾರವಾಡಕ್ಕೆ ಹೋಗುವ ಮುನ್ನ ತೀ. ನಂ. ಶ್ರೀ. ಅವರನ್ನು ತಮ್ಮ ಮನೆಗೆ ಕರೆದು ಜತೆಯಲ್ಲಿ ಅವರಿಗೆ ಇಷ್ಟರಾದ ಇಬ್ಬರು ಸ್ನೇಹಿತರನ್ನು ಕರೆತರುವಂತೆ ಆಹ್ವಾನಿಸಿದರು. ತೀ. ನಂ. ಶ್ರೀ. ಅವರು ನನ್ನನ್ನೂ, ನಂ. ಶಿವರಾಮಶಾಸ್ತ್ರಿಗಳನ್ನೂ ಕರೆದುಕೊಂಡು ಆಚಾರ್ಯರ ಮನೆಗೆ ಹೋದರು. ಅಲ್ಲಿ ನಾವು ಕಂಡ ಬಿ. ಎಂ. ಶ್ರೀಯವರು ತೀರ ಬೇರೆ. ಸೌಜನ್ಯಮೂರ್ತಿ. ಪಂಚೆ, ಅರೆತೋಳಿನ ಮಲ್ಲಿನ ಅಂಗಿ, ಟವಲು, ಉಟ್ಟು ತೊಟ್ಟು ಹೊದೆದು ನಮ್ಮನ್ನು ಬಹು ಶುಚಿಯಾದ ಸ್ಮಿತದಿಂದ ಸ್ವಾಗತಿಸಿದರು. ತಾವೇ ಚೆಂಬಿನಲ್ಲಿ ನೀರು ಕೊಟ್ಟು ಒರೆಸಿಕೊಳ್ಳಲು ಟವಲನ್ನು ಹಿಡಿದರು. ಅಗ್ರದ ಬಾಳೆಯೆಲೆಯಲ್ಲಿ ಸೊಗಸಾದ ಭೋಜನ, ನಡುನಡುವೆ ಸರಸವಾದ ಸಂಭಾಷಣೆ (ನನ್ನ ಪಾಲು ಅತ್ಯಲ್ಪ). ಊಟ ವಾದ ಮೇಲೆ ಕಾಬೂಲು ದಾಳಿಂಬೆಹಣ್ಣಿನ ಬಿಡಿಗಳು ತುಂಬಿದ ಬಟ್ಟಲುಗಳು ನಮ್ಮ

ಕೈಗೆ ಬಂದವು. ತಾಂಬೂಲ ಚರ್ವಣವೂ ಆಯಿತು. ಬಹು ಒಳ್ಳೆಯ ಹಬ್ಬದ ದಿನ ಅದು. ಆಚಾರ್ಯರು ಆಗ ನನಗೆ ತೀರ ಹತ್ತಿರದವರಾಗಿ ತೋರಿದರು, ಆತ್ಮೀಯರಾದರು. ಹೀಗೆ ನಮ್ಮನ್ನು ತಮ್ಮ ನೈಜ ಸೌಜನ್ಯದಿಂದ ಆದರಿಸಿದ ಅವರ ಮೂರ್ತಿ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ನಿಂತಿದೆ. ಅಲ್ಲದೆ ಅವರ ಕೃತಿಗಳ ಮೇಲೆ ಅಪೂರ್ವವಾದ ಹಾಗೂ ಅಚಿಂತಿತವಾದ ಬೆಳಕನ್ನು ಚೆಲ್ಲುತ್ತಿದೆ. ಛಂದಸ್ಸಿನ ವಿಷಯದಲ್ಲಿ ಅವರ ಕಾಣಿಕೆ ಅನನ್ಯವಾದದ್ದು, ಅದರ ಪ್ರಭಾವ ಗಾಢವಾದದ್ದು. ಈ ವಿಷಯದಲ್ಲಿ ಅವರ ರೌದ್ರ ನಾಟಕಗಳು, ಪ್ರಗಾಥಗಳು ಅಮೋಘ ರಚನೆಗಳು. ಅವುಗಳ ಸೌಂದರ್ಯಕ್ಕೆ ಮನಸ್ಸು ಮಾರುಹೋಗಿ ನಮ್ರವಾಗುತ್ತದೆ ; ಹೃತ್ಪೂರ್ವಕ ಪ್ರಣಾಮಗಳನ್ನು ಸಲ್ಲಿಸುತ್ತದೆ.

# ಶ್ರೀ : ವ್ಯಕ್ತಿತ್ವ ಮತ್ತು ಬೋಧನ ವಿಧಾನ

– ಎನ್. ಅನಂತರಂಗಾಚಾರ್

ಆಚಾರ್ಯ ಬಿ. ಎಂ. ಶ್ರೀಯವರು ನನಗೆ ಪರಿಚಯವಾದುದು ೧೯೨೪ರಲ್ಲಿ. ಆಗ ಅವರಿಗೆ ೪೦ ವರ್ಷ. ನಾನು ಆ ವರ್ಷ ೧ನೆಯ ಬಿ. ಎ. ತರಗತಿಯ ವಿದ್ಯಾರ್ಥಿಯಾಗಿದ್ದೆ. ನನಗೆ ಅವರು ಇಂಗ್ಲಿಷ್ ನಾಟಕವನ್ನು ಪಾಠ ಹೇಳುತ್ತಿದ್ದರು. ಆಗಿನ ಕಾಲದ ಇತರ ಪ್ರಾಧ್ಯಾಪಕರಂತೆಯೇ ಅವರೂ ವಿದ್ಯಾರ್ಥಿಗಳೊಡನೆ ಸುಲಭವಾಗಿ ಬೆರೆಯುವವರಾಗಿರಲಿಲ್ಲ. ವಿದ್ಯಾರ್ಥಿಗಳು ದೂರದಿಂದಲೇ ಭಕ್ತಿಯಿಂದ ಕಾಣಬಹುದಾದ ವ್ಯಕ್ತಿ. ಇತರರೊಡನೆಯೂ ಅವರು ಹೆಚ್ಚು ಸಲಿಗೆಯಿಂದ ವ್ಯವಹರಿಸುತ್ತಿರಲಿಲ್ಲವೆಂದು ಜನರು ಆಡಿಕೊಳ್ಳುತ್ತಿದ್ದರು. ವಿದ್ಯಾರ್ಥಿಗಳೂ ಅವರನ್ನು 'ಸಿನಿಕ್' ಎಂದು ಕರೆಯುತ್ತಿದ್ದರು. ಇದಕ್ಕೆ ಅವರ ಗಂಭೀರವೂ ನಿಷ್ಕೃಷ್ಟವೂ ಆದ ವ್ಯವಹಾರ ಕಾರಣವಾಗಿತ್ತು. ಆದುದರಿಂದ ಅನೇಕರಿಗೆ ಅವರ ವ್ಯಕ್ತಿತ್ವದ ಅರಿವಾಗುವುದು ಕಷ್ಟವಾಗಿತ್ತು.

ಆದರೆ ನನಗೆ ಅವರ ನಿಕಟವರ್ತಿಯಾಗಿ ವ್ಯವಹರಿಸುವ ಸೌಲಭ್ಯ ದೊರೆಯಿತು. ನಾನು ಮಹಾರಾಜರವರ ಕಾಲೇಜಿನ ಕರ್ಣಾಟಕ ಸಂಘದ ಕಾರ್ಯದರ್ಶಿಯಾಗಿ ಮೂರು ವರ್ಷ ಕಾಲ ಕೆಲಸಮಾಡಿದೆ. ಆ ಮೂರು ವರ್ಷವೂ ಅವರು ಸಂಘದ ಅಧ್ಯಕ್ಷರಾಗಿದ್ದರು. ಅದರಿಂದ ಅವರ ಕೆಲವು ಸ್ವಭಾವಗಳ ಅರಿವಾಯಿತು. ಅವರು ಶೀಘ್ರಕೋಪಿಗಳು. ಹಾಗೆಯೇ ಸನ್ನಿವೇಶದ ಅರಿವಾಗಿ ಕ್ಷಮಾಪಣೆ ಕೇಳಿಕೊಂಡರೆ ಅತಿ ಶೀಘ್ರವಾಗಿ ಸುಮುಖರಾಗುತ್ತಿದ್ದರು. ತಮ್ಮ ಹಾಗೆಯೇ ಅವರು ಎಲ್ಲರಲ್ಲಿಯೂ ಶಿಸ್ತನ್ನೂ ಗಾಂಭೀರ್ಯವನ್ನೂ ನಿರೀಕ್ಷಿಸುತ್ತಿದ್ದರು. ಸಂಘದ ಕಾರ್ಯಕಲಾಪಗಳು ಕಟ್ಟುನಿಟ್ಟಾಗಿ ನಡೆದಾಗ ಅವರಿಗುಂಟಾಗುತ್ತಿದ್ದ ಸಂತೋಷಕ್ಕೆ ಎಲ್ಲೆಯಿಲ್ಲ. ಶಕ್ತಿ, ಪಾಂಡಿತ್ಯ, ವಿದ್ವತ್ತು ಇದ್ದಲ್ಲಿ ಅದಕ್ಕೆ ವಿಶೇಷ ಗೌರವವನ್ನು ಕೊಡುತ್ತಿದ್ದರು. ತಮ್ಮ ಆಚಾರ್ಯರಾದ ಪಂಡಿತ ವರದಾಚಾರ್ಯರಲ್ಲಿ ಅವರಿಟ್ಟಿದ್ದ ಭಕ್ತಿ ಅದಕ್ಕೆ ಪ್ರತ್ಯಕ್ಷ ಸಾಕ್ಷಿ. ಆಪ್ತರೆಂದು ತಿಳಿದಮೇಲೆ ಅವರಲ್ಲಿ ವಿಶೇಷ ಭಾವನೆ, ಅಭಿಮಾನ.

ಅವರಿಗಾಗಿ ತಮ್ಮನ್ನು ಮೀರಿಯೂ ಸಹಾಯಮಾಡುತ್ತಿದ್ದರು. ಕನ್ನಡ ಎಂ. ಎ. ಯಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಸ್ಥಾನಮಾನಗಳನ್ನು ಕಲ್ಪಿಸಲು ಅವರು ಪಟ್ಟ ಶ್ರಮ ಶ್ಲಾಘನೀಯ. ಅವರು ತಮ್ಮ ಕನ್ನಡದ ಅಭಿಮಾನವನ್ನು ಅವಕಾಶ ವಿದ್ದಾಗಲೆಲ್ಲ ಪ್ರದರ್ಶಿಸುತ್ತಿದ್ದರು. ಅವರು ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘದ ಅಧ್ಯಕ್ಷರಾಗಿದ್ದಾಗ ಕನ್ನಡಕ್ಕೆ ಸಂಬಂಧಪಟ್ಟ ಅನೇಕ ಕಾರ್ಯಕ್ರಮಗಳನ್ನು ಏರ್ಪಡಿಸಿದರು. ಕರ್ಣಾಟಕ ಸಂಘದಲ್ಲಿ ವಿವಿಧ ಕಾರ್ಯಕಲಾಪಗಳನ್ನೇರ್ಪಡಿಸಿ ಹೊರಗಡೆಯಿಂದ ಅನೇಕ ವಿದ್ವಾಂಸರನ್ನು ಕರೆಯಿಸಿ ಸನ್ಮಾನಿಸಿದರು. ಯಾವ ಕೆಲಸ ವನ್ನು ಮಾಡಬೇಕಾದರೂ ಬಹು ಉತ್ತಮ ರೀತಿಯಲ್ಲಿ ಮಾಡಬೇಕೆಂಬುದು ಅವರ ಆಕಾಂಕ್ಷೆ. ೧೯೨೭ರಲ್ಲಿ ಅವರ ಗದಾಯುದ್ಧ ನಾಟಕವನ್ನೂ ೧೯೨೯–೩೦ರಲ್ಲಿ ಅಶ್ವತ್ಥಾಮನ್ ನಾಟಕವನ್ನೂ ರಂಗಸ್ಥಳಕ್ಕೆ ಸಿದ್ಧಪಡಿಸುವಾಗ ಶ್ರೀಮಾನ್ ಎಸ್. ವಿ. ಕೃಷ್ಣಸ್ವಾಮಿ ಅಯ್ಯಂಗಾರ್ ಮತ್ತು ಎಸ್. ವಿ. ರಂಗಣ್ಣನವರೊಡನೆ ತಿಂಗಳುಗಟ್ಟಲೆ ಅಭ್ಯಾಸ ಮಾಡಿದರು. ಆ ಸಂದರ್ಭದಲ್ಲಿ ಅನೇಕ ಸಲ ತಾವೇ ವೇದಿಕೆಯ ಮೇಲೆ ಹತ್ತಿ ಅನೇಕ ಭಾಗಗಳನ್ನು ಅಭಿನಯಿಸಿ ತೋರಿಸುತ್ತಿದ್ದುದೂ ಉಂಟು.

ತೆಗಳಿಕೆ ಹೊಗಳಿಕೆಗಳು, ಅವರ ಮೇಲೆ ಬಹು ಶೀಘ್ರ ಪರಿಣಾಮಕಾರಿಯಾಗು ತ್ತಿದ್ದವು. ಅವರು ಕೆಲಕಾಲ ದೀರ್ಘರೋಗ ಪೀಡಿತರಾಗಿ ಹಾಸಿಗೆ ಹಿಡಿದರು. ದೀರ್ಘರಜೆಯನ್ನು ಪಡೆದು ಕೆಲಸಕ್ಕೆ ಹೋಗಲಾಗಲಿಲ್ಲ. ಆಗ ಅವರನ್ನು ಕಾಣುವುದಕ್ಕೆ ಬಂದ ಅವರ ಕೈಕೆಳಗಿನವರಾದ ಗಣ್ಯ ಅಧಿಕಾರಿಗಳೊಬ್ಬರು ಅವರನ್ನು ಮುಖಸ್ತುತಿಮಾಡಿ ವಿಶ್ರಾಂತಿ ತೆಗೆದುಕೊಳ್ಳಬೇಕೆಂದು ಹೇಳಿ ಆಗಿನ ವೈಸ್‌ಛಾನ್ಸರಲ್ಲಿ ಹೋಗಿ ಶ್ರೀಯುತರು ತಮ್ಮಲ್ಲಿ ಕೆಲಸಮಾಡುವುದಕ್ಕೆ ಇಷ್ಟವಿಲ್ಲದೆ ವ್ಯಾಧಿಯ ನೆಪ ದಲ್ಲಿ ರಜ ಪಡೆದಿದ್ದಾರೆ ಎಂದುಬಿಟ್ಟರು. ಮಾರನೆಯ ದಿನ ವೈಸ್‌ಛಾನ್ಸಲರವರೇ ಶ್ರೀಯವರ ಮನೆಗೆ ಬಂದು ಅವರ ಸ್ಥಿತಿಯನ್ನು ನೋಡಿ ಕನಿಕರಗೊಂಡು ನಡೆದ ವಿಷಯವನ್ನು ಅವರಿಗೆ ತಿಳಿಸಿಬಿಟ್ಟರು. ಸ್ವಲ್ಪಕಾಲದ ಮೇಲೆ ಅವರ ಮನೆಗೆ ಹೋದ ನಮ್ಮಗಳಿಗೆ ಅದನ್ನು ತಿಳಿಸಿ ವಿಶೇಷವಾಗಿ ನೊಂದುಕೊಂಡರು. ಅವರಿಗೆ ಸಂತೋಷವಾದಾಗಲೂ ಹಾಗೆಯೇ. ಕನ್ನಡದ 'ವೈರಮುಡಿಯಾದ' ನಾಲ್ವಡಿ ಕೃಷ್ಣರಾಜ ಒಡೆಯರು ಶ್ರೀಯವರಿಗೆ 'ರಾಜಸೇವಾಸಕ್ತ' ಎಂಬ ಪ್ರಶಸ್ತಿಯನ್ನು ಸೂಕ್ತ ಖಿಲ್ಲತ್ತುಗಳೊಡನೆ ದಯಪಾಲಿಸಿದರು. ಆ ಸಂದರ್ಭದಲ್ಲಿ ಅವರನ್ನು ಅಭಿನಂದಿಸಲು ನಾನು ಅವರ ಮನೆಗೆ ಹೋಗಿ ಅವರು ದರ್ಬಾರ್ ಹಾಲಿನಿಂದ ಬರುವುದನ್ನೇ ನಿರೀಕ್ಷಿಸುತ್ತಿದ್ದೆವು. ಬಂದ ತಕ್ಷಣ ಶ್ರೀಯವರು ತಮಗೆ ಮೆಚ್ಚಾಗಿ ಕೊಟ್ಟಿದ್ದ ಪದಕವನ್ನು ಅಲ್ಲಿದ್ದವರೆಲ್ಲರಿಗೂ ಪ್ರತ್ಯೇಕ ಪ್ರತ್ಯೇಕವಾಗಿ ತೋರಿಸಿ ಮಹಾರಾಜರನ್ನೂ ಅವರ ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್ ಅವರನ್ನೂ

ಬಾಯಿ ತುಂಬಾ ಹೊಗಳಿ ಅವರ ಕನ್ನಡದ ಅಭಿಮಾನವನ್ನು ಕೊಂಡಾಡಿದರು. ಗುಲ್ಬರ್ಗದಲ್ಲಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದ ವೈಭವದ ಬಗ್ಗೆ ಅವರ ಜೊತೆಯಲ್ಲಿ ಹೋಗಿದ್ದ ನಾವುಗಳು ನಮ್ಮ ಮೆಚ್ಚಿಗೆಯನ್ನು ತೋರ್ಪಡಿಸಿದಾಗ ಅವರಿಗಾದ ಸಂತೋಷ ಹೇಳತೀರದು. ಕೊನೆಕೊನೆಗೆ ಈ ಸ್ತೋತ್ರಪ್ರಿಯತೆ ಅವರಲ್ಲಿ ಸ್ವಲ್ಪ ಹೆಚ್ಚಾಯಿತೆಂದೇ ನಮ್ಮ ಅಭಿಪ್ರಾಯ. ಅವರ ಇಂಗ್ಲಿಷ್, ಕನ್ನಡ, ತಮಿಳ್, ಗ್ರೀಕ್ ಭಾಷೆಗಳ ಪಾಂಡಿತ್ಯವನ್ನು ಯಾರಾದರೂ ಮೆಚ್ಚಬೇಕು. ಕನ್ನಡ ಗ್ರಂಥಗಳನ್ನು ಚೆನ್ನಾಗಿ ವ್ಯಾಸಂಗಮಾಡುವುದಕ್ಕಾಗಿಯೇ ಅವರು ಸ್ವಶಕ್ತಿಯಿಂದ ಸಂಸ್ಕೃತ ಅಭ್ಯಾಸಮಾಡಿದ್ದರು. ಇವುಗಳ ತೌಲನಿಕ ಜ್ಞಾನವನ್ನು ಅವರ ಪಾಠ ಪ್ರವಚನಗಳಲ್ಲಿ ಯಾರು ಬೇಕಾದರೂ ಕಾಣಬಹುದಾಗಿತ್ತು.

೧೯೨೭ರಲ್ಲಿ ಶ್ರೀಯವರ ಸ್ವಂತ ಪರಿಶ್ರಮದಿಂದ ಪ್ರಾರಂಭವಾದ ಕನ್ನಡ ಎಂ. ಎ. ತರಗತಿಯ ವಿದ್ಯಾರ್ಥಿಯಾಗಿ ನಾನು ಅವರ ಕನ್ನಡದ ವಿದ್ಯಾರ್ಥಿಯಾದೆ. ಆಗ ಅವರು ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ಆಗಿದ್ದರು. ತಾವು ಪ್ರಾರಂಭಿಸಿದ ಎಂ. ಎ. ತರಗತಿಗೆ ಮೊದಲನೆಯ ಗೌರವ ಪ್ರಾಧ್ಯಾಪಕರಾದರು. ಕಾಲೇಜಿಗೆ ಹೋಗಲು ಅವಕಾಶವಿಲ್ಲದುದರಿಂದ ವಿಶ್ವವಿದ್ಯಾಲಯದ ಆಡಳಿತ ಕಛೇರಿಯ ಒಂದು ಭಾಗದಲ್ಲಿಯೇ ಪಾಠ ನಡೆಯುತ್ತಿತ್ತು. ಬಿ. ಎ. ತರಗತಿಗಳಲ್ಲಿ ಪಂಡಿತ ವರದಾಚಾರ್ಯರೂ, ಬಿ. ಕೃಷ್ಣಪ್ಪನವರೂ ಕೆಲವು ಕಾಲ ಎ. ಆರ್. ಕೃಷ್ಣಶಾಸ್ತ್ರಿಗಳೂ ಕನ್ನಡ ಪಾಠವನ್ನು ಹೇಳುತ್ತಿದ್ದರು. ಬಿ. ಎಂ. ಶ್ರೀಯವರ ಪಾಠದ ವೈಖರಿಯೇ ಬೇರೆ. ಬೂಟ್ಸಿನ ಶಬ್ದಮಾಡುತ್ತಾ ತೀವ್ರನಡಿಗೆಯಿಂದ ಶ್ರೀಯವರು ತರಗತಿಯನ್ನು ಪ್ರವೇಶ ಮಾಡಿದೊಡನೆಯೇ ಒಂದು ಮೋಹಕ ಆವರಣ ಕಲ್ಪಿತವಾಗುತ್ತಿತ್ತು. ಅವರ ಧೀರವಾದ ನಿಲುವು, ಶರೀರವನ್ನು ಸ್ವಲ್ಪ ಹಿಂದಕ್ಕೆ ಬಗ್ಗಿಸಿ ಅರ್ಧ ನಿಮೀಲಿತವಾದ ಊರ್ಧ್ವದೃಷ್ಟಿ ಬಹು ಆಕರ್ಷಕವಾಗಿರುತ್ತಿತ್ತು. ಅವರು ನಮಗೆ ಪಂಪ ಭಾರತವನ್ನು ತೆಗೆದುಕೊಳ್ಳುತ್ತಿದ್ದರು. ಅವರ ವಾಚನ ಶೈಲಿ, ಧ್ವನಿಯ ಏರಿಳಿತ, ನಿಲ್ಲಿಸುವ ತಾಣ – ಇವುಗಳು ಅರ್ಥ ಸೌಲಭ್ಯಕ್ಕೆ ಸಹಾಯ ಮಾಡುತ್ತಿದ್ದವು. ವಿವರಿಸುವಾಗ ಏಕಾರ್ಥದ ಅನೇಕ ಶಬ್ದಗಳ ಸುರಿಮಳೆಯನ್ನೇ ಸುರಿಸುವರು. ಹಾಗೆಯೇ ವಿವರಣಾತ್ಮಕವಾದ ಸಣ್ಣ ವಾಕ್ಯಭಾಗಗಳು, ವ್ಯಾಕರಣ ವಿಶೇಷ, ಱಳ ಅಕ್ಷರಗಳ ಪ್ರಯೋಗ, ಛಂದಸ್ಸಿನ ವಿಚಾರ, ಇತರ ಪ್ರಯೋಗಗಳ ತೋಲನ ಇತರ ಭಾಷೆಗಳ ಸಂಬಂಧ ಇವೆಲ್ಲವೂ ಅಲ್ಲಲ್ಲಿಯೇ ಸೂಚಿತವಾಗುತ್ತಿದ್ದುವು. ಇವೆಲ್ಲವೂ ಕಪ್ಪು ಹಲಗೆಯ ಪ್ರಯೋಗದಿಂದ ವಿಶದೀಕೃತವಾಗುತ್ತಿದ್ದವು. ಆಚಾರ್ಯರಿಗೆ ಅನೇಕ ಗ್ರಂಥಗಳ ಭಾಗವು ಕಂಠಸ್ಥವಾಗಿರುತ್ತಿತ್ತು. ಮಧ್ಯೆ ಮಧ್ಯೆ ಅವುಗಳ ಅನುವಾದದಿಂದ ಪ್ರಸಕ್ತ ಪಾಠದ ವಿಷಯವು ಸುಗಮವಾಗಿ ಅರಿವಾಗುತ್ತಿತ್ತು.

ಪ್ರತಿಯೊಂದು ಪಾಠವೂ ಒಂದು ಗಂಟೆಯ ಅವಧಿಯುಳ್ಳದ್ದಾಗಿದ್ದರೂ ನಿರ್ಬಂಧವಿಲ್ಲದುದರಿಂದ ಅದು ದೀರ್ಘವಾಗಿ ಬೆಳೆದು ೨ ಗಂಟೆಯನ್ನು ಮೀರಿರುವುದುಂಟು. ಪಾಠಗಳನ್ನು ಕೇಳಿ ಮನೆಗೆ ಹೋಗಿ ಅವುಗಳನ್ನು ವಾಚಿಸಿದರೆ ಚಿರಪರಿಚಿತವಾದಂತೆಯೇ ಕಾಣುತ್ತಿತ್ತು.

ತರಗತಿಯ ಪಾಠಗಳಿಗಿಂತ ಪ್ರವಚನಗಳ ವೈಭವವನ್ನು ಕಾಣಬೇಕಾದುದು ಅವರ ವ್ಯಾಸಂಗಗೋಷ್ಠಿಗಳಲ್ಲಿ. ನಾವು ಒಂದು ಸಲ ಚಾಮುಂಡಿ ಬೆಟ್ಟದ ಲಲಿತಾದ್ರಿಯಲ್ಲಿ ಶನಿವಾರ ಭಾನುವಾರ ಎರಡು ವ್ಯಾಸಂಗಗೋಷ್ಠಿಯನ್ನು ಏರ್ಪಡಿಸಿದ್ದೆವು. ಶ್ರೀಯವರು ಅವುಗಳಲ್ಲಿ ಒಂದು ದಿನ ಪಂಪಭಾರತದ ವಿಷಯವಾಗಿಯೂ, ಮತ್ತೊಂದು ದಿನ ಕನ್ನಡ ಸಾಹಿತ್ಯ ಚರಿತ್ರೆಯ ವಿಷಯವಾಗಿಯೂ ಪ್ರವಚನ ನಡೆಸಿದರು. ಆ ಗೋಷ್ಠಿಗೆ ತರಗತಿಯ ವಿದ್ಯಾರ್ಥಿಗಳೇ ಅಲ್ಲದೆ, ವೆಂಕಣ್ಣಯ್ಯನವರು, ತೀ. ನಂ. ಶ್ರೀ. ಮತ್ತಿತರ ಕೆಲವು ಅಧ್ಯಾಪಕರೂ ಹಾಜರಾಗಿದ್ದರು. ಆ ಗೋಷ್ಠಿ ಮಧ್ಯಾಹ್ನದ ಅರ್ಧಗಂಟೆಯ ಉಪಹಾರ ಕಾಲವನ್ನು ಬಿಟ್ಟು ನಾಲ್ಕು ಗಂಟೆಗಳ ಕಾಲ ನಡೆಯಿತು. ಮೊದಲಿಗೆ ಪಂಪಭಾರತದ ವಿಷಯವಾಗಿ ಪ್ರಾರಂಭಮಾಡಿ ಕನ್ನಡ ಸಾಹಿತ್ಯದ ಆದಿ, ಆದಿಕಾಲದ ಚಂಪೂ ಗ್ರಂಥಗಳು, ಅವುಗಳ ಸ್ವರೂಪ, ಪಂಪನ ಜೀವನಚರಿತ್ರೆ, ಅವನ ಆದಿಪುರಾಣ, ಅದರಲ್ಲಿ ವರ್ಣಿತವಾಗಿರುವ ತೀರ್ಥಂಕರರ ಚರಿತ್ರೆ, ಭವಾವಳಿಗಳು, ಪಂಚಕಲ್ಯಾಣ, ಪಂಪ ಭಾರತಕ್ಕೆ ಮೂಲ, ಅರಿಕೇಸರಿಯ ಸಮನ್ವಯ, ಸಮಸ್ತ ಭಾರತದ ಸ್ವರೂಪ, ನಾಯಕನ ವಿಷಯ, ಕೃಷ್ಣ ದುರ್ಯೋಧನ ಪಾತ್ರಗಳ ವ್ಯತ್ಯಾಸ, ದುರ್ಯೋಧನನ ದುರಂತತೆ, ಮುಂದೆ ರನ್ನ ಅದನ್ನು ಉಪಯೋಗಿಸಿಕೊಂಡ ರೀತಿ, ಪಂಪನ ದೇಶಾಭಿಮಾನ ಎಲ್ಲವನ್ನೂ ಅನುವಾದಗಳ ಸಹಿತ ನಿರೂಪಿಸಿದರು.

ಮಾರನೆಯ ದಿನ ಕನ್ನಡ ಸಾಹಿತ್ಯ ಚರಿತ್ರೆಯ ಆದಿ, ಅವುಗಳ ವಿಭಾಗ, ಜೈನ, ವೀರಶೈವ, ಬ್ರಾಹ್ಮಣ ಕವಿಗಳು ಅವುಗಳ ಸ್ವರೂಪ, ಅವುಗಳಲ್ಲಿನ ಕವಿಗಳು, ವಚನ ದಾಸ ಸಾಹಿತ್ಯಗಳಿಗಿರುವ ವೈಷಮ್ಯ, ಚಿಕ್ಕದೇವರಾಜ ಮತ್ತು ಮುಮ್ಮಡಿ ಕೃಷ್ಣರಾಜರ ಕಾಲದ ಸಾಹಿತ್ಯ ಮತ್ತು ಆಧುನಿಕ ಕಾಲದ ರೂಪ್ರರೇಖೆಗಳು ಇವುಗಳನ್ನು ಸೂಕ್ತ ಅನುವಾದಗಳೊಡನೆ ತಿಳಿಯಪಡಿಸಿದರು.

ಇಂತಹ ಪ್ರವಚನವನ್ನು ಕೇಳಿದವರು ಇಂತಹುದು 'ನ ಭೂತೋ ನ ಭವಿಷ್ಯತಿ' ಎಂದು ಹೇಳಿರುವುದರಲ್ಲಿ ಸಂದೇಹವಿಲ್ಲ. ಆದರೆ ಶ್ರೀಯವರು ಮುಂದೆ ೧೫-೧೬ ವರ್ಷಗಳಲ್ಲಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಮಾಡಿದ ಆಶು ಭಾಷಣಗಳನ್ನು ಕೇಳಿದವರಿಗೆ ಇದು ಆಶ್ಚರ್ಯವೆಂದು ಕಾಣುವುದಿಲ್ಲ. ಮುಂದೆ ಆಚಾರ್ಯರು, ಸಂಘಸಂಸ್ಥೆಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ, ಸಮ್ಮೇಳನದ ಅಧ್ಯಕ್ಷರಾಗಿ, ಅಧಿಕಾರ ಪೀಠಗಳಿಂದ ಅಪ್ಪಣೆ ಕೊಡಿಸಿದ ಭಾಷಣಗಳಲ್ಲಿ ಮೇಲೆ

ಹೇಳಿದ ಎಲ್ಲ ಗುಣಗಳು ಪ್ರತಿಬಿಂಬಿತವಾಗಿವೆಯೆಂದು ನಿಸ್ಸಂದೇಹವಾಗಿ ಹೇಳಬಹುದು. ಕನ್ನಡದ ಸಂಬಂಧವಾದ ಎಲ್ಲ ಸಾಧನೆಗಳೂ ಇಂತಹ ವಾಗ್ಮಿತೆಯಿಂದಲೂ ಆತ್ಮೀಯ ಗುಣದಿಂದಲೂ ಸಾಧ್ಯವಾಗಿದೆಯೆಂದು ಹೇಳಬಹುದಲ್ಲವೇ !

# ಬಿ. ಎಂ. ಶ್ರೀ. – ನಾನು ಕಂಡಂತೆ

– ಸ. ಸ. ಮಾಳವಾಡ

ಬಿ. ಎಂ. ಶ್ರೀ. ಸಂಪರ್ಕ ನನಗೆ ಪ್ರಥಮತಃ ಒದಗಿ ಬಂದದ್ದು ೧೯೩೪-೩೫ ರಲ್ಲಿ. ಆ ವರುಷ ನಾನು ಕೊಲ್ಲಾಪುರದಲ್ಲಿ ಎಂ. ಎ. ವರ್ಗದ ವಿದ್ಯಾರ್ಥಿಯಾಗಿದ್ದೆ. ಆಗ ಶ್ರೀ ಅವರು ಆಮಂತ್ರಿತರಾಗಿ ಕೊಲ್ಲಾಪುರಕ್ಕೆ ಬಂದಿದ್ದರು. ಷೇಕ್ಸ್‌ಪಿಯರ್ ನಾಟಕಗಳನ್ನು ಕುರಿತ ಅವರ ಅಮೋಘ ಉಪನ್ಯಾಸ ಮರಾಠಿ ಭಾಷಿಕರನ್ನು ಬೆಕ್ಕಸ ಬೆರಗುಗೊಳಿಸಿತು. ಕನ್ನಡ ಭಾಷಿಕರ ಬಗೆಗೆ ಅವರಲ್ಲಿ ಹೆಚ್ಚಿನ ಗೌರವ ಭಾವನೆಯನ್ನು ಮೂಡಿಸಿತು. ಆಗ ನಾವು ಕೆಲವರು ಕೊಲ್ಲಾಪುರದಲ್ಲಿ ಕನ್ನಡ ಚಟುವಟಿಕೆಗಳನ್ನು ಸಂಘಟಿಸಿದ್ದೆವು. ಅವುಗಳಲ್ಲಿ ನನ್ನ ಉತ್ಸಾಹಪೂರ್ಣ ಪಾತ್ರವನ್ನು ಅರಿತುಕೊಂಡ ಶ್ರೀ ಅವರು ನನ್ನ ಬಗೆಗೆ ಮೆಚ್ಚಿಗೆಯ ಮಾತುಗಳನ್ನು ಆಡಿದರು. ಹೀಗೆ ಆರಂಭವಾಯಿತು, ನಮ್ಮ ಪರಿಚಯ.

೧೯೩೬ ವ್ಯಾಸಂಗ ವರುಷ ನಾನು ಕರ್ನಾಟಕ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕನಾಗಿ ನೇಮಕಗೊಂಡೆ. ಶ್ರೀ ಅವರು ನನ್ನನ್ನು ಅಭಿನಂದಿಸಿ ಬರೆದ ಪತ್ರದಲ್ಲಿ ಕಿರಿಯನಾದ ನನ್ನ ಬಗೆಗೆ ಹೆಚ್ಚಿನ ವಾತ್ಸಲ್ಯ, ಅಭಿಮಾನಗಳನ್ನು ವ್ಯಕ್ತಪಡಿಸಿದ್ದರು. ಆ ವರುಷ ಹಂಪೆಯಲ್ಲಿ ನಡೆದ ವಿಜಯನಗರ ಸಾಮ್ರಾಜ್ಯ ಸ್ಮಾರಕೋತ್ಸವದ ಸಂದರ್ಭದಲ್ಲಿ ನಮ್ಮ ಸಂಪರ್ಕ ಹೆಚ್ಚು ನಿಕಟವಾಗುವ ಸನ್ನಿವೇಶಗಳು ಒದಗಿ ಬಂದವು.

ಹೊಸಗನ್ನಡ ಕಾವ್ಯ ರಚನೆಯಲ್ಲಿ, ಹಳಗನ್ನಡ ಕಾವ್ಯ ವಿಮರ್ಶೆಯಲ್ಲಿ, ಕನ್ನಡ ಪ್ರೇಮವನ್ನು ಉಕ್ಕೇರಿಸುವಲ್ಲಿ ಅಂದು ಶ್ರೀ ಅವರಿಗೆ ಬಹು ಎತ್ತರದ ಸ್ಥಾನವಿತ್ತು. ಅಂತಹರ ಒಡನಾಟ ನಮಗೆ ಹೆಮ್ಮೆಯನ್ನುಂಟುಮಾಡುತ್ತಿತ್ತು. ಕರ್ನಾಟಕ ಕಾಲೇಜು ಉತ್ತರ ಕರ್ನಾಟಕದಲ್ಲಿ ಆಗ ಏಕಮೇವ ಸರಕಾರಿ ಕಾಲೇಜು ಆಗಿತ್ತು. ಅಲ್ಲಿ ಕನ್ನಡ ಅಧ್ಯಾಪಕನಾದ ನನ್ನನ್ನು ಶ್ರೀಯವರು ಮುಂಬಯಿ ಸರಕಾರದ ಕನ್ನಡ ಪ್ರತಿನಿಧಿಯೆಂದು ಭಾವಿಸಿದರು. ಕರ್ನಾಟಕ ಏಕೀಕರಣ ಸಾಧನೆಯ

ದೃಷ್ಟಿಯಿದ್ದ ಅವರು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಭ್ಯಾಸ ನಿಯಾಮಕ ಮಂಡಲಕ್ಕೆ ನನ್ನ ನಾಮಕರಣವಾಗುವ ವ್ಯವಸ್ಥೆ ಮಾಡಿದರು. ಈ ವ್ಯವಸ್ಥೆ ಬಹುಕಾಲದವರೆಗೆ ಮುಂದುವರಿಯಿತು. ಆ ಅವಧಿಯಲ್ಲಿ ನಾನು ಶ್ರೀ ಅವರ ಮತ್ತು ಮೈಸೂರು ವಿಶ್ವವಿದ್ಯಾನಿಲಯದ ಇತರ ಹಿರಿಯ ಕನ್ನಡ ವಿದ್ವಾಂಸರ ಸ್ನೇಹ ಪಡೆಯುವಂತಾಯಿತು. ಅಂದಿನ ಇತರ ವಿದ್ವಾಂಸರು ಶ್ರೀ ಅವರ ಬಗೆಗೆ ಅಪಾರ ಗೌರವ ತೋರಿಸುತ್ತಿದ್ದುದನ್ನು ನಾನು ಕಂಡುಕೊಂಡೆ.

ನಮ್ಮ ಸಭೆಗಳು ಆಗ ಬೆಂಗಳೂರಿನಲ್ಲಿ ಸೇರುತ್ತಿದ್ದವು. ಆಗ ಶ್ರೀ ಅವರು ಅಲ್ಲಿಯೇ ವಾಸಿಸುತ್ತಿದ್ದರು. ಪ್ರಥಮಸಲ ನಾನು ಸಭೆಗೆ ಹೋದಾಗ, ನಾನು ಶ್ರೀ ಅವರ ಅತಿಥಿಯಾಗಬೇಕಾಯಿತು. ಆಗ ಪುಣೆ-ಬೆಂಗಳೂರು ಮೇಲ್ ಟ್ರೈನ್ ಬೆಂಗಳೂರಿಗೆ ನಸುಕಿನಲ್ಲಿ ತಲುಪುತ್ತಿತ್ತು. ಡಿಸೆಂಬರ್ ತಿಂಗಳು ಕೊರೆಯುವ ಚಳಿಯಲ್ಲಿ ನನ್ನನ್ನು ಸ್ವಾಗತಿಸಲು ಶ್ರೀಯವರು ಬೆಂಗಳೂರು ರೈಲ್ವೆ ನಿಲ್ದಾಣಕ್ಕೆ ಬಂದಿದ್ದ ಸಂದರ್ಭ ನನಗೆ ಹೃದಯಸ್ಪರ್ಶಿಯೆನಿಸಿತ್ತು. ಅವರ ಗೃಹದಲ್ಲಿ ಅತಿಥಿಯಾಗಿ ಅವರ ಮತ್ತು ಕುಟುಂಬದ ಇತರ ಸದಸ್ಯರ ಆತಿಥ್ಯದ ಸವಿಯನ್ನು ನಾನು ಸವಿದೆ. ವಿದ್ವತ್ತು, ಸ್ಥಾನಮಾನಗಳ ದೃಷ್ಟಿಯಿಂದ ಜೇಷ್ಠರಾಗಿದ್ದ ಅವರು ನನ್ನ ಬಗೆಗೆ ತೋರಿದ ಆತ್ಮೀಯತೆ ನನ್ನ ಭಾಗ್ಯವೆಂದು ಭಾವಿಸಿದೆ. ಶ್ರೀ ಅವರಿಗಾದರೋ ನಾನೊಬ್ಬ ಕನ್ನಡದ ಕಾರ್ಯಕರ್ತ ಎಂಬ ಅಭಿಮಾನ. ಹೀಗೆ ವಿಶಾಲ ಕರ್ನಾಟಕದಲ್ಲಿ ಶ್ರೀ ಅವರು ಕನ್ನಡ ಬಾಂಧವ್ಯವನ್ನು ಬೆಳೆಸಿದರು.

ಕನ್ನಡ ಬಾವುಟವನ್ನು ಎತ್ತರಕ್ಕೆ ಹಾರಿಸುತ್ತ ಶ್ರೀ ಅವರು ಆಗ ಇಡಿಯ ಕರ್ನಾಟಕದಲ್ಲಿ ಕನ್ನಡ ಭಾಷಿಕರಿರುವ ಪರಪ್ರಾಂತಗಳಲ್ಲಿ ಸಂಚರಿಸಿದರು. ಧಾರವಾಡ ಪ್ರದೇಶಕ್ಕೆ ಬಂದಾಗ ನಮ್ಮ ಮನೆಗೆ ಬಂದು ನಮಗೆ ಸಂತಸ ಒದಗಿಸುತ್ತಿದ್ದರು. ಸಾರ್ವಜನಿಕ ಸಭೆಗಳಲ್ಲಿ ನಮ್ಮ ಬಗೆಗೆ ಒಳ್ಳೆಯ ಮಾತುಗಳನ್ನು ಹೇಳುತ್ತಿದ್ದರು. ಕನ್ನಡ ಕಾರ್ಯಕರ್ತರನ್ನು ಶ್ರೀ ಅವರು ತಮ್ಮ ಕುಟುಂಬದ ಸದಸ್ಯರೆಂದು ಭಾವಿಸುವಂತಿತ್ತು.

೧೯೩೮-೪೨ರ ಅವಧಿಯಲ್ಲಿ ಶ್ರೀ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಆಡಳಿತೆಯ ಹಿರಿಯರಾಗಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಚಟುವಟಿಕೆಗಳಿಗೆ ಮಹಾಪೂರ ಬಂದ ಅವಧಿಯದು. ಆಗ ನಾನು ಕೆಲಕಾಲ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಸಮಿತಿ, ಬೇರೆ ಕೆಲವು ಉಪಸಮಿತಿಗಳ ಉತ್ಸಾಹೀ ಸದಸ್ಯನಾಗಿದ್ದೆ. ವಸಂತ ಸಾಹಿತ್ಯೋತ್ಸವ ಇತ್ಯಾದಿಗಳಲ್ಲಿ ಭಾಗವಹಿಸುತ್ತಿದ್ದೆ. ಶ್ರೀ ಅವರ ಒಡನಾಟ ಒದಗಿಬರುವ ಯಾವ ಸಂದರ್ಭವನ್ನೂ ತಪ್ಪಿಸಿಕೊಳ್ಳುತ್ತಿರಲಿಲ್ಲ. ಅಂತಹ ಆಕರ್ಷಣೆ ಅವರದಾಗಿತ್ತು.

ಅಪಾರ ವಿದ್ವತ್ತು, ಪರಿಶುದ್ಧ ಅಭಿರುಚಿ, ಉದಾತ್ತ ಮನೋಭಾವ ಗಂಭೀರ ಸ್ವಭಾವ ಕನ್ನಡದ ಬಗೆಗೆ ನಿಸ್ಸೀಮ ಪ್ರೇಮ, ಸಮರ್ಪಣೆಯ ಭಾವದಿಂದ ತ್ಯಾಗ ಪೂರ್ವಕ ಸಾರ್ವಜನಿಕ ಸೇವೆ ಗೈಯ್ಯುವ ದೃಷ್ಟಿ ಜನಮನಕ್ಕೆ ಒಳ್ಳೆಯ ಸಂಸ್ಕಾರ ಒದಗಿಸಬಲ್ಲ ನಿಲುವು – ಇವುಗಳಿಂದಾಗಿ ಶ್ರೀ ಅವರು ಅಂದಿನ ತಲೆಮಾರಿನವರಿಗೆ ಪೂಜ್ಯ ಹಿರಿಯರಾಗಿ ಪರಿಣಮಿಸಿದರು. ಅಂತಹರ ಆತ್ಮೀಯನಾಗುವ ಸಂತಸ ನನ್ನದಾಗಿತ್ತು.

೧೯೪೪ರಲ್ಲಿ ಶ್ರೀ ಅವರು ಜೆ. ಎಸ್. ಎಸ್. ಕಾಲೇಜಿನ ಪ್ರಿನ್ಸಿಪಾಲರಾಗಿ ಧಾರವಾಡಕ್ಕೇ ಆಗಮಿಸಿದರು. ಆಗ ನನಗಾದ ಸಂತಸಕ್ಕೆ ಮಿತಿಯಿರಲಿಲ್ಲ. ಕರ್ನಾಟಕ ಕಾಲೇಜಿಗೆ ಅವರನ್ನು ಆಮಂತ್ರಿಸಿದೆ. ಹಿಂದೆ ಅವರು ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಆಗಿ ಕಾರ್ಯ ಮಾಡಿದ್ದನ್ನು ಗಮನಿಸಿ ನಾನು ಹೀಗೆ ಹೇಳಿದೆ: "ಧಾರವಾಡಕ್ಕೆ ಆಗಮಿಸಿದ ಶ್ರೀ ಅವರು ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ ಶ್ರೀಕಾರ ಹಾಕುವಂತಾಗಲಿ."

ಆದರೆ ಕ್ರೂರವಿಧಿಯ ಸಂಕಲ್ಪ ಬೇರೆಯಾಗಿತ್ತು. ೧೯೪೬ ಜನವರಿ ೫ರಂದು ಶ್ರೀ ಅವರು ಧಾರವಾಡದಲ್ಲಿ ಕೊನೆಯುಸಿರು ಎಳೆದರು. ಧಾರವಾಡದ ಮಣ್ಣಿನಲ್ಲಿ ಒಂದಾದರು. ಅವರ ಅಂತ್ಯ ಸಂಸ್ಕಾರದಲ್ಲಿ ಪಾಲುಗೊಂಡು ನನ್ನ ಅಶ್ರುತರ್ಪಣ ಸಲ್ಲಿಸಿದೆ.

ಶ್ರೀ ಅವರ ಒಡನಾಟ ನನಗೆ ಸಾಧ್ಯವಾದ ಆ ಒಂದು ದಶಕವು ನನ್ನ ಬಾಳಿನ ಮಹತ್ವದ ಭಾಗವೆಂದು ನಾನು ಭಾವಿಸಿದ್ದೇನೆ. ಅಂತಹ ಉದಾರಜೀವಿಗಳು, ಘನತೆ ವೆತ್ತ ವ್ಯಕ್ತಿತ್ವ ಪಡೆದವರು ಅತಿ ವಿರಳವಾಗಿರುವ ಈ ಕಾಲದಲ್ಲಿ ಶ್ರೀ ಅವರ ನೆನಹು ಹೃದಯಕ್ಕೆ ನಲಿವನ್ನು, ಮನಸ್ಸಿಗೆ ತಂಪನ್ನು ತರುತ್ತಿದೆ.

# ಬಿ. ಎಂ. ಶ್ರೀ. ಪರಿಚಯ ಮತ್ತು ನೆನಪು

– ಗೊರೂರು ರಾಮಸ್ವಾಮಿ ಅಯ್ಯಂಗಾರ್

ನಾನು ಬಿ. ಎಂ. ಶ್ರೀಕಂಠಯ್ಯನವರ ಹೆಸರನ್ನು ಮೊದಲು ಕೇಳಿದುದು ಅವರು ಇಂಗ್ಲಿಷ್ ವಿದ್ವಾಂಸರು ಇಂಗ್ಲಿಷ್ ವಾಗ್ಮಿ ಎಂದು. ಅದು ೧೯೨೦-೨೧ರ ಕಾಲವಿರಬಹುದು. ಆಗ ಭಾರತದಲ್ಲಿ ರಾಜಕೀಯ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆದು ನಮ್ಮ ಜನರ ಆತ್ಮಾಭಿಮಾನ ಭಾರತ ಮತ್ತು ಭಾರತ ಸಂಸ್ಕೃತಿಯ ಅಭಿಮಾನ ಇವು ಅತ್ಯುನ್ನತಿಗೆ ಏರಿದ್ದ ಕಾಲ. ಆಗ ಶ್ರೀಕಂಠಯ್ಯನವರು ಯಾವುದೋ ಸಂದರ್ಭದಲ್ಲಿ ಷೇಕ್ಸ್‌ಪಿಯರನ್ನು ಕುರಿತು ಮಾತನಾಡುತ್ತ ಇಂಗ್ಲಿಷ್ ಸಾಹಿತ್ಯವನ್ನು ತುಂಬ ಪ್ರಶಂಸಿಸಿ ಮಾತನಾಡಿದ್ದರು. ಉತ್ತರ ಕರ್ನಾಟಕದ ಒಂದು ಪತ್ರಿಕೆಯ ಸಂಪಾದಕೀಯದಲ್ಲಿ ಶ್ರೀಕಂಠಯ್ಯನವರ ಈ ಅತಿ ಆಂಗ್ಲ ಅಭಿಮಾನವನ್ನು ಟೀಕಿಸಿ "ಶ್ರೀಕಂಠಯ್ಯನವರೋ ಶಿತಿಕಂಠಯ್ಯನವರೋ" ಎಂದು ಬರೆದಿದ್ದಿತು. ಶ್ರೀಕಂಠಯ್ಯನವರ ಹೃದಯದಲ್ಲಿ ಅಡಗಿದ್ದ ಉಜ್ವಲ ಭಾಷಾಪ್ರೇಮ ಕನ್ನಡ ಸಾಹಿತ್ಯ ವಿದ್ವತ್ತು ಯಾರಿಗೂ ಗೊತ್ತಾಗಲಿಲ್ಲ.

ಶ್ರೀಕಂಠಯ್ಯನವರು ಇಂಗ್ಲಿಷ್ ಸಾಹಿತ್ಯದ ಅತ್ಯಧಿಕ ಪ್ರೇಮಿಗಳು ಎಂಬುದು ಎಲ್ಲರಿಗೂ ಗೊತ್ತಾಗಿದ್ದಿತು. ಆದರೆ ಅವರು ಕನ್ನಡ ಸಾಹಿತ್ಯವನ್ನೂ ಅಷ್ಟೇ ಪ್ರೀತಿಸುತ್ತಿದ್ದರು, ಕನ್ನಡ ನಾಡನ್ನೂ ಅಷ್ಟೇ ಪ್ರೀತಿಸುತ್ತಿದ್ದರು ಎಂಬುದು ಅನೇಕರಿಗೆ ತಿಳಿದಿರಲಿಲ್ಲ. ಅಂದಿನ ಕಾಲದಲ್ಲಿ ಕನ್ನಡದ ಕೆಲಸವನ್ನು ಬಹಳ ಕಷ್ಟ ಪರಿಸ್ಥಿತಿಯಲ್ಲಿ ಮಾಡಬೇಕಾಗಿತ್ತು. ಅದರಲ್ಲಿಯೂ ದೇಶೀಯ ಸಂಸ್ಥಾನದಲ್ಲಿ ರೆಸಿಡೆಂಟನ ರಣಹದ್ದಿನ ಕಣ್ಣು, ಚಾಡಿಕೋರರಾದ ನಮ್ಮವರೇ ಆದ ಪಿಸುಣರ ನಡತೆ – ಇವುಗಳಿಂದ ನಮ್ಮ ನಾಡ ಸಾಹಿತ್ಯ ಪ್ರೇಮವನ್ನು ಸಹ ಬಹಿರಂಗವಾಗಿ ಘೋಷಿಸಿಕೊಳ್ಳುವುದು ಕಷ್ಟವಾಗಿತ್ತು. ಭಾಷಾಪ್ರೇಮವನ್ನು ನಾಡಪ್ರೇಮವೆಂದು ಭಾವಿಸಿ – ಪರಕೀಯ ಸರ್ಕಾರಕ್ಕೆ ನಾಡಪ್ರೇಮ ರಾಜದ್ರೋಹವಷ್ಟೆ – ನಮ್ಮನ್ನು ಶಿಕ್ಷಿಸುತ್ತಿದ್ದ ಕಾಲ ಅದು. ಇಂಗ್ಲಿಷ್ ಉಪಾಧ್ಯಾಯರಾಗಿದ್ದರೂ ಶ್ರೀಕಂಠಯ್ಯನವರಿಗೆ ನಮ್ಮ ಭಾಷೆ ಇಂಗ್ಲಿಷಿನ ಮಟ್ಟಕ್ಕೆ

ಏರಬಲ್ಲದೆ ? ಎಂಬ ಕಾತರ ಇತ್ತು. ಅವರು ಒಂದು ಕಡೆ ಹೀಗೆ ಹೇಳಿದ್ದರು : "ಅಂತಹ ಗಾಢಾಂಧಕಾರದ ಕಾಲದಲ್ಲಿ ಸಹ, ಇಂಗ್ಲಿಷಿನ ಉಪಾಧ್ಯಾಯರಾಗಿದ್ದರೂ ಇಂಗ್ಲಿಷನ್ನೇ ಎಷ್ಟು ಹೆಚ್ಚಾಗಿ ಪ್ರೀತಿಸಿ ಸವಿದು ಪ್ರಸಂಗ ಮಾಡುತ್ತಿದ್ದರೂ ನಮ್ಮ ದೇಶಭಾಷೆ ಕನ್ನಡ ಈ ಮಟ್ಟಕ್ಕೆ ಬರುವುದೆ ಎಂದು ಕಿಂಕ್ಕತಿಯಿಂದಲೇ ನಾನು ರಹಸ್ಯ ವಾಗಿ ಇಂಗ್ಲಿಷಿನ ಮಟ್ಟುಗಳನ್ನೆಲ್ಲ ಕನ್ನಡದಲ್ಲಿ ನನ್ನ ಆನಂದಕ್ಕಾಗಿಯೇ ಬಳಸಿ ಬಳಸಿ ಸಂತೋಷಪಟ್ಟು ಅವಕಾಶ ಸಿಕ್ಕಿದರೆ ಕನ್ನಡವೂ ಸಹ ಇಂಗ್ಲಿಷ್ ಮಾಡುವ ಎಲ್ಲ ಕೆಲಸವನ್ನೂ ಮಾಡಬಲ್ಲದು ಎಂದು ಮನದಟ್ಟು ಮಾಡಿಕೊಂಡೆ" ಎಂದಿದ್ದಾರೆ. ಹೀಗೆ ಬೆಳೆದ ಕನ್ನಡದ ಅಭಿಮಾನವನ್ನು ಬಿ. ಎಂ. ಶ್ರೀಯವರೇ ಕ್ರಮೇಣ ಪೆಳ್ಳಾವೆ ವೆಂಕಟನಾರಣಪ್ಪ, ಕರ್ಪೂರದ ಶ್ರೀನಿವಾಸರಾಯರು, ಮಾಸ್ತಿ, ಡಿ. ವಿ. ಜಿ., ಟಿ. ಎಸ್. ವೆಂಕಣ್ಣಯ್ಯ, ಎ. ಆರ್. ಕೃಷ್ಣಶಾಸ್ತ್ರಿ ಇವರಲ್ಲೆಲ್ಲ ಚರ್ಚಿಸಿ, ಅನೌಪಚಾರಿಕವಾಗಿ ಒಂದು ನಿರ್ಣಯಕ್ಕೆ ಬಂದು ಸಾಹಿತ್ಯ ಸೃಷ್ಟಿಗೆ ತೊಡಗಿದರು. ಕನ್ನಡದಲ್ಲಿ ಉಂಟಾದ ಆ ಹೊಸ ಉತ್ಸಾಹವೇ ನವೋದಯ. ನವೋದಯವೆಂದರೆ ನವ ಉತ್ಸಾಹವೇ ಹೊರತು ಬೇರೇನೂ ಅಲ್ಲ.

ನನ್ನ ಹಳೆಯ ಸ್ನೇಹಿತರಾದ ಸಂ. ಶಿವರಾಮಶಾಸ್ತ್ರಿಗಳು – ಅನಂತರ ಸಂಸ್ಕೃತ ಪ್ರಾಧ್ಯಾಪಕರಾದವರು – ಒಂದು ದಿನ ನನಗೆ ಬಿ. ಎಂ. ಶ್ರೀಕಂಠಯ್ಯನವರ ಕೆಲವೇ ಕವನಗಳಿದ್ದ ಒಂದು ಸಣ್ಣ ಪುಸ್ತಕ – ಆಗ ಅದಕ್ಕೆ ಎರಡು ಆಣೆ ಇದ್ದಿರ ಬಹುದು, ಡೆಮ್ಮಿ ಆಕಾರದಲ್ಲಿ ಎಂದು ಜ್ಞಾಪಕ – ಕೊಟ್ಟರು. ಮತ್ತು ಅದರಲ್ಲಿದ್ದ ಒಂದು ಕವಿತೆಯ ಕೆಲವು ಸಾಲುಗಳನ್ನು ಬಾಯಲ್ಲಿ ಹಾಡಿದರು.

**ಹೊಳೆ ಬೆಳಗಿ ಜಾರುವುದು**
**ಗಿಳಿ ನೆಗೆದು ಹಾರುವುದು**
**ಬೆಳೆದ ಹೊಲ ಬಿಸಿಲಲ್ಲಿ ಮಲಗಿರುವುದು**
**ತಿಳಿಯಾದ ಬಾನಿನಲಿ**
**ಬಿಳಿಮುಗಿಲು ತೇಲುವುದು**
**ಮಳೆ ಸೋತ ದಳದಂತೆ ಕದ್ದಡಗಿತು.**

ಕವಿತೆ ನಿಜವಾಗಿ ಬಹಳ ಸೊಗಸಾಗಿತ್ತು. ಅಂದಿನಿಂದ ಇವತ್ತಿನವರೆಗೆ ನಾನು ಅದನ್ನು ಮರೆತಿಲ್ಲ.

ಬಿ. ಎಂ. ಶ್ರೀ. ಅವರ ಪ್ರಭಾವ ಆ ಕಾಲದ ಹಿರಿಯರು ಕಿರಿಯರ ಮೇಲೆ – ಅದರಲ್ಲಿಯೂ ಶಾಲೆ ಕಾಲೇಜುಗಳಲ್ಲಿರುವವರ ಮೇಲೆ ಹೆಚ್ಚಾಗಿತ್ತು. ೧೯೨೦-೩೦ರ ದಶಕದಲ್ಲಿ ನಾನೂ ಸಹ ಶ್ರೀಕಂಠಯ್ಯನವರನ್ನು ನೋಡಿ ಸ್ಫೂರ್ತಿ ಪಡೆದಿದ್ದೆ. ೧೯೩೧-೩೨ರಲ್ಲಿ ನನಗೆ ಅವರ ಪರಿಚಯ ಸ್ವಲ್ಪ ಹೆಚ್ಚಾಗಿ ಆಯಿತು. ಆ ವೇಳೆಗೆ ನನ್ನ ಪುಸ್ತಕ 'ಹಳ್ಳಿಯ ಚಿತ್ರಗಳು' ಎಂಬುದು ಪ್ರಕಟವಾಗಿತ್ತು. ಆಗ ಕನ್ನಡದಲ್ಲಿ –

ದೊಡ್ಡ ಕಾವ್ಯಗಳೂ, ಚಂಪೂ ಗ್ರಂಥಗಳೂ ಇದ್ದರೂ – ಸುಲಭವಾದ ಗದ್ಯಶೈಲಿಯ ಗ್ರಂಥಗಳು ಹೆಚ್ಚಾಗಿರಲಿಲ್ಲ. ನನ್ನ ಪುಸ್ತಕ ಆ ಕೊರತೆಯನ್ನು ಸ್ವಲ್ಪವಟ್ಟಿಗೆ ಕಡಿಮೆ ಮಾಡಿತ್ತು. ಆ ಗ್ರಂಥದ ಅದೃಷ್ಟದಿಂದ, ಮಾಸ್ತಿಯವರು ಆ ಗ್ರಂಥಕ್ಕೆ ಒಂದು ಉತ್ತಮ ಮುನ್ನುಡಿಯನ್ನು ಬರೆದುದರಿಂದ ಅದಕ್ಕೆ ಸ್ವಲ್ಪ ಹೆಚ್ಚು ಪ್ರಸಿದ್ಧಿ ಸಿಕ್ಕಿತು. ಬಿ. ಎಂ. ಶ್ರೀ. ಅವರೂ ನನಗೆ ತುಂಬ ಪ್ರೋತ್ಸಾಹ ಕೊಟ್ಟು ಪ್ರಶಂಸೆಯ ಮಾತನ್ನಾಡಿದರು. ತಮ್ಮಲ್ಲಿ ಹೋದವರಿಗೆಲ್ಲ ನನ್ನ ಪುಸ್ತಕದ ವಿಷಯ ಹೇಳಿ ಅವರಿಗೆ ಒಂದು ಪ್ರತಿ – ತಮ್ಮಲ್ಲಿದ್ದುದನ್ನು – ಕೊಡುತ್ತಿದ್ದರು. ತಾವು ಮತ್ತೊಂದನ್ನು ಕೊಂಡುಕೊಳ್ಳುತ್ತಿದ್ದರು. ಒಂದು ಸಂದರ್ಭದಲ್ಲಿ ನನಗೆ "ನೀವು ನಿಮ್ಮ ಪುಸ್ತಕದ ಹನ್ನೆರಡು ಪ್ರತಿ ತಂದುಕೊಟ್ಟು ಅದರ ಬೆಲೆಯನ್ನು ತೆಗೆದುಕೊಂಡು ಹೋಗಬೇಕು. ನಾನು ಇತರರಿಗೂ ಅದನ್ನು ಕೊಡಬೇಕಾಗುತ್ತದೆ" ಎಂದು ಹೇಳಿದರು. ಮತ್ತೊಂದು ದಿನ ನನ್ನನ್ನು ಕಂಡು "ಈಗಿನ ವಿದ್ಯಾರ್ಥಿಗಳೆಲ್ಲ ನಿಮ್ಮ ಶೈಲಿಯನ್ನೇ ಅನುಸರಿಸುತ್ತಿದ್ದಾರೆ. ಇದರಿಂದ ಅವರ ಸೃಜನಶೀಲತೆಗೆ ಪ್ರಖರತೆಯೂ, ವಸ್ತುವಿಗೆ ವೈವಿಧ್ಯವೂ ದೊರೆಯುತ್ತಿದೆ" ಎಂದರು. ನನಗೋಸ್ಕರವಾಗಿ ಅವರು ಪ್ರಯತ್ನಿಸಿ – ಇದೊಂದು ಹೊಸ ಅಲೆಯೆಂದು – ಬೆನಗಲ್ ರಾಮರಾಯರ ಮೂಲಕ, ಮದರಾಸ್ ಕ್ರಿಶ್ಚಿಯನ್ ಲಿಟ್‌ರೇಚರ್ ಸೊಸೈಟಿಯಿಂದ ಸ್ವಲ್ಪ ಧನಸಹಾಯವನ್ನು ಮಾಡಿಸಿದರು.

ಅದು ಮಹಾತ್ಮ ಗಾಂಧೀ ಪ್ರಣೀತ ಸ್ವರಾಜ್ಯ ಚಳುವಳಿಯ ಉಲ್ಬಣಕಾಲ. ನಾನು ಕೋಟೆ ಖಾದಿವಸ್ತ್ರಾಲಯದಲ್ಲಿ ಮ್ಯಾನೇಜರ್ ಆಗಿದ್ದೆ. ಬ್ರಿಟಿಷರ ದಬ್ಬಾಳಿಕೆ, ನಿರಾಯುಧ ಅಹಿಂಸಾವಾದಿಗಳ ಮೇಲೆ ಲಾಠಿ ಪ್ರಹಾರ, ದಸ್ತಗಿರಿ ಇವು ಆಗುತ್ತಿದಂತೆ ಇಲ್ಲಿ ಖಾದಿಗೆ ಗಿರಾಕಿಗಳು ಹೆಚ್ಚುತ್ತಿದ್ದರು. ಒಂದು ಸಂದರ್ಭದಲ್ಲಿ ಬಿ. ಎಂ. ಶ್ರೀಕಂಠಯ್ಯನವರೂ ಖಾದಿ ಅಂಗಡಿಗೆ ಬಂದು ಬಿಳಿಯ ಶರಾಯಿ ಒಳ ಅಂಗಿ ಮುಂತಾದವುಗಳಿಗೆ ಅಪ್ಪಣೆ ಕೊಟ್ಟರು. ಅವರು ಖಾದಿ ಧರಿಸುವವರಲ್ಲ ಎಂದು ನನ್ನ ನಂಬಿಕೆಯಾಗಿತ್ತು.

ಅಂದಿನ ಕಾಲದಲ್ಲಿ ಮಾಸ್ತಿಯವರು ಬೆಂಗಳೂರಿನಲ್ಲಿ ಸಾಹಿತಿಗಳಿಗೆಲ್ಲ, ಪ್ರೋತ್ಸಾಹಕರೂ ಪೋಷಕರೂ ಆಗಿದ್ದರು. ಅವರು, ಬಿ. ಎಂ. ಶ್ರೀಕಂಠಯ್ಯನವರು, ನವರತ್ನರಾಮರಾಯರು, ಎಂ. ರಾಮರಾಯರು, ಎಸ್. ಜಿ. ಶಾಸ್ತ್ರಿ, ಸಿ. ಕೆ. ವೆಂಕಟರಾಮಯ್ಯ ಮುಂತಾದವರೆಲ್ಲ ಸೇರಿದ ಒಂದು ಅನೌಪಚಾರಿಕ ಸಂಸ್ಥೆಯನ್ನು ಮಾಡಿಕೊಂಡಿದ್ದರು. ಆ ಸಂಸ್ಥೆ ಹೊಸ ಗ್ರಂಥಕರ್ತರಿಗೆ ಅವರ ಗ್ರಂಥ ಪ್ರಕಟನೆಗೆ ಧನ ಸಹಾಯವನ್ನು ಒದಗಿಸುತ್ತಿದ್ದಿತು. ಅಷ್ಟೇ ಅಲ್ಲ, ತಮ್ಮ ಮನೆಯಲ್ಲಿ ಮತ್ತು ಇತರ ಸದಸ್ಯರ ಮನೆಗಳಲ್ಲಿ ಸಾಹಿತ್ಯ ಕೂಟವನ್ನು ಸೇರಿಸಿ – ಗ್ರಂಥ ಪ್ರಕಟವಾಗುವುದಕ್ಕೆ ಮುಂಚೆ – ಅಲ್ಲಿ ಅದನ್ನು ಲೇಖಕನಿಂದಲೇ ವಾಚನ ಮಾಡಿಸುತ್ತಿದ್ದರು.

ಸೇರಿದ್ದ ವಿದ್ವಾಂಸರೆಲ್ಲ ಗ್ರಂಥದ ಗುಣದೋಷಗಳನ್ನು ಚರ್ಚಿಸಿ ಗ್ರಂಥ ನಿರ್ದುಷ್ಟವೂ ಉತ್ತಮವೂ ಆಗಲು ಸಲಹೆಗಳನ್ನು ಕೊಡುತ್ತಿದ್ದರು. ಹೀಗೆ ಲೇಖಕನ ಗ್ರಂಥಕ್ಕೆ ಬೆಂಬಲವೂ ಒಂದು ಪರೀಕ್ಷೆಯೂ ಆಗುತ್ತಿತ್ತು. ಇಂಥ ಒಂದು ಸುಯೋಗ ನನ್ನ 'ನಮ್ಮ ಊರಿನ ರಸಿಕರು' ಗ್ರಂಥಕ್ಕೆ ದೊರೆಯಿತು. ಆ ಕೂಟಕ್ಕೆ ಶ್ರೀಮಾನ್ ಬಿ. ಎಂ. ಶ್ರೀಯವರೂ ಬಂದಿದ್ದರು. ಅದರಲ್ಲಿ ಬಂದ ಯಾವುದೋ ಹಾಸ್ಯ ಪ್ರಸಂಗವನ್ನು ಕೇಳಿ ಬಿ. ಎಂ. ಶ್ರೀಯವರು ತಮ್ಮ ಬಾಲ್ಯದಲ್ಲಿ ತಾವು ಸೈಕಲ್ ಸವಾರಿ ಮಾಡಿದು ದನ್ನೂ ಒಂದು ಮಗುವನ್ನು ಸೈಕಲ್ ಮೇಲೆ ಕೂರಿಸಿಕೊಂಡು ಸವಾರಿ ಮಾಡಿದಾಗ ಅದನ್ನು ಇಳಿಸಲು ತಮಗೆ ಆದ ತೊಂದರೆಯನ್ನು ವಿವರವಾಗಿ ವಿವರಿಸಿದರು. ಶ್ರೋತೃಗಳೆಲ್ಲ ಕಥೆಯನ್ನು ಕೇಳಿ ಬಿದ್ದು ಬಿದ್ದು ನಕ್ಕರು. ಸಾಧಾರಣವಾಗಿ ಗಂಭೀರರೂ ಸಂಯಮಿಯೂ ಆದ ಬಿ. ಎಂ. ಶ್ರೀ. ತಮ್ಮನ್ನು ತಾವು ಮರೆತು ತಮ್ಮ ಬಾಲ್ಯದ ಸುದ್ದಿಯನ್ನು ಹೇಳಿದುದರಿಂದ, ನನ್ನ ಗ್ರಂಥದ ವಾಚನದ ಪರಿಣಾಮ ಅವರ ಮೇಲೆ ಚೆನ್ನಾಗಿ ಆಗಿದೆಯೆಂದು ನವರತ್ನರಾಮರಾಯರು ಹೇಳಿದರು.

ನಮ್ಮ ಊರಿನ ರಸಿಕರು ಗ್ರಂಥ ಪ್ರಕಟವಾಗಿ ಅದಕ್ಕೆ ಆ ವರುಷ ದೇವರಾಜ ಬಹದ್ದೂರ್ ಪಾರಿತೋಷಕ ದೊರೆಯಿತು. ಅದೇ ವರುಷ ಶ್ರೀಮಾನ್ ಎಲ್. ಗುಂಡಪ್ಪನವರ ಭಾಸನ ನಾಟಕಗಳು ಮತ್ತು ರಾಜರತ್ನಂರವರ ಬೌದ್ಧಯಾತ್ರಿಕರು ಇವಕ್ಕೆ ದೇವರಾಜ ಬಹದ್ದೂರ್ ಪಾರಿತೋಷಕ ದೊರೆಯಿತು. ಆ ಸಂದರ್ಭದಲ್ಲಿ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು ನಮಗೆ ಒಂದು ಭೋಜನ ಕೂಟವನ್ನು ತಮ್ಮ ಮನೆಯಲ್ಲಿ ಏರ್ಪಡಿಸಿದ್ದರು. ಆಗ ರೋಗಲಕ್ಷಣ ಶಾಸ್ತ್ರ ತಜ್ಞ (ಪಾತಾಲಜಿ) ಕೃಷ್ಣರಾಯರೂ ಬಂದಿದ್ದರು. ಕೆಲವು ದಿನಗಳ ನಂತರ ಬಿ. ಎಂ. ಶ್ರೀಯವರೂ ನಮ್ಮನ್ನೆಲ್ಲ ತಮ್ಮ ಮನೆಯಲ್ಲಿ ಒಂದು ದಿನ ಊಟಕ್ಕೆ ಆಹ್ವಾನಿಸಿದರು. ನಮ್ಮ ವಿಷಯದಲ್ಲಿ ತಮ್ಮ ಆದರವನ್ನೂ ಶ್ರದ್ಧೆಯನ್ನೂ ಪ್ರೋತ್ಸಾಹವನ್ನೂ ವ್ಯಕ್ತ ಪಡಿಸುವುದು ಅವರ ಉದ್ದೇಶವಾಗಿತ್ತು. ನಾವು ಸ್ವಲ್ಪ ಸಂಕೋಚದಿಂದಲೇ ಅವರ ಮನೆಯಲ್ಲಿ ಸೇರಿದೆವು. ಸ್ವಲ್ಪ ಹೊತ್ತು ಮಾತನಾಡುವುದರೊಳಗಾಗಿ ಅವರು ನಮ್ಮ ಸಂಕೋಚವನ್ನೆಲ್ಲ ಬದಿಗೊತ್ತಿಸಿ ನಮಗೆ ಲವಲವಿಕೆಯನ್ನು ಉಂಟುಮಾಡಿದರು. ನಾವು ಸುಖವಾಗಿ ಅವರ ಮನೆಯಲ್ಲಿ ಕೆಲವು ಕಾಲವನ್ನು ಕಳೆದು – ಅವರ ಸ್ಫೂರ್ತಿ ಯನ್ನು ಮನದಲ್ಲಿ ತುಂಬಿಕೊಂಡು – ಬಂದೆವು.

ಬಿ. ಎಂ. ಶ್ರೀಯವರು ಇಂಗ್ಲಿಷ್ ಕನ್ನಡ ಎರಡು ಭಾಷೆಗಳಲ್ಲಿಯೂ ನಿರರ್ಗಳವಾಗಿ ಭಾಷಣ ಮಾಡುತ್ತಿದ್ದರು. ಭಾಷಣ ಮಾಡುವುದೆಂದರೆ ಅವರಿಗೆ ಆಯಾಸವೇ ಇಲ್ಲ, ಸರಕು ಅಷ್ಟು ಸಮೃದ್ಧವಾಗಿರುತ್ತಿದ್ದಿತು. ಮಂಗಳೂರಿನ ಸೆಂಟ್ ಅಲೋಯಿಸಸ್ ಕಾಲೇಜಿನಲ್ಲಿ ಅವರು ಷೇಕ್ಸ್‌ಪಿಯರ್‌ನ್ನು ಕುರಿತು ಭಾಷಣ ಮಾಡಲು ಆಹ್ವಾನಿತರಾಗಿದ್ದರು. ಅವರ ಭಾಷಣವನ್ನು ಕೇಳಲು ಅನೇಕ ಆಂಗ್ಲ

ಭಾಷಾ ಅಧ್ಯಾಪಕರು ಪಾದ್ರಿಗಳೂ ಸೇರುತ್ತಿದ್ದರು. ಒಂದೆರಡು ಭಾಷಣಗಳನ್ನು ಮಾಡುವುದು ಬಿ. ಎಂ. ಶ್ರೀಯವರ ಉದ್ದೇಶವಾಗಿದ್ದರೂ, ಅವರ ಒತ್ತಾಯಕ್ಕೆ ಒಳಗಾಗಿ ಆರು ಏಳು ಭಾಷಣಗಳನ್ನು ಮಾಡಬೇಕಾಯಿತು. ಅವರ ವಿದ್ವತ್ತು, ಇಂಗ್ಲಿಷಿನ ವೈಖರಿ ಷೇಕ್ಸ್‌ಪಿಯರ್ ನಾಟಕಗಳ ಸ್ವಾರಸ್ಯ ಇವು ಶ್ರೋತೃಗಳಿಗೆ ಆಹ್ಲಾದಕರವೂ ಉದ್ಬೋಧಕವೂ ಆಗಿದ್ದವು.

ಈಗ ನಲವತ್ತೈದು ವರುಷಗಳ ಕೆಳಗೆ ನಾನೇ ನೇರವಾಗಿ, ಸಂಗ್ರಹಿಸಿದ 'ಹಳ್ಳಿಯ ಹಾಡು' ಹಸ್ತಪ್ರತಿಯನ್ನು ಅವಲೋಕಿಸಿ ಉಪಯುಕ್ತ ಸಲಹೆಗಳನ್ನು ಕೊಡಬೇಕೆಂದು ನಾನು, ಮಾಸ್ತಿ, ಎ. ಆರ್. ಕೃಷ್ಣಶಾಸ್ತ್ರೀ ಮತ್ತು ಬಿ. ಎಂ. ಶ್ರೀಯವರನ್ನು ಕೇಳಿಕೊಂಡೆ. ಮೂವರು ಮಹನೀಯರೂ ನನಗೆ ಅನೇಕ ಉಪಯುಕ್ತ ಸಲಹೆಗಳನ್ನು ಕೊಟ್ಟರು. ಬಿ. ಎಂ. ಶ್ರೀ. ಹಳ್ಳಿಗಳನ್ನು ಕುರಿತು ಸದಾ ಚಿಂತಿಸುತ್ತಿದ್ದರು. "ನಮ್ಮ ಹಳ್ಳಿಗಳ ಎಲ್ಲ ಬಗೆಯ ಕೊಳಕು ಕೊರತೆಗಳು ಮಾಯವಾಗಿ ಅವು ಮತ್ತೆ ನಂದನವನಗಳಾಗಬೇಕು, ಜನ ತೇಜಸ್ವಿಗಳಾಗಬೇಕು. ಗೆಯ್ಮೆ ಗೆಯ್ಯುತ್ತಾ ಹಾಡು ಹೊಮ್ಮಬೇಕು. ನಾಡು ಹಸನಾಗಬೇಕು. ಹಳ್ಳಿಗಳು ದೊಡ್ಡ ಬದುಕು ಬದುಕಿದರೆ ನಾಡಿಗೆ ನಾಡೇ ಬಾಳೀತು ಬೆಳಗೀತು" ಎಂದಿದ್ದಾರೆ. ತಾವೇ ಪರಿಷ್ಕರಿಸಿ ಕೊಟ್ಟಿದ್ದ ಹಳ್ಳಿಯ ಹಾಡು ಪುಸ್ತಕವನ್ನು ಕುರಿತು ಅವರು ಹೀಗೆ ಹೇಳಿದರು : "ತಮ್ಮ ಕನ್ನಡ ಸೇವೆಯೂ ಸಾಹಿತ್ಯ ಶಕ್ತಿಯೂ ಹೊಸ ದಾರಿಯಲ್ಲಿ ನಡೆದು ಮೇಲುಪಂಕ್ತಿ ಹಾಕಿಕೊಟ್ಟ ಧೈರ್ಯವೂ ಕನ್ನಡಿಗರೆಲ್ಲ ಬಲ್ಲ ಸಂಗತಿ. ತಮ್ಮ ಹಳ್ಳಿಯ ಹಾಡುಗಳ ಪ್ರತಿ ಓದಿ ಸಂತೋಷಪಟ್ಟೆ. ಕನ್ನಡಿಗರನ್ನು ಎಚ್ಚರಿಸುವ ಕೆಲಸದಲ್ಲಿ ತಮಗೆ ಭಗವಂತನು ಸಕಲ ಸೌಭಾಗ್ಯಗಳನ್ನೂ ಒದಗಿಸಲೆಂದು ಹಾರೈಸುತ್ತೇನೆ.

ಹೀಗೆ ಬಿ. ಎಂ. ಶ್ರೀಯವರು ತಮ್ಮ ಜೀವಮಾನದ ಅಂತ್ಯದವರೆಗೆ ಕೈಹಿಡಿದು ನನ್ನನ್ನು ಆಶೀರ್ವದಿಸಿದರು. ಅವರ ನೆನಪಿಗೆ ಸದಾ ನಮಿಸುತ್ತೇನೆ.

# ಶ್ರೀಸ್ಮರಣೆ

– ಕೆ. ಎಸ್. ನರಸಿಂಹಸ್ವಾಮಿ

ನಾನು ಮೈಸೂರು ಮಹಾರಾಜ ಪ್ರೌಢಶಾಲೆಯಲ್ಲಿ ವಿದ್ಯಾರ್ಥಿಯಾಗಿದ್ದಾಗ (೧೯೨೮-೧೯೩೧) ನಮ್ಮ ಉಪಾಧ್ಯಾಯರಲ್ಲೊಬ್ಬರು ನಮ್ಮ ತರಗತಿಯಲ್ಲಿ ಇಂಗ್ಲಿಷ್ ಗೀತಗಳಿಂದ ಕೆಲವು ಕವನಗಳನ್ನು ಓದಿದರು.

ಮೇಲುನೋಟಕೆ ಮೆರೆಯಲಾರಳು
ಹಲವು ಹೆಣ್ಗಳ ಪರಿಯೊಳು ;
ಅವಳ ಚೆಲುವನು ನಾನೆ ಅರಿಯೆನು
ನಗುವ ತನಕೊಲಿದೆನ್ನೊಳು

*          *          *

ಏಳು ಕನ್ನೆಯರು ಚೋಳರಾಯನಿಗೆ,
ಒಬ್ಬ ತಾಯ ಸಿರಿಮಕ್ಕಳು
ಸಾಲದೊಂದು ದಿನ ಹೇಳಿ ಮುಗಿಸುವರೆ
ಹಬ್ಬಿ ಹೆಣೆದವರ ಹಿತುವನು

ಮುಂತಾದ ಪದ್ಯಗಳು – ಸಂಸ್ಕೃತ ಪದಗಳ ದಾಂಧಲೆಯಿಲ್ಲದ, ಅಚ್ಚಗನ್ನಡದ ಪರಿಮಳವುಳ್ಳ ಪದ್ಯಗಳು – ಎಳೆಯನಾದ ನನ್ನ ಮನಸ್ಸಿನ ಮೇಲೆ ತುಂಬ ಪರಿಣಾಮ ಬೀರಿದವು. ಹೊಸ ಛಂದಸ್ಸಿನ ಕಡೆಗೆ ನನ್ನ ಗಮನವನ್ನು ಸೆಳೆದವು. ಕವಿತೆಯ ರಚನೆಯ ಕಡೆಗೆ ನನ್ನನ್ನು ಆಕರ್ಷಿಸಿದವು.

ನಾನು ಮೈಸೂರು ಇಂಟರ್‌ಮೀಡಿಯೆಟ್ ಕಾಲೇಜಿನಲ್ಲಿ ಎಂಜಿನಿಯರಿಂಗ್ ವಿದ್ಯಾರ್ಥಿಯಾಗಿದ್ದಾಗ (೧೯೩೧–೧೯೩೩) ಕನ್ನಡ ಕವನಗಳನ್ನು ರಚಿಸತೊಡಗಿದೆ. ಪಠ್ಯ ವಿಷಯಗಳಿಗೆ ಸಾಕಷ್ಟು ಗಮನ ಕೊಡಲಿಲ್ಲವಾದರೂ ನಾನು ತೇರ್ಗಡೆಯಾದೆ. ಇಂಟರ್‌ಮೀಡಿಯೆಟ್ ಕಾಲೇಜಿನಿಂದ ಎಂಜಿನಿಯರಿಂಗ್ ಕಾಲೇಜಿಗೆ ಹೋಗುವ ಪ್ರಶ್ನೆ ಆಗ ಎದ್ದಿತು. ಅದು ಬೇಡ ಎಂದೂ, ಸಾಹಿತ್ಯ ಓದಬೇಕೆಂದೂ ನಿರ್ಧರಿಸಿದೆ.

ಮಹಾರಾಜ ಕಾಲೇಜ್ ನನ್ನನ್ನು ಸೇರಿಸಿಕೊಳ್ಳಲಿಲ್ಲ. ಆದ್ದರಿಂದ ನಾನು ಬೆಂಗಳೂರಿಗೆ ಬಂದೆ. ಸೆಂಟ್ರಲ್ ಕಾಲೇಜಿನ 'ಇಂಗ್ಲಿಷ್, ಭೌತಶಾಸ್ತ್ರ, ಗಣಿತ' ತರಗತಿಯನ್ನು ಪ್ರವೇಶಿಸಿದೆ. ಪ್ರೊ॥ ಬಿ. ಎಂ. ಶ್ರೀಕಂಠಯ್ಯನವರಲ್ಲಿ ಇಂಗ್ಲಿಷ್ ಸಾಹಿತ್ಯವನ್ನು ಕಲಿಯುವ ಸುಯೋಗ ನನಗೆ ಲಭಿಸಿತು.

ಶ್ರೀಯವರು ನಮಗೆ ಇಂಗ್ಲಿಷ್ ಸಾಹಿತ್ಯ ಕಲಿಸಿದ ವೈಖರಿ ವಿಶಿಷ್ಟವಾದದ್ದು. ಇಂಗ್ಲಿಷ್ ತರಗತಿಯಲ್ಲಿ ಒಂದಾದರೂ ಕನ್ನಡ ಮಾತನ್ನು ಬಳಸುತ್ತಿರಲಿಲ್ಲ. ಎಲ್ಲಾ ಪೂರ್ತಿ ಇಂಗ್ಲಿಷಿನಲ್ಲೇ. ಅವರು ನಮಗೆ ಮ್ಯಾಥ್ಯೂ ಆರ್ನಾಲ್ಡ್‌ನ Sweetness of Light' ಪ್ರಬಂಧವನ್ನು ಪಾಠ ಮಾಡುತ್ತಿದ್ದರು. ಅವರು ಪ್ರಬಂಧಗಳನ್ನು ಓದುತ್ತಿದ್ದ ರೀತಿ ಅನನ್ಯ ಸಾಧಾರಣವಾಗಿತ್ತು. ಅದು 'ಹಾಗೆ ಓದಿದರೆ ಸಾಕು; ಅರ್ಥ ವಿವರಣೆ ಬೇಕಿಲ್ಲ' ಎನ್ನುವ ರೀತಿಯಲ್ಲಿತ್ತು. ಅವರ ಕಂಠಶ್ರೀಯನ್ನೂ, ಮಾತಿನ ಅಚ್ಚುಕಟ್ಟನ್ನೂ ನಾನೆಂದಿಗೂ ಮರೆಯಲಾರೆ. ಒಂದು ದಿನ ಅವರು ಮ್ಯಾಥ್ಯೂ ಆರ್ನಾಲ್ಡ್‌ನ Rugbly Chapel ಕವನದ ಒಂದು ಭಾಗವನ್ನು ಕಪ್ಪು ಹಲಗೆಯ ಮೇಲೆ ಬರೆದು ಪ್ರಸ್ತಾರ ಹಾಕಿದರು. ವಿದ್ಯಾರ್ಥಿಗಳಾದ ನಮಗೆ ಆಗ ಛಂದಸ್ಸಿನ ಒಂದು ಇಣುಕುನೋಟ ಸಿಕ್ಕಿತು. ನಮ್ಮ ತರಗತಿಯವರು ಪ್ರತಿ ತಿಂಗಳೂ ಒಬ್ಬ ನಿರ್ದಿಷ್ಟ ಕವಿಯ ಕೃತಿಯ ಬಗೆಗೆ ವಿಚಾರ ಸಂಕಿರಣವನ್ನು ಏರ್ಪಡಿಸುತ್ತಿದ್ದೆವು; ಇದಕ್ಕೆ ಮೂಲಪ್ರೇರಣೆಯೇ ಆಗಿದ್ದ ಶ್ರೀಯವರು ಅಧ್ಯಕ್ಷತೆ ವಹಿಸುತ್ತಿದ್ದರು. ತಮ್ಮ ಹತ್ತಿರಕ್ಕೆ ಬಂದ ಎಲ್ಲರಲ್ಲೂ ಸ್ಫೂರ್ತಿ ತುಂಬಿ ಅವರನ್ನು ಕನ್ನಡ ಸಾಹಿತ್ಯದ ಕೆಲಸಕ್ಕೆ ಅಣಿಗೊಳಿಸುವ ಅಪೂರ್ವ ಶಕ್ತಿ ಅವರಲ್ಲಿತ್ತು.

ನಾನು ಆಗಾಗ ನನ್ನ ಕವನಗಳನ್ನು ಅವರಿಗೆ ತೋರಿಸುತ್ತಿದ್ದೆ. ಅವರು "ಚೆನ್ನಾಗಿ ಬರೆಯುತ್ತೀರಿ; ಇನ್ನಷ್ಟು ಅಧ್ಯಯನ ಮಾಡಿ" ಎಂದು ಸಲಹೆ ಮಾಡುತ್ತಿದ್ದರು. ನಾನು ಅವೆನ್ಯೂ ರಸ್ತೆಯಲ್ಲಿ ಕಾಲೇಜಿನ ಕಡೆಗೆ ಹೋಗುತ್ತಿದ್ದಾಗ, ತಮ್ಮ ಕಾರನ್ನು ನಿಲ್ಲಿಸಿ ಕಾಲೇಜಿಗೆ ಕರೆದುಕೊಂಡು ಹೋಗಿದ್ದಾರೆ. ಈ ಉಪಕಾರವನ್ನು ನಾನು ಮರೆಯಲಾರೆ.

ಅವರಂಥ ವಾಗ್ಮಿಗಳು ಇನ್ನಿಲ್ಲ. ಇಂದಿಗೆ ೫೫ ವರುಷಗಳ ಹಿಂದೆ ಅವರು ಮಹಾರಾಜ ಕಾಲೇಜಿನ ಕಿರಿಯ ಬಿ. ಎ. ಸಭಾಂಗಣದಲ್ಲಿ ಸುಮಾರು ೪ ಘಂಟೆಗಳ ಕಾಲ ಪಂಪನ 'ವಿಕ್ರಮಾರ್ಜುನ ವಿಜಯ'ವನ್ನು ಕುರಿತು ಭಾಷಣ ಮಾಡಿದರು; ಮತ್ತು ಆ ಸುಮಾರಿನಲ್ಲಿ ವರ್ಧಮಾನ ವಿದ್ಯಾರ್ಥಿನಿಲಯದಲ್ಲಿ ಜೈನರ ರತ್ನತ್ರಯವನ್ನು ಕುರಿತು ವಿಸ್ತಾರವಾಗಿ ಭಾಷಣ ಮಾಡಿದರು. ಇವೆರಡೂ ಭಾಷಣಗಳು ಇನ್ನೂ ನನ್ನ ಕಿವಿಯಲ್ಲಿ ಹೊಳಲುಗೊಡುತ್ತಿವೆ.

ಇದಾದ ಎಷ್ಟೋ ವರುಷಗಳಲ್ಲಿ ನಾನು ಅವರನ್ನು ಕಂಡದ್ದು ೧೯೩೬, ನನ್ನ ಮದುವೆಯ ವರುಷದಲ್ಲಿ, ತಿಪಟೂರು ರೈಲ್ವೆ ನಿಲ್ದಾಣದಲ್ಲಿ. ಆ ಬಳಿಕ ನಾನು

ಅವರನ್ನು ಕಂಡದ್ದೆಂದರೆ ೧೯೪೨ರ ಜನವರಿಯಲ್ಲಿ, ಮಹಾರಾಜ ಕಾಲೇಜಿನ ಅಂಗಳದಲ್ಲಿ 'ಮೈಸೂರು ಮಲ್ಲಿಗೆ'ಯ ಬಿಡುಗಡೆಯ ಸಂಜೆಯಲ್ಲಿ. ಅದೇ ಅವರ ಕಡೆಯ ದರ್ಶನವಾಯಿತು. ಈಗ ಅವರಿಲ್ಲದ ಕಾಲದಲ್ಲಿ ಅವರನ್ನು ನೆನೆಯುತ್ತಿದ್ದೇನೆ ಕೃತಜ್ಞತೆಯಿಂದ ಮತ್ತು ಕಂಬನಿಗಳೊಡನೆ :

ಪ್ರಸನ್ನ ಶರದಿಂದುಮಂಡಲದಂತೆ 'ಶ್ರೀ' ಗುರುವೆ
ನೀವೆನ್ನ ಹೃದಯಪೀಠವನೇರಿದಂತೆನಗೆ
ನಿಮ್ಮ ಸಂಸ್ಮರಣೆ. ನಿಮ್ಮಿಂದ ಪಂಪನ ಜತೆಗೆ
ಬಂದರಾ ಷೇಕ್ಸ್‌ಪಿಯರ್ ಸಾಫೊಕ್ಲಿಸ್ ಭಾಸರೆ ;
ದೈವಹತ ಧನ್ಯಾತ್ಮನಾದನಶ್ವತ್ಥಾಮನ್,
ಇತ್ತ 'ಇಂಗ್ಲಿಷ್ ಗೀತೆ' ಹೊಸತೊಂದು ಲೋಕಮನ್
ಕನ್ನಡದ ಕಣ್ಗೆ ತೆರೆದಿತ್ತು ಸಂಪ್ರೀತಿಯಲಿ.
ನಿಮ್ಮ ಸಿಂಹಧ್ವನಿಯೆ ಪಂಜಾಯ್ತು ಪಯಣದಲಿ.

ಈಗ ನೀವಂದು ಮುತ್ತಿಟ್ಟು ಏರಿದ ನೆಲವೆ
ನಿಮ್ಮ ನೆನೆವಂತೆ ನನ್ನೆಣಿಕೆ. ಅಂತಿರಬಹುದೆ ?
ಜ್ವಲಿಸುವ ವಸಂತವಿದೆ, ತಿಳಿನೀಲಿ ಗಗನವಿದೆ ;
ಅರೆ ಯಾವುದಿಲ್ಲಿ ? ಅರೆ ನಿಮ್ಮ ದನಿಯೊಂದೆ !
ನಿಮ್ಮ ಸಿರಿದನಿಯೊಂದೆ, ಅರೆ ನಿಮ್ಮ ದನಿಯೊಂದೆ
ಅರಕೆಯನೆ ಸರಗಟ್ಟಿ ನಿಮ್ಮಡಿಗಳಿಗೆ ತಂದೆ.

# ನೆನಪುಗಳು

– ಎಚ್. ಎಂ. ಶಂಕರನಾರಾಯಣರಾವ್

ಕನ್ನಡದ ರಕ್ಷಾಮಣಿ ಆಚಾರ್ಯ ಪ್ರೊ॥ ಬಿ. ಎಂ. ಶ್ರೀಕಂಠಯ್ಯನವರ ಶಿಷ್ಯನಾಗಿದ್ದುದು ನನ್ನ ಜೀವಿತದ ಭಾಗ್ಯವಿಶೇಷವೆಂದೆಣಿಸುತ್ತೇನೆ. ಅವರಲ್ಲಿ ನಾನು ನಡೆಸಿದ ಶಿಷ್ಯವೃತ್ತಿಯನ್ನು ನೆನೆದಾಗ ಮನಸ್ಸು ಧನ್ಯತಾಭಾವವನ್ನು ಅನುಭವಿಸುತ್ತದೆ.

ಶ್ರೀಯವರು ಇಂಗ್ಲಿಷ್, ಕನ್ನಡ ಭಾಷೆಗಳಲ್ಲಿ ಅಗಾಧವಾದ ಪಾಂಡಿತ್ಯವುಳ್ಳ ವಿದ್ವಾಂಸರಾಗಿದ್ದರು. ಕನ್ನಡದ ವಿದ್ವತ್ತಿನ ಸಂವರ್ಧನೆಗಾಗಿ ಅವರು ಸಂಸ್ಕೃತ ತಮಿಳು ಸಾಹಿತ್ಯಗಳನ್ನು ಚೆನ್ನಾಗಿ ಅಭ್ಯಾಸಮಾಡಿದ್ದರು. ನಮ್ಮ ಶ್ರೇಷ್ಠ ಸಂಸ್ಕೃತ ವಿದ್ವಾಂಸರಲ್ಲಿ ಅವರೊಬ್ಬರೆಂದು ವೆಂಕಣ್ಣಯ್ಯನವರು ನನ್ನೊಡನೆ ಹೇಳಿದ್ದುಂಟು. ಈ ಸಾಹಿತ್ಯಗಳ ಅಭ್ಯಾಸದ ಜೊತೆಗೆ ಶಾಸನಸಾಹಿತ್ಯ, ನಾಡಿನ ಚರಿತ್ರೆ, ವಿಶ್ವದ ನಾಗರಿಕತೆ ಬೆಳೆದು ಬಂದ ಚರಿತ್ರೆ, ಧಾರ್ಮಿಕ ಇತಿಹಾಸ ಇವುಗಳನ್ನು ಹೃದ್ಗತಮಾಡಿಕೊಂಡು ತಮ್ಮ ದೃಷ್ಟಿಯನ್ನು ವಿಶಾಲವಾಗಿಸಿಕೊಂಡರು. ಇವೆಲ್ಲದರ ಪರಿಣಾಮವಾಗಿ ಶ್ರೀಯವರ ಬೋಧನೆಗೆ, ಉಪನ್ಯಾಸಗಳಿಗೆ ಒಂದು ವಿಲಕ್ಷಣವಾದ ಕಳೆಯುಂಟಾಗುತ್ತಿತ್ತು. 'ನಿಮ್ಮ ಮನೆಯ ಕಿಟಕಿಗಳೆಲ್ಲ ತೆಗೆಯಿರಿ, ಬೆಳಕು ಎತ್ತ ಕಡೆಯಿಂದ ಬಂದರೂ ಅದನ್ನು ಬರಮಾಡಿಕೊಳ್ಳಿ' ಎಂಬುದು ಅವರ ಧ್ಯೇಯವಾಗಿತ್ತು. 'ಏಳಿ, ಎಚ್ಚರಗೊಳ್ಳಿ, ಅರಳಿ ಬಾಳಿ' ಎಂಬುದು ಅವರು ಕನ್ನಡಿಗರಿಗೆ ಕೊಟ್ಟ ಸಂದೇಶವಾಗಿತ್ತು.

ಅವರ ಪ್ರವಚನದ ವೈಖರಿಯೋ ! ಅದನ್ನು ಸವಿದೇ ಅನುಭವಿಸಬೇಕು. ಒಂದು ಕೃತಿಯ, ವಿಷಯದ ವಿವರಗಳನ್ನು ಹೇಳಿ ಮುಗಿಸುವುದಷ್ಟೇ ಪ್ರಾಧ್ಯಾಪಕನ ಕೆಲಸವಲ್ಲ. ಒಂದು ಕೋಶವೋ ಟಿಪ್ಪಣಿಯೋ ಆ ಕೆಲಸವನ್ನು ಮಾಡಬಹುದು. ಸಹೃದಯನಾದ ಪ್ರಾಧ್ಯಾಪಕ ತಾನು ಹೇಳಲಿರುವ ವಿಷಯವನ್ನು ಬಿಟ್ಟರೆ ಮತ್ತೊಂದಿಲ್ಲ. ಜನರು ಇದಕ್ಕೆ ಬಸಿದು ಬೀಳಬೇಕು ಎನ್ನುವಂತೆ ಪ್ರವಚನ ಮಾಡುತ್ತಾನೆ. ಶ್ರೀಯವರು ಈ ವರ್ಗಕ್ಕೆ ಸೇರಿದವರು. ವೇದಿಕೆಯ ಮೇಲೆ ನಿಂತು ಅರ್ಥ

ಕಣ್ಮುಚ್ಚಿ ಪ್ರವಚನಕ್ಕೆ ತೊಡಗಿದರೆ ಕೇಳುವವರಿಗೆ ಕಾಲ ಕಳೆದುದರ ಪರಿವೆಯೇ ಆಗುತ್ತಿರಲಿಲ್ಲ. ಕಾಲ ಸ್ತಬ್ಧವಾಗಿ ನಿಂತಂತೆ ತೋರುತ್ತಿತ್ತು. ಶ್ರೀಯವರ ತಲಸ್ಪರ್ಶಿಯಾದ ವ್ಯಾಸಂಗ, ಅವರ ಪರ್ಯಾಯ ಪದಗಳ ವೈಖರಿ, ವಾಗ್ವಿಲಾಸ, ಅವರ ಮಟ್ಟಸವಾದ ಆಕಾರ, ತೇಜಃಪುಂಜವಾದ ಕಣ್ಣುಗಳು, ಎಲ್ಲಕ್ಕೂ ಮಿಗಿಲಾಗಿ ಅವರ ಕಂಠಶ್ರೀ ಇವು ಅವರ ಉಪನ್ಯಾಸಗಳಿಗೆ ಶೋಭೆಯನ್ನು ತರುತ್ತಿದ್ದವು. ಇವರ ಉಪನ್ಯಾಸಗಳನ್ನು ಕೇಳಿದವರಿಗೆ ಅಪೂರ್ವವೂ ಅನಿರ್ವಚನೀಯವೂ ಆದ ಅನುಭವ ವುಂಟಾಗುತ್ತಿತ್ತು.

ಇಂಗ್ಲಿಷ್ ಸಾಹಿತ್ಯದಲ್ಲಿ ಮಿಕ್ಕ ಕವಿಗಳಿಗಿಂತ ಶ್ರೀಯವರಿಗೆ ಷೇಕ್ಸ್‌ಪಿಯರ್, ವರ್ಡ್ಸ್‌ವರ್ತ್, ರಾಬರ್ಟ್ ಬ್ರೌನಿಂಗ್ ಈ ಮೂವರಲ್ಲಿ ಅತಿಶಯವಾದ ಪ್ರೀತಿ ಇದ್ದಿತೆಂದು ನಾವು ಕಾಲೇಜು ಮೆಟ್ಟಲನ್ನು ಹತ್ತಿದಾಗ ಪ್ರತೀತಿ ಇತ್ತು. ಇದು ಬರಿಯ ಪ್ರತೀತಿ ಮಾತ್ರವಲ್ಲ, ಸತ್ಯ ಎಂಬ ಅಂಶ ಬಹುಬೇಗ ನಮಗೆ ಮನವರಿಕೆಯಾಯಿತು. ಶ್ರೀಯವರು ಷೇಕ್ಸ್‌ಪಿಯರ್ ಮಹಾಕವಿಯ ಒಂದು ನಾಟಕವನ್ನು ಬೋಧಿಸಲು ಕೈಗೆತ್ತಿಕೊಳ್ಳುವ ಮೊದಲು ಯೂರೋಪಿನಲ್ಲಿ ನಡೆದ 'ಸಾಹಿತ್ಯ ಪುನರುಜ್ಜೀವನ'ದ ಪ್ರಸಾರ, ಅದು ಇಟಲಿಯಿಂದ ಇಂಗ್ಲೆಂಡಿಗೆ ಬಂದ ರೀತಿ, ಈ ಮಹಾ ಚಳುವಳಿಯಲ್ಲಿ ಷೇಕ್ಸ್‌ಪಿಯರನ ಸ್ಥಾನ ಇವುಗಳನ್ನು ನಿರ್ದೇಶಿಸಿ ಆ ಬಳಿಕ ನಾಟಕವನ್ನು ರಸವತ್ತಾಗಿ ಕಣ್ಣಿಗೆ ಕಟ್ಟುವಂತೆ ನಿರೂಪಿಸುತ್ತಿದ್ದರು. ನಾಟಕ ಚರಿತ್ರೆಗೆ ಸಂಬಂಧಿಸಿದ್ದಾದರೆ ಪಠ್ಯನಾಟಕವನ್ನಲ್ಲದೆ, ಅದಕ್ಕೆ ಸಂಬಂಧಿಸಿದ ಇತರ ನಾಟಕಗಳನ್ನೂ ವಾಚನ ಮಾಡುತ್ತಿದ್ದರು. ಅವರ ವಾಚನ ಒಂದು ರಸದೂಟ. ಇದೇ ಸಂದರ್ಭದಲ್ಲಿ ನಾನು ಇವರ ಬೋಧನೆಯ ವಿಷಯದಲ್ಲಿ ಕೇಳಿದ ಒಂದು ಅಂಶವನ್ನು ಇಲ್ಲಿ ನಿರೂಪಿಸಿದರೆ ಅಪ್ರಕೃತವಾಗಲಾರದು. ನಾನು ಬನುಮಯ್ಯನವರ ಹೈಸ್ಕೂಲಿನಲ್ಲಿ ಉಪಾಧ್ಯಾಯನಾಗಿದ್ದಾಗ ಮಹಾರಾಜರವರ ಕಾಲೇಜಿನಲ್ಲಿ ವ್ಯಾಸಂಗಮಾಡಿದ ಶಾಲೆಯ ಹಿರಿಯ ಇಂಗ್ಲಿಷ್ ಅಧ್ಯಾಪಕರು "ಶ್ರೀಕಂಠಯ್ಯನವರು ನಮಗೆ ಇಟ್ಟಿದ್ದ ಒಬ್ಬ ಕವಿಯ ಕೆಲವು ಕವಿತೆಗಳ ಸಂಗ್ರಹವನ್ನು ಮಾತ್ರ ತರಹೇಳುತ್ತಿರಲಿಲ್ಲ. ಅವನ ಕವಿತೆಗಳ ಸಮಗ್ರ ಸಂಪುಟವನ್ನೇ ತರಹೇಳುತ್ತಿದ್ದರು. ಪರೀಕ್ಷೆಗೆ ಗೊತ್ತಾದ ಭಾಗಗಳನ್ನು ಪಾಠ ಮಾಡಿಯಾದ ಮೇಲೆ, ಅವನ ಮಿಕ್ಕ ಕವನಗಳ ಅವಲೋಕನ ಮಾಡಿ, ಆ ಯುಗದ ಪ್ರಭಾವವನ್ನು ವಿವರಿಸಿ, ಕವಿಯ ಸ್ಥಾನವನ್ನು ನಿರ್ದೇಶಿಸುತ್ತಿದ್ದರು" ಎಂದು ಹೆಮ್ಮೆಯಿಂದ ಹೇಳುತ್ತಿದ್ದರು. ಇದರಿಂದ ಶ್ರೀಯುತರ ಪಾಠಕ್ರಮದ ಸ್ವರೂಪ ಸುವ್ಯಕ್ತವಾಗುತ್ತದೆ.

ಶ್ರೀಕಂಠಯ್ಯನವರ ಅಳಿಯಂದಿರಾದ ಶ್ರೀ ಎಸ್. ಆರ್. ಗುಂಡಪ್ಪನವರು ೧೯೩೩ನೆಯ ಡಿಸೆಂಬರ್ ತಿಂಗಳಿನಲ್ಲಿ ತಮ್ಮ ತರುಣ ವಯಸ್ಸಿನಲ್ಲಿಯೇ ರೀತಿ ಕೊಂಡರು. ಶ್ರೀಯವರಿಗೆ ಇದು ಭರಿಸಲಾರದ ದುಃಖವಾಯಿತು. ಆದರೆ ಇದು

ಅವರ ಕರ್ತವ್ಯ ನಿರ್ವಹಣೆಗೆ ಅಡ್ಡಿಬರಲಿಲ್ಲ. ಆ ಕಾಲದಲ್ಲಿ ಅತ್ಯಂತ ಕಠಿಣವಾದ ಇಂಟರ್‌ಮೀಡಿಯೆಟ್ ಪರೀಕ್ಷೆಯಲ್ಲಿ ಅನುತ್ತೀರ್ಣರಾದ ವಿದ್ಯಾರ್ಥಿಗಳಿಗೆ ಬೆಂಗಳೂರಿನ ರಾಷ್ಟ್ರೀಯ ಪ್ರೌಢ ವಿದ್ಯಾಶಾಲೆಯವರು ಬೆಳಗಿನ ತರಗತಿಗಳನ್ನು ಏರ್ಪಡಿಸಿದ್ದು, ಗುಂಡಪ್ಪನವರು ಇಂಗ್ಲಿಷ್ ಪದ್ಯವನ್ನು ಬೋಧಿಸುತ್ತಿದ್ದರು. ಬ್ರೌನಿಂಗ್ ಕವಿಯ 'A Grammarians' Funeral' ಎಂಬ ಪದ್ಯವನ್ನು ಮಾಡ ಬೇಕಾಗಿತ್ತು. ಪದ್ಯವೋ ಕಬ್ಬಿಣದ ಕಡಲೆ. ಪರೀಕ್ಷೆ ಹತ್ತಿರವಾಗುತ್ತಿತ್ತು. ಆಗ ತಮ್ಮಲ್ಲಿಗೆ ಬಂದ ವಿದ್ಯಾರ್ಥಿಗಳ ಮೊರೆಯನ್ನು ಕೇಳಿ, ತಮ್ಮ ದುಃಖವನ್ನು ಅದುಮಿಕೊಂಡು ಶ್ರೀಯವರು ಒಂದು ಭಾನುವಾರ ಮಧ್ಯಾಹ್ನ ಎರಡು ಗಂಟೆಗೆ ಬಂದು ರಾತ್ರಿ ಎಂಟು ಗಂಟೆಗೆ ಆ ಪದ್ಯವನ್ನು ಮುಗಿಸಿದರು. ಅರ್ಧ ಶತಮಾನವಾದ ಮೇಲೂ ಬೋಧಪ್ರದವಾದ ಆ ಪದ್ಯದ ಸಾಲುಗಳು ನನ್ನ ಮನಸ್ಸಿನಲ್ಲಿ ಈಗಲೂ ಅನುರಣಿತವಾಗುತ್ತಿವೆಯೆಂದ ಮೇಲೆ ಶ್ರೀಯವರ ಬೋಧನಾ ಸಾಮರ್ಥ್ಯಕ್ಕೆ ಬೇರೆ ನಿದರ್ಶನ ಬೇಕೇ ?

೧೯೩೦ರಲ್ಲಿ ಮೈಸೂರಿನಿಂದ ಬೆಂಗಳೂರಿಗೆ ವರ್ಗವಾಗಿ ಬಂದ ಶ್ರೀಯವರಿಗೆ ವಿದ್ಯಾರ್ಥಿಲೋಕ ಕೊಟ್ಟ ಅದ್ಭುತವಾದ ಸ್ವಾಗತವನ್ನು ನೆನೆದರೆ ಈಗಲೂ ಮೈನವಿರೇಳುತ್ತದೆ. ಶ್ರೀಯವರು ಬಂದರು, ವಿದ್ಯಾರ್ಥಿಗಳ ಕಡೆಗೆ ದೃಷ್ಟಿಯನ್ನು ಹರಿಸಿದರು ; ಅವರ ಹೃದಯವನ್ನು ಗೆದ್ದರು !

ಒಂದು ಕೃತಿಯನ್ನೋ ನಾಟಕವನ್ನೋ ಒಂದು ಉಪನ್ಯಾಸದಲ್ಲಿ ಅವಲೋಕಿಸು ವುದು ಶ್ರೀಯವರ ಪದ್ಧತಿಯಾಗಿತ್ತು. ಇದರಿಂದಾಗಿ ಅವರ ಉಪನ್ಯಾಸಗಳ ಕಾಲ ಇಷ್ಟೇ ಎಂದು ಹೇಳಲು ಬರುತ್ತಿರಲಿಲ್ಲ. ಒಮ್ಮೊಮ್ಮೆ ಅವರ ಉಪನ್ಯಾಸ ಮೂರು ನಾಲ್ಕು ಗಂಟೆಗಳ ಕಾಲವನ್ನು ಆಕ್ರಮಿಸುತ್ತಿತ್ತು. ಒಮ್ಮೆ ಹೀಗಾಯಿತು, ಮಹಾರಾಜ ರವರ ಕಾಲೇಜಿನಲ್ಲಿ ಶ್ರೀಯವರ ಉಪನ್ಯಾಸ ಏರ್ಪಾಟಾಗಿತ್ತು. ವಿಷಯ 'An hour with English poets'. ಅಧ್ಯಕ್ಷರು ಮಿತಭಾಷಿಗಳಾದ ಪ್ರೊ॥ ಎ. ಬಿ. ಮ್ಯಾಕಿಂಟಾಷರು. ಛಾಸರ್ ಕವಿಯಿಂದ ಹಿಡಿದು ಟೆನಿಸನ್ ಕವಿಯವರೆಗೆ ಮುಖ್ಯ ಕವಿ ಗಳನ್ನು ಅವಲೋಕಿಸಿದ ಶ್ರೀಯವರು ಒಂದು ಗಂಟೆಗೆ ಸರಿಯಾಗಿ ತಮ್ಮ ಉಪನ್ಯಾಸ ವನ್ನು ನಿಲ್ಲಿಸಿದರು. ಇದು ಸಭಿಕರನ್ನು ಅಚ್ಚರಿಗೊಳಿಸಿತು. ಅಧ್ಯಕ್ಷತೆಯನ್ನು ವಹಿಸಿದ್ದ ಪ್ರೊ॥ ಮ್ಯಾಕಿಂಟಾಷರು ಉಪನ್ಯಾಸದ ಕೊನೆಯಲ್ಲಿ ಶ್ರೀಯವರ ವಾಗ್ವಿಲಾಸವನ್ನು ಹೊಗಳಿ "ಜನ್ಮಾಂತರಗಳನ್ನು ನಂಬುವುದಾದರೆ ಶ್ರೀಕಂಠಯ್ಯನವರು ತಮ್ಮ ಹಿಂದಿನ ಜನ್ಮದಲ್ಲಿ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ಗ್ರೀಕ್ ಇಲ್ಲವೆ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದಿರಬೇಕು" ಎಂದು ಅವರ ಮೆಚ್ಚಿಗೆಯನ್ನು ಸೂಚಿಸಿದರು.

ಹಳಗನ್ನಡದ ಚಂಪೂ ಸಾಹಿತ್ಯ ಸಂಸ್ಕೃತ ಪದ ಭೂಯಿಷ್ಠವಾಗಿದೆಯೆಂಬುದು ಎಲ್ಲರಿಗೂ ತಿಳಿದ ವಿಷಯ. ಆ ಸಾಹಿತ್ಯದ ಸ್ವಾರಸ್ಯವನ್ನು ಸಂಪೂರ್ಣವಾಗಿ ಗ್ರಹಿಸ

ಬೇಕಾದರೆ ಪೂರ್ವಸಿದ್ಧತೆ ಬೇಕಾಗುತ್ತದೆ. ಸಾಹಿತ್ಯ, ಪಂಡಿತವರ್ಗದಲ್ಲಿ ಮಾತ್ರ ಉಳಿಯಬಾರದು ; ಜನಪದವನ್ನು ತಲುಪಬೇಕು ಎಂಬ ಅಭಿಪ್ರಾಯವನ್ನು ಹೊಂದಿದ್ದ ಶ್ರೀಯವರು ಹಳಗನ್ನಡ ಕೃತಿಯನ್ನು ವಿಮರ್ಶಿಸುವಾಗ ಸಂಸ್ಕೃತಪದಗಳ ಪ್ರಯೋಗವನ್ನು ಕಟುವಾಗಿ ಟೀಕಿಸುತ್ತಿದ್ದರು. ಇದರಿಂದ ಅವರನ್ನು ಜನರು ಸಂಸ್ಕೃತ ದ್ವೇಷಿ ಎಂದು ಭಾವಿಸಿದ್ದರೆ ಅದೇನೂ ಆಶ್ಚರ್ಯದ ವಿಷಯವಲ್ಲ. ಆದರೆ ಅವರದು ಸಂಸ್ಕೃತದ ದ್ವೇಷವಲ್ಲ ; ಕನ್ನಡದ ಅಭಿಮಾನ. ಸಂಸ್ಕೃತ ಸಾಹಿತ್ಯದ ಸಾರವತ್ತಾದ ಭಾಗಗಳನ್ನು ಅವರು ಮುಕ್ತಕಂಠದಿಂದ ಹೊಗಳುತ್ತಿದ್ದರು. ಒಮ್ಮೆ ಸೆಂಟ್ರಲ್ ಕಾಲೇಜಿನ ವ್ಯಾಸಂಗಗೋಷ್ಠಿಯಲ್ಲಿ ಅವರು ಕಠೋಪನಿಷತ್ತಿನ ಮೇಲೆ ಎರಡು ಗಂಟೆಗಳ ಕಾಲ ಸ್ಫೂರ್ತಿದಾಯಕ ಭಾಷಣವನ್ನು ಮಾಡಿ, ಎಲ್ಲರೂ ಮುಖ್ಯ ಉಪನಿಷತ್ತುಗಳನ್ನು ಓದಬೇಕೆಂದು ಒತ್ತಿ ಹೇಳಿದರು. ಶ್ರೀಯವರು ಸಂಸ್ಕೃತದ್ವೇಷಿ ಯಾಗಿದ್ದರೆ ಆ ಭಾಷಾಸಾಹಿತ್ಯಗಳನ್ನು ಕುರಿತು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯಲ್ಲಿ ಗ್ರಂಥಗಳನ್ನು ಬರೆಯಿಸುವ ಯೋಚನೆ ಮಾಡುತ್ತಿರ ಲಿಲ್ಲ.

'ಕುಱಳ್' ತಮಿಳು ಭಾಷೆಯ ಅತ್ಯಂತ ಶ್ರೇಷ್ಠ ಗ್ರಂಥಗಳಲ್ಲಿ ಒಂದೆಂದು ವಿದ್ವಾಂಸರ ಅಭಿಪ್ರಾಯ. ಇದನ್ನು 'ನೀತಿಮಂಜರಿ' ಎಂಬ ಹೆಸರಿನಿಂದ ಕನ್ನಡದಲ್ಲಿ ಆರ್. ನರಸಿಂಹಾಚಾರ್ಯರು ಅನುವಾದ ಮಾಡಿದ್ದಾರೆ. ಕುಱಳ್ ದ್ವಿಪದಿಯಲ್ಲಿದ್ದರೆ 'ನೀತಿಮಂಜರಿ' ಕಂದ ಪದ್ಯಗಳಲ್ಲಿದೆ. ಈ ಗ್ರಂಥ ಇಂಟರ್‌ಮೀಡಿಯೆಟ್ ಪರೀಕ್ಷೆಗೆ ಪಠ್ಯಪುಸ್ತಕವಾಗಿದ್ದಾಗ ಪ್ರೊ॥ ಎ. ಆರ್. ಕೃಷ್ಣಶಾಸ್ತ್ರಿಗಳು ವಿದ್ಯಾರ್ಥಿಗಳ ಉಪಯೋಗಕ್ಕಾಗಿ ತಮಿಳು ವಿದ್ವಾಂಸರೊಬ್ಬರಿಂದ ಕುಱಳ್ ಗ್ರಂಥದ ಮೇಲೆ ಉಪನ್ಯಾಸವೊಂದನ್ನು ಸೆಂಟ್ರಲ್ ಕಾಲೇಜಿನಲ್ಲಿ ಏರ್ಪಡಿಸಿದ್ದರು. ಅಂದಿನ ಸಭಾಧ್ಯಕ್ಷರು ಬಿ. ಎಂ. ಶ್ರೀ. ಅವರು. ತಮಿಳು ವಿದ್ವಾಂಸರು ಕುಱಳ್ ಗ್ರಂಥದಲ್ಲಿರುವ ವಿಷಯ ವನ್ನು ಕುರಿತು ಮಾತನಾಡದೆ, ಇತರರು ಆ ಗ್ರಂಥದ ಹಿರಿಮೆಯ ವಿಷಯದಲ್ಲಿ ಹೇಳಿದ್ದ ಅಭಿಪ್ರಾಯಗಳನ್ನು ಮಂಡಿಸಿದರು. ಆ ಬಳಿಕ ಶ್ರೀಯವರು ಎದ್ದುನಿಂತು "ಉಪನ್ಯಾಸಕರು ಕುಱಳ್ ಸಮುದ್ರದಲ್ಲಿ ಮುಳುಗಿ ಕೆಲವು ರತ್ನಗಳನ್ನು ತಂದಿದ್ದಾರೆ, ನಾನೂ ಆ ಪ್ರಯತ್ನ ಮಾಡುತ್ತೇನೆ" ಎಂದು ಪೀಠಿಕೆ ಹಾಕಿ, ವಾಚೋವಿಧೇಯ ವಾಗಿದ್ದ ಆ ಮಹಾಕೃತಿಯ ಪದ್ಯಗಳನ್ನು ಕಪ್ಪುಹಲಗೆಯ ಮೇಲೆ ಬರೆದು, ಕನ್ನಡಿಸಿ. ಅವುಗಳ ಹಾಗೂ ಕೃತಿಯ ಹಿರಿಮೆಯನ್ನು ಸುಮಾರು ಎರಡೂವರೆ ಗಂಟೆಗಳ ಕಾಲ ವಿವರಿಸಿದರು. ಆಗ ನಮಗೆ ಶ್ರೀಯವರ ಪಾಂಡಿತ್ಯದ ಸ್ವರೂಪ ಅರ್ಥವಾಯಿತು. ಹಾಗೆಯೇ ಕನ್ನಡಕ್ಕೆ ತಮಿಳಿನ ಸಹಾಯ ಎಷ್ಟರಮಟ್ಟಿಗೆ ಬೇಕೆಂಬುದೂ ಸಹ. ವಿಷಾದದ ಸಂಗತಿಯೇನೆಂದರೆ ಶ್ರೀಯವರು ಕನ್ನಡಿಸಿದ್ದ ತಮಿಳು ಮಹಾಗ್ರಂಥಗಳು ಗೆದ್ದಲ ಪಾಲಾದದ್ದು ಕನ್ನಡಿಗರ ದುರ್ದೈವ.

ಇಂಗ್ಲಿಷ್ ತರಗತಿಗಳಲ್ಲಿ ದೂರದಿಂದ, ವಿಶೇಷ ಕನ್ನಡ ತರಗತಿಗಳಲ್ಲಿ ಹತ್ತಿರ ದಿಂದ ಶ್ರೀಯವರನ್ನು ನಾನು ಕಂಡಿದ್ದೆ. ಅವರೊಡನೆ ಸ್ವಾತಂತ್ರ್ಯವನ್ನು ವಹಿಸಿ ಮಾತನಾಡುವುದಂತೂ ದೂರವೇ ಉಳಿಯಿತು. ಆ ಕಾಲದ ಪ್ರಾಧ್ಯಾಪಕರ ಬಳಿ ಸುಳಿಯುವುದು ದುಸ್ಸಾಧ್ಯವಾದ ಮಾತಾಗಿತ್ತು, ಅದರಲ್ಲಿಯೂ ಪಾಂಡಿತ್ಯ ಗಾಂಭೀರ್ಯಗಳು ಮೇಳೈಸಿದ್ದ ಶ್ರೀಯವರೊಡನೆ. ಆದರೂ ವಿದ್ಯಾರ್ಥಿಗಳ ವಿಷಯ ದಲ್ಲಿ ಅವರ ವಿಶ್ವಾಸಕ್ಕೆ ಎಂದೂ ಚ್ಯುತಿ ಇರಲಿಲ್ಲ. ಇದರ ಕುರುಹಾಗಿ ಒಂದು ಸಂಗತಿಯನ್ನು ನಿರೂಪಿಸುತ್ತೇನೆ.

ಒಂದು ಗಂಟೆಯ ಕಾಲ ನಡೆಸಿದ ಎಂ. ಎ. ಪರೀಕ್ಷೆಯ ಅಂಗವಾದ ವಾಚಾ ಪರೀಕ್ಷೆ ಮುಗಿದ ಮೇಲೆ ಶ್ರೀಯವರು "ಕನ್ನಡವನ್ನು ನಿಮ್ಮ ಕೈಯಲ್ಲಿಟ್ಟಿದ್ದೇವೆ. ಅದನ್ನು ಕಾಪಾಡಿಕೊಂಡು ಬರುವ ಭಾರ ನಿಮ್ಮ ಮೇಲಿದೆ. ಹೋಗಿ ಬನ್ನಿ. ನಿಮಗೆ ಶುಭವಾಗಲಿ" ಎಂದು ಕೈಮುಗಿದು ನನ್ನನ್ನು ಬೀಳ್ಕೊಟ್ಟರು. ನನ್ನ ಇತರ ಮಿತ್ರರಿಗೂ ಇದೇ ಸಂದೇಶವನ್ನು ನೀಡಿರಬೇಕು. ಮೂವತ್ತೈದು ವರ್ಷಗಳ ಕಾಲ ಕನ್ನಡ ಕಾವ್ಯಗಳನ್ನು ಶ್ರದ್ಧೆಯಿಂದ ಪಾಠಹೇಳಿ, ನನಗೆ ದೊರೆತ ಪರಿಮಿತಾವಕಾಶದಲ್ಲಿ ಜನಸಾಮಾನ್ಯರಲ್ಲಿ ಸಾಹಿತ್ಯ ಪ್ರಚಾರ ಮಾಡಿ, ಸಂಸ್ಕೃತದ ಪ್ರಮುಖ ಅಲಂಕಾರ ಗ್ರಂಥ ಗಳನ್ನು ಮೊಟ್ಟಮೊದಲು ಸಮಗ್ರವಾಗಿ ಪ್ರಕಟಿಸುವ ಹೊಣೆ ಹೊತ್ತು, ತನ್ಮೂಲಕ ಶ್ರೀಯವರ ಸಂದೇಶವನ್ನು ಸ್ವಲ್ಪಮಟ್ಟಿಗಾದರೂ ಪಾಲಿಸಿ ಋಷಿ ಋಣವನ್ನು ತೀರಿಸಿ ರುವೆನೆಂದು ನನ್ನ ದೃಢವಾದ ನಂಬಿಕೆ.

**ಶ್ರೀಕಾರ ಬರೆದರು ಕನ್ನಡ ಕಣ್ವರು**
**ಆಕಾರಗೊಂಡೆವು ನಾವು ॥**

# ಶ್ರೀಯುವರನ್ನು ನಾನು ಮೊದಲು ಕಂಡಾಗ

— ಎಸ್. ವಿ. ಪರಮೇಶ್ವರ ಭಟ್ಟ

ಈಗ ಐವತ್ತು ಐವತ್ತೊಂದು ವರ್ಷಗಳ ಹಿಂದೆ ನಡೆದ ಒಂದು ಸಂಗತಿಯನ್ನು ನೆನಪಿಗೆ ತಂದುಕೊಂಡು ಈ ಕೆಳಗೆ ನಾಲ್ಕು ಮಾತು ಬರೆದಿದ್ದೇನೆ. ಶ್ರೀಯುವರನ್ನು ಕುರಿತ ಲೇಖನಗಳ ಬೊಕ್ಕಸದಲ್ಲಿ ನನ್ನ ಈ ಗಾಜಿನಮಣಿಗೂ ಎಡೆ ದೊರೆಯುವು ದಾದರೆ ನನಗಿಂತ ಧನ್ಯರು ಬೇರೆ ಯಾರಿದ್ದಾರೆ ?

ಪ್ರಾಚಾರ್ಯ ಶ್ರೀಯುವರ ಹಿರಿಮೆಗರಿಮೆಗಳ ವೃತ್ತಾಂತ ಕರ್ಣಾಕರ್ಣಿಕೆಯಾಗಿ ಹಬ್ಬುತ್ತ ಹಬ್ಬುತ್ತ ಆ ಕಾಲಕ್ಕೆ ನನ್ನಂತಹವನ ಕಿವಿಗೂ ಬಿದ್ದಿತ್ತು. ಆಗ್ಗೆ ನಾನು ಮಲೆನಾಡಿನ ಕೊಂಪೆಯೆನ್ನಬಹುದಾದ ಮೂಲೆಯ ಹಳ್ಳಿಯೊಂದರಿಂದ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಬಂದು ಬೆಂಗಳೂರಿನ ಕೋಟೆ ಪ್ರೌಢಶಾಲೆಯವರು ತೆರೆದಿದ್ದ ಎಸ್. ಎಸ್. ಎಲ್. ಸಿ.ಯ ಬೆಳಗಿನ ತರಗತಿಗೆ ಸೇರಿಕೊಂಡು ಓದುತ್ತಿದ್ದ ಒಬ್ಬ ಹಳ್ಳಿಯ ಎಳೆಯ ! ಬೆಂಗಳೂರಿನಂತಹ ನಗರದ ಆಧುನಿಕ ಜೀವನದ ಸುಖ ಸೌಕರ್ಯ ಗಳನ್ನು ಕಂಡು ಬೆರಗಾಗಿ ಹೋದವನು ನಾನು. ಹೊಸ ಊರು, ಹೊಸ ಜನ, ಹೊಸ ಪರಿಚಯ ಮುಂತಾದವುಗಳಿಂದ ಬೆರಗು ಪಡೆದ ನನಗೆ ಹೊಸ ಪರಿಸ್ಥಿತಿಗೆ ಹೊಂದಿಕೊಳ್ಳುವುದಕ್ಕೆ ಬಹಳ ದಿನಗಳೇ ಬೇಕಾದವು. ಇಂತಹ ಪರಿಸ್ಥಿತಿಯಲ್ಲಿದ್ದ ನಾನು ಆ ಕಾಲಕ್ಕೆ ಬರೆದಿದ್ದ ಅಥವಾ ಕವಿತೆ ಎಂಬ ಹೆಸರಿನಲ್ಲಿ ಗೀಚುತ್ತಿದ್ದ ಪಂಕ್ತಿ ವಿಶೇಷಗಳನ್ನೇ ಅವರಿವರಿಗೆ ತೋರಿಸಿ ಅವರ ಮೆಚ್ಚಿಗೆ ಪಡೆಯುವುದರ ಮೂಲಕವಾಗಿ ಹೊಸ ಸನ್ನಿವೇಶದಲ್ಲಿ ಸ್ವಲ್ಪ ನೆಮ್ಮದಿಯಿಂದಿರುವುದಕ್ಕೆ ಯತ್ನಿಸುತ್ತಿದ್ದೆನು.

ಇಂತಹ ದಿನಗಳಲ್ಲಿ ನನ್ನ ಬರಹಗಳನ್ನು ಮೆಚ್ಚಿಕೊಂಡ ಒಬ್ಬಿಬ್ಬರು ನಿಮ್ಮ ಕವಿತೆಗಳನ್ನು ಶ್ರೀಯುವರಿಗೆ ಒಮ್ಮೆ ತೋರಿಸಿ ಏಕೆ ಅವರ ಸಲಹೆ ಸಹಕಾರಗಳನ್ನು ಪಡೆಯಬಾರದು — ಎಂದು ಸೂಚಿಸಿದರು.

ನನಗೋ ಉತ್ಸಾಹ ಬುಗ್ಗೆಯಂತೆ ಚಿಮ್ಮಿತು. ಹೈಸ್ಕೂಲಿನಲ್ಲಿ ಓದುತ್ತಿದ್ದೇನೆ, ಹಳ್ಳಿಯಿಂದ ಬಂದಿದ್ದೇನೆ, ಏನೋ ತೋಚಿದ ನಾಲ್ಕು ಸಾಲು ಗೀಚಿಕೊಂಡಿದ್ದೇನೆ.

ಶ್ರೀಯಂವರೆಲ್ಲಿ ? ನಾನೆಲ್ಲಿ ? ನನ್ನಂತಹವನು ಇಂತಹವರಿಗೆ ಇವುಗಳನ್ನು ತೋರಿಸಬಹುದೆ ? ಬಿಡುವಿಲ್ಲದ ಕಾರ್ಯಬಾಹುಳ್ಯಗಳಲ್ಲಿ ಅವಿರಾಮವಾಗಿ ದುಡಿಯುತ್ತಿರುವ ಆ ಮಹನೀಯರಿಗೆ ನನ್ನ ಬರಹ ಓದುವುದಕ್ಕೆ ಸಮಯವಿರುತ್ತದೆಯೆ – ಎಂಬಂತಹ ವಿಚಾರಗಳು ನನಗೆ ಹೊಳೆಯಲೇ ಇಲ್ಲ. ನನ್ನದು ಕೇವಲ ಹುಡುಗುಬುದ್ಧಿ, ದೊಡ್ಡವರಿಂದ ಮೆಚ್ಚಿಗೆ ಗಳಿಸಿದರೆ ಎಷ್ಟು ಚೆನ್ನ ಎನ್ನುವುದೇ ನನ್ನ ತಲೆ ತುಂಬ ತುಂಬಿ ಹೋಗಿತ್ತು.

ಆ ದಿನಗಳಲ್ಲಿ ಶ್ರೀಯಂವರು ಇಂಟರ್‌ಮೀಡಿಯಟ್ ತರಗತಿಯಲ್ಲಿ ಅನುತ್ತೀರ್ಣರಾದ ವಿದ್ಯಾರ್ಥಿಗಳ ಸೌಕರ್ಯಕ್ಕಾಗಿ ಬಸವನಗುಡಿಯ ದೇಶೀಯ ವಿದ್ಯಾಶಾಲೆಯಲ್ಲಿ ತೆರೆದಿದ್ದ ಬೆಳಗಿನ ತರಗತಿಗೆ ಇಂಗ್ಲಿಷ್ ಪಾಠ ಕಲಿಸುವ ಸಲುವಾಗಿ ಬರುತ್ತಿದ್ದರು. ಒಂದು ದಿನ ಬೆಳಗ್ಗೆ ಶ್ರೀಯವರು ತಮ್ಮ ಪ್ರವಚನ ಮುಗಿಸಿ ಮನೆಗೆ ಮರಳುತ್ತಿದ್ದ ಸಮಯವನ್ನು ಸಾಧಿಸಿ ಮಾರ್ಗದಲ್ಲಿ ಅವರನ್ನು ಸಂಧಿಸಿ ವಿನಯಪೂರ್ವಕವಾಗಿ ಕೈ ಮುಗಿದೆ. ಅವರು ನಿಂತು ಏನೆಂದು ವಿಚಾರಿಸಿದರು. ನಾನು ಆದಷ್ಟು ಸುಂದರವಾಗಿ ಬರೆದಿಟ್ಟುಕೊಂಡಿದ್ದ ನನ್ನ ಹನ್ನೆರಡು ಕವಿತೆಗಳ ಹಾಳೆಗಳನ್ನು ಜೋಡಿಸಿ ಅವರ ಕೈಗಿತ್ತು ಇದನ್ನು ನೋಡಿ ಸಲಹೆ ಕೊಡಬೇಕು ಎಂದು ಬಿನ್ನವಿಸಿಕೊಂಡೆ. ಶ್ರೀಯಂವರು ಆಗಲಿ ಎಂದರು. ನನ್ನ ಮನೆ ಗೊತ್ತಿದೆಯಷ್ಟೆ. ಇಂಥ ದಿವಸ ಇದೇ ಹೊತ್ತಿಗೆ ಮನೆಗೆ ಬನ್ನಿ ಎಂದು ಹೇಳಿ ಮುಂದೆ ನಡೆದರು. ನಾನು ಕೈಮುಗಿದು ನನ್ನ ವಸತಿಗೆ ಹಿಂದಿರುಗಿದೆ.

ಆ ದಿನವೆಲ್ಲ ನಾನು ಸಂತೋಷದ ಒಂದು ಗುಂಗಿನಲ್ಲಿದ್ದೆ. ಮುಂದೆ ಆ ಗಡುವಿನ ದಿನದ ಬರವನ್ನೇ ಕಾಯುತ್ತಿದ್ದೆ. ಅವರು ಹೇಳಿದ ಗಡುವಿನ ದಿನ ಬಂದಾಗ ಹೊತ್ತಿಗೆ ಸರಿಯಾಗಿ ಮನೆಗೆ ಹೋದೆ. ಶ್ರೀಯಂವರು ದೂರದಿಂದಲೇ ನನ್ನನ್ನು ಗುರುತಿಸಿ ಹೊರಗೆ ಬಂದು "ದಯವಿಟ್ಟು ಕ್ಷಮಿಸಿ, ನೋಡುವುದು ಆಗಲಿಲ್ಲ. ನಾಳೆ ಈ ಹೊತ್ತಿಗೆ ಬನ್ನಿ" ಎಂದರು. ನಾನು ಭೂಮಿಗೆ ಇಳಿದುಹೋದೆ. ಆಗಲಿ ಎಂದು ನಮಸ್ಕಾರ ಮಾಡಿ ಬೀಡಿಗೆ ಮರಳಿದೆ.

ಮರುದಿನದ ಕಥೆಯೇ ಬೇರೆ. ನಾನು ಮನೆಯ ಮೆಟ್ಟಿಲು ಹತ್ತುತ್ತಿದ್ದಂತೆಯೇ ನೋಡಿ ಸಮೀಪಕ್ಕೆ ಬಂದು ನನ್ನನ್ನು ಒಳಕ್ಕೆ ಕರೆದುಕೊಂಡು ಹೋದರು. ತಮ್ಮ ಅಧ್ಯಯನ ಕೊಠಡಿಯಲ್ಲಿ ದೊಡ್ಡ ಮೇಜೊಂದರ ಮುಂದೆ ಹಾಕಿದ್ದ ಎರಡು ಕುರ್ಚಿಗಳಲ್ಲಿ ಒಂದರಮೇಲೆ ನನ್ನನ್ನು ಕುಳಿತುಕೊಳ್ಳಲು ಸೂಚಿಸಿ ಇನ್ನೊಂದರಲ್ಲಿ ತಾವು ಕುಳಿತುಕೊಂಡರು. ಬಳಿಯಲ್ಲಿಯೇ ಇಟ್ಟುಕೊಂಡಿದ್ದ ಹಾಳೆಗಳನ್ನು ತೆಗೆದುಕೊಂಡರು. ಅವುಗಳ ಮೇಲೆ ಪೆನ್ಸಿಲ್ಲಿನಲ್ಲಿ ಮಾಡಿದ್ದ ಗುರುತುಗಳು ನನಗೆ ದೂರದಿಂದಲೇ ಕಾಣಬರುತ್ತಿದ್ದವು. ನಾನು ಭಯಗ್ರಸ್ತನಾಗಿ ಕುಳಿತುಬಿಟ್ಟಿದ್ದೆ. ಅವರು ಸಾವಧಾನವಾಗಿ ಒಂದೊಂದು ಪದ್ಯವನ್ನೂ ಓದಿದರು. ಇಲ್ಲಿ ನೋಡಿ

ಛಂದಸ್ಸು ಕೆಟ್ಟಿದೆ, ಇಲ್ಲಿ ನೋಡಿ ಈ ಸಾಲು ಅರ್ಥವಾಗುವುದಿಲ್ಲ ಎಂದು ವಿವರಿಸಿ ಹೇಳುತ್ತ ಹೋದರು.

ಮುಂದೆ "ಪಡವಣೆಡೆಯ ಕಡಲಿನೊಡಲ ಬಡಬ ಮೇಲೆಕೆದ್ದಿದೆ" ಎಂಬ ಸಾಲು ಓದಿ ಇದು ಪುಟ್ಟಪ್ಪನವರ "ಅಡಿಯ ಗೆಜ್ಜೆ ನಡುಗೆ ಹೆಜ್ಜೆ ಇಡುತ ಸುಗ್ಗಿ ಬರುತಿದೆ" ಎಂಬ ಕವಿತೆಯ ಛಂದೋರೂಪದ ಅನುಕರಣವಾಗಿದೆ. ಅಲ್ಲಿಯ ಹಾಗೆಯೇ ಇಲ್ಲಿ ಒಳ ಪ್ರಾಸ, ಅಲ್ಲಿಯ ಹಾಗೆಯೇ ಇಲ್ಲಿ ಸಾಲುಗಳ ಜೋಡಣೆ ಎಂದು ಮುಂತಾಗಿ ಹೇಳಿದರು. ಹೀಗೆ ಒಬ್ಬರ ಛಂದೋರೂಪದ ಓಟಗಳನ್ನೇ ಮಾದರಿಯಾಗಿಟ್ಟುಕೊಂಡು ಅದೇ ಅಚ್ಚಿನಲ್ಲಿ ನಿಮ್ಮ ಭಾವಗಳನ್ನು ಎರಕಹೊಯ್ಯುವುದು ಬೇಡ ಎಂದರು. ಮುಂದೆ ನೀವು ಇಂಟರ್‌ಮೀಡಿಯೆಟ್ ಪಾಸ್‌ಮಾಡಿ ಕನ್ನಡವನ್ನೇ ಪ್ರಧಾನ ವಿಷಯವನ್ನಾಗಿ ಆರಿಸಿಕೊಂಡು ಬಿ. ಎ. ಆನರ್ಸ್ ಮತ್ತು ಎಂ. ಎ. ತರಗತಿಗಳಲ್ಲಿ ಓದಿ ಉತ್ತೀರ್ಣರಾಗಿ ಬನ್ನಿ. ಆ ವೇಳೆಗೆ ನಿಮಗೆ ಬೇರೆಬೇರೆ ಗುರುಗಳು ಕಾವ್ಯ-ಶಾಸ್ತ್ರಗಳ ಪಾಠ ಹೇಳಿರುತ್ತಾರೆ. ನೀವೇ ಕಾವ್ಯಗಳ ರಚನಾ ವಿಧಾನಗಳನ್ನೂ ಕಾವ್ಯಗಳ ಗುಣದೋಷಗಳ ವಿಮರ್ಶೆಗಳನ್ನೂ ಮಾಡಬಲ್ಲವರಾಗಿರುತ್ತೀರಿ. ಈ ನಡುವೆ ಬರೆಯುವುದನ್ನು ಬಿಡಬೇಡಿ, ಬರೆಯುತ್ತಿರಿ ಎಂದೆಲ್ಲ ಹೇಳಿ ನನ್ನನ್ನು ಕಳುಹಿಸಿಕೊಟ್ಟರು. ನಾನು ಕೃತಜ್ಞತಾಭಾವದಿಂದ ಅವರಿಗೆ ಮಣಿದು ಮನೆಗೆ ಬಂದೆ. ನನ್ನನ್ನು ಶ್ರೀಯವರ ದರ್ಶನಕ್ಕೆ ಪ್ರೋತ್ಸಾಹಿಸಿದ ಗೆಳೆಯರಿಗೆಲ್ಲ ನನ್ನ ಕಥೆ ಹೇಳಿದೆ. ಗೆಳೆಯರು ಮೆಚ್ಚಿಕೊಂಡರೆಂದು ಹೇಳಬೇಕಾದ್ದಿಲ್ಲ.

ಮುಂದೆ ಶ್ರೀಯವರು ಹೇಳಿದಂತೆಯೇ ಆಯಿತು. ಕನ್ನಡ ಆನರ್ಸ್ ಮತ್ತು ಎಂ. ಎ. ಮುಗಿಸಿದೆ. ಶ್ರೀಯವರ ದಯೆಯಿಂದ ಮೈಸೂರು ವಿಶ್ವವಿದ್ಯಾನಿಲಯದಲ್ಲಿಯೇ ಕನ್ನಡದ ಅಧ್ಯಾಪಕನಾಗುವ ಭಾಗ್ಯ ನನಗೆ ಲಭಿಸಿತು.

ಶ್ರೀಯವರ ಸೌಜನ್ಯ, ವಿನಯ ಎಳೆಯರನ್ನು ಪ್ರೋತ್ಸಾಹಿಸುತ್ತಿದ್ದ ರೀತಿ ಮುಂತಾದವುಗಳಿಗೆ ಈ ಪ್ರಸಂಗ ಒಂದು ಒಳ್ಳೆಯ ಉದಾಹರಣೆ ಎಂದು ನಾನು ತಿಳಿದಿದ್ದೇನೆ.

# ಸವಿನೆನಪುಗಳು

— ಎಂ. ಎನ್. ಲಕ್ಷ್ಮೀನಾರಾಯಣರಾವ್

"'ಶ್ರೀ'ಯವರದು ಒಂದು 'ವಾಣಿ' - a voice" — ವಿ. ಸೀ.

ನಾವಿದ್ದುದು ಮಹಾರಾಜಾ ಕಾಲೇಜಿನ ವೈಭವದ ದಿನಗಳಲ್ಲಿ. ಮರೆಯುಲಾಗದ ದಿನಗಳು. ನೆನೆದರೆ ಮೈನವಿರೇಳುತ್ತೆ.

ಖ್ಯಾತಿವೆತ್ತ ಮಹಾ ವಿದ್ವಾಂಸ ಶ್ರೇಷ್ಠರ ಪರಂಪರೆಯನ್ನೇ ನೋಡುವ ಭಾಗ್ಯ ನಮ್ಮದಾಗಿತ್ತು. ಆಕ್ಸ್‌ಫರ್ಡ್ ಮತ್ತು ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯಗಳ ಭವ್ಯತೆಯ ಮಹೋನ್ನತ ದಿನಗಳನ್ನು ಕಂಡಂತೆ ಭಾಸವಾಗುತಿತ್ತು. ಅಂದು ವಿದ್ಯಾರ್ಥಿಗಳಾಗಿರುವುದೇ ಒಂದು ಸ್ವರ್ಗೀಯ ಸುಖಾನುಭವವಾಗಿತ್ತು. ಪಾಂಡಿತ್ಯದ ಪರ್ವತದಂತಿದ್ದ (ನಾನು ಕಂಡಂತೆ) ನೀಳ ಗಡ್ಡದ ಭವ್ಯಮೂರ್ತಿ ಡಾಕ್ಟರ್ ಬ್ರಜೇಂದ್ರನಾಥ್ ಸೀಲ್ (ವಿವೇಕಾನಂದರ ಸಹಪಾಠಿಗಳಾಗಿದ್ದವರು) ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿದ್ದರು. ಆ ಮೇರು ವ್ಯಕ್ತಿಯನ್ನು ನೋಡುವುದೇ ಕಣ್ಣಿಗೊಂದು ಸೊಗಸು ತರುತ್ತಿತ್ತು. ಮಹಾರಾಜಾ ಕಾಲೇಜಿನ ಪ್ರಾಂಶುಪಾಲರು ಮಹಾಮೇಧಾವಿಗಳಾದ ಅರ್ಥಶಾಸ್ತ್ರ ಕೋವಿದ ಎನ್. ಎಸ್. ಸುಬ್ಬರಾಯರು. ಅವರೇ ಸ್ವತಃ ನಮ್ಮ ತರಗತಿಗೆ ಬಂದು (ಮೊದಲನೆಯ ಬಿ.ಎ.ಲಿ ಇದ್ದಾಗ) ಅತ್ಯಂತ ಮಧುರವಾದ ಮತ್ತು ಸರಳವಾದ ಶೈಲಿಯಲ್ಲಿ ಅರ್ಥಶಾಸ್ತ್ರ ಬೋಧಿಸುತ್ತಿದ್ದರು. ಜಾಮೂನಿನ ಉದಾಹರಣೆ ಇಲ್ಲದೆ ಅವರ ಪಾಠ ಮುಂದು ವರಿಯುತ್ತಲೇ ಇರಲಿಲ್ಲ.

ಹೆಸರಾಂತ ಪ್ರಾಧ್ಯಾಪಕರಾದ ತತ್ವಶಾಸ್ತ್ರ ಕೋವಿದ ಡಾಕ್ಟರ್ ಎ. ಆರ್. ವಾಡಿಯ, ಇತಿಹಾಸ ಪ್ರಜ್ಞ ಎಸ್. ವಿ. ವೆಂಕಟೇಶ್ವರ, ಸಂಸ್ಕೃತ ದಿಗ್ದಂತಿ ಪ್ರಾಧ್ಯಾಪಕ ಎಂ. ಹಿರಿಯಣ್ಣ (ಅಕ್ಷರಶಃ ಹಿರಿಯ ಅಣ್ಣ), ಕನ್ನಡ ಪೀಠಕ್ಕೆ ಖ್ಯಾತಿ ತಂದ ಕನ್ನಡದ ಅಶ್ವಿನೀದೇವತೆಗಳೆನಿಸಿಕೊಂಡ ಟಿ. ಎಸ್. ವೆಂಕಣ್ಣಯ್ಯ ಮತ್ತು ಎ. ಆರ್. ಕೃಷ್ಣಶಾಸ್ತ್ರಿಗಳು, ಮತ್ತು ಆಂಗ್ಲಸಾಹಿತ್ಯ ಪರಿಣಿತ ಶ್ರೇಷ್ಠರಾದ

ಪ್ರಾಂಶುಪಾಲ ರಾಲೊ, ಮೆಕಿಂಟಾಷ್ ಮತ್ತು ನಮಗೆಲ್ಲಾ ಇಂದು ಸವಿನೆನಪು ತರುತ್ತಿರುವ ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು – ವಿದ್ಯಾರ್ಥಿಗಳ 'ಪ್ರೇಮಶ್ರೀ'ಯಾದ ಶ್ರೀಯವರು – ಅಂದಿನ ಗುರುಶ್ರೇಣಿಯಲ್ಲಿ ಪ್ರಜ್ವಲಿಸುವ ಪ್ರದೀಪಗಳಾಗಿದ್ದರು. ಅವರಲ್ಲಿ ಒಬ್ಬೊಬ್ಬರೂ ತಮ್ಮ ತಮ್ಮ ಕ್ಷೇತ್ರದಲ್ಲೇ ಅಲ್ಲ, ಇಡೀ ವಿದ್ಯಾರ್ಥಿವೃಂದದ ಮೇಲೆ ಪ್ರಭಾವ ಬೀರಿದ ಮಹಾ ಸ್ಫೂರ್ತಿ ಮೂರ್ತಿಗಳಾಗಿದ್ದರು. ನಾನು ಮಾತ್ರ ಸಂಪೂರ್ಣವಾಗಿ ಪ್ರಭಾವಿತನಾದದ್ದು ನನ್ನ ಇಂಗ್ಲಿಷ್ ಗುರುಗಳಾದ 'ಕರುಣಾಳು ಬೆಳಕು' ಆಚಾರ್ಯ ಬಿ. ಎಂ. ಶ್ರೀಯವರಿಂದ.

ಅದು ೫೭-೫೮ ವರ್ಷಗಳ ಹಿಂದಿನ ಮಾತು. ಆಗ ನಾನು ಮಹಾರಾಜಾ ಕಾಲೇಜಿನಲ್ಲಿ ಬಿ. ಎ. ತರಗತಿಯಲ್ಲಿ ವಿದ್ಯಾರ್ಥಿಯಾಗಿದ್ದೆ. ನನ್ನ ಆ ದಿನಗಳು ಮಹಾ ಸುದಿನಗಳು ಎಂದು ಇಂದಿಗೂ ನನ್ನ ಭಾವನೆ. ನನಗೆ ಮರೆಯಲಾಗದ ಸಹಪಾಠಿಗಳೂ, ಸಂಗಡಿಗರೂ, ಸಹವರ್ತಿಗಳೂ ಇದ್ದರು. ಅವರನ್ನು ಸ್ಮರಿಸುವುದೇ ಒಂದು ಹೆಮ್ಮೆ. ಕನ್ನಡ ಕವಿ ಸಾರ್ವಭೌಮರಾದ ಕನ್ನಡ ತಾಯಿಯ ವರಪುತ್ರ ನಮ್ಮ ರಾಷ್ಟ್ರಕವಿ ಕುವೆಂಪು ಅವರು ಮತ್ತು ಕನ್ನಡ ಸಾಹಿತ್ಯೋನ್ನತಿಯನ್ನು ಮುಟ್ಟಿದ ದಿವಂಗತ ಡಿ. ಎಲ್. ನರಸಿಂಹಾಚಾರ್ ಅವರು ನನ್ನ ತರಗತಿಯಲ್ಲಿ ನನ್ನೊಡನಾಡಿಗಳಾಗಿದ್ದುದು ನನ್ನ ವಿದ್ಯಾರ್ಥಿ ದೆಸೆಯಲ್ಲಿ ನನಗಾದ, ಮರೆಯಲಾಗದ ಅದೊಂದು ರೋಮಾಂಚಕಾರಿ ಅನುಭವ. ಅದರಂತೆಯೆ 'ಕನ್ನಡದ ಕೊರಳಲ್ಲಿ ಶ್ರೀಕಂಠಿಕೆಯಾಗಿ' ಬೆಳಗಿದ ಕೀರ್ತಿಶೇಷರಾದ ತೀ. ನಂ. ಶ್ರೀಯವರ ಕವಿಸಂಗ ನನಗೆ ದೊರಕಿದ್ದು.

'ಶ್ರೀ'ಯವರಿಗೆ ಶಿಷ್ಯರಲ್ಲಿ ವಿಶೇಷ ವಾತ್ಸಲ್ಯವಿದ್ದರೂ ಶಿಷ್ಯರು ಶ್ರೀಯವರೊಂದಿಗೆ ಗೌರವದ ಜೊತೆಗೆ ಭಯದಿಂದಲೂ ವರ್ತಿಸುತ್ತಿದ್ದರು. ಸಲಿಗೆಯಂತೂ ಸಾಧ್ಯವೇ ಇರುತ್ತಿರಲಿಲ್ಲ. ಶ್ರೀಯವರು ಪಾಠಮಾಡುವಾಗ ಶಿಷ್ಯರನ್ನು ಪ್ರಚೋದಿಸುವುದಕ್ಕಾಗಿ ಆಗಾಗ ಪ್ರಶ್ನೆ ಕೇಳುತ್ತಿದ್ದರು. ಒಂದು ಸಲ ಅವರು ಕೇಳಿದ ಪ್ರಶ್ನೆಗೆ ಉತ್ತರಿಸಲು ಸಹಜವಾದ ಭೀತಿಯಿಂದ ನನ್ನ ಸಹಪಾಠಿಗಳು ಹಿಂಜರಿದಾಗ ನಾನು ಮುಂದಾದೆ. ನನ್ನ ಉತ್ತರದಲ್ಲಿ 'Complete' ಎಂಬ ಪದವನ್ನು ಉಪಯೋಗಿಸಿದೆ. ಶ್ರೀಯವರು What do you mean by that ? ಅಂತ ಕೇಳಿದರು. ನನ್ನ ಉತ್ತರದಲ್ಲಿ Full ಎಂಬ ಪದ ಬಳಸಿದೆ. ಶ್ರೀಯವರ ಮತ್ತೆ ಅದೇ ಪ್ರಶ್ನೆ. ನನ್ನ ಉತ್ತರದಲ್ಲಿ Entire ಪದದ ಪ್ರಯೋಗ. ಆ ಸರಣಿ ಅಲ್ಲಿಗೇ ನಿಲ್ಲಲಿಲ್ಲ. ಪುನಃ ಶ್ರೀಯವರ ಅದೇ ಪ್ರಶ್ನೆ. ನನ್ನ ಉತ್ತರದಲ್ಲಿ 'Perfect' ಎಂಬ ಪದದ ಪ್ರಯೋಗ. ಶ್ರೀಯವರ ಮುಖದಲ್ಲಿ ನಮಗೆ ಅರ್ಥವಾಗದ ಗಂಭೀರದ ನಗೆಯ ಸುಳಿವು. ತರಗತಿಯಲ್ಲಿ ಮಾತ್ರ ಈ ಅನಿಶ್ಚಿತ ವಾತಾವರಣದಿಂದ ಮುಂದೇನಾಗುವುದೊ ಎಂಬ ಭೀತಿ. ಪರೀಕ್ಷೆಯಲ್ಲಿ ನನ್ನ ಪರಿಣಾಮವೇನಾದಿತೋ

ಎಂಬ ಶಂಕೆ. ನಾನೂ ಸ್ವಲ್ಪ ಅಳುಕಿದೆ. ಇಂತಹ ಸನ್ನಿವೇಶಗಳಲ್ಲಿ ಶ್ರೀಯವರ ಪ್ರತಿಕ್ರಿಯೆಗೆ ಸಂಬಂಧಿಸಿದ ಭೀತಿಹುಟ್ಟಿಸುವ ಕಾಲ್ಪನಿಕ ಕತೆಗಳೂ ಇದ್ದುವು. ಆದರೆ ಆ ವರ್ಷದ ಪರೀಕ್ಷೆಯಲ್ಲಿ ಶ್ರೀಯವರ ಡ್ರಾಮಾ ಪೇಪರಿನಲ್ಲಿ ನನಗೆ ಪ್ರಥಮ ಸ್ಥಾನ ಪ್ರಾಪ್ತಿ !

ಶ್ರೀಯವರನ್ನು ದೂರದಿಂದ ನೋಡಿದವರಿಗೆ ಅವರ ನಿಜಸ್ವಭಾವವನ್ನು ತಿಳಿಯುವುದು ಕಷ್ಟವಾಗುತ್ತಿತ್ತು. ಆದರೆ ಅವರನ್ನು ಹತ್ತಿರದಿಂದ ನೋಡುವ ಅವಕಾಶ ಒಂದು ಸಲ ನನಗೆ ದೊರೆಯಿತು. ಅದು ಅವರ ಮಗಳ ಮದುವೆಯಲ್ಲಿ ನನ್ನ ಆಪ್ತ ಸ್ನೇಹಿತನ ಅಳಿಯತನದಲ್ಲಿ ಆಗಲೇ ಅವರ ಸಜ್ಜನಿಕೆಯ ಸೊಬಗನ್ನು ನಾನು ಕಂಡಿದ್ದು.

ಪ್ರಾಧ್ಯಾಪಕರ ಮನೆಯಲ್ಲಿ ಸರಾಗವಾಗಿರುವುದಕ್ಕೆ ನನಗೆ ಸಂಕೋಚ. ಮದುವೆಯ ಮನೆಯಲ್ಲಿ ಒಂದು ಕಡೆ ಮರೆಯಾಗಿ ಕುಳಿತಿದ್ದೆ. ಆದರೂ ಶ್ರೀಯವರು ದೂರದಿಂದಲೇ ನನ್ನನ್ನು ಗುರ್ತಿಸಿ, ಹತ್ತಿರ ಬಂದು, ನನ್ನ ಭುಜದ ಮೇಲೆ ತಮ್ಮ ಹಸ್ತವನ್ನಿಟ್ಟು "ಮುಂದಕ್ಕೆ ಬನ್ನಿ" ಎಂದು ತಮ್ಮೊಡನೆ ನನ್ನನ್ನು ಕರೆದೊಯ್ದರು. ಅಂದಿನಿಂದ ಅವರು ನನ್ನ ಹೃದಯದ ಆರಾಧ್ಯಮೂರ್ತಿಯಾದರು. ಶ್ರೀಯವರು ಸೊಗಸಾದ ಮೂರ್ತಿ. ಅವರನ್ನು ನೋಡುವುದೇ ಒಂದು ಆನಂದ. ಬಿಗಿ ಕತ್ತಿನ ಪಟ್ಟಿಯ ಎದೆ ಮುಚ್ಚುವ ಅಂಗಿ ತೊಟ್ಟು ತಲೆಯಲ್ಲಿ ನವಿರಾದ ಜರತಾರಿ ರುಮಾಲು ಧರಿಸಿ ಅವರದೇ ಆದ ಗಾಂಭೀರ್ಯದ ಸುಂದರ ನಿಲುವಿನಲ್ಲಿ ನಿಂತಾಗ ಶ್ರೇಷ್ಠ ಗ್ರೀಕ್ ಶಿಲ್ಪಿ ಅಮೃತಶಿಲೆಯಲ್ಲಿ ಕಡೆದ ಪ್ರತಿಮೆಯಂತೆ ಕಾಣುತ್ತಿದ್ದರು. ಅವರ ಮೃದು ಮಾಧುರ್ಯದ ಸೊಬಗನ್ನು ನೋಡಿ ಗೌರಮ್ಮನಂತೆ ಎಷ್ಟು ಚೆಲುವಾಗಿ ಕಾಣುತ್ತಾರೆ ಎಂದು ನಮಗೆ ನಾವೇ ಅಂದುಕೊಂಡಿದ್ದೂ ಉಂಟು. ಅವರು ಕರಿಯ ಗೌನನ್ನು ಧರಿಸಿ (ಆಗಿನ ಕಾಲದ ನಿಯಮ) ಪಕ್ಕದ ಬಾಗಿಲಿನಿಂದ ನಮ್ಮ ತರಗತಿಯನ್ನು ಪ್ರವೇಶಿಸಿದಾಗ ಮಂದಮಾರುತ ಸುಳಿದಂತೆ ಭಾಸವಾಗಿ ಗ್ರೀಕ್ ದಾರ್ಶನಿಕ ಅರಿಸ್ಟಾಟಲನ ನೆನಪು ತರುತ್ತಿತ್ತು. (Like Aristotle he entered the class like a breeze) ಆಮೇಲೆ ಅವರು ವೇದಿಕೆಯ ಮೇಲೆ (ಆ ವೇದಿಕೆ ಮಹಾಮಹಾ ದಾರ್ಶನಿಕರಿಂದ ಕವಿಕೋವಿದರಿಂದ ಪಂಡಿತೋತ್ತಮರಿಂದ ಪವಿತ್ರವಾಗಿ ಪುಳಕಿತಗೊಂಡದ್ದು) ನಿಂತಾಗಲಂತೂ – ಆ ಭವ್ಯತೆ, ಆ ಹಸನ್ಮುಖ, ಆ ಒಲವು, ಆ ಗೆಲವು, ಆ ದಿಟ್ಟನಿಲುವನ್ನು ಕಂಡು ನಾವು ಸಮ್ಮೋಹಿತರಾಗುತ್ತಿದ್ದೆವು. ಅದರಲ್ಲೂ ಅವರ ನಾಟಕ ಪ್ರವಚನ ಪ್ರಾರಂಭವಾಯಿತೆಂದರೆ ಸಾಕು ತರಗತಿಗೆ ತರಗತಿಯೆ ಮೈ ಮರೆಯುತ್ತಿತ್ತು.

ಶ್ರೀಯವರಿಗೆ ಷೇಕ್ಸ್‌ಪಿಯರ್ ನಾಟಕಗಳಲ್ಲಿ ವಿಶೇಷ ಆಸಕ್ತಿ. ಅವುಗಳನ್ನು ಅವರು ಬಹಳವಾಗಿ ಅಭ್ಯಾಸ ಮಾಡಿದ್ದರು. ಅವುಗಳ ಬೋಧನೆಯಲ್ಲಿ ಅವರಿಗೆ ವಿಶೇಷ

ಆನಂದ. ಅವರ ನಾಟಕ ಪ್ರವಚನವನ್ನು ಎಂದಿಗೆ ಕೇಳೇವೊ ಎಂದು ನಮ್ಮಲ್ಲಿದ್ದ ಹುಚ್ಚು ಹೇಳತೀರದು. ನಾಟಕದ ಬಹುಭಾಗವೆಲ್ಲಾ ಅವರ ಬಾಯಲ್ಲೇ ಇತ್ತು. ನಾಟಕ ಪ್ರವಚನ ಮತ್ತು ನಿರೂಪಣೆಯಲ್ಲಿ ಅವರಿಗಿದ್ದ ಪ್ರಭುತ್ವ ಹುಟ್ಟಿನಿಂದ ಬಂದಂತಿತ್ತು. ಅವರ ನಾಟಕ ಪ್ರವಚನದ ವೈಖರಿ, ಸೊಬಗು, ಮಾಧುರ್ಯ ಗಳನ್ನು ಸವಿದ ನಾವು ಅವರಿಗೆ ಮಾರುಹೋಗಿದ್ದೆವು. ಆ ರಸರುಚಿ ತಾವು ಅನುಭವಿಸಿದ ಅಪೂರ್ವ ಸಾಹಿತ್ಯಾನಂದದಲ್ಲಿ ಹೊಸ ಕಲ್ಪನಾಲೋಕವನ್ನೆ ಸೃಷ್ಟಿಸಿ ನಮ್ಮನ್ನು ಅಲ್ಲಿಗೆ ಕರೆದೊಯ್ಯುತ್ತಿದ್ದರು. ಅವರು ಬಣ್ಣಿಸಿದ ಜೂಲಿಯಸ್ ಸೀಸರ್ ಮತ್ತು ಮ್ಯಾಕ್‌ಬತ್ ನಾಟಕದ ದೃಶ್ಯಗಳು ಪಾತ್ರಧಾರಿಗಳೂ ಅರ್ಧಶತಮಾನದ ಮೇಲೂ ನಮ್ಮ ಕಣ್ಣಮುಂದೆ ಬಂದು ನಿಂತಂತಿದೆ.

ಆ ನಾಟಕಗಳನ್ನು ಅಮರಗೊಳಿಸಿದ ಕೆಲವು ಸಾಲುಗಳನ್ನು ಅವರು ಉದ್ಧರಿಸಿದ ಧ್ವನಿಯಂತೂ ಇಂದಿಗೂ ನಮ್ಮ ಕಿವಿಯಲ್ಲಿ ಪ್ರತಿಧ್ವನಿಸುತ್ತಿದೆ. ಶ್ರೀಯವರು ನಮಗೆ ಆದರ್ಶ ಬೋಧಕರಾಗಿ ಮಾರ್ಗದರ್ಶಕರಾಗಿದ್ದರು. ಅವರ ಬಹುಮುಖದ ಪ್ರತಿಭೆ, ಅವರ ಜ್ಞಾನದಾಹ, ಅಪಾರ ಪಾಂಡಿತ್ಯ ಮತ್ತು ೩ ಗಂಟೆಗಳ ಕಾಲ ಅವರು ಕಣ್ಣು ಮುಚ್ಚಿ ನಿರರ್ಗಳವಾಗಿ ಹರಿಸಿದ ಅವರ ವಾಕ್ಪ್ರವಾಹ ನಮ್ಮನ್ನು ಬೆರಗುಗೊಳಿಸಿತ್ತು. ಅವರಿಗೆ ನಮ್ಮಲ್ಲಿದ್ದ ವಾತ್ಸಲ್ಯವಂತೂ ಹೇಳತೀರದು.

ನಾವಿದ್ದುದು ಕನ್ನಡದ ನವೋದಯ ಕಾಲ. ಶ್ರೀಯವರು ಅವರ ಪ್ರೇರಕರಾಗಿದ್ದರು. ಕನ್ನಡತನವನ್ನು ಮರೆತು ಕನ್ನಡದಲ್ಲಿ ಮಾತನಾಡುವುದು ಅವಮಾನವೆಂದು ತಿಳಿದಿದ್ದ ಕಾಲದಲ್ಲಿ ಕನ್ನಡ ಪ್ರಜ್ಞೆಯನ್ನು ನಮ್ಮಲ್ಲಿ ಮೂಡಿಸಿದರು. ಕನ್ನಡದ ಪ್ರೇಮವನ್ನು ಬೆಳೆಸಿದರು. ತಮ್ಮ 'ಇಂಗ್ಲಿಷ್ ಗೀತಗಳು' 'ಹೊಂಗನಸುಗಳು' 'ಗದಾಯುದ್ಧ ನಾಟಕಂ' 'ಅಶ್ವತ್ಥಾಮನ್' ಮತ್ತು 'ಪಾರಸಿಕರು' ಎಂಬ ತಮ್ಮ ಶ್ರೇಷ್ಠ ಸಾಹಿತ್ಯ ಕೃತಿಗಳನ್ನು ಪ್ರಕಟಿಸಿ ಕನ್ನಡಿಗರಿಗೆ ಇಂಗ್ಲಿಷ್ ಕಾವ್ಯ ಮಾರ್ಗವನ್ನು ತಿಳಿಸಿದರು.

ಆದರೆ ಕನ್ನಡದಲ್ಲಿ ಹಳೆ ಸಂಪ್ರದಾಯವನ್ನು ಮುರಿದು ಹೊಸತನವನ್ನು ತರುವ ಪ್ರಯತ್ನದಲ್ಲಿ ಅವರ 'ಅಶ್ವತ್ಥಾಮನ್' ನಾಟಕದ ಚಿರಂಜೀವಿ ಅಶ್ವತ್ಥಾಮನು ಸಾವಪ್ಪಿದುದನ್ನು ಕಂಡು ಕನ್ನಡ ಜನತೆಯೆ ಅಲ್ಲ ಶ್ರೀಯವರ ಮೆಚ್ಚಿನ ಆಪ್ತಶಿಷ್ಯರೆ ತೀವ್ರವಾಗಿ ವಿರೋಧಿಸಿದರು. ಕಟುವಾಗಿ ಟೀಕಿಸಿದರು. ಶ್ರೀಯವರನ್ನು ಜರೆಯುವ ಸ್ವಭಾವದವರೆಂದು (Cynic) ಕರೆದರು. ಶ್ರೀಯವರ ಜೀವನ ಮೊದಲೆ ದುಃಖದಿಂದ ತಪ್ತವಾಗಿತ್ತು. ಕನ್ನಡ ಜನದ ಮತ್ತು ಶಿಷ್ಯರ ನಡತೆಯಿಂದ ಶ್ರೀಯವರಿಗೆ ಗಾಯದ ಮೇಲೆ ಗಾಯವಾದಂತಾಯಿತು. ಆದರೆ ಶ್ರೀಯವರು ಅದನ್ನೆಲ್ಲ ಕನ್ನಡ ಪ್ರೇಮದಿಂದ, ಶಿಷ್ಯರ ಮೇಲೆ ಮಮತೆಯಿಂದ ಒಳಗೆ ನುಂಗಿಕೊಂಡು (ಅಕ್ಷರಶಃ) ಶ್ರೀಕಂಠರಾದರು. (ವಾಗ್ಝರಿಯಿಂದ

ಸಿರಿಕಂಠರೂ, ಹೌದು.) ಅವರು (Say not the struggle naught availeth) ಅನುಸರಿಸಿ ಹೋರಾಡಿ ಫಲವಿಲ್ಲವೆನ್ನಲಿಲ್ಲ. ಅವರ ವಿದ್ಯಾದಾನ ಮತ್ತು ಸಾಹಿತ್ಯ ಸೇವೆಯನ್ನು ಎಂದಿನಂತೆ ಯಾವ ಎಡರುತೊಡರಿಗೂ ಬಾಗದವರಂತೆ ಮುಂದು ವರಿಸಿದರು. ಅವರು ತಮ್ಮ ಜೀವನದ ಧ್ಯೇಯುವನ್ನು ಬ್ರೌನಿಂಗ್ ಕವಿಯ ಈ ಕೆಳಗಿನ ಸಾಲುಗಳಲ್ಲಿ ಕಂಡಂತೆ ತೋರುತ್ತದೆ.

1) T'is not what man Does which exalts him, but
what man would do

2) What I aspired to be,
And was not, comforts me.

ಅವರು ಕನ್ನಡದ ಮೂಲೆ ಮೂಲೆಗೂ ಹೋಗಿ ಕನ್ನಡದ ಬಾವುಟ ಹಾರಿಸಿದರು. ತಮ್ಮ ಶಿಷ್ಯರನ್ನು ಕನ್ನಡದ ಸೇವೆಗಾಗಿ ಸಜ್ಜುಗೊಳಿಸಿದರು. ಕನ್ನಡ ಸೇನೆಯನ್ನೇ ಕಟ್ಟಿದರಂ, ಕನ್ನಡ ಸಾಹಿತ್ಯ ಶ್ರೇಷ್ಠರ ಪರಂಪರೆಯನ್ನೇ ಸೃಷ್ಟಿಸಿ ದರು.

ಇದು ತಮ್ಮ ತ್ಯಾಗದ ತಪಸ್ಸಿನಿಂದ ಕನ್ನಡದ ಕಣ್ವರು ಕನ್ನಡನಾಡಿಗೆ ನೀಡಿದ ಅನರ್ಘ್ಯ ಅಮರ ಕೊಡುಗೆ.

# ಶ್ರೀ ಸೌರಭ

– ವಾಣಿ

ಅವು ಸ್ವಾತಂತ್ರ್ಯ ಪೂರ್ವದ ದಿನಗಳು. ಶ್ರೀರಂಗಪಟ್ಣ ಟಿಪ್ಪೂ ಸುಲ್ತಾನನ ರಾಜಧಾನಿ. ಇಂಗ್ಲಿಷರಿಗೂ ಟಿಪ್ಪುವಿಗೂ ನಡೆದ ಯುದ್ಧದಲ್ಲಿ ಅನೇಕರು ಮಡಿದು ಅವರ ಸ್ಮಾರಕಗಳು ಅಲ್ಲಿವೆ. ಅವುಗಳನ್ನು ನೋಡಲು, ಮೈಸೂರಿಗೆ ಬಂದ ವೈಸರಾಯ್‌ಗಳು ಶ್ರೀರಂಗಪಟ್ಣಕ್ಕೆ ಭೇಟಿಕೊಡುತ್ತಿದ್ದುದು ಸಾಮಾನ್ಯ. ಆ ಬಾರಿಯೂ ವೈಸ್‌ರಾಯ್ ಶ್ರೀರಂಗಪಟ್ಣಕ್ಕೆ ಬರುವವರಿದ್ದರು. ಅದಕ್ಕಾಗಿ ಊರ ಬೀದಿಗಳೆಲ್ಲಾ ತಳಿರು, ತೋರಣ, ಬಂಟಿಗ್ಸ್‌ಗಳಿಂದ ಅಲಂಕೃತವಾಗಿತ್ತು.

ಪುಟ್ಟ ಬಾಲಕನೊಬ್ಬನಿಗೆ, ವಿದೇಶಿಯರೊಬ್ಬರ ಆಗಮನಕ್ಕಾಗಿ ನಾವೇಕೆ ಇಷ್ಟೆಲ್ಲ ಸಂಭ್ರಮಪಡಬೇಕು ಎನಿಸಿರಬಹುದು. ಕತ್ತಲಾಗುತ್ತಲೇ ಸ್ನೇಹಿತ ರೊಡಗೂಡಿ ಅವೆಲ್ಲವನ್ನೂ ಬಿಚ್ಚಿಹಾಕಿಬಿಟ್ಟ! ಬೆಳಗಾದಾಗ ಅಲಂಕಾರರಹಿತ ಬೀದಿಗಳನ್ನು ನೋಡಿ ಅಧಿಕಾರಿಗಳಿಗೆ ದಿಗ್ಭ್ರಮೆ! ಅಷ್ಟು ಚಿಕ್ಕವಯಸ್ಸಿಗೇ ಸ್ವದೇಶಾಭಿಮಾನ. ತನಗೆ ಸರಿ ಎನಿಸಿದ್ದನ್ನು ಮಾಡಿಬಿಡುವ ಕೆಚ್ಚೆದೆ ತೋರಿಸಿದ ಬಾಲಕನೇ ಕನ್ನಡದ ಕಣ್ವ ಎಂದು ಕರೆಸಿಕೊಂಡ ಬಿ. ಎಂ. ಶ್ರೀಯವರು ಎಂದು ಅಲ್ಲಿನ ಹಿರಿಯರು ಹೇಳುತ್ತಿದ್ದರು.

'ಶ್ರೀ'ಯವರದು ಸಾಗರದಂತೆ ಆಳವಾದ ವ್ಯಕ್ತಿತ್ವ. ಅವರ ಆತ್ಮೀಯರು, ಬಂಧುಗಳು ಸಹ ಅವರನ್ನು ಪೂರ್ಣವಾಗಿ ಅರ್ಥಮಾಡಿಕೊಂಡು ಸಲಿಗೆಯಿಂದ ಇರಲು ಆಗುತ್ತಿರಲಿಲ್ಲ. ನೋವು, ನಲಿವು, ಸಂತಸ, ಬೇಸರ, ಯಾವುದೂ ಮುಖದ ಮೇಲೆ ಕಾಣುವಂತಿರಲಿಲ್ಲ. ಶಾಂತ ಗಂಭೀರ ಮುಖಮುದ್ರೆ. ನಯವಾದ ಮಾತು. ಆಗಾಗ ಎಳೆನಗೆ ಮುಖದಮೇಲೆ ಸುಳಿದಾಡುತ್ತಿತ್ತು.

ನಮಗೆ ಅವರ ಮನೆಯವರೊಡನೆ ಸ್ನೇಹದ ಜೊತೆಗೆ ಬಾಂಧವ್ಯವೂ ಇದ್ದು ಆಗಾಗ ಹೋಗಿಬರುವುದು ಅಭ್ಯಾಸವಾಗಿತ್ತು.

ಅವರ 'ಇಂಗ್ಲಿಷ್ ಗೀತಗಳು' ಪ್ರಕಟವಾದಾಗ ಒಂದು ಹೊಸತನದ ವಾತಾವರಣ ಮೂಡಿತ್ತೆಂದು ಮನೆಯಲ್ಲಿ ಮಾತನಾಡುತ್ತಿದ್ದರು. ಆಗ ನನಗೆ ಅದೆಲ್ಲಾ ಅರ್ಥವಾಗುತ್ತಿರಲಿಲ್ಲ. ಅಲ್ಲದೆ ನಾನೂ ಒಂದು ದಿವಸ ಲೇಖನಿ ಹಿಡಿದು ಬರೆಯುವೆನೆಂದು ಯೋಚಿಸಿಯೂ ಇರಲಿಲ್ಲ. ಆದರೂ ಆ ಕವಿತೆಗಳಲ್ಲಿ ಅದೇನು ಮೋಡಿಯಿತ್ತೋ ? ಎಲ್ಲವನ್ನೂ ಅಭ್ಯಾಸಮಾಡಿ ರಾಗವಾಗಿ ನನಗೆ ನಾನೇ ಗುನುಗುತ್ತಿದ್ದುದು ಚೆನ್ನಾಗಿ ನೆನಪಿದೆ. ಆ ಕವನಗಳ ಸೌಂದರ್ಯ ಅದು ನವೋದಯಕ್ಕೆ ನೀಡುತ್ತಿದ್ದ ಮಾರ್ಗದರ್ಶಿತ್ವ ಇವುಗಳ ಹಿರಿದಾದ ಅರ್ಥ ತಿಳಿಯದಿದ್ದರೂ –

"ಇವಳ ಸೊಬಗನವಳು ತೊಟ್ಟು, ನೋಡಬಯಸಿದೆ
ಅವಳ ತೊಡಿಗೆ ಇವಳಿಗಿಟ್ಟು ಹಾಡಬಯಸಿದೆ."

ಎನ್ನುವ ಕವನ ಹಾಡುವಾಗ ಹೃದಯ ಆನಂದದಿಂದ ಅರಳುತಿತ್ತು.

ಒಂದುಸಲ ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ, ಯಾವ ಸಂದರ್ಭದಲ್ಲಿ ಎಂಬುದು ಸರಿಯಾಗಿ ನೆನಪಿಲ್ಲ, ಶ್ರೀಯವರು ವೇದಿಕೆಯ ಮೇಲೆ ಮಾತಾಡುತ್ತಿದ್ದರು. ಅವರಿಗೆ ಹನ್ನೆರಡು ವರ್ಷವಾಗಿದ್ದಾಗಲೇ ಷೇಕ್ಸ್‌ಪಿಯರನ ನಾಟಕಗಳೆಲ್ಲವನ್ನೂ ಓದಿ ಮುಗಿಸಿದ್ದುದಾಗಿ ಹೇಳಿದರು. ಅದನ್ನು ಕೇಳಿದರೆ ಆ ಚಿಕ್ಕ ವಯಸ್ಸಿನಲ್ಲೇ ಅವರಿಗೆ ಓದಿನ ಬಗ್ಗೆ, ಇಂಗ್ಲಿಷ್ ಸಾಹಿತ್ಯದಲ್ಲಿ ಅವರಿಗಿದ್ದ ಆಸಕ್ತಿಯ ಬಗ್ಗೆ ನಮಗೆ, ಆಶ್ಚರ್ಯವಾಯ್ತು. ಅಭಿಮಾನವೂ ಉಕ್ಕಿಬಂತು. ಆ ಕಿರಿಯ ವಯಸ್ಸಿನಲ್ಲೇ ಮೂಡಿಬಂದ ಆಸಕ್ತಿ, ಮುಂದೆ ಕನ್ನಡ ತಾಯಿಯ ಸೇವೆಗೆ ನಿಂತಾಗ ಹೇಗೆ ನೆರವಾಯ್ತು ಎಂಬುದನ್ನು ಅರ್ಥಮಾಡಿಕೊಳ್ಳಬಹುದು.

ಅವರು ಸಂಸಾರ ಜೀವನದಲ್ಲಿ ಬಹಳ ನೊಂದವರು. ಆ ನೋವು, ನಿರಾಸೆ, ಎಲ್ಲವನ್ನೂ ಹಿಂದಕ್ಕೆ ತಳ್ಳಿ, ತಮ್ಮ ಎಲ್ಲ ಶಕ್ತಿಯನ್ನೂ ಆಸಕ್ತಿಯನ್ನೂ ಕನ್ನಡ ತಾಯಿಯ ಸೇವೆಗೆ ಮುಡುಪಾಗಿಟ್ಟರು.

ಸುಮಾರು ನಲವತ್ತು ವರ್ಷಗಳ ಹಿಂದಿನ ಮಾತು ಇರಬಹುದು. ನನಗೆ ಸರಿಯಾಗಿ ನೆನಪಿಲ್ಲ. ಆ ವರ್ಷ ಶ್ರವಣಬೆಳಗೊಳದಲ್ಲಿ, ಶ್ರೀ ಗೋಮಟೇಶ್ವರನಿಗೆ ಮಸ್ತಕಾಭಿಷೇಕ ನಡೆಯಿತು. ಆ ಉತ್ಸವ ಬಹಳ ಮಹತ್ವದ್ದಾಗಿದ್ದು ಭಕ್ತರು ಅಪಾರ ಸಂಖ್ಯೆಯಲ್ಲಿ ಸೇರಿ ಬಹಳ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ನಾವು ಐದಾರು ಜನ ಸ್ನೇಹಿತೆಯರು ಅದನ್ನು ನೋಡಲು ಹೊರಟಿದ್ದೆವು. ಅದನ್ನು ನೋಡಬೇಕೆಂಬ ಹುಮ್ಮಸ್ಸೇ ಮುಂದಾಗಿದ್ದು, ಅಲ್ಲಿ ಹೇಗಿರಬಹುದು ಎಂಬ ಯೋಚನೆಗೆ ಅಷ್ಟಾಗಿ ಮನಸ್ಸು ಕೊಟ್ಟಿರಲಿಲ್ಲ. ಒಂದು ಟ್ಯಾಕ್ಸಿ ಮಾಡಿಕೊಂಡು ಹಿಂದಿನ ದಿನ ಮಧ್ಯಾಹ್ನವೇ ಹೊರಟಿದ್ದಾಯ್ತು. ಶ್ರವಣಬೆಳಗೊಳ ಹತ್ತಿರವಾದಂತೆ ಜನಸಮುದ್ರವನ್ನೇ ದಾಟಬೇಕಾಯ್ತು. ಎಲ್ಲಿ ನೋಡಿದರೂ ಜನ ! ಟ್ಯಾಕ್ಸಿ ಮುಂದೆ ಹೋಗುವುದೇ ದುಸ್ತರವಾಗಿತ್ತು. ನಮ್ಮ ಪೈಕಿ ಒಬ್ಬರು, ತಮ್ಮ ಬಂಧುಗಳಲ್ಲಿ ಒಬ್ಬರು ಅಲ್ಲಿರುವ

ವಾಗಿಯೂ, ಅವರ ಮನೆಯಲ್ಲಿ ಇರಲು ಅವಕಾಶ ಸಿಕ್ಕುವುದೆಂದೂ, ಆ ರಾತ್ರಿ ಅಲ್ಲಿ ಕಳೆದು ಬೆಳಗ್ಗೆ ಅಭಿಷೇಕ ನೋಡಿಕೊಂಡು ಹಿಂದಿರುಗಬಹುದೆಂದು ಹೇಳಿದರೂ, ಊರಿನ ನಡುವೆ ಇದ್ದ ಆ ಮನೆಗೆ ಹೋಗುವುದು ಸುಲಭವಾಗಿರಲಿಲ್ಲ. ಟ್ಯಾಕ್ಸಿ ಕುಂಟಿಕೊಂಡೇ ಸಾಗುತ್ತ ಜನಸಂದಣಿಯಲ್ಲಿ ಕೊನೆಗೊಮ್ಮೆ ನಿಂತುಬಿಟ್ಟಿತು.

ಆ ವೇಳೆಗೆ ಬಲಭಾಗದ ರಸ್ತೆಯಿಂದ ಒಂದು ಕಾರು ಬಂತು. ಅದರಲ್ಲಿ ಆಚಾರ್ಯ ಶ್ರೀಯವರು ತಮ್ಮ ಮಗಳೊಡನೆ ಆಸೀನರಾಗಿದ್ದರು. ದೂರದಿಂದಲೇ ಮುಗುಳ್ನಗೆಯ ವಿನಿಮಯವಾಯ್ತು. ನಾವು ಆವರೆಗಿನ ಆತಂಕವನ್ನೆಲ್ಲ ಮರೆತು ಹಗುರವಾಗಿ ಉಸಿರಾಡಿದೆವು. ಅವರ ಕಾರು ಬೇರೆ ಕಡೆಗೆ ತಿರುಗಿದಾಗ ಶ್ರೀಯವರು ತಮ್ಮ ಕಾರನ್ನು ಹಿಂಬಾಲಿಸುವಂತೆ ಸನ್ನೆ ಮಾಡಿದರು. ಊರೊಳಗೆ ನಾವು ಹೋಗಬೇಕಾಗಿದ್ದ ಮನೆಯ ಆಸೆಯನ್ನು ಬಿಟ್ಟು ಆ ಕಾರನ್ನು ಹಿಂಬಾಲಿಸಿದೆವು.

ಊರಿನ ಹೊರಭಾಗದಲ್ಲಿ ಅಷ್ಟು ಗಲಾಟೆ ಇರಲಿಲ್ಲ. ಅಲ್ಲಿದ್ದ ಒಂದು ಸ್ಕೂಲಿನಲ್ಲಿ ಒಂದು ದೊಡ್ಡ ರೂಮಿನಲ್ಲಿ ಅವರಿಗೆ ಬಿಡಾರ ಏರ್ಪಾಡಾಗಿತ್ತು. ಅವರು ಕರೆದ ಮೇಲೆ ನಾವೆಲ್ಲ ಅಲ್ಲೇ ಉಳಿದೆವು.

ಅದೊಂದು ಚಿರಸ್ಮರಣೀಯವಾದ ದಿನ! ಆಚಾರ್ಯರೊಡನೆ ಆ ಕೋಣೆಯಲ್ಲಿ ಒಂದು ದಿವಸ ಇರಬಹುದಾದ ಅವಕಾಶ ಎಲ್ಲರಿಗೂ ಇಷ್ಟವಾಗಿತ್ತು. ಅವರ ಮಗಳಂತೂ ನನಗೆ ಆತ್ಮೀಯ ಸ್ನೇಹಿತೆ. ಎಲ್ಲರೊಡನೆಯೂ ನಗುತ್ತಾ ಮಾತನಾಡಿದಳು.

ಉಳಿದದ್ದೆಲ್ಲ ಮಾಮೂಲು. ಎಲ್ಲರೂ ಕಟ್ಟಿ ತಂದಿದ್ದ ಊಟ ತಿಂಡಿಗಳನ್ನು ತಿಂದಾಯ್ತು. ಮಾತಿನಲ್ಲಿ ಹೊತ್ತು ಕಳೆದುದೇ ಗೊತ್ತಾಗಲಿಲ್ಲ. ಬೆಳಗಿನ ಝಾವಕ್ಕೇ ಎದ್ದು ಬೆಟ್ಟಕ್ಕೆ ಹೊರಡುವ ಸಿದ್ಧತೆ. ಶ್ರೀಯವರ ಮನೆಯವರೊಂದಿಗೆ ಇದ್ದುದರಿಂದ ಅಭಿಷೇಕವನ್ನು ನೋಡಲು ನಮಗೂ ಸರಿಯಾದ ಜಾಗವೇ ಸಿಕ್ಕಿತು. ಅಭಿಷೇಕವನ್ನು ಕಣ್ತುಂಬ ನೋಡಿದೆವು. ಅದೊಂದು ಮರೆಯಲಾಗದ ನೆನಪು. ಅಂತೆಯೇ ಆಚಾರ್ಯ ಶ್ರೀಯವರ ಜೊತೆ ಕೆಲವು ಗಂಟೆಗಳನ್ನು ಕಳೆದು, ಮಾತಾಡಲು ಅವಕಾಶ ಸಿಕ್ಕದ್ದೂ ಒಂದು ಸವಿನೆನಪೇ ಆಗಿದೆ. ಬಾಂಧವ್ಯವಿದ್ದು ಹೋಗಿ ಬರುತ್ತಿದ್ದರೂ, ಒಂದೆರಡು ಮಾತಾಡಲು ಮಾತ್ರ ಅವಕಾಶ ಸಿಗುವುದಿತ್ತು.

ಅಲ್ಲದೆ ಶ್ರೀಯವರು ಅಲ್ಲಿ ಬಿಡಾರ ಮಾಡಿರುವ ವಿಷಯ ತಿಳಿದಾಗ ಅಲ್ಲಿಗೆ ಉತ್ಸವಕ್ಕಾಗಿ ಆಗಮಿಸಿದ್ದ ಅನೇಕ ಸ್ನೇಹಿತರು, ವಿದ್ವಾಂಸರು, ಸಾಹಿತಿಗಳು ಬಂದರು. ಹತ್ತಿರ ಕುಳಿತು ಅವರೊಡನೆ ಮಾತಾಡಿದರು. ಪರಾಗದ ಬಳಿ ಸುಳಿದಾಡುವ ಜೇನುಗಳಂತೆ ಅವರೆಲ್ಲ ಸುಳಿದಾಡಿದಾಗ ಆ ನೋಟವೇ ಚೆನ್ನಾಗಿತ್ತು. ಆ ಮಾತುಗಳ ಸೊಗಸು ಹೇಗಿತ್ತೆಂದು ಹೇಳಬೇಕಾಗಿಯೇ ಇಲ್ಲ.

## 'ಶ್ರೀ' ಸ್ಮರಣೆ

– ಸಿದ್ದಯ್ಯ ಪುರಾಣಿಕ

ಅರ್ಧಶತಮಾನಕ್ಕೆ ಹಿಂದೆ. ಆಗ ನಾನಿನ್ನೂ ಎಂಟನೆಯ ತರಗತಿಯ ವಿದ್ಯಾರ್ಥಿ. ಉರ್ದು ಶಿಕ್ಷಣ ಮಾಧ್ಯಮ, ಮರಾಠಿ ವ್ಯವಹಾರ ಮಾಧ್ಯಮ ಆಗ ಕಲಬುರ್ಗಿಯಲ್ಲಿ. ಕದ್ದು ಕನ್ನಡ ಮಾತನಾಡುತ್ತಿದ್ದ ಕಾಲ. ಆಗತಾನೆ ಕನ್ನಡದ ಪುನರುಜ್ಜೀವನ ಪ್ರಯತ್ನ ಪ್ರಾರಂಭವಾಗಿತ್ತು. ನಾಲ್ಕಾರು ನಾಡಹಬ್ಬಗಳು ನಡೆದು ಕನ್ನಡ ನುಡಿ ಮತ್ತೆ ಕೊನರತೊಡಗಿತ್ತು. ಆಗ ಆ ಪ್ರಯತ್ನಕ್ಕೆ ಬೇಕಿತ್ತು ಪ್ರಬಲವಾದ, ಪರಿಣಾಮಕಾರಕವಾದ, ನಿರ್ಣಾಯಕವಾದ ಬೆಂಬಲ. ಅದನ್ನೊದಗಿಸಲು ಬಂದರು ಆಚಾರ್ಯ 'ಶ್ರೀ' ಅವರು.

ಆಗ ಅವರ ಆಕರ್ಷಕ, ಭವ್ಯ, ಧೀರ ಗಂಭೀರ, ಮಹೋನ್ನತ ವ್ಯಕ್ತಿತ್ವಕ್ಕೆ ಒಮ್ಮೆಗೆ ಮಾರುಹೋದವರಲ್ಲಿ ನಾನೊಬ್ಬ. ಎಂಥ ತೇಜಸ್ವಿ ವದನ ! ಎಂಥ ಪಾಂಡಿತ್ಯ, ಎಂಥ ಪ್ರತಿಭೆ, ಎಂಥ ವಾಗ್ಮಿತೆ, ಎಂಥ ವಿಶ್ವವಿಶಾಲ ದೃಷ್ಟಿ, ಎಂಥ ರಸಿಕತೆ ! ಕಲಬುರ್ಗಿಯ ಕನ್ನಡಿಗರಲ್ಲಿ ಮಿಂಚಿನ ಸಂಚಾರವಾದಂತಾಯಿತು. ನಾಡಹಬ್ಬದಲ್ಲಿ ಅವರು ಮಾತನಾಡಿದುದು ಪಂಪನನ್ನು ಕುರಿತು. ಪಂಪನ ಬಗ್ಗೆ ಅಂಥ ಉಪನ್ಯಾಸ ವನ್ನು ನಾನು ಮತ್ತೆ ಕೇಳಿಲ್ಲ.

ಅದಕ್ಕೂ ಅವಿಸ್ಮರಣೀಯವಾದುದು ಆಚಾರ್ಯ ಶ್ರೀ ಅವರು ನೂತನ ವಿದ್ಯಾಲಯದಲ್ಲಿ ಷೇಕ್ಸ್‌ಪಿಯರನನ್ನು ಕುರಿತು ಇಂಗ್ಲಿಷಿನಲ್ಲಿ ಮಾಡಿದ ಉಪನ್ಯಾಸ. ಕನ್ನಡಿಗರಿಗಿಂತ ಮರಾಠಿಗರೂ ಮಹಮ್ಮದೀಯರೂ ಹೆಚ್ಚಾಗಿದ್ದ ಆ ಸಮ್ಮಿಶ್ರ ಸಭೆ ಮಂತ್ರಮುಗ್ಧವಾಗಿ ಆ ಉಪನ್ಯಾಸವನ್ನು ಆಲಿಸಿ ಮೈಮರೆಯಿತು. ಕಲಬುರ್ಗಿಯ ನಾಗರಿಕರ ಮಟ್ಟಿಗೆ ಅಂಥ ಉಪನ್ಯಾಸ ಅದೇ ಕೊನೆಯದು. ನಾನು ಮುಂದೆ ನನ್ನ ವಿದ್ಯಾಗುರುಗಳಾದ ಪ್ರೊ॥ ಟಿ. ವೀರಭದ್ರುಡು ಅವರು ದಿ. ಸರೋಜಿನಿ ನಾಯ್ಡು ಅವರ ಅಧ್ಯಕ್ಷತೆಯಲ್ಲಿ ಷೇಕ್ಸ್‌ಪಿಯರನನ್ನು ಕುರಿತು ಮಾಡಿದ ಪ್ರಗಲ್ಭ ಪಾಂಡಿತ್ಯದ ಉಪನ್ಯಾಸವನ್ನು, ಅಧ್ಯಕ್ಷಪೀಠದಿಂದ ಸರೋಜಿನಿ ನಾಯ್ಡು ನೀಡಿದ ಉದ್ಬೋಧಕ

ಉಪನ್ಯಾಸವನ್ನು ಕೇಳಿದೆನಾದರೂ ಶ್ರೀ ಅವರ ಉಪನ್ಯಾಸವೇ ಅಚ್ಚಳಿಯದೆ ಉಳಿದಿದೆ.

ಶ್ರೀ ಅವರ ಕನ್ನಡ ಭಾಷಣಕ್ಕಿಂತ ಅವರ ಇಂಗ್ಲಿಷ್ ಭಾಷಣ ಕಲಬುರ್ಗಿಯ ಕನ್ನಡಿಗರಿಗೆ ಹೆಚ್ಚು ಉತ್ತೇಜಕವಾಗಿ ಪರಿಣಮಿಸಿತು. ಆಗ ಉರ್ದು ಅಲ್ಲಿಯ ರಾಜಭಾಷೆ, ಸರ್ಕಾರೀ ಭಾಷೆ, ಬೋಧಭಾಷೆಯಾಗಿದ್ದರೂ ಇಂಗ್ಲಿಷಿನ ಮೋಹ ಎಲ್ಲರಲ್ಲಿಯೂ ವಿಪರೀತವಾಗಿದ್ದಿತು. ಇಂದಿಗೂ ಇದರಲ್ಲಿ ಪರಿವರ್ತನೆಯಾಗಿರುವು, ದನ್ನು ಕಾಣೆ. ಶ್ರೀ ಅವರ ಇಂಗ್ಲಿಷ್ ಪ್ರಭುತ್ವದಿಂದ ಬೆರಗಾದ ಮುಹಮ್ಮದೀಯರು, ಮರಾಠಿಗರು, ಕನ್ನಡಿಗರನ್ನು ಕಣ್ದೆರೆದು ನೋಡತೊಡಗಿದರು. ಅಂತೂ ಶ್ರೀ ಅವರ ಪ್ರಭಾವದಿಂದ ನೃಪತುಂಗನ ನಾಡಿನಲ್ಲಿ, ಬಸವಣ್ಣನ ಭೂಮಿಯಲ್ಲಿ, ಹರಿದಾಸರ ಬೀಡಿನಲ್ಲಿ ಕನ್ನಡ ಮತ್ತೆ ತಲೆಯೆತ್ತತೊಡಗಿತು.

ಮುಂದೆ ಹೈದರಾಬಾದಿನ ನಾಡಹಬ್ಬಗಳಲ್ಲಿ 'ಶ್ರೀವಾಣಿ'ಯನ್ನು ಹಲವು ಸಲ ಕೇಳುವ ಸೌಭಾಗ್ಯ ಸಿಕ್ಕಿತು ನನಗೆ. ಅವರ ಅಚ್ಚುಮೆಚ್ಚಿನ ಶಿಷ್ಯರಾದ ವಿದ್ವಾನ್ ಮಾನ್ವಿ ನರಸಿಂಗರಾಯರ ಮನೆಯಲ್ಲಿ, ಗಣ್ಯ ಧುರೀಣ ಡಾ॥ ಜಿ. ಎಸ್. ಮೇಲ್ಕೋಟೆ ಅವರ ಮನೆಯಲ್ಲಿ ಅವರೊಂದಿಗೆ ಊಟ ಮಾಡುವ ಸುಯೋಗವೂ ದೊರೆಯಿತು. ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ 'ಕರ್ನಾಟಕ ಸಂಘ'ವನ್ನು ಸ್ಥಾಪಿಸಿದೆವು: ಪ್ರೊ॥ ಡಿ. ಕೆ. ಭೀಮಸೇನರಾಯರೇ ಅಧ್ಯಕ್ಷರು : ನಾನು ಉಪಾಧ್ಯಕ್ಷ; ಶ್ರೀನಿವಾಸ ಚಾರ್ಯರು ಕಾರ್ಯದರ್ಶಿಗಳು. ಅದರ ಉದ್ಘಾಟನೆ ಆಚಾರ್ಯ ಶ್ರೀ ಅವರ ಅಮೃತಹಸ್ತದಿಂದಲೇ ನೆರವೇರಿತು. ಆರ್ಟ್ಸ್ ಕಾಲೇಜಿನ ವಿಶಾಲ ಸಭಾಂಗಣ ಎಂದಿಲ್ಲದಷ್ಟು ತುಂಬಿದ್ದಿತು. ಆಚಾರ್ಯ ಶ್ರೀ ಅವರು ಬೇಕೆಂತಲೇ ನಡುನಡುವೆ ಇಂಗ್ಲಿಷಿನಲ್ಲಿ ಮಾತನಾಡುತ್ತ ಕನ್ನಡದಲ್ಲಿ ಅಮೋಘವಾದ ಉಪನ್ಯಾಸವನ್ನು ನೀಡಿದರು. ಕನ್ನಡೇತರರು ಇಂಗ್ಲಿಷ್ ಭಾಗಗಳಿಂದ ಬೆರಗಾದರು; ಕನ್ನಡಿಗರು ಕನ್ನಡ ಭಾಗಗಳಿಂದ ಉದ್ದೀಪಿತರಾದರು. 'ವೀರಶೈವ ತರುಣ ಸಂಘ'ಕ್ಕೂ ಅವರನ್ನೂ ಕರೆದೊಯ್ದೆ. ಅಲ್ಲಿ ಬಸವಣ್ಣನವರನ್ನು ಕುರಿತು ಮನನೀಯವಾಗಿ ಮಾತನಾಡಿದರು.

ಹೈದರಾಬಾದಿನಲ್ಲಿ ಜರುಗಿದ ಕನ್ನಡ ಸಾಹಿತ್ಯ ಸಮ್ಮೇಳನ ಹೈದರಾಬಾದು ಕರ್ನಾಟಕದ ಕನ್ನಡಿಗರ ನೆನಪಿನಲ್ಲಿ ಎಂದಿಗೂ ಹಸಿರಾಗಿ ಉಳಿಯುವ ಸಮ್ಮೇಳನ. ದಿ. ಪ್ರೊ॥ ಎ. ಆರ್. ಕೃಷ್ಣಶಾಸ್ತ್ರಿಗಳು ಅಧ್ಯಕ್ಷರು ; ಆಚಾರ್ಯ ಶ್ರೀ ಪರಿಷತ್ತಿನ ಕರ್ಣಧಾರರು ; ಮಾಸ್ತಿಯವರು ಸಿಂಹಾಸನದ ಹಿಂದಿನ ಶಕ್ತಿ ! ಬೇಂದ್ರೆಯವರು 'ಶ್ರಾವಣಾ ಬಂತು' 'ಲೇಲಾಲಿ ಲೇಸೋ' ಕವಿತೆಗಳನ್ನು ಮೊಟ್ಟಮೊದಲು ಹಾಡಿ ದುದು ಅಲ್ಲಿ. ಅಂಜುತ್ತ ಅಂಜುತ್ತ ನನ್ನ 'ಎರಡು ಚಿತ್ರಗಳು' ಎಂಬ ಕವಿತೆ ಯನ್ನು ನಾನು ಓದಿ ಮಾಸ್ತಿಯವರ, ಇತರ ಹಿರಿಯ ಕವಿಗಳ ಗಮನ ಸೆಳೆದುದು

ಅಲ್ಲಿ. ಮಾಸ್ತಿಯವರಂತೂ ನನ್ನನ್ನು ಬದಿಗೆ ಎಳೆದೊಯ್ದು ಮತ್ತೊಮ್ಮೆ ಆ ಕವಿತೆ ಆಲಿಸಿ, ಒಂದೆರಡು ತಿದ್ದುಪಾಟುಮಾಡಿ, ಬೆನ್ನುತಟ್ಟಿ ನಾನು ಕವಿಯಾಗಿ ಮುಂದು ವರಿಯಲು ಕಾರಣರಾದರು. ಸಮ್ಮೇಳನದ ತುಂಬ ಆಚಾರ್ಯ ಶ್ರೀ ಅವರ ಅದ್ಭುತ ವ್ಯಕ್ತಿತ್ವದ ಪ್ರತ್ಯಕ್ಷ ಪ್ರಭಾವ. ಆಗ ತಾನೆ ನನಗೆ ಪರಿಚಿತವಾಗಿದ್ದ 'ಭೂಮಾನುಭೂತಿ' ಪದಕ್ಕೆ ಆಗ ನಾನು ಮಾಡಿಕೊಂಡ ಅರ್ಥ : ಶ್ರೀ ಅವರನ್ನು ನೋಡಿದಾಗ, ಅವರ ಶ್ರೀವಾಣಿಯನ್ನು ಆಲಿಸಿದಾಗ ಆಗುವ ಅನುಭವ, ಎಂದು !

ಮುಂದೆ ನಾನು ತಹಸೀಲ್ದಾರನಾಗಿ ಆಯ್ಕೆಗೊಂಡು ನಾಂದೇಡಕ್ಕೆ ಹೋದೆ. ಹೆಂಡತಿಯ ತವರುಮನೆ ಧಾರವಾಡದಲ್ಲಿದ್ದುದರಿಂದ ನಾಂದೇಡದಿಂದ ಧಾರವಾಡಕ್ಕೆ ಹೋಗಬೇಕಾಗಿ ಬಂದಿತು. ನಾಂದೇಡದಿಂದ ಹೈದರಾಬಾದಿಗೆ ಬಂದಿಳಿದೆ. ಹೈದರಾಬಾದಿನಲ್ಲಿದ್ದಾಗಲೆಲ್ಲ ನಾನು ಹೋಗಿ ಆಶೀರ್ವಾದ ಪಡೆಯುತ್ತಿದ್ದುದು ಇಬ್ಬರಿಂದ : ಪ್ರೊ॥ ಹುಸೇನ ಅಲಿಖಾನರು – ನನ್ನ ಮಹೋಪಕಾರಿಗಳು; ಪ್ರೊ॥ ಟಿ. ವೀರಭದ್ರುಡು ಅವರು – ನನ್ನ ಆದರಾಭಿಮಾನಗಳ ಆಂಗ್ಲ ಪ್ರಾಧ್ಯಾಪಕರು. ಆ ಸಲ ಪ್ರೊ॥ ಟಿ. ವೀರಭದ್ರುಡು ಅವರ ಮನೆಗೆ ಹೋದಾಗ 'ಉಭಯಕುಶಲೋಪರಿ' ಮುಗಿದ ಮೇಲೆ ಅವರೆಂದರು : "ಹೇಗೂ ನೀನು ಧಾರವಾಡಕ್ಕೆ ಹೋಗುತ್ತಿರುವೆ. ಪ್ರೊ॥ ಬಿ. ಎಂ. ಶ್ರೀಕಂಠಯ್ಯನವರು ಈಗ ಅಲ್ಲಿ ಒಂದು ಕಾಲೇಜಿನ ಪ್ರಿನ್ಸಿಪಾಲ ರಾಗಿದ್ದಾರೆ. ಅವರಿಗೆ ನನ್ನ ನಮಸ್ಕಾರ ತಿಳಿಸಿ ನನ್ನದೊಂದು ವಿನಂತಿಯನ್ನು ಮುಟ್ಟಿಸು. ಅವರಂಥ ಷೇಕ್ಸ್‌ಪಿಯರ್ ಸಾಹಿತ್ಯ ಪರಿಣತರು ಹಗಲೆಲ್ಲ ಹುಟ್ಟು ವುದಿಲ್ಲ. ಇದುವರೆಗೆ ಕನ್ನಡ ಜಾಗೃತಿಯ ಕಾರ್ಯವನ್ನವರು ಸಾಕಷ್ಟು ಮಾಡಿದ್ದಾರೆ. ಇನ್ನು ಅವರು ಷೇಕ್ಸ್‌ಪಿಯರನ ಪ್ರಮುಖ ದುರಂತ ನಾಟಕಗಳನ್ನು ಕನ್ನಡೀಕರಿಸಲಿ. ಈ ಕಾರ್ಯ ಅವರಿಂದಲೇ ಸಾಧ್ಯ. ಅವರಷ್ಟು ಸಮರ್ಪಕವಾಗಿ ಈ ಕಾರ್ಯವನ್ನು ಮಾಡುವವರು ಮತ್ತೆ ಹುಟ್ಟಲಾರರು !"

ಈ ನುಡಿಗಳನ್ನು ಕೇಳಿ ನಾನು ಅವಾಕ್ಕಾದೆ. ಪ್ರೊ॥ ಟಿ. ವೀರಭದ್ರುಡು ಹಾಗೂ ಆಚಾರ್ಯ ಶ್ರೀ ಪರಮಮಿತ್ರರೆಂಬುದು ನನಗೆ ಗೊತ್ತಿತ್ತು. ಆದರೆ ನನ್ನ ತೆಲುಗು ಮಾತೃಭಾಷೆಯ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದ ಪ್ರೊ॥ ಟಿ. ವೀರಭದ್ರುಡು ಅವರು ಕನ್ನಡದ ಬಗ್ಗೆ ಇಷ್ಟು ಕಳಕಳಿಯುಳ್ಳವರಾಗಿದ್ದುದು ನನಗೆ ಗೊತ್ತಿರಲಿಲ್ಲ. ಅಂದು ಗೊತ್ತಾಗಿ ರೋಮಾಂಚಿತನಾದೆ. ಹಾಗೆಯೇ ಮಾಡುವೆನೆಂದು ಹೇಳಿ ಅವರ ಹರಕೆ ಹೊತ್ತೇ ಧಾರವಾಡಕ್ಕೆ ಹೋದೆ. ಅಂದೇ ಸಂಜೆ ಕೆ. ಈ. ಬೋರ್ಡ್ ಕಾಲೇಜಿನ ಆವರಣದಲ್ಲಿದ್ದ ಆಚಾರ್ಯ ಶ್ರೀ ಅವರ ಮನೆಗೆ ಧಾವಿಸಿದೆ.

ನನ್ನನ್ನು ಕಾಣುತ್ತಲೆ ಹಿಗ್ಗಿ ಬರಮಾಡಿಕೊಂಡರು ಆಚಾರ್ಯರು. ಮುಖದ ಮೇಲಿನ ತೇಜ ಮಸುಳಿಸಿರಲಿಲ್ಲ : ಆದರೆ ಆರೋಗ್ಯ ಸದೃಢವಾಗಿರುವಂತೆ ತೋರ ಲಿಲ್ಲ. ಮುಪ್ಪು ಮುಂದೈಯನ್ನೊತ್ತಿತ್ತು ಮುಖದ ಮೇಲೆ. ಆ ಮಾತು ಈ ಮಾತು

ಮುಗಿದ ಮೇಲೆ ಪ್ರೊ|| ವೀರಭದ್ರಪ್ಪನವರ ಬಯಕೆಯನ್ನು ಬಿತ್ತರಿಸಿದೆ. ಕೇಳಿ ಕೆಲವು ಕ್ಷಣಗಳವರೆಗೆ ಕಣ್ಮುಚ್ಚಿ ಕುಳಿತುಬಿಟ್ಟರು ಕನ್ನಡದ ಕಣ್ವರು ! ಆಮೇಲೆ ವಿಷಾದಮಿಶ್ರಿತ ಸ್ವರದಲ್ಲಿ ಹೇಳಿದರು : "ಪ್ರೊ|| ವೀರಭದ್ರಪ್ಪನವರು ನನಗಿದನ್ನು ನೆನಪಿಸಿದುದು ಸರಿಯಪ್ಪ, ಆದರೆ ಇದನ್ನವರು ಐದು ವರ್ಷ ಮೊದಲು ನೆನಪಿಸ ಬಾರದಿತ್ತೆ ! ಈಗ ನಾನೀ ಕಾರ್ಯ ಮಾಡಬೇಕೆಂದರೂ ನನ್ನಿಂದದು ನೀಗಲಿಕ್ಕಿಲ್ಲ. ತುಂಬ ನಿಶ್ಶಕ್ತನಾಗಿ ಬಿಟ್ಟಿದ್ದೇನೆ. The flesh is weak though the spirit is strong !"

ಕೊನೆಯ ವಾಕ್ಯವನ್ನು ಹೇಳುವಾಗ ಅವರ ಮ್ಲಾನ ಮುಖ ದೇದೀಪ್ಯಮಾನ ವಾಗಿ ಬೆಳಗಿದುದನ್ನು ಕಂಡೆ. ಅವರ ಕಣ್ಣುಗಳು ಅಪೂರ್ವ ತೇಜಸ್ಸಿನೊಡನೆ ಹೊಳೆದುದನ್ನು ಕಂಡೆ. ಆ ಶ್ರೀಮುಖಕ್ಕೆ ಮನದಲ್ಲಿಯೇ ಮಣಿದೆ. "ಕನ್ನಡತಾಯಿ ತಮಗೆ ಗಟ್ಟಿ ಆರೋಗ್ಯವನ್ನು ಕರುಣಿಸಿ ಈ ಕಾರ್ಯ ತಮ್ಮಿಂದ ಮಾಡಿಸಿಕೊಳ್ಳಲಿ !" ಎಂದು ಹಾರೈಸಿ ಕೈಮುಗಿದೆ. ನನ್ನ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡು "ಆ ತಾಯಿ ಮನಸ್ಸು ಮಾಡಿದರೆ ಏನಾಗದಪ್ಪ" ಎಂದು ನುಡಿಯುತ್ತ ಬಾಗಿಲ ಬಳಿಗೆ ಬಂದರು. ಮತ್ತೊಮ್ಮೆ ಅವರನ್ನು ಕಣ್ತುಂಬ ನೋಡಿ ಮಡದಿಯ ತವರು ಮನೆಗೆ ಮರಳಿದೆ.

ಕನ್ನಡತಾಯಿ ಅವರಿಂದ ಎಲ್ಲ ಸೇವೆಯನ್ನು ಮಾಡಿಸಿಕೊಂಡಳು ; ಆ ಸೇವೆ ಯನ್ನು ಮಾತ್ರ ಅದೇಕೋ ಮಾಡಿಸಿಕೊಳ್ಳಲಿಲ್ಲ ! ಕನ್ನಡಕ್ಕೆ ಆ ಭಾಗ್ಯವಿರಲಿಲ್ಲ. ಇದಾದ ಎರಡು ತಿಂಗಳೊಳಗಾಗಿ ಕನ್ನಡ ಬಾವುಟದ ಆ ಕಂಬ ಕಳಚಿ ಬಿದ್ದುಬಿಟ್ಟಿತು ! ಅವರು ನಮ್ಮ ಕೈಗಿತ್ತ ಕನ್ನಡದ ಬಾವುಟವನ್ನು ಬಾನೆತ್ತರಕ್ಕೆ ಹಾರಿಸುವುದೇ ನಾವು ಅವರಿಗೆ ಸಲ್ಲಿಸಬೇಕಾದ ಶ್ರದ್ಧಾಂಜಲಿ !

# ನಾನು ಕಂಡ ಬಿ.ಎಂ.ಶ್ರೀ.

– ಬಿ. ಎಸ್. ಕಪನೀಪತಯ್ಯ

ಈಗ್ಗೆ ೬೦ ವರ್ಷಗಳ ಹಿಂದೆ ನಾನು ಮೈಸೂರು ಮಹಾರಾಜ ಕಾಲೇಜಿನಲ್ಲಿ ಓದುತ್ತಿದ್ದಾಗ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಇಂಗ್ಲಿಷ್ ಪ್ರೊಫೆಸರ್ ಆಗಿದ್ದರು. ಅವರು ನಮಗೆ ಇಂಗ್ಲಿಷ್ ಪದ್ಯಭಾಗವನ್ನು ಬೋಧಿಸುತ್ತಿದ್ದರು. ಅವರ ವಿದ್ಯಾರ್ಥಿ ವೃಂದವು ಒಂದು ಮಹಾಸಾಗರ. ಅವರ ಬೋಧನೆಯ ಲಾಭವನ್ನು ಪಡೆದವರಲ್ಲಿ ಅನೇಕ ಹೆಸರಾಂತ ವ್ಯಕ್ತಿಗಳಿದ್ದರು. ಅವರ ಶಿಷ್ಯರಾಗಿಯೂ ನನ್ನ ಸಹಪಾಠಿಗಳಾಗಿಯೂ ಇದ್ದ ಕೆಲವು ಪ್ರಸಿದ್ಧ ವ್ಯಕ್ತಿಗಳನ್ನು ಸ್ಮರಿಸಿಕೊಳ್ಳುವುದಾದರೆ ಶ್ರೀಯುತರುಗಳಾದ ಟಿ. ಎನ್. ಶ್ರೀಕಂಠಯ್ಯನವರು, ಎನ್. ಶಿವರಾಮಶಾಸ್ತ್ರಿಗಳು, ಎನ್. ಎಸ್. ನಾರಾಯಣಶಾಸ್ತ್ರಿಗಳು, ರಾಮಚಂದ್ರಶಾಸ್ತ್ರಿಗಳು, ಎಚ್. ಎನ್. ಪಾಳ್ಯೇಗಾರ್‌ರವರು, ಟಿ. ಎಂ. ಅಮೀರ್‌ರವರು, ವಿ. ಟಿ. ತಿರುನಾರಾಯಣ ಅಯ್ಯಂಗಾರ್ಯರು, ಎಚ್. ಕೆ. ರಾಜಾರಾಯರು, ಜಿ. ಗುರುಮೂರ್ತಿಶಾಸ್ತ್ರಿಗಳು, ಸಿ. ರಾಮಸ್ವಾಮಿಗಳು, ಪಿ. ಟಿ. ನರಸಿಂಹಾಚಾರ್ಯರು, ಎಂ. ಗಂಗಾಧರಶಾಸ್ತ್ರಿಗಳು, ಎನ್. ಎಸ್. ಹಿರಣ್ಣಯ್ಯನವರು, ಕುಮಾರಾರಾಧ್ಯರು ಮುಂತಾದ ಮಹನೀಯರುಗಳು ನನ್ನ ಸ್ಮೃತಿಪಥಕ್ಕೆ ಬರುವರು. ನಾವುಗಳೆಲ್ಲ 'ಲೆಕ್ಚರ್ ಹಾಲ್'ನಲ್ಲಿ ಒಟ್ಟಾಗಿ ಇಂಗ್ಲಿಷ್ ಪಾಠಕ್ಕೆ ಸೇರುತ್ತಿದ್ದೆವು. ಇಂಗ್ಲಿಷ್ ಬೋಧನೆಗೆ ಮೂರು ಜನ ಪ್ರೊಫೆಸರುಗಳಿದ್ದರು. ಪ್ರೊಫೆಸರ್ ರೋಲೋರವರು ಇಂಗ್ಲಿಷ್ ನಾಟಕಗಳನ್ನು ಬೋಧಿಸುತ್ತಿದ್ದರು. ಪ್ರೊಫೆಸರ್ ಮೆಕಿಂಟಾಷ್‌ರವರು ಪ್ರಬಂಧಗಳನ್ನು ಬೋಧಿಸುತ್ತಿದ್ದರು. ಪ್ರೊಫೆಸರ್ ಶ್ರೀಕಂಠಯ್ಯನವರು ಇಂಗ್ಲಿಷ್ ಪದ್ಯಭಾಗವನ್ನು ಬೋಧಿಸುತ್ತಿದ್ದರು.

ನಮಗೆ ಇಟ್ಟಿದ್ದ ಪದ್ಯಭಾಗಗಳಲ್ಲಿ ಮಿಲ್ಟನ್ ಕವಿಯ 'On his blindness' ಎಂಬುದು ಒಂದು. ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಅದನ್ನು ನಮಗೆ ಓದುತ್ತಿದ್ದ ರೀತಿ, ಶೈಲಿ, ಧ್ವನಿ, ಆಗ ಅವರು ತಾಳುತ್ತಿದ್ದ ಮುಖಭಾವ ಮುಂತಾದವುಗಳು

ಈಗಲೂ ನಮಗೆ ಕಣ್ಣಿಗೆ ಕಟ್ಟಿದಂತಿದೆ. ಕತ್ತು ಮುಚ್ಚಿದ ಕೋಟು, ಷರಾಯಿ. ದುಂಡುಮುಖಕ್ಕೆ ಅಂದವಾಗಿ ಒಳ್ಳೆಯ ಕಲಾಪತ್ತಿನ ಇಸ್ತ್ರಿ ಮಾಡಿಸಿ ಕಟ್ಟಿದ ಮೈಸೂರು ಪೇಟ ಇವುಗಳನ್ನು ಧರಿಸಿ, ಮೇಲೆ ಗೌನ್ ಹಾಕಿಕೊಂಡು ಗಂಭೀರವಾಗಿ ಪ್ರೊಫೆಸರ್ ಪೀಠಕ್ಕೆ ಸ್ಟೇಜ್ ಬಾಗಿಲಿನಿಂದ ಪ್ರವೇಶಿಸಿದರೆಂದರೆ, ಎಲ್ಲ ಕಡೆಯೂ ನಿಶ್ಶಬ್ದ. ಅವರ ಪಾಠವನ್ನು ಕೇಳಲು ಎಲ್ಲರಿಗೂ ಕಾತರ. ಅವರು ಪಾಠದಲ್ಲಿ ನಿಜವಾದ ಅಭಿರುಚಿಯನ್ನು ಹುಟ್ಟಿಸುತ್ತಿದ್ದರು. ಒಂದು ದಿನ ಮಿಲ್ಟನ್ ಕವಿ, ಅವನ ಕಾಲ ಅವನ ಪದ್ಯಕ್ಕೆ ಸಂಬಂಧಪಟ್ಟ ಪ್ರತಿಯೊಂದು ವಿಷಯವನ್ನೂ ಕೂಲಂಕಷವಾಗಿ ತಿಳಿಸಿ ಅನಂತರ ಅವನ ಕವನವಾದ 'On his blindness' ಪದ್ಯವನ್ನು ಆರಂಭಿಸಿದರು. ಪದ್ಯವನ್ನು ಓದಿ, ಆ ಸಂದರ್ಭದಲ್ಲಿ ಷೆಲ್ಲಿ ಕವಿಯು ಹೇಳಿದ 'our sweetest songs are those that tell of saddest thoughts' ಎಂಬುದನ್ನು ಹೇಳುತ್ತಾ ಗದ್ಗದ ಕಂಠರಾದರೂ ಅವರ ಕಣ್ಣುಗಳಲ್ಲಿ ನೀರು ತುಂಬಿತು. ಹಾಗೆಯೇ ಭಾವಪರವಶರಾಗಿ ಅರ್ಧ ನಿಮಿಷ ಕಣ್ಣುಮುಚ್ಚಿ ಪುನಃ ಪಾಠ ಮಾಡಲು ಆರಂಭಿಸಿದರು. ವಿದ್ಯಾರ್ಥಿಗಳಾದ ನಮಗೆಲ್ಲಾ ದಿಗ್ಭ್ರಮೆಯಾಯಿತು. ಈಗ ಅವರು ವಿವರಿಸುತ್ತಿದ್ದ ವಿಷಯಗಳು ಹಿಂದೆ ಅವರ ಮನೆಯಲ್ಲಿ ಸಂಭವಿಸಿದ ಒಂದೆರಡು ದೃಶ್ಯಗಳ ಸ್ಮರಣೆಯನ್ನು ತಂದುದೇ ಅವರ ಲೋಚನಗಳು ಅಶ್ರುಪೂರಿತವಾಗಲು ಕಾರಣವೆಂದು ಅನಂತರ ತಿಳಿಯಿತು. ಅವರ ಕೈಹಿಡಿದ ಮಡದಿ ಪೂರ್ವ ವಯಸ್ಸಿನಲ್ಲೇ ದೈವಾಧೀನರಾದರು. ಬುದ್ಧಿಶಾಲಿಯಾದ ಅವರ ಏಕೈಕ ಪುತ್ರನು ಆತನ ಕಣ್ಣುಬೇನೆಗೆ ಔಷಧಿ ಹಾಕಿದವರ ಅಚಾತುರ್ಯದಿಂದ ಕಣ್ಣುಗಳೆರಡನ್ನೂ ಕಳೆದುಕೊಂಡನು. ಹೀಗೆ ತಮ್ಮ ಪ್ರೇಮದ ಬೆಳಕು ನಂದಿಹೋಗಿ ಅಂಧಕಾರ ಕವಿದಿದ್ದ ಅವರಿಗೆ 'On his blindness' ಪದ್ಯವನ್ನು ಓದುವಾಗ ಸ್ವಾಭಾವಿಕವಾಗಿ ಮನಸ್ಸು ಕರಗಿತು. ಈ ದೃಶ್ಯವನ್ನು ಮನಸ್ಸಿನಲ್ಲೇ ಇಟ್ಟುಕೊಂಡೇ ಅವರು ಪಾಠವನ್ನು ಮುಂದುವರಿಸಿದರು.

ಮಿಲ್ಟನ್ ಕವಿಯು ತನ್ನ ಜೀವನದ ಅರ್ಧಭಾಗ ಕಳೆಯುವುದರಲ್ಲಿ ಕುರುಡನಾದನು. ವಿಶಾಲವಾದ ಹೊರಪಿನ ಪ್ರಪಂಚ ಅವನ ಭಾಗಕ್ಕೆ ಕತ್ತಲಾಯಿತು. ತನ್ನ ಕವಿತಾ ಶಕ್ತಿಯಿಂದ ಪರಮಾತ್ಮನ ಸೇವೆ ಮಾಡುವೆನೆಂದಿದ್ದ ಅವನ ಸಂಕಲ್ಪ ನಷ್ಟವಾಯಿತು. ಹೀಗಾದರೂ, ದೇವರು ಸುಖ ದುಃಖಗಳಲ್ಲಿ ಏನು ಕೊಟ್ಟರೂ ಅದನ್ನು ಗೊಣಗುಟ್ಟದೆ ಸ್ವೀಕರಿಸಬೇಕು, ಹಾಗೆ ಮಾಡಿದರೆ ಪರಮಾತ್ಮನು ಮೆಚ್ಚುವನು ಎಂದು ಕವಿ ಹೇಳಿರುವುದನ್ನು ವಿವರಿಸಿದರು. ಅವರ ಬೋಧೆಯು ನಮ್ಮ ಹೃದಯವನ್ನು ಕಲಕಿ ನಮ್ಮಲ್ಲಿ ನಿಜವಾದ ಚಿಂತನೆಯ ಬುದ್ಧಿಯನ್ನು ಮೂಡಿಸಿತು.

ಅವರಿಗೆ ಜೀವನದಲ್ಲಿ ಉಂಟಾದ ದುಃಖಗಳು, ಚಿನ್ನಕ್ಕೆ ಪುಟಹಾಕುವ ಬೆಂಕಿಯಂತೆ ಅವರನ್ನು ತಪಸ್ವಿಯನ್ನಾಗಿ ಮಾಡಿತು. ಅವರ ನಡೆನುಡಿಗಳು ಶಿಷ್ಯರಿಗೆ ಒಳ್ಳೆಯ ಮಾದರಿಯಾಗಿತ್ತು.

ಅವರದು, ಅಪಾರ ಪಾಂಡಿತ್ಯ, ನಿಷ್ಪಕ್ಷಪಾತ ಬುದ್ಧಿ, ವಿಶಾಲ ದೃಷ್ಟಿ. ಅನ್ಯಮತ ಗ್ರಂಥಗಳೂ ನಮ್ಮ ಉಪನಿಷತ್ತಿನಂತೆಯೇ ಮಾನ್ಯವಾದುವೆಂದೂ, ಅವುಗಳಲ್ಲಿ ಕಾಣುವ ಜೀವನರಹಸ್ಯವೇ ಉತ್ತಮ ಸಾಹಿತಿಗಳ ಮುಖ್ಯ ಸಾಮಗ್ರಿ ಎಂದೂ ಹೇಳುತ್ತಿದ್ದರು.

ಆ ಕಾಲದಲ್ಲಿ ಕನ್ನಡಕ್ಕೆ ಅಗ್ರಸ್ಥಾನವಿರಲಿಲ್ಲ. ಇಂಗ್ಲಿಷ್ ಭಾಷೆಗೇ ಅಧಿಕ ಸ್ಥಾನವಿದ್ದಿತು. ಹೈಸ್ಕೂಲ್ ಮತ್ತು ಕಾಲೇಜುಗಳಲ್ಲಿ ಇಂಗ್ಲಿಷ್ ಭಾಷೆಯಲ್ಲೇ ಪಾಠ ಪ್ರವಚನಗಳು ನಡೆಯುತ್ತಿದ್ದುವು. ಇಂಗ್ಲಿಷ್ ಪ್ರೊಫೆಸರುಗಳು ಕನ್ನಡದಲ್ಲಿ ಮಾತನಾಡುವುದೆಂದರೇ, ಗೌರವಕ್ಕೆ ಕಡಿಮೆ ಎಂಬ ಭಾವನೆ ಆ ಕಾಲದಲ್ಲಿದ್ದಿತು. ಈ ಕಾರಣದಿಂದಲೇ ಬಿ. ಎಂ. ಶ್ರೀಕಂಠಯ್ಯನವರು ಒಂದು ದಿನವೂ ಕನ್ನಡದಲ್ಲಿ ಮಾತನಾಡಿರಲಿಲ್ಲ. 'ಅವರಿಗೂ ಕನ್ನಡ ಬರುತ್ತಂತೆ' ಎಂದು ಜನರು ಹೇಳುತ್ತಿದ್ದರು. ನಮ್ಮಗಳಲ್ಲೇ ಅನೇಕರಿಗೆ, ಅವರು ಕನ್ನಡದಲ್ಲಿ ಪಂಡಿತರು ಎಂಬುದು ಗೊತ್ತಿರಲಿಲ್ಲ.

ಕನ್ನಡ ಸಂಸ್ಕೃತಿಯು, ಸರಸ್ವತಿ ನದಿಯಂತೆ ಗುಪ್ತಗಾಮಿನಿಯಾಗಿ ಅವರ ಹೃದಯಾಂತರಾಳದಲ್ಲಿ ಹರಿಯುತ್ತಿದ್ದಿತು, ಹೊರಕ್ಕೆ ಪ್ರವಹಿಸಿರಲಿಲ್ಲ. ಇತ್ತೀಚೆಗೆ, ಅನುಕೂಲ ವಾತಾವರಣದಿಂದಾಗಿ, ಅದು ಕನ್ನಡ ವಾರಿಧಿಯಾಗಿ ಅವರಿಂದ ಹೊರ ಬಂದಿತು. ಅವರು ಕನ್ನಡ ಕಣ್ವರೆಂದು ಹೆಸರಾಂತು ಕನ್ನಡ ಕಣಜವನ್ನು ತಮ್ಮ ಕೃತಿ ಗಳಿಂದ ತುಂಬಿದರು. ಕನ್ನಡ ಪುರೋಭಿವೃದ್ಧಿಗಾಗಿ ಯಥೇಷ್ಟವಾಗಿ ಹಣಕೊಟ್ಟು, ಶ್ರಮವಹಿಸಿ, ಕನ್ನಡ ಮಾತೆಗೆ ಸೇವೆ ಸಮರ್ಪಿಸಿದರು. ಕನ್ನಡನಾಡಿನಲ್ಲೆಲ್ಲಾ ಸಂಚರಿಸಿ, ಕನ್ನಡ ಜನರನ್ನೆಬ್ಬಿಸಿ, ಕನ್ನಡ ಭಾಷೆಯ ದೊಡ್ಡಸ್ತಿಕೆಯನ್ನು ವಿವರಿಸಿ ಕರ್ನಾಟಕ ಏಕೀಕರಣಕ್ಕಾಗಿ ದುಡಿದರು. ಕನ್ನಡನಾಡಿನಲ್ಲೆಲ್ಲಾ ಕನ್ನಡ ಬಾವುಟವನ್ನು ಹಾರಿಸಿದರು.

ಬಡತನದಲ್ಲಿದ್ದವರಲ್ಲಿ ಅವರಿಗೆ ಕರುಣೆಯಿದ್ದಿತು. ಮೈಸೂರಿಗೆ ಗ್ರಾಮ ಗಳಿಂದ ಬಂದು ಕಷ್ಟಪಟ್ಟು ಓದುತ್ತಿದ್ದ ವಿದ್ಯಾರ್ಥಿಗಳಿಗೆ ತಮ್ಮ ಕೈಲಾದಷ್ಟು ಸಹಾಯ ಮಾಡುತ್ತಿದ್ದರು. ಆ ರೀತಿಯಾದ ಸಹಾಯ ಪಡೆದವರಲ್ಲಿ ನಾನೂ ಒಬ್ಬ. ನನಗೆ ಪ್ರತಿ ತಿಂಗಳು ೧೦-೦೦ ರೂ. ಗಳನ್ನು ಕೊಟ್ಟು ನನ್ನ ವಿದ್ಯಾಭ್ಯಾಸಕ್ಕೆ ಸಹಾಯ ಮಾಡಿದರು. ತಮ್ಮ ಮನೆಯಲ್ಲಿಯೂ ಹೆಚ್ಚು ಆಡಂಬರವನ್ನು ಇಟ್ಟುಕೊಂಡಿರಲಿಲ್ಲ. ನಿರ್ಲಿಪ್ತರಾಗಿರುತ್ತಿದ್ದರು ನಾನು ಒಮ್ಮೆ ಅವರ ಮನೆಗೆ ಹೋಗಿ ಜೀವನೋಪಾಯಕ್ಕೆ ಕೆಲಸ ಸಂಪಾದಿಸಲು ಒಂದು ಸರ್ಟಿಫಿಕೇಟ್ ಬೇಕೆಂದು ಕೇಳಿಕೊಂಡಕೂಡಲೇ ಸರ್ಟಿಫಿಕೇಟನ್ನು ತಾವೇ ಸ್ವತಃ ಬರೆದುಕೊಟ್ಟರು. ಆ ಮಹನೀಯರ ಸ್ಮರಣೆಯೇ ಸುದಿನ. ಅವರು ಇನ್ನಿಲ್ಲವಾದರೂ ಪವಿತ್ರವಾದ ಅವರ ಆತ್ಮವು ಕರ್ನಾಟಕ ಸಾರಸ್ವತ ಪ್ರಪಂಚದ ಮೂಲೆ ಮೂಲೆಗಳಲ್ಲಿಯೂ ಧೃವತಾರೆಯಾಗಿ ಪ್ರಜ್ವಲಿಸುತ್ತಿದೆ.

# ಕನ್ನಡ ಕಣ್ಮಣಿ ಶ್ರೀ

– ಡಿ. ಆರ್. ರಾಮಯ್ಯ

೧

ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಇಂಗ್ಲಿಷ್ ಭಾಷೆ ಹಾಗೂ ಇಂಗ್ಲಿಷ್ ಬಟ್ಟೆಬರೆ ಮುಂತಾದ ಪ್ರವೃತ್ತಿಗಳು ಬಲವಾಗಿ, ದೇಶ ಭಾಷೆ ಹಾಗೂ ದೇಶದ ಉಡಿಗೆ ತೊಡಿಗೆ ಮುಂತಾದ ಸಾಂಸ್ಕೃತಿಕ ಪರಿಸ್ಥಿತಿಯನ್ನು ಮೆಟ್ಟಲಾರಂಭಿಸಿದ್ದುವು. ಇಂತಹ ಸನ್ನಿವೇಶದಲ್ಲಿ, ಅದರಲ್ಲೂ ೧೯೨೦–೧೯೩೦ರ ದಶಕದಲ್ಲಿ, ಕನ್ನಡದ ಅವನತಿಯನ್ನು ತಪ್ಪಿಸಿ, ಮಾರ್ಗದರ್ಶನ ನೀಡಬೇಕಾಗಿ ಬಂದಾಗ, ಇಂಗ್ಲಿಷ್ ಪ್ರಾಧ್ಯಾಪಕರಾಗಿ ಮೈಸೂರು ಮಹಾರಾಜ ಕಾಲೇಜಿನಲ್ಲಿ ಉಜ್ವಲ ಸೇವೆ ಸಲ್ಲಿಸುತ್ತಿದ್ದ ಶ್ರೀ ಬಿ. ಎಂ. ಶ್ರೀಕಂಠಯ್ಯನವರ ಪಾಲಿಗೆ ಕನ್ನಡವನ್ನು ಸಂರಕ್ಷಿಸುವ ಹೊಣೆಗಾರಿಕೆ ದೊರೆತುದು ಒಂದು ದೈವಯೋಗ. ಇವರ ಜತೆಗೆ ಮಹಾರಾಜ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾದ ಶ್ರೀ ಟಿ. ಎಸ್. ವೆಂಕಣ್ಣಯ್ಯನವರೂ, ಸೆಂಟ್ರಲ್ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾದ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳವರೂ ಸೇರಿ ಒಮ್ಮನಸ್ಸಿನಿಂದ ಕನ್ನಡವನ್ನು ಸರಿಯಾದ ದಾರಿಗೆ ತಂದು ಬಿಡುವ ಪ್ರಯತ್ನದಲ್ಲಿ ಶ್ರೀಯವರ ಎರಡು ಕಣ್ಣುಗಳಾಗಿ ನಿಂತುದು ಕನ್ನಡ ದೇವಿಯ ಪುಣ್ಯ ಪರಿಪಾಕ. ಈ ಮಹತ್ಕಾರ್ಯಸಾಧನೆಯಲ್ಲಿ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಹಣೆಗಣ್ಣಾಗಿ, ಶ್ರೀ ಟಿ. ಎಸ್. ವೆಂಕಣ್ಣಯ್ಯನವರು ಬಲಗಣ್ಣಾಗಿ, ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು ಎಡಗಣ್ಣಾಗಿ ಬೆಳಗಿದರು.

ಇಂದಿನ ಕನ್ನಡ ಜನತೆಗೆ ಈ 'ಮುಕ್ಕಣ್ಣ' ತ್ರಿಪುತ್ರಯರು ಸಲ್ಲಿಸಿದ ಅಪಾರ ಸೇವೆಯನ್ನು ತಿಳಿಯುವುದು ಅಗತ್ಯ. ನನಗೂ ಶ್ರೀ ಬಿ. ಎಂ. ಶ್ರೀಕಂಠಯ್ಯನವರಿಗೂ ಇದ್ದ ಪರಿಚಯವನ್ನು ನಿರೂಪಿಸುವುದರಲ್ಲಿ ಅಂದು ಕನ್ನಡ ಎದ್ದು ನಿಂತ ಬಗೆ ಹೇಗೆ ಎಂಬುದೂ ವ್ಯಕ್ತವಾದೀತು. ೧೯೨೨ರಲ್ಲಿ ಎಂಟ್ರೆನ್ಸ್ ಪರೀಕ್ಷೆಯಲ್ಲಿ (ಈಗಿನ ಪಿ. ಯು. ಸಿ.) ತೇರ್ಗಡೆ ಹೊಂದಿ, ಬೆಂಗಳೂರು ಸರ್ಕಾರಿ ಕೊಲಿಜಿಯೆಟ್

ಹೈಸ್ಕೂಲಿನಿಂದ (ಈಗಿನ ಸರಕಾರಿ ಫಸ್ಟ್ ಗ್ರೇಡ್ ಕಾಲೇಜು) ಪದವಿ ಪರೀಕ್ಷೆಗಾಗಿ ಸೆಂಟ್ರಲ್ ಕಾಲೇಜಿಗೆ ಬರುವ ವೇಳೆಗೆ ಶ್ರೀಗಳ ಕನ್ನಡ ಕೀರ್ತಿ ನನ್ನ ಕಿವಿಗೆ ಬಿದ್ದಿತ್ತು. ಮುಂದೆ ಕನ್ನಡದ 'ಮುಕ್ಕಣ್ಣ' ಶಿವತ್ರಯರ ಕಾರ್ಯವಿಧಾನವನ್ನು ತಿಳಿಯುವ ಅವಕಾಶ ದೊರೆತಾಗ, ನಾನೊಬ್ಬ 'ಕನ್ನಡ ಕಂದ' ಎಂಬ ಅರಿವುಂಟಾಯಿತು.

೨

೧೯೧೭ರಲ್ಲಿ ಶ್ರೀ ವಿಶ್ವೇಶ್ವರಯ್ಯನವರ ವಿಶ್ವಪ್ರಯತ್ನದಿಂದ ಮದರಾಸು ವಿಶ್ವವಿದ್ಯಾಲಯದ ಕೈತಪ್ಪಿ ಮೈಸೂರು ವಿಶ್ವವಿದ್ಯಾನಿಲಯ ರೂಪುಗೊಂಡಿತು. ೧೯೨೭ರಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಕನ್ನಡ ಎಂ. ಎ. ವಿಕ್ರಮ ದೊರೆತುದಂತೂ ಕನ್ನಡಮ್ಮನಿಗೆ ಕಿರೀಟ ದೊರೆತಂತಾಗಿತ್ತು.

ಮೇಲ್ಕಂಡ ಪರಿಸರದಲ್ಲಿ ನಾನಾದರೂ ೧೯೨೫–೧೯೨೯ರವರೆಗೆ ಸೆಂಟ್ರಲ್ ಕಾಲೇಜಿನ ಭೌತ ಹಾಗೂ ರಸ ವಿಜ್ಞಾನ ವಿದ್ಯಾರ್ಥಿಯಾಗಿ ಬಂದವನು. ಕಾಲೇಜಿನ ಕರ್ನಾಟಕ ಸಂಘದಲ್ಲಿ ಚರ್ಚಾಕೂಟದ ಕಾರ್ಯದರ್ಶಿಯಾಗಿ ನಿಂತು. ೧೯೨೮ರಲ್ಲಿ ವಿದ್ಯಾರ್ಥಿ ಕವಿ ಸಮ್ಮೇಳನದಲ್ಲಿ ನನ್ನ 'ಕುಂಬಾರ'ನಿಗೆ ಬಹುಮಾನ ಗಳಿಸಿದ ಭವ್ಯ ಅನುಭವ ನನ್ನದು. ಅಂದು ಕನ್ನಡ ಎಂ. ಎ. ತರಗತಿ ವಿದ್ಯಾರ್ಥಿ ಶ್ರೀ ಕೆ. ವಿ. ಪುಟ್ಟಪ್ಪನವರು (ಕಿಶೋರ ಚಂದ್ರ ವಾಣಿ) ಅಧ್ಯಕ್ಷತೆ ವಹಿಸಿದ್ದರು. ಇಂತಹ ಕನ್ನಡ ಬಳುವಳಿಯಲ್ಲಿ (ಚಳುವಳಿ ಅಲ್ಲ) ಹಾಸುಹೊಕ್ಕಾಗಿ ಈ 'ಮುಕ್ಕಣ್ಣ' ಶಿವತ್ರಯರ ಪ್ರೇರಣೆಯಲ್ಲಿ ಹಾಗೂ ಪೋಷಣೆಯಲ್ಲಿ ನಾನು ಬೆಳೆದೆ. ೧೯೫೩ರ ವರೆಗೆ ಒಂಬತ್ತು ಜಿಲ್ಲೆಗಳಾಗಿದ್ದ ಮೈಸೂರು ಸಂಸ್ಥಾನ (ಯದುಕುಲ ತಿಲಕರ ಸಂಸ್ಥಾನ) ಬಳ್ಳಾರಿ ಜಿಲ್ಲೆ ಸೇರಿ ಹತ್ತು ಜಿಲ್ಲೆಗಳಾಗಿ, ೧೯೫೬ ರಲ್ಲಿ ಭಾಷಾವಾರು ಪ್ರಾಂತ ನಿರ್ಮಾಣದ ಪಡಿಯಚ್ಚಿನಲ್ಲಿ ಕೇಂದ್ರದ ಕೊಡಗು ಜಿಲ್ಲೆ ಸೇರಿ ಹತ್ತೊಂಭತ್ತು ಜಿಲ್ಲೆಗಳಾಗಿ ಕನ್ನಡಮ್ಮನ ಮಡಿಲು ತುಂಬಿದ ಮೇಲೆ, ಈಗ ಮೈಸೂರು ರಾಜ್ಯ ಕನ್ನಡಿಗರ 'ಕರ್ನಾಟಕ'ವಾಗಿ ಬೆಳಗುತ್ತಿದೆ. ಮೇಲೆ ಸೂಚಿಸಿರುವಂತೆ 'ಮುಕ್ಕಣ್ಣ' ಶಿವತ್ರಯರಲ್ಲಿ ಶ್ರೀಯವರನ್ನು ಹಣೆಗಣ್ಣ ಎಂದು ಕರೆದಿರುವ ಔಚಿತ್ಯವೇನೆಂಬುವನ್ನು ಅರಿಕೆ ಮಾಡುವುದೇ ಈ ಲೇಖನದ ಗುರಿ. ಇದರಿಂದ ಕನ್ನಡಕ್ಕಾಗಿ ಕನ್ನಡಿಗರು ಗೋಗರೆಯುತ್ತಿರುವ ಈಗಿನ ಅಂಧಕಾರದಲ್ಲಿ ನವೆಂಬರ್ ಒಂದರಂದು ಕನ್ನಡ ರಾಜ್ಯೋತ್ಸವವನ್ನು ಆಚರಿಸುತ್ತಿರುವ ಔಚಿತ್ಯವು ಸ್ಪಷ್ಟವಾದೀತು.

೩

೧೯೩೧ ಜನವರಿ ೨೬ – ಈ ಶುಭದಿನ ಪ್ರಾತಃಕಾಲ ನನ್ನ 'ಕೋಗಿಲೆ'ಯನ್ನು, ೧೯೨೫ ರಿಂದ ಆದುವರೆಗಿನ ನನ್ನ ೩೪ ಕನ್ನಡ ಪುಷ್ಪಗಳ ಮಾಲಿಕೆಯನ್ನು ಹಿಡಿದು,

ಸನ್ಮಾನ್ಯ ಶ್ರೀಯವರನ್ನು ಬಸವನಗುಡಿಯ ಕೆ. ಆರ್. ರಸ್ತೆಯಲ್ಲಿ ಈಗಿನ ಮೈಸೂರು ಸ್ಟೇಟ್ ಬ್ಯಾಂಕಿನ ಎದುರಿನ ಸಾಲಿನಲ್ಲಿ ಇರುವ ಮನೆಯೊಂದರಲ್ಲಿ (ಶ್ರೀ ಕೆ. ಎಸ್. ಮಲ್ಲೇಗೌಡರ ಮನೆ) ಕಂಡಾಗ ಅವರು ನನ್ನನ್ನು ಕುಳ್ಳಿರಿಸಿ, ಹಿಂದಿನ ನೆನಪುಗಳನ್ನು ನೆನೆದು, ಮುಂದಿನ ಒಲಪುಗಳನ್ನು ಸವಿಯುತ್ತ ನನ್ನ 'ಕೋಗಿಲೆ'ಗೆ ಸವಿನುಡಿಯ ಮುನ್ನುಡಿಯ ಕೊರಳಮಾಲೆ ಹಾಕಿದರು. ಅದು ಈ ರೀತಿ ಇತ್ತು:

ಬೆಂಗಳೂರು

೨೬-೧-೧೯೩೧

ಮ॥ ರಾ॥ ಡಿ. ಆರ್. ರಾಮಯ್ಯನವರ ಕವನಗಳನ್ನು ಓದಿ ಸಂತೋಷಪಟ್ಟೆನು. ಕವಿತಾ ರಚನೆ ಚೆನ್ನಾಗಿದೆ. ಕನ್ನಡದ ಸೇವೆಯಲ್ಲಿ ಇವರು ಬಹಳ ಉತ್ಸಾಹಶಾಲಿಗಳಾಗಿದ್ದಾರೆ. ಚೆನ್ನಾಗಿ ಕೆಲಸ ಮಾಡುತ್ತಿದ್ದಾರೆ. ಸರಸ್ವತೀ ದೇವಿಯ ಪ್ರಸಾದವನ್ನು ಸಂಪೂರ್ಣವಾಗಿ ಪಡೆದು, ಇವರು ಕನ್ನಡಿಗರ ವಿಶ್ವಾಸ ಗೌರವಗಳಿಗೆ ಅರ್ಹರಾಗಲೆಂದು ನಾನು ಮನಃಪೂರ್ವಕವಾಗಿ ಪ್ರಾರ್ಥಿಸುತ್ತೇನೆ.

ಬಿ. ಎಂ. ಶ್ರೀಕಂಠಯ್ಯ

ಆದುದರಿಂದ ಮುಂದೆ ಶ್ರೀಯವರಿಗೂ ನನಗೂ ಇದ್ದ ಸಂಬಂಧದ ಅನುಭವದ ನೆನಪುಗಳು ಯಾವುವು, ಎಂಥವು ಎಂಬುದನ್ನು ಸೂಕ್ಷ್ಮವಾಗಿ ತಿಳಿಸುತ್ತೇನೆ. ನಾನು ಅವರ ಶಿಷ್ಯನಾಗಿರಲಿಲ್ಲ: ಆತ್ಮೀಯ ಸ್ನೇಹಿತನಾಗಿದ್ದೆ. ಅಭಿಮಾನಿಯಾಗಿದ್ದೆ.

೧೯೨೫ರಲ್ಲಿ ನಾನು ಸೆಂಟ್ರಲ್ ಕಾಲೇಜಿಗೆ ಕಾಲಿಟ್ಟಾಗ ವಿಜ್ಞಾನ ವಿದ್ಯಾರ್ಥಿಯಾದರೂ ಕನ್ನಡ ಹಾಗೂ ಇಂಗ್ಲಿಷ್ ಬರೆಹ ಹಾಗೂ ಭಾಷಣಗಳಲ್ಲಿ ಹೆಸರು ಗಳಿಸಿ ಬಂದಿದ್ದೆ. ನನ್ನನ್ನು ಆಗಿನ ಕರ್ನಾಟಕ ಸಂಘದ ಕಾರ್ಯಕಲಾಪಗಳು ಸೆಳೆದವು. ಹೇಗೆಂದರೆ – ಮಹಾರಾಜ ಕಾಲೇಜಿಗೂ ಸೆಂಟ್ರಲ್ ಕಾಲೇಜಿಗೂ ಪ್ರತಿ ವರ್ಷ ಅಂತರ ವಿಶ್ವವಿದ್ಯಾಲಯ ಚರ್ಚಾಸ್ಪರ್ಧೆ ನಡೆಯುತ್ತಿದ್ದ ಕಾಲ ಅದು. ೧೯೨೫ ಆಗಸ್ಟ್ ತಿಂಗಳಲ್ಲೊಂದು ಸಂಜೆ ಆಗಿನ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದ ಮಿ॥ ಫ್ರಾಂಕ್ ಆರ್. ಸೆಲ್ ಅವರ ಸಮ್ಮುಖದಲ್ಲಿ ನಡೆದ ಚುನಾವಣಾ ಭಾಷಣ ಸ್ಪರ್ಧೆಯಲ್ಲಿ ನಾನೂ, ಗೆಳೆಯ ಶ್ರೀ ಎಂ. ಎನ್. ರಾಮಸ್ವಾಮಿಯೂ ಗೆದ್ದೆವು. ಇಬ್ಬರೂ ಮೈಸೂರು ಮಹಾರಾಜ ಕಾಲೇಜಿಗೆ ತೆರಳಿ ಅಲ್ಲಿ ಪಾತ್ರ ವಹಿಸಬೇಕಾಯಿತು. ಇಲ್ಲಿಂದ ಪ್ರಾರಂಭವಾಯಿತು ನನ್ನ ಮತ್ತು ಶ್ರೀ ಬಿ. ಎಂ. ಶ್ರೀ. ಅವರ ಪ್ರಥಮ ಪರಿಚಯ ಮೈಸೂರಿನಲ್ಲಿ.

ಶ್ರೀಯವರು ಮೈಸೂರು ಮಹಾರಾಜ ಕಾಲೇಜಿನಲ್ಲಿ ಅಪ್ರತಿಮ ಇಂಗ್ಲಿಷ್ ಪ್ರಾಧ್ಯಾಪಕರಾಗಿ ತಮ್ಮ ಜೀವಮಾನದ ಬಹುಭಾಗವನ್ನು ಮುಡಿಪಾಗಿಟ್ಟವರು. ಅವರ ಕನ್ನಡದ ಅಭಿಮಾನ ಕಸ್ತೂರಿಯ ಸುಗಂಧದಂತೆ ಕನ್ನಡದ ಎಲ್ಲ ನೆಲೆಗಟ್ಟು ಗಳಲ್ಲಿಯೂ ವ್ಯಾಪಕವಾಗಿತ್ತು. ಅವರು ಕನ್ನಡದಲ್ಲಿ ಪ್ರಕಟಿಸಿದ ಇಂಗ್ಲಿಷ್ ಗೀತ ಗಳಲ್ಲಿ –

"ಅವಳ ಉಡಿಗೆ ಇವಳಿಗಿಟ್ಟು ಹಾಡ ಬಯಸಿದೆ
ಇವಳ ತೊಡಿಗೆ ಅವಳಿಗಿಟ್ಟು ನೋಡಬಯಸಿದೆ."

– ಎಂದಿದ್ದಾರೆ. ಇಲ್ಲಿ ಅವಳು ಎಂದರೆ ಆಂಗ್ಲ ವನಿತೆ, ಇವಳು ಎಂದರೆ ಕನ್ನಡ ವನಿತೆ ಎಂಬುದು ಸ್ವಯಂ ಸ್ಪಷ್ಟ. ಇದರಿಂದ ಶ್ರೀಯವರಿಗಿದ್ದ ಭಾಷಾ ಸಮನ್ವಯ ವ್ಯಕ್ತವಾಗುತ್ತದೆ.

ಹೀಗೆ ನಾನೂ, ನನ್ನ ಮಿತ್ರ ಎಂ. ಎಸ್. ರಾಮಸ್ವಾಮಿ ಒಂದು ಸಂಜೆ ಮೈಸೂರಿಗೆ ಬಂದಿಳಿದೆವು. ಶ್ರೀಗಳವರ ನೇತೃತ್ವದಲ್ಲಿ ರೂಪುಗೊಂಡಿದ್ದ ಮಹಾರಾಜ ಕಾಲೇಜಿನ ವಿದ್ಯಾರ್ಥಿ ಭವನದ ಕಾರ್ಯಕಲಾಪಗಳನ್ನು ಕಂಡು ನಾವು ಬೆರಗಾದೆವು. ಸೆಂಟ್ರಲ್ ಕಾಲೇಜಿನಲ್ಲಿ ಇಂತಹ ವೈಭವವನ್ನು ನಾವು ಕಂಡಿರಲಿಲ್ಲ. ಏಕೆಂದರೆ, ಅದು ಒಂದು 'ಟೆಸ್ಟ್ ಟ್ಯೂಬ್ ಕಾಲೇಜು' ಎಂದು ಹೆಸರಾಗಿ, ವಿದ್ಯಾರ್ಥಿಗಳಿಗಾಗಿ ಕಟ್ಟಿದ್ದ ಭವನ ಲಾ ಕಾಲೇಜಿನ ವಶವಾಗಿತ್ತು. ಆಗಿನ ಪ್ರಾಂಶುಪಾಲರಾಗಿದ್ದ ಮಿ॥ ಇ. ಪಿ. ಮೆಟಕಾಫ್ ಅವರು ಕರ್ನಾಟಕ ಸಂಘದ ಕೈಗೆ ೪೦೦ ರೂಪಾಯಿ ಕೊಟ್ಟು ಇಂಗ್ಲಿಷ್ ಕಾರ್ಯಕ್ರಮಗಳನ್ನೂ ನಡೆಸುವಂತೆ ಮಾಡಿ ತೆಪ್ಪಗಿದ್ದರು. ಚರ್ಚಾಸ್ಪರ್ಧೆ ರಾತ್ರಿ ೮-೩೦ ಕ್ಕೆ ನಡೆದಾಗ ನಾನೂ, ನನ್ನ ಸಹ ಸ್ಪರ್ಧಿಗಳೂ ಮೊಟ್ಟ ಮೊದಲು ಕಂಡದ್ದು ಶ್ರೀ ಬಿ. ಎಂ. ಶ್ರೀಕಂಠಯ್ಯನವರನ್ನು. ಅವರು ನಮ್ಮ ಬೆನ್ನು ತಟ್ಟಿ ಹಸ್ತಲಾಘವ ನೀಡಿದರು. ಅಂದಿನ ಚರ್ಚೆಯಲ್ಲಿ ಸೆಂಟ್ರಲ್ ಕಾಲೇಜು ಪ್ರಥಮ ಸ್ಥಾನ ಪಡೆಯಿತು. ಇದರ ಪರಿಣಾಮವಾಗಿ ವಿಜ್ಞಾನ ವಿದ್ಯಾರ್ಥಿಯಾದ ನಾನು ಶ್ರೀಯವರ ಕಣ್ಣಿಗೆ ಬಿದ್ದೆ. ಮುಂದೆ ೧೯೨೬ರಲ್ಲಿ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ ಆಶ್ರಯ ದಲ್ಲಿ ನಡೆದ ಕನ್ನಡ ಚರ್ಚಾ ಕೂಟದಲ್ಲೂ, ನಾನು, ನನ್ನ ಸಹ ಸ್ಪರ್ಧಿ ಶ್ರೀ ಮಹಮ್ಮದ್ ಆಲಿ ಮೈಸೂರು ಕಾಲೇಜಿನ ಸ್ಪರ್ಧಿಗಳ ಮೇಲೆ ಸೆಣಸಿ ಗೆದ್ದೆವು.

೪

೧೯೨೫–೨೬ರ ಅವಧಿಯಲ್ಲಿ ಕನ್ನಡ ಶ್ರದ್ಧಾಳುಗಳಾದ ವಿದ್ಯಾರ್ಥಿಗಳನ್ನು ಗುರುತಿಸಿ ಕಾರ್ಯಪ್ರವೃತ್ತರನ್ನಾಗಿ ಬೆಳೆಸಿ ಬೆಳಕಿಗೆ ತಂದವರು ಮೇಲೆ ಸೂಚಿಸಿರುವ 'ಮುಕ್ಕಣ್ಣ' ಶಿವತ್ರಯರು; ಅರ್ಥಾತ್ ಶ್ರೀ ಅವರು, ಶ್ರೀ ವೆಂಕಣ್ಣಯ್ಯನವರು, ಮತ್ತು ಶ್ರೀ ಕೃಷ್ಣಶಾಸ್ತ್ರಿಗಳು. ಇವರ ಒಕ್ಕೂಟ ಶ್ರಮದಿಂದ ಕನ್ನಡ ವಿದ್ಯಾರ್ಥಿಗಳು

ಪ್ರವರ್ಧಮಾನಕ್ಕೆ ಬರಲು ಅವಕಾಶವುಂಟಾಯಿತು. ಮೈಸೂರು ಮಹಾರಾಜ ಕಾಲೇಜಿನಲ್ಲಿ ಶ್ರೀಗಳಾದ ಕೆ. ವಿ. ಪುಟ್ಟಪ್ಪ, ಎಲ್. ಗುಂಡಪ್ಪ, ಎ. ಕೆ. ಪುಟ್ಟರಾಮು ಇತ್ಯಾದಿ ವಿದ್ಯಾರ್ಥಿಗಳನ್ನೂ, ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ನಾನೂ, ಮತ್ತು ಶ್ರೀಗಳಾದ ಕೆ. ಗೋಪಾಲಕೃಷ್ಣರಾವ್, ಜಿ. ಪಿ. ರಾಜರತ್ನಂ ಮುಂತಾದವರನ್ನೂ ಗುರುತಿಸಿ ನಡೆಸಿದವರು ಈ ಮಹನೀಯರೆ. ಇವರು ಕನ್ನಡ ಮಾತನಾಡುವುದು 'ತಗ್ಗು', ಇಂಗ್ಲಿಷ್ ಮಾತನಾಡುವುದು 'ಹಿಗ್ಗು' ಎಂದು ಮರೆಯುತ್ತಿದ್ದ ಅಂದಿನ ದಿನಗಳಲ್ಲಿ ವಿದ್ಯಾರ್ಥಿಗಳಲ್ಲಿ ಕನ್ನಡದ ಚೇತನವನ್ನು ತುಂಬಿದುದಲ್ಲದೆ, ಸರ್ಕಾರದ ಇತರ ಇಲಾಖೆಗಳಲ್ಲಿ ಕೆಲಸ ಮಾಡುತ್ತಿದ್ದ ಪದವೀಧರರನ್ನೂ ಆಕರ್ಷಿಸಿ, ಅವರನ್ನು ಕನ್ನಡ ಪ್ರಾಧ್ಯಾಪಕರಾಗಿ ರಕ್ಷಿಸಿದ ಕಾರ್ಯವೂ ಇವರಿಂದ ನಡೆಯಿತು. ಶ್ರೀಗಳಾದ ವಿ. ಸೀತಾರಾಮಯ್ಯ, ಟಿ. ಎನ್. ಶ್ರೀಕಂಠಯ್ಯ, ಡಿ. ಎಲ್. ನರಸಿಂಹಾಚಾರ್ ಮುಂತಾದವರು ಈ ವರ್ಗಕ್ಕೆ ಸೇರಿದ ಕನ್ನಡ ಶ್ರೇಷ್ಠರು.

ಒಟ್ಟಿನಲ್ಲಿ ಸನ್ಮಾನ್ಯ ಶ್ರೀಗಳಲ್ಲಿ ನಾನು ಕಂಡ ಮುಖಭಾವ, ನಡೆ ನುಡಿ, ಉಡಿಗೆ ತೊಡಿಗೆ – ಎಲ್ಲವೂ ಕನ್ನಡ ನಾಡಿನ ಪ್ರತಿಬಿಂಬದಂತಿತ್ತು. ಅವರ ಇಂಗ್ಲಿಷ್ ಹಾಗೂ ಕನ್ನಡ ಭಾಷಣಗಳ ಮಾಧುರ್ಯ ಮನೋಹರವಾಗಿತ್ತು. 'ಕನ್ನಡ' ಎಂದರೆ 'ಶ್ರೀ', 'ಶ್ರೀ' ಎಂದರೆ 'ಕನ್ನಡ' ಎಂಬ ಅನ್ವರ್ಥನಾಮ ಅವರದು. ಅಂತಹ ಕನ್ನಡದ ಮೂರ್ತಿ ಸ್ವರೂಪ ನಮಗೀಗ ಅಗತ್ಯವಾಗಿದೆ.

# 'ಶ್ರೀ' ಅವರ ಶಿಷ್ಯರ ಕಡೆಯ ತಂಡದಲ್ಲಿ

– ಎಲ್. ಎಸ್. ಶೇಷಗಿರಿರಾವ್

೧೯೪೧ರ ಜೂನ್ ತಿಂಗಳು. ನಾನು ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತ ಶಾಸ್ತ್ರಗಳನ್ನು ಅಭ್ಯಾಸಮಾಡಿ ಇಂಟರ್‌ಮೀಡಿಯೆಟ್ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ. ಎಸ್‌ಸಿ. ತರಗತಿಯ ಪ್ರವೇಶಕ್ಕೆ ಅರ್ಜಿ ಹಾಕಿದ್ದೆ. ಅಂದು ತಾನೆ ಆಯ್ಕೆಯಾದವರ ಪಟ್ಟಿ ಹೊರಬಿದ್ದಿತ್ತು, ನನ್ನ ಹೆಸರೂ ಇತ್ತು.

ಅಂದೇ ಸುದ್ದಿ ಬಂದಿತು – ಸೆಂಟ್ರಲ್ ಕಾಲೇಜಿನಲ್ಲೂ ಇಂಗ್ಲಿಷ್ ಆನರ್ಸ್ ಪ್ರಾರಂಭವಾಗುತ್ತದೆ. ಬಿ. ಎ. ಅಥವಾ ಬಿ. ಎಸ್‌ಸಿ. ತರಗತಿಗೆ ಪ್ರವೇಶಕ್ಕೆ ಅರ್ಜಿ ಕೊಟ್ಟವರಲ್ಲಿ ಇಂಗ್ಲಿಷಿನಲ್ಲಿ ಶೇಕಡಾ ಐವತ್ತು ಬಂದವರನ್ನು ಆರಿಸಿ ಸೇರಿಸಿಕೊಳ್ಳುತ್ತಾರೆ ಎಂದು. ಹಾಗೆ ಆಯ್ಕೆಯಾದವರ ಪಟ್ಟಿಯೂ ನೋಟಿಸ್ ಬೋರ್ಡಿನ ಮೇಲೆ ಕಾಣಿಸಿಕೊಂಡಿತು. ಪಟ್ಟಿಯಲ್ಲಿ ಮೊದಲ ಹೆಸರು ನನ್ನದು. (ಆ ವರ್ಷ ಇಂಟರ್‌ಮೀಡಿಯೆಟ್ ಪರೀಕ್ಷೆಯಲ್ಲಿ ಇಂಗ್ಲಿಷಿನಲ್ಲಿ ನನ್ನದು ಮೊದಲ ಸ್ಥಾನ) ಪಟ್ಟಿಯಲ್ಲಿ ಹೆಸರಿದ್ದ ವಿದ್ಯಾರ್ಥಿಗಳು ಇಂಗ್ಲಿಷ್ ಪ್ರೊಫೆಸರನ್ನು ಅವರ ಕೊಠಡಿಯಲ್ಲಿ ಕಾಣಬೇಕೆಂದು ಸೂಚಿಸಿತ್ತು. ಇಂಗ್ಲಿಷ್ ಪ್ರೊಫೆಸರು ಬಿ. ಎಂ. ಶ್ರೀಕಂಠಯ್ಯನವರು.

'ಶ್ರೀ'ಯವರನ್ನು ನಾನು ನೋಡಿದ್ದು ಮೂರು ನಾಲ್ಕು ವರ್ಷಗಳ ಮೊದಲು, ಅವರು ನಾನು ಓದುತ್ತಿದ್ದ ಮಲ್ಲೇಶ್ವರಂ ಪ್ರೌಢಶಾಲೆಗೆ ಬಂದು ಭಾಷಣ ಮಾಡಿದಾಗ. ಗಾಂಭೀರ್ಯವೇ ರೂಪ ತಾಳಿ ಬಂದಂತಹ ವ್ಯಕ್ತಿತ್ವ, ಗಮನವನ್ನು ಸೆಳೆದು ಉಳಿಸಿಕೊಳ್ಳುವ ಸಿರಿಕಂಠ. ನಮಗೆಲ್ಲ ಅವರ ವಿಷಯದಲ್ಲಿ ಭಯ ಬೆರೆತ ಗೌರವ ಮೂಡಿತ್ತು. ಈಗ ಅವರ ಕೊಠಡಿಗೆ ಹೋಗಿ ಅವರನ್ನು ಕಾಣುವುದೆಂದರೆ, ಹದಿನಾರು ವರ್ಷದ ನನಗೆ 'ಸಿಂಹದ ಗುಹೆಗೆ ಹೋಗು' ಎಂದ ಹಾಗಾಯಿತು.

ಈಗಿನ ಗಣಿತ ವಿಭಾಗದಲ್ಲಿ ಮಹಡಿಯ ಮೇಲೆ ಅವರ ಕೊಠಡಿ. ಕಾಲಿಡುವಾಗಲೇ ಅವರ ಶ್ರೀಮದ್ಗಾಂಭೀರ್ಯ, ಜರತಾರಿ ರುಮಾಲು ಎಲ್ಲ ನನ್ನ ನಾಲಿಗೆಯನ್ನೆ ಒಣಗಿಸಿದವು. ನನ್ನ ಹೆಸರು ಕೇಳಿದರು, ಮೆಲುದನಿಯಲ್ಲಿ ಹೇಳಿದೆ.

ಅವರು ಆ ಸಂದರ್ಭದಲ್ಲಿ ಸಹಜವಾಗಿ ಇಂಗ್ಲಿಷಿನಲ್ಲೆ ಮಾತನಾಡಿದರೂ ನನ್ನ ಸಂದರ್ಶನವನ್ನು ಕನ್ನಡದಲ್ಲೆ ನಿರೂಪಿಸುತ್ತೇನೆ.

"ನೀವು ಶ್ರೀ ಸ್ವಾಮಿರಾಯರ ಮಗ ಅಲ್ಲವೆ ?" ಎಂದರು.

"ಹೌದು ಸರ್" ಎಂದೆ.

"ನನಗೆ ಅವರು ಪರಿಚಿತರು. ನಿಮ್ಮ ಚಿಕ್ಕಪ್ಪ ನನಗೆ ಚೆನ್ನಾಗಿ ಗೊತ್ತು" ಎಂದರು. (ಆಗ ಸೆಂಟ್ರಲ್ ಕಾಲೇಜಿನಲ್ಲಿ ಭೂವಿಜ್ಞಾನದ ಪ್ರೊಫೆಸರಾಗಿದ್ದು ಹಲವು ವರ್ಷಗಳ ಕಾಲ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಸಮಿತಿಯಲ್ಲಿ ಅರಮನೆಯ ಪ್ರತಿನಿಧಿಗಳಾಗಿದ್ದು ೧೯೩೪-೩೫ರ ಸುಮಾರಿನಲ್ಲಿ ಕನ್ನಡದಲ್ಲಿ ವಿಜ್ಞಾನದ ವಿಷಯಗಳ ಮೇಲೆ ಭಾಷಣ ಮಾಡಿದ ಎಲ್. ರಾಮರಾಯರು ನನ್ನ ಚಿಕ್ಕಪ್ಪನವರು.)

ನಾನು ಸುಮ್ಮನಿದ್ದೆ.

"ಇಂಗ್ಲಿಷಿನಲ್ಲಿ ಚೆನ್ನಾಗಿ ಅಂಕ ಗಳಿಸಿದ್ದೀರಿ. ರಾಜ್ಯಕ್ಕೇ ಮೊದಲನೆಯ ಸ್ಥಾನ ಪಡೆದಿದ್ದೀರಿ. ಇಂಗ್ಲಿಷ್ ಆನರ್ಸ್ ತರಗತಿಯನ್ನು ಇಲ್ಲಿ ಈ ವರ್ಷ ಪ್ರಾರಂಭಿಸುತ್ತೇವೆ. ಸೇರಲು ಇಷ್ಟವಿದೆಯೆ ?" ಎಂದು ಕೇಳಿದರು. (ನಾನು ಇಂಗ್ಲಿಷ್ ಆನರ್ಸ್‌ಗೆ ಅರ್ಜಿ ಹಾಕಿರದಿದ್ದುದರಿಂದ ಈ ಪ್ರಶ್ನೆ.)

"ಸೇರುತ್ತೇನೆ" ಎಂದೆ.

"ಆನರ್ಸ್ ಮುಗಿಸಿ ಏನು ಮಾಡುತ್ತೀರಿ ?" ಎಂದು ಕೇಳಿದರು.

ಈ ಪ್ರಶ್ನೆಗೆ ಏನು ಉತ್ತರಿಸಬೇಕೆಂದು ಹೊಳೆಯಲಿಲ್ಲ. "ಯಾವುದಾದರೂ ಕೆಲಸ ಹುಡುಕಬೇಕು" ಎಂದೆ.

"ಆ ವಿಷಯವಲ್ಲ ನಾನು ಕೇಳಿದ್ದು. ಪಾಸ್ ಮಾಡುತ್ತೀರಿ. ಎಲ್ಲಿಯೋ ಕೆಲಸ ಸಿಕ್ಕುತ್ತದೆ. ಹೊಟ್ಟೆ ಪಾಡಾಗುತ್ತದೆ. ಆದರೆ ಇಂಗ್ಲಿಷ್‌ನಲ್ಲಿ ಕಲಿತದ್ದನ್ನು ಹೇಗೆ ಉಪಯೋಗಿಸುತ್ತೀರಿ ಎಂದು ಕೇಳಿದೆ. ನೀವು ಇಂಗ್ಲಿಷಿನಲ್ಲಿ ಬರೆದು ಬೇರೆ ದೇಶಗಳಲ್ಲೂ ಅದನ್ನು ಓದುವಂತಾದರೆ ಸಂತೋಷ. ಆದರೆ ನೀವು ಕಲಿತದ್ದನ್ನು ಕನ್ನಡ ಜನಕ್ಕೆ ತಿಳಿಸಿಕೊಡಿ. ನಿಮಗೆ ಕನ್ನಡದಲ್ಲೂ ಒಳ್ಳೆಯ ಅಂಕ ಬಂದಿದೆ. (ನೂರಕ್ಕೆ ಎಪ್ಪತ್ತು ಅಂಕ ಬಂದಿತ್ತು ಎಂದು ನನ್ನ ನೆನಪು.) ಕನ್ನಡದಲ್ಲಿ ಬರೆಯಿರಿ. ಯಾವ ಹಂತದಲ್ಲೆ ಆಗಲಿ ಬರೆದದ್ದು ಈಗ ನಮ್ಮ ಜನಕ್ಕೆ ಬೇಕು. ಜನಸಾಮಾನ್ಯಕ್ಕಾದರೂ ಬರೆಯಿರಿ. ಪ್ರೌಢವಾಗಿಯಾದರೂ ಬರೆಯಿರಿ, ಕನ್ನಡದಲ್ಲಿ ಕನ್ನಡಿಗರಿಗಾಗಿ ಬರೆಯಿರಿ" ಎಂದರು.

ನಮಸ್ಕರಿಸಿ ಹೊರಕ್ಕೆ ಬಂದೆ.

'ಶ್ರೀ'ಯವರು ಸೆಂಟ್ರಲ್ ಕಾಲೇಜಿನಲ್ಲಿ ಪಾಠ ಹೇಳಿದ್ದು ಅದೇ ಕೊನೆಯ ವರ್ಷ. ಅವರು ಕಡ್ಡಾಯ ಇಂಗ್ಲಿಷ್ ತರಗತಿಯಲ್ಲಿ ಮಿಲ್ಟನನ ನಾಟಕ 'ಸ್ಯಾಮ್ಸನ್ ಅಗನಿಸ್ಟಿಸ್' ಪಾಠ ಹೇಳುತ್ತಿದ್ದರು. ಇಂಗ್ಲಿಷ್ ಆನರ್ಸ್ ವಿದ್ಯಾರ್ಥಿಗಳಿಗೆ ಪ್ರಾಚೀನ ಗ್ರೀಕ್ ನಾಟಕಕಾರ ಈಸ್ಕಿಲಸನ 'ಅಗಮೆಮ್‌ನನ್', ಕಾಳಿದಾಸನ 'ಶಾಕುಂತಳಾ' ಪಾಠ ಹೇಳುತ್ತಿದ್ದರು. ಮಿಲ್ಟನ್ ಅವರ ನೆಚ್ಚಿನ ಕವಿಯಲ್ಲ ಎಂದು ಶ್ರೀ ವಿ. ಸೀ. ಹೇಳಿದ್ದನ್ನು ಕೇಳಿದ್ದೇನೆ. ಆದರೆ 'ಸ್ಯಾಮ್‌ಸನ್ ಅಗನಿಸ್ಟಿಸ್' ಅವರಿಗೆ ತುಂಬಾ ಹಿಡಿಸಿದ್ದಂತೆ ಕಂಡಿತು. ಈ ತರಗತಿಯಲ್ಲಿ ನಾವು ಸುಮಾರು ಒಂದು ನೂರು ಜನ ವಿದ್ಯಾರ್ಥಿ-ವಿದ್ಯಾರ್ಥಿನಿಯರು. ಎಳ್ಳುಕಾಳು ಬಿದ್ದರೆ ಕೇಳುವಷ್ಟು ನಿಶ್ಶಬ್ದವಾಗಿರುತ್ತಿತ್ತು. ಭಗವಂತ ಆರಿಸಿದ ಮಲ್ಲನಾಗಿ, ಸ್ತ್ರೀ ಸೌಂದರ್ಯಕ್ಕೆ ಮನಸೋತು ತನ್ನ ಶಕ್ತಿಯನ್ನೆಲ್ಲ ಕಳೆದುಕೊಂಡು ಪಶ್ಚಾತ್ತಾಪದಲ್ಲಿ ಬೇಯುವ ವೀರನ ಕರುಣಾಜನಕ ಸ್ಥಿತಿ ನಮ್ಮ ಮನಸ್ಸಿಗೆ ಮುಟ್ಟುವಂತೆ ಪಾಠ ಮಾಡಿದರು. ಅಲ್ಲಲ್ಲಿ ಮಿಲ್ಟನನ ಮನಸ್ಸಿನ ಸಂಕೋಚದತ್ತಲೂ ಗಮನ ಸೆಳೆದರು. ಸ್ಯಾಮ್‌ಸನ್ ತನ್ನ ಶತ್ರುಗಳನ್ನು 'the uncircumcised' ಎಂದು ತೆಗಳಿದಾಗ, 'The world has paid heavily for these foolish prejudices' ಎಂದರು. ನಾಟಕದ ಕಡೆಯ ಪಂಕ್ತಿ 'Calm of mind, all passion spent' ಎಂಬುದು ಅವರಿಗೆ ಪ್ರಿಯವಾಗಿತ್ತು ಎಂದು ಕಾಣುತ್ತದೆ, ಅದನ್ನು ಮತ್ತೆರಡು ಬಾರಿ ಓದಿದರು.

ಇಂಗ್ಲಿಷ್ ಆನರ್ಸ್ ವಿದ್ಯಾರ್ಥಿಗಳಿಗೇ – ನಾವು ಇದ್ದವರು ಆರು ಜನ – ಅವರು ಪಾಠ ಹೇಳಿದ್ದು ಇಷ್ಟು ಪರಿಣಾಮಕಾರಿಯಾಗಲಿಲ್ಲ ಎಂದು ನನ್ನ ನೆನಪು. ಆಗತಾನೆ ಇಂಟರ್‌ಮೀಡಿಯೆಟ್ ಮುಗಿಸಿ ಬಂದಿದ್ದ ನಮಗೆ ಅವರ ಚಿಂತನೆಯ ಮಟ್ಟಕ್ಕೆ ಏರಲು ಸಾಧ್ಯವಾಗಲಿಲ್ಲವೇನೊ ! ಅಲ್ಲದೆ 'ಅಗಮೆಮ್‌ನನ್' ಪುಸ್ತಕದ ಪ್ರತಿಯೇ ನಮ್ಮಲ್ಲಿ ಯಾರ ಬಳಿಯೂ ಇರಲಿಲ್ಲ. ಆ ವರ್ಷದ ಕ್ರಿಸ್‌ಮಸ್ ರಜದಲ್ಲಿ ಅವರು ನಿವೃತ್ತರಾದದ್ದರಿಂದ 'ಶಾಕುಂತಳಾ' ಮುಗಿಸಲಾಗಲಿಲ್ಲ. ಆದರೆ ಅವರು ಹೇಳಿದ ಕೆಲವು ಮಾತುಗಳು ನಮ್ಮ ಮನಸ್ಸಿನಲ್ಲಿ ನಿಂತವು. ಉದಾಹರಣೆಗೆ, "ದುಷ್ಟತನ ಒಳ್ಳೆಯತನ ಇವುಗಳಿಗೆ ಘರ್ಷಣೆಯಾಗಿ ಒಳ್ಳೆಯತನ ಸೋಲುವುದು ದುರಂತ (tragic) ; ಆದರೆ ಒಳ್ಳೆಯತನ–ಒಳ್ಳೆಯತನಗಳ ನಡುವೆಯೇ ಘರ್ಷಣೆಯಾಗಿ ಒಂದು ಸೋಲಲೇಬೇಕಾಗುವುದು ಇನ್ನೂ ದುರಂತ." ದುಷ್ಯಂತನನ್ನು ಮೋಹಿಸಿದ ಶಕುಂತಳೆ ಮೂರು ದಿನಗಳಲ್ಲಿ ಕೃಶಳಾಗಿದ್ದಳೆಂದು ಪ್ರಿಯಂವದೆ ಹೇಳುವುದು, ರಾಜನ 'ಕ್ಷಾಮಕ್ಷಾಮಕಪೋಲಮಾನನಪುರಃ' ಇತ್ಯಾದಿ ಮಾತುಗಳಿಗೆ ಬಂದಾಗ "This is why one goes again and again to Shakespeare" ಎಂದು ಹೇಳಿ, ಹೃದಯದಲ್ಲಿ ಆಗತಾನೆ ಪ್ರೇಮ ಅರಳುತ್ತಿರುವ ಹುಡುಗಿಯ

ಚಿತ್ರದಲ್ಲಿ ಷೇಕ್ಸ್‌ಪಿಯರನ ಸಹಜತೆ, ಕಾಳಿದಾಸನ ಸಂಪ್ರದಾಯ ವಿಧೇಯತೆಗಳನ್ನು ಸೂಕ್ಷ್ಮವಾಗಿ ನಿರ್ದೇಶಿಸಿದರು.

'ಶ್ರೀ'ಯವರನ್ನು ಕಂಡು ಭಯಮಿಶ್ರಿತ ಗೌರವದಿಂದ ನಾವು ದೂರವೇ ಉಳಿಯುತ್ತಿದ್ದೆವು. ಆದರೆ ಅನಿವಾರ್ಯವಾಗಿ ಅವರನ್ನು ಕಾಣಲು ಹೋದಾಗ ತುಂಬಾ ಆದರದಿಂದ ಅವರು ನಡೆಸಿಕೊಂಡ ನೆನಪು. 'ಅಗಮೆಮ್‌ನನ್' ಮೇಲೆ ಪ್ರಬಂಧ ಬರೆಯಲು ಹೇಳಿದರು. ಅವರು ಪ್ರಬಂಧಗಳನ್ನು ತಿದ್ದಿದನಂತರ ಅವರನ್ನು ಕಂಡು ಹಿಂದಕ್ಕೆ ತೆಗೆದುಕೊಳ್ಳಲು ಹೇಳಿದರು. ನನ್ನ ಪ್ರಬಂಧದ ಕೊನೆಯಲ್ಲಿ 'good' ಎಂದು ಬರೆದಿದ್ದರು. ಕೆಲವು ಅಭಿಪ್ರಾಯಗಳನ್ನು ಕುರಿತು, "ಇವಕ್ಕೆ ನಾಟಕದಲ್ಲಿ ಏನು ಸಮರ್ಥನೆ ಇದೆ ?" ಎಂದು ಕೇಳಿದರು. ಒಂದು ಕಡೆ ಈಸ್ಕಿಲಸ್ ಒಂದು ಸನ್ನಿವೇಶವನ್ನು ನಿರ್ವಹಿಸುವ ರೀತಿ 'ಕಮೆಂಡಬಲ್' ಎಂದು ಬರೆದಿದ್ದೆ. 'ಕಮೆಂಡಬಲ್ ? ಇದು ಇಲ್ಲಿ ಸರಿಯಾದ ಶಬ್ದವೆ ?" ಎಂದು ಕೇಳಿದರು. ಶಬ್ದ ಶಬ್ದವನ್ನೂ ಅವರು ಗಮನಿಸಿದ್ದರು. ಆ ಕಾಲದಲ್ಲಿ ಬಿ. ಎ. ಮತ್ತು ಆನರ್ಸ್ ತರಗತಿಗಳಲ್ಲಿ ಇಂಗ್ಲಿಷ್‌ಅನ್ನು ವಿಶೇಷವಾಗಿ ಅಭ್ಯಾಸ ಮಾಡುತ್ತಿದ್ದ ವಿದ್ಯಾರ್ಥಿಗಳಿಗಾಗಿ 'ಇಂಗ್ಲಿಷ್ ಸೆಮಿನಾರ್' ಎಂಬ ಸಂಘವಿತ್ತು. (ಅದಕ್ಕೆ 'ಶ್ರೀ'ಯವರೇ ಎರಡು ಧ್ಯೇಯವಾಕ್ಯಗಳನ್ನು ಸೂಚಿಸಿದ್ದರು : 'ಧಿಯೋ ಯೋ ನಃ ಪ್ರಚೋದಯಾತ್' ಮತ್ತು 'Lead, Kindly Light'); ಅವರೆಗೆ ಅದಕ್ಕೆ ಪ್ರೊಫೆಸರೇ ಅಧ್ಯಕ್ಷರು. ಆನರ್ಸ್ ಪ್ರಾರಂಭವಾದಾಗ 'ವಿದ್ಯಾರ್ಥಿಯೊಬ್ಬರು ಅಧ್ಯಕ್ಷರಾಗಲಿ' ಎಂದು ಶ್ರೀಕಂಠಯ್ಯನವರು ಹೇಳಿದರು. ನಾನು ಚುನಾಯಿತನಾದೆ. ಸೆಮಿನಾರಿನ ಕಾರ್ಯಕ್ರಮಗಳನ್ನು ನಿರ್ಧರಿಸಲು ಅವರ ಬಳಿ ಹೋಗಬೇಕಾಗುತ್ತಿತ್ತು. ಪ್ರಾರಂಭದಲ್ಲಿ ನನಗೆ ಅವರ ಬಳಿ ಹೋಗಬೇಕಾದರೆ ನಡುಕವೇ. ಆದರೆ ಎಂದೂ ವಿಶ್ವಾಸದಿಂದಲೇ ಕಂಡವರು. ವರ್ಷದ ಪ್ರಾರಂಭದಲ್ಲಿ ಕೆಲವರು ವಿಮರ್ಶಕರ ಪುಸ್ತಕಗಳನ್ನು ಸೂಚಿಸುತ್ತಿದ್ದರು. ಅನಂತರ ವಿಮರ್ಶಕರ ಹೆಸರು ಹೇಳುತ್ತಿದ್ದುದು ಕಡಮೆ. ಈಸ್ಕಿಲಸನನ್ನು ಕುರಿತು ಗಿಲ್ಬರ್ಟ್ ಮರೆ ಬರೆದ ಪುಸ್ತಕವನ್ನು ಹೊಗಳಿದ್ದರು. ಅದು ನನಗೆ ಎಲ್ಲಿಯೂ ಸಿಕ್ಕಲಿಲ್ಲ. ಹೆದರುತ್ತ ಹೆದರುತ್ತ ಹೋಗಿ ಅವರನ್ನು ಕೇಳಿದೆ. ತಮ್ಮ ಪ್ರತಿಯನ್ನು ಕೊಟ್ಟರು. ಅವರು ತರಗತಿಯಲ್ಲಿ ವ್ಯಕ್ತಪಡಿಸಿದ್ದ ಒಂದು ಅಭಿಪ್ರಾಯಕ್ಕೂ, ಮರೆ ಹೇಳಿದ್ದ ಅಭಿಪ್ರಾಯಕ್ಕೂ ವ್ಯತ್ಯಾಸವಿತ್ತು. ನಾನು ಪುಸ್ತಕವನ್ನು ಹಿಂದಕ್ಕೆ ಕೊಡಲು ಹೋದಾಗ "ಇದನ್ನು ಗಮನಿಸಿದಿರ ?" ಎಂದು ಕೇಳಿದರು. "ನಿಮ್ಮ ಅಭಿಪ್ರಾಯವೇನು ?" ಎಂದು ಕೇಳಿದರು. ನಾನು ಓದಲು ಇನ್ನೆರಡು ಪುಸ್ತಕಗಳನ್ನು ಸೂಚಿಸಿದರು.

೧೯೪೧ರ ಕ್ರಿಸ್‌ಮಸ್ ರಜದಲ್ಲಿ ಅವರು ನಿವೃತ್ತರಾದರು. ಎರಡು ತಿಂಗಳ ನಂತರ ಅವರನ್ನು ಇಂಗ್ಲಿಷ್ ಸೆಮಿನಾರ್ ಪರವಾಗಿ ಆಹ್ವಾನಿಸಲು ಅವರ ಮನೆಗೆ

ಹೋದೆ. ವರಾಂಡದಲ್ಲಿ ಓದುತ್ತ ಕುಳಿತಿದ್ದರು. ವಿಶ್ವಾಸದಿಂದ ಮಾತನಾಡಿಸಿದರು. ನಾನು 'ಅಗಮೆಮ್‌ನನ್' ಕುರಿತು ಬರೆದಿದ್ದ ಪ್ರಬಂಧವನ್ನು ನೆನೆಸಿಕೊಂಡರು. ಅವರ ಕೈಯಲ್ಲಿದ್ದ ಪುಸ್ತಕ ಕೋಲ್‌ರಿಜ್‌ನ 'ಬಯಗ್ರಾಫಿಯ ಲಿಟರೇರಿಯ.' "ಇದರಲ್ಲಿ ಕಾವ್ಯಭಾಷೆಯನ್ನು ಕುರಿತು ಕೋಲ್‌ರಿಜ್ ಹೇಳುವ ಅಭಿಪ್ರಾಯ ಓದಿದ್ದೀರ ?" ಎಂದರು. ಆಗ ನನಗೆ 'ಬಯಗ್ರಾಫಿಯ' ವಿಷಯ ಏನೂ ಗೊತ್ತಿರ ಲಿಲ್ಲ. ಕೋಲ್‌ರಿಜ್‌ನ ಅಭಿಪ್ರಾಯ ನಾಲ್ಕು ಮಾತು ಹೇಳಿ, "ಕನ್ನಡ ಬರಹಗಾರರು ಗಂಭೀರವಾಗಿ ಯೋಚಿಸಬೇಕಾದ ವಿಷಯ ಇದು. ಇನ್ನು ಹತ್ತಿಪ್ಪತ್ತು ವರ್ಷಗಳಲ್ಲಿ ನಾವು ಉತ್ತರಿಸಬೇಕಾದ ಪ್ರಶ್ನೆಗಳು ಹಲವಿವೆ ಇಲ್ಲಿ" ಎಂದರು.

ಅನಂತರ 'ಶ್ರೀ' ಅವರನ್ನು ನಾನು ಈಗೊಮ್ಮೆ ಆಗೊಮ್ಮೆ ಸಾರ್ವಜನಿಕ ಸಮಾರಂಭಗಳಲ್ಲಿ ಕಾಣುತ್ತಿದ್ದೆ. ಯಾವಾಗಲೂ ಪ್ರೀತಿಯಿಂದ ಮಾತನಾಡಿಸುತ್ತಿದ್ದರು. ೧೯೪೪ರ ಜನವರಿಯಲ್ಲಿ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ ಬೆಳ್ಳಿಯ ಹಬ್ಬ ನಡೆಯಿತು. ಡಿ. ವಿ. ಗುಂಡಪ್ಪನವರು ಅಧ್ಯಕ್ಷರು. ಬಿ. ಎಂ. ಶ್ರೀ. ಯವರೂ, ಮಾಸ್ತಿಯವರೂ ಬಂದಿದ್ದರು. ಅಂದು ನನಗೆ ಐದಾರು ಬಹುಮಾನ ಗಳೂ ಬಂದವು – ಒಂದು ಕನ್ನಡ ವಿಜ್ಞಾನ ಪ್ರಬಂಧ ಸ್ಪರ್ಧೆಯಲ್ಲಿ ಮೊದಲ ಬಹುಮಾನ. ಸಮಾರಂಭ ಮುಗಿದಾಗ ರಾತ್ರಿ ಪತ್ತು ಗಂಟೆ. ಬಿ. ಎಂ. ಶ್ರೀಯವರು ಹಿಂದಿನಿಂದ ಬಂದು ಬೆನ್ನಮೇಲೆ ಕೈ ಇಟ್ಟರು, "ವಿಜ್ಞಾನದ ಕಾಲೇಜಿನಲ್ಲಿ ವಿಜ್ಞಾನ ಪ್ರಬಂಧಕ್ಕೆ ಮೊದಲ ಬಹುಮಾನ ಗಿಟ್ಟಿಸಿದಿರಿ" ಎಂದು ಕೈ ಕುಲುಕಿದರು. ನಮ್ಮ ತಂದೆಯವರಿಗೆ ನನ್ನ ವಿಷಯದಲ್ಲಿ ಅಭಿಮಾನದ ಮಾತುಗಳನ್ನು ಹೇಳಿದರು.

೧೯೪೪ ರಲ್ಲಿ ಅವರು ಧಾರವಾಡದ ಒಂದು ಕಾಲೇಜಿಗೆ ಪ್ರಿನ್ಸಿಪಾಲರಾದರು. ಬೇಸಿಗೆ ರಜದಲ್ಲಿ ಒಮ್ಮೆ ಧಾರವಾಡಕ್ಕೆ ಹೋಗಿ ಬಂದಿದ್ದರು ಎಂದು ಕಾಣುತ್ತದೆ. ಒಂದು ದಿನ ಪ್ರೊ॥ ಎಸ್. ವಿ. ರಂಗಣ್ಣನವರು ನನಗೆ, "ಪ್ರೊಫೆಸರ್ ಶ್ರೀಕಂಠಯ್ಯ ನವರನ್ನು ನೀವು ಕಾಣಬೇಕೆಂದು ಅಪೇಕ್ಷಿಸುತ್ತಾರೆ" ಎಂದರು. 'ಶ್ರೀ'ಯವರನ್ನು ನೋಡಲು ಹೋದೆ. "ಪರೀಕ್ಷೆಯಲ್ಲಿ ಹೇಗೆ ಮಾಡಿದ್ದೀರಿ ?" ಎಂದು ಕೇಳಿದರು. ನನ್ನ ಮತ್ತು ನನ್ನ ಮೂವರು ಸಹಪಾಠಿಗಳ ರಿಜಿಸ್ಟರ್ ನಂಬರುಗಳನ್ನು ಕೇಳಿ ಗುರುತು ಹಾಕಿಕೊಂಡರು. "ತಾವೇನು ಬರೆಯುತ್ತಿದ್ದೀರಿ ?" ಎಂದು ಕೇಳಿದೆ. "ಬರೆಯಬೇಕೆಂದಿರುವುದು ನಾಲ್ಕಾರು. ಯಾವಾಗ ಆಗುತ್ತದೆಯೋ ನೋಡಬೇಕು" ಎಂದರು. "ಯೂರಿಪಿಡೀಸ್‌ನ 'ದ ಬ್ಯಾಕೆ' ಓದಿದ್ದೀರ ?" ಎಂದು ಕೇಳಿದರು. ನಾನು ಓದಿರಲಿಲ್ಲ. ನಾಟಕದ ವಿಷಯ ಕೆಲವು ಮಾತು ಹೇಳಿದರು. "ಅಂತಹದೊಂದು ನಾಟಕ ಬರೆಯುವ ಯೋಚನೆ ಎಂದಿನಿಂದಲೋ ಇದೆ" ಎಂದರು. "ಪಾಶ್ಚಾತ್ಯ ಮಹಾಕಾವ್ಯ, ನಮ್ಮ ಮಹಾಕಾವ್ಯ ಇವುಗಳನ್ನು ಹೋಲಿಸಿ ಯಾರಾದರೂ ಅಧ್ಯಯನ ಮಾಡಿ ಬರೆಯಬೇಕು" ಎಂದರು. "ಭಾರತದ ಯಾವ ವಿಶ್ವವಿದ್ಯಾನಿಲಯ

ದಲ್ಲೂ ಇಲ್ಲ. ನಮ್ಮಲ್ಲಿ ಮಾತ್ರ ಕಂಪಾರಟಿವ್ ಡ್ರಾಮ, ಇಂಗ್ಲಿಷ್ ಆನರ್ಸ್‌ನವರಿಗೆ ಒಂದು ಇಡೀ ಪೇಪರ್ ಇದೆ. ನಮ್ಮ ವಿದ್ಯಾರ್ಥಿಗಳು ತುಲನಾತ್ಮಕ ಅಧ್ಯಯನ ಮಾಡಿ ಬಲೆಯಬೇಕು" ಎಂದರು. "ನೀವು ಮುಂದೇನು ಮಾಡಬೇಕೆಂದಿದ್ದೀರಿ ?" ಎಂದರು. "ಏನೂ ನಿರ್ಧರಿಸಿಲ್ಲ, ಎಲ್ಲ ಪರೀಕ್ಷೆಯ ಫಲಿತಾಂಶವನ್ನು ಅವಲಂಬಿಸಿದೆ" ಎಂದು ಹೇಳಿದೆ. ಆ ಹೊತ್ತಿಗೆ ಅವರನ್ನು ಕಾಣಲು ಯಾರೋ ಬಂದರು. ನಾನು ನಮಸ್ಕರಿಸಿ ಹೊರಟೆ.

ಮುಂದೆ ಕೆಲವು ದಿನಗಳಿಗೆ ನಮ್ಮ ಪರೀಕ್ಷೆಯ ಫಲಿತಾಂಶ ಬಂತು. ಇಂಗ್ಲಿಷ್ ಆನರ್ಸ್‌ನಲ್ಲಿ ನಾನೊಬ್ಬನೇ ಪ್ರಥಮ ವಿಭಾಗದಲ್ಲಿ ಉತ್ತೀರ್ಣನಾಗಿದ್ದೆ. ಎಂ. ಎ. ಮಾಡಲು ಮೈಸೂರಿಗೆ ಹೋಗುವ ಸಿದ್ಧತೆಯಲ್ಲಿದ್ದೆ. ಒಂದು ದಿನ ಪ್ರೊಫೆಸರ್ ರಂಗಣ್ಣನವರು ನನಗೆ ಹೇಳಿ ಕಳುಹಿಸಿದರು. ಹೋಗಿ ನೋಡಿದಾಗ, "ಶ್ರೀಕಂಠಯ್ಯನವರು ಕಾಗದ ಬರೆದಿದ್ದಾರೆ. ನೀವು ಧಾರವಾಡಕ್ಕೆ ಉಪನ್ಯಾಸಕರಾಗಿ ಹೋಗುತ್ತೀರ ?" ಎಂದು ಕೇಳಿದರು. ನನಗೆ ಅಚ್ಚರಿಯಾಯಿತು. 'ಶ್ರೀ' ಅವರು ನಮ್ಮೆಲ್ಲರ ರಿಜಿಸ್ಟರ್ ನಂಬರುಗಳನ್ನು ಗುರುತು ಹಾಕಿಕೊಂಡಿದ್ದವರು. ಪತ್ರಿಕೆಯಲ್ಲಿ ಫಲಿತಾಂಶ ನೋಡಿದ್ದರು. ನನ್ನ ವಿಳಾಸ ಗೊತ್ತಿಲ್ಲದಿದ್ದುದರಿಂದ ರಂಗಣ್ಣನವರಿಗೆ ಪತ್ರ ಬರೆದಿದ್ದರು.

ನಾನು ಧಾರವಾಡಕ್ಕೆ ಹೋಗಲು ಮನೆಯಲ್ಲಿ ಒಪ್ಪಿಗೆ ದೊರೆಯಲಿಲ್ಲ. ಎಂ. ಎ. ಮಾಡಲು ಮೈಸೂರಿಗೆ ಹೋದೆ. ೧೯೪೬ರ ಜನವರಿಯಲ್ಲಿ 'ಶ್ರೀ' ಅವರು ತೀರಿಕೊಂಡರು.

ಪ್ರಥಮ ಆನರ್ಸ್‌ನಲ್ಲಿ ನಮಗೆ ಇಂಗ್ಲಿಷ್ ಸಾಹಿತ್ಯಪಾಠ ಹೇಳುತ್ತಿದ್ದವರು ಮುಖ್ಯವಾಗಿ ಮೂವರು – ಪ್ರೊ|| ಕೆ. ಅನಂತರಾಮಯ್ಯ, ಪ್ರೊ|| ಎಸ್. ವಿ. ರಂಗಣ್ಣ ಮತ್ತು ಪ್ರೊ|| ಶ್ರೀಕಂಠಯ್ಯ. ಅನಂತರಾಮಯ್ಯನವರ ಮತ್ತು ರಂಗಣ್ಣನವರ ವಿದ್ವತ್ತು ಅವರ ಕೃತಿಗಳನ್ನು ವಿಮರ್ಶಿಸುವ ರೀತಿಯಲ್ಲಿ ಪ್ರಕಟವಾಗುತ್ತಿತ್ತು. ಅವರು ಕೆಲವು ಪೀರಿಯಡ್‌ಗಳಲ್ಲಿ ಕೃತಿಯನ್ನು ವಿವರಿಸಿ ಹೇಳಿ, ಅನಂತರ ಕೃತಿಯ ಹೊರಗೆ ನಿಂತು ಕೃತಿಯನ್ನು ಚರ್ಚಿಸುತ್ತಿದ್ದರು. 'ಶ್ರೀ'ಯವರು ಒಮ್ಮೊಮ್ಮೆ ಹೀಗೆ ಮಾಡಿದಾಗ (ರವೀಂದ್ರನಾಥ ಠಾಕೂರರು **'the fall of Shakuntala'** ಎಂದು ಹೇಳಿದುದನ್ನು ಟೀಕಿಸಿದ್ದು ನನಗೆ ನೆನಪಿದೆ) ಅವರ ವಿದ್ವತ್ತು ಪ್ರಕಟವಾಗುತ್ತಿತ್ತು: ಆದರೆ ಒಟ್ಟಿನಲ್ಲಿ ಅವರ ರೀತಿ ಅದಲ್ಲ ; ನಾವು ಕೃತಿಯನ್ನು ಆಸ್ವಾದಿಸುವಂತೆ, ಅದರ ಕೇಂದ್ರ ಮನೋಧರ್ಮವನ್ನು ಅನುಭವಿಸುವಂತೆ ಮಾಡಲು ಪ್ರಯತ್ನಿಸುತ್ತಿದ್ದರು. ತರಗತಿಯ ಹೊರಗೆ ಅವರನ್ನು ಕಂಡಾಗ ಸಾಹಿತ್ಯ ಅವರ ಜೀವನದಲ್ಲಿ ಎಷ್ಟು ಮುಖ್ಯವಾದ ಭಾಗವಾಗಿ ಹೋಗಿತ್ತು, ಅದರ ಮೂಲಪ್ರಶ್ನೆಗಳನ್ನು ಕುರಿತು – ಕವಿ ಬಳಸುವ ಭಾಷೆ ಮತ್ತು ಜನತೆಯ ಭಾಷೆಯ ಸಂಬಂಧ, ಟ್ರ್ಯಾಜಡಿ ಎಂದರೇನು ? ಇತ್ಯಾದಿ – ಅವರು ಸ್ವತಂತ್ರವಾಗಿ ಎಷ್ಟರಮಟ್ಟಿಗೆ ರೂಪಿಸಿಕೊಂಡಿದ್ದರು ಎಂಬುದು

ಕಾಣುತ್ತಿತ್ತು. ಅವರ ಮನೆಯಲ್ಲಿ ಕೋಲ್‌ರಿಜ್‌ನ 'ಬಯಗ್ರಾಫಿಯಂ' ವಿಷಯ ಮಾತನಾಡುತ್ತ, "ನೋಡಿ ಕವಿ ಬಳಸುವ ಶಬ್ದಗಳಿಗೆ ಅವನು ತುಂಬುವ ಅರ್ಥ ಜನಸಾಮಾನ್ಯರು ಅವನ್ನು ಯಾವ ಅರ್ಥದಲ್ಲಿ ಸ್ವೀಕರಿಸುತ್ತಾರೊ ಅದಕ್ಕಿಂತ ತೀರ ಭಿನ್ನವಾಗಿರುವಂತಿಲ್ಲ, ದೂರವಾಗಿರುವಂತಿಲ್ಲ, ಆದರೆ ಅಷ್ಟಕ್ಕೆ ಸೀಮಿತವಾಗಿರುವಂತಿಲ್ಲ," ಎಂದು ಹೇಳಿ ಒಂದು ಜಾನಪದದ ಹಾಡಿನ ಕೆಲವು ಸಾಲುಗಳನ್ನು ಹೇಳಿ ವಿವರಿಸಿದ್ದು ನನಗೆ ನೆನಪಿದೆ.

# ನೆನಪಿನ ಸುರುಳಿಯಿಂದ

– ಎಸ್. ಎಂ. ಅಂಗಡಿ

೧೯೩೪ರಲ್ಲಿ ನಾನು ಬೆಳಗಾಂವಿಯ ಲಿಂಗರಾಜ ಕಾಲೇಜದಲ್ಲಿ ಇಂಟರ್ ಮೀಡಿಯೆಟ್ ಆರ್ಟ್ ಕ್ಲಾಸಿನ ವಿದ್ಯಾರ್ಥಿಯಾಗಿದ್ದೆ. ಆ ವರ್ಷ ಷೇಕ್ಸ್‌ಪಿಯರನ Twelveth Night ನಾಟಕ ಕಂಪಲ್ಸರಿ ಇಂಗ್ಲಿಷಿನ ಮೊದಲನೆ ಕೋರ್ಸಿಗೆ ಪಠ್ಯವಾಗಿತ್ತು. ಪ್ರೊ॥ ರಾಮಸ್ವಾಮಿ ಅಯ್ಯಂಗಾರರು ಅದನ್ನು ವರ್ಗದಲ್ಲಿ ಪ್ರತ್ಯಕ್ಷ ಅಭಿನಯಿಸುತ್ತ ಅತ್ಯುತ್ತಮವಾಗಿ ಕಲಿಸುತ್ತಿದ್ದರಲ್ಲದೆ ಸಂದರ್ಭ ಬಂದಾಗಲೆಲ್ಲ ಇತರ ನಾಟಕಗಳಿಂದ ಸ್ಮರಣೀಯ ಸಾಲುಗಳನ್ನು ಉದಾಹರಿಸುತ್ತಿದ್ದರು. ತತ್ಪರಿಣಾಮವಾಗಿ ಆ ಪೂರ್ತಿ ನಾಟಕ ಇಡಿಯ ವರ್ಗಕ್ಕೆ ಮುಖೋದ್ಗತವಾದಂತಾಗಿತ್ತು. ಅಲ್ಲದೆ ಕವಿಯ ವಿಷಯದಲ್ಲಿ ಪ್ರೇಮ, ಆಸ್ಥೆ, ಅಭಿರುಚಿ, ಅಭಿಮಾನ, ಗೌರವ, ಆತ್ಮೀಯತೆ ಅಂಕುರಿಸಿದ್ದವು. ಆಗ ಪುಣೆ, ಕೊಲ್ಹಾಪುರಗಳಲ್ಲಿ ಮೈಸೂರು ಮಹಾರಾಜಾ ಕಾಲೇಜದ ಪ್ರೊ॥ ಬಿ. ಎಂ. ಶ್ರೀಕಂಠಯ್ಯನವರು ಇತ್ತ ಉಪನ್ಯಾಸಗಳ ವರದಿ ಇಂಗ್ಲಿಷ್, ಮರಾಠಿ, ಕನ್ನಡ ಪೇಪರ್‌ಗಳಲ್ಲಿ ಬಂತು.

ಪುಣೆಯಲ್ಲಿ ಒಂದೇ ದಿನ ಫರ್ಗ್ಯುಸನ್, ಎಸ್. ಪಿ. ಹಾಗೂ ವಾಡಿಯಾ ಈ ಮೂರೂ ಕಾಲೇಜುಗಳಲ್ಲಿ ಕ್ರಮವಾಗಿ ಅವರ ಮೂರು ಉಪನ್ಯಾಸಗಳು ನಡೆದಿದ್ದವು. ಮೂರರಲ್ಲಿಯೂ ವಿಷಯ ಒಂದೆ: ಷೇಕ್ಸ್‌ಪಿಯರ್ ಕವಿ. ಶ್ರೋತೃವೃಂದವೂ ಮೂರು ಕಡೆ ಪ್ರಾಯಃಶಃ ಒಂದೆ. ಒಂದು ಉಪನ್ಯಾಸ ಮುಗಿದಾಕ್ಷಣ ಅಲ್ಲಿ ಕೇಳಿದವರೆ ಬೈಸಿಕಲ್, ಕಾರು, ಬಸ್ಸು, ವಾಹನ ಸಿಗದಿದ್ದರೆ ಓಡುತ್ತಲಾದರೂ ಇನ್ನೊಂದಕ್ಕೆ ಹಾಜರಾಗುತ್ತಿದ್ದರು. ಇಂತು ಕೇಳಿದಷ್ಟೂ ಪುನಃ ಕೇಳಬೇಕೆನ್ನುವ ಹಸಿವೆ, ಆತುರ. ವಿಷಯ ಒಂದೆಯಾದರೂ, ಹೇಳುವವರು ಒಬ್ಬರೇಯಾಗಿದ್ದರೂ, ಹೇಳುವ ರೀತಿ, ಶೈಲಿ, ಭಾಷೆಯ ಸೊಗಸು, ವಿವರಗಳ ವಿನ್ಯಾಸ ಬೇರೆ ಬೇರೆ. ಕೇಳುವವರ ಆನಂದಕ್ಕೆ ಕೊರತೆಯಾಗುವಂತಿಲ್ಲ. ಹೇಳುವವರಿಗೂ ಬೇಸರವೆನಿಸಲಿಲ್ಲ. ಆದ್ದರಿಂದ Times of India, Bombay Chronicle ಮೊದಲಾದ ಇಂಗ್ಲಿಷ್

ಪೇಪರ್‌ಗಳಲ್ಲಿ ಬಗೆ ಬಗೆಯಾಗಿ ಪ್ರಶಂಸಿಸಲಾಗಿತ್ತು. 'He came, he saw, he conquered ಎಂದು ಒಂದರಲ್ಲಿ ಹೊಗಳಿದ್ದರೆ, ಇನ್ನೊಂದರಲ್ಲಿ unprecedented, marvellous lectures ! No words to praise and appraise' ಎಂದು ಉದ್ಗರಿಸಲಾಗಿತ್ತು. ಆಶ್ಚರ್ಯವೆಂದರೆ ಸಹಸಾ ಕನ್ನಡದ ಏನನ್ನೂ ಪ್ರಶಂಸೆ ಮಾಡದ ಮರಾಠಿ ಪತ್ರಿಕೆಗಳೂ ಸಹ ಇಂಥ ಇಂಗ್ಲಿಷ್ ಉಪನ್ಯಾಸ ಹಿಂದೆಂದೂ ಕೇಳಿರಲಿಲ್ಲವೆಂದು ಹೊಗಳಿದ್ದವು.

ಕೊಲ್ಹಾಪುರದಲ್ಲಿ ರಾಜಾರಾಮ ಕಾಲೇಜದ ಪ್ರಿನ್ಸಿಪಾಲರಾಗಿದ್ದ ಡಾ॥ ಬಾಳಕೃಷ್ಣರ ಅಧ್ಯಕ್ಷತೆಯಲ್ಲಿ ಶ್ರೀಯವರ ಉಪನ್ಯಾಸವಾಯಿತು. ಅಲ್ಲಿಯೂ ವಿಷಯ ಕವಿ ಷೇಕ್ಸ್‌ಪಿಯರ್ ಎನ್ನುವದೆ. ಬಾಳಕೃಷ್ಣರು ಇಂಗ್ಲೆಂಡ್‌ದಲ್ಲಿ ಶಿಕ್ಷಣ ಪಡೆದ ಮೇಧಾವಿ, ಅರ್ಥಶಾಸ್ತ್ರದಲ್ಲಿ ಘನತೆವೆತ್ತ ಪರಿಣತರು. ಅಂತೆಯೇ ಹೆಸರಾದ ವಾಗ್ಮಿ, ಖ್ಯಾತ ಪ್ರಾಧ್ಯಾಪಕ, ಸಮರ್ಥ ಪ್ರಿನ್ಸಿಪಾಲರು. ಶ್ರೀಯವರ ಉಪನ್ಯಾಸವಾದ ನಂತರ ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ "ನಾನು ಇಂಗ್ಲೆಂಡ್ ಅಮೆರಿಕ ಮೊದಲಾದ ವಿದೇಶಗಳಲ್ಲಿ ಷೇಕ್ಸ್‌ಪಿಯರನ ಬಗೆಗೆ ಮಹಾನ್ ಮಹಾನ್ ಪಂಡಿತರ ಉಪನ್ಯಾಸಗಳನ್ನು ಕೇಳಿದ್ದೇನೆ. ಆದರೆ ಇದೀಗ ಕೇಳಿದ್ದು ಅಪರೂಪ ಭಾಷಣ, ಮೆಚ್ಚಿ ತಲೆದೂಗುವಂಥ ಭಾಷಣ. ಆ ವಿದೇಶೀಯರೆಲ್ಲ ಪ್ರಗಲ್ಭ ಪಂಡಿತರೇ ವಿನಹ ಪ್ರತಿಭಾನ್ವಿತರಲ್ಲ. ಇಂದಿನ ಪ್ರೊಫೆಸರರು ಜಗನ್ಮಾನ್ಯ ಕವಿಯ ಪ್ರತಿಭೆ. ಕೌಶಲ್ಯ, ಕವಿತ್ವ, ಅವನ ಅನುಭವದ ಆಳ, ವಿಸ್ತಾರಗಳನ್ನು ಪ್ರತ್ಯಕ್ಷ ಅರಗಿಸಿಕೊಂಡ, ಅನುಭವಿಸಿದ ಕವಿಯಾಗಿ ಮಾತನಾಡಿದರು. ಅವರು ಆಡಿದ ನುಡಿಗಳನ್ನು ಇನ್ನೆಲ್ಲಿಯೂ ಕೇಳಿಲ್ಲ. ನಿಜವಾಗಿ ನಾನಿಂದು ಧನ್ಯ ! ಇದೇ ಉಪನ್ಯಾಸವನ್ನು ಇಂಗ್ಲೆಂಡಿನಲ್ಲಿ ಮಾಡಿದ್ದರೆ ಅಲ್ಲಿಯ ಜನತೆ ಇವರನ್ನು ತಲೆಯ ಮೇಲೆ ಹೊತ್ತು ಕುಣಿಯುತ್ತಿದ್ದರು. ಮಾನ್ಯ ಪ್ರೊಫೆಸರರು ಅವಶ್ಯವಾಗಿ ಇಂಗ್ಲೆಂಡಿಗೆ ಹೋಗಿ ಬರಬೇಕೆಂದು ಸೂಚಿಸುತ್ತೇನೆ. ನನ್ನ ದೇಶಬಾಂಧವರೊಬ್ಬರು ಇಂಗ್ಲಿಷ್ ಕವಿಯ ಬಗ್ಗೆ ಇಂಗ್ಲಿಷರಿಗಿಂತಲೂ ಚೆನ್ನಾಗಿ ಮಾತನಾಡುತ್ತಾರೆಂದರೆ ಯಾವ ಭಾರತೀಯನಿಗೆ ಅಭಿಮಾನವೆನಿಸದು ?" ಎಂದು ಹೃದಯತುಂಬಿ ಹೊಗಳಿದರು. ಮರುದಿನ ಚಿತ್ರದುರ್ಗ ಬೋರ್ಡಿಂಗಿನಲ್ಲಿ ಕನ್ನಡದಲ್ಲಿ ಉಪನ್ಯಾಸವನ್ನು ಪ್ರೊ॥ ಕುಂದಣಗಾರರ ಅಧ್ಯಕ್ಷತೆಯಲ್ಲಿ ಏರ್ಪಡಿಸಲಾಗಿತ್ತು. ವಿಷಯ ಕನ್ನಡ ಸಾಹಿತ್ಯದ ವೈಶಿಷ್ಟ್ಯ. ಡಾ॥ ಬಾಳಕೃಷ್ಣರಿಗೆ ಕನ್ನಡ ಬರುವುದಿಲ್ಲೆಂದು ವಿದ್ಯಾರ್ಥಿಗಳು ಆಮಂತ್ರಣ ಕೊಟ್ಟಿರಲಿಲ್ಲ. ಆದರೂ ಸಮಯಕ್ಕೆ ಸರಿಯಾಗಿ ಅವರು ಆ ಭಾಷಣಕ್ಕೆ ಹಾಜರಾದರು. ಎಷ್ಟು ಜುಲುಮೆ ಮಾಡಿದರೂ ಅಧ್ಯಕ್ಷತೆಯನ್ನು ಸ್ವೀಕರಿಸದೆ ಸಾಮಾನ್ಯ ಶ್ರೋತೃವಿನಂತೆ ಕುಳಿತು ಕೇಳಿದರು. ಕಾರ್ಯಕ್ರಮದ ಕೊನೆಗೆ ಆಭಾರ ಮನ್ನಿಸಲಿಕ್ಕಿದ್ದ ವಿದ್ಯಾರ್ಥಿಯನ್ನು ತಡೆದು ತಾವೇ ಎದ್ದು ಆಭಾರ ಪ್ರದರ್ಶನ ಮಾಡುತ್ತ ಇಂತು ಹೇಳಿದರು.

“ನನಗೆ ಕನ್ನಡ ಒಂದು ಶಬ್ದ ಸಹ ತಿಳಿಯುವುದಿಲ್ಲ. ಆದರೂ ಹೇಳುವ ರೀತಿ, ಅವರ ಹಾವಭಾವದಿಂದ ಭಾಷಣದ ಸಾರವನ್ನು ಗ್ರಹಿಸಿದೆ. ನಿನ್ನೆ ಇಂಗ್ಲಿಷ್‌ದಲ್ಲಿ ಅಷ್ಟೊಂದು ಸೊಗಸಾಗಿ, ಅಪೂರ್ವ ಪ್ರತಿಭೆಯಿಂದ ಮಾತನಾಡಿದ ಮಾನ್ಯರು ಕನ್ನಡದಲ್ಲಿ ಎಂತು ಆಡುತ್ತಾರೆ, ಎಷ್ಟು ಸಲ ಇಂಗ್ಲಿಷ್ ನುಡಿಗಳನ್ನು ಬೆರಸುತ್ತಾರೆ ಎಂಬುದನ್ನು ನೋಡಬೇಕೆಂದೇ ಬಂದಿದ್ದೆ. ಆದರೆ ಇಂಗ್ಲಿಷಿನ ಒಂದೂ ಪದವನ್ನು ಬಳಸದೆ ನಿನ್ನಿನಷ್ಟೇ ಅಸ್ಖಲಿತವಾದ ಸುಂದರವಾದ ಭಾಷಣವನ್ನು ಕೇಳಿದೆ, ಮೆಚ್ಚಿದೆ. ಅವರು ಎರಡರೊಳಗೆ ಯಾವ ಭಾಷೆಯಲ್ಲಿ ಹೆಚ್ಚು ಚೆನ್ನಾಗಿ ಮಾತನಾಡುತ್ತಾರೆ ಎಂದು ನಿರ್ಧರಿಸುವುದೇ ಅಶಕ್ಯ. ನಿನ್ನೆ ಮತ್ತು ಇಂದು ಎರಡೂ ಭಾಷಣಗಳನ್ನು ಕೇಳಿದವರು ಮಂತ್ರಮುಗ್ಧರಾಗಿದ್ದರು. ಇಂಥ ಮೇಧಾವಿಗಳನ್ನು ಪಡೆದ ಕರ್ನಾಟಕ ಮಾತ್ರವಲ್ಲ, ಒಟ್ಟು ಭಾರತ ದೇಶವೇ ಧನ್ಯ” ಎಂದು ಉದ್ಗರಿಸಿದರು.

ಈ ವಾರ್ತೆಯನ್ನೆಲ್ಲ ತಿಳಿದು ಬಿ. ಎಂ. ಶ್ರೀಯವರನ್ನು ಬೆಳಗಾಂವಿಯಲ್ಲಿ ಇಳಿಸಿಕೊಳ್ಳುತ್ತಾರೊ ಇಲ್ಲವೊ. ಅವರನ್ನು ಹಾಗೇ ನೋಡಲಿಕ್ಕಾದರೂ ಅವಕಾಶ ಸಿಕ್ಕುತ್ತದೋ ಇಲ್ಲವೊ ಎಂದು ಚಿಂತಿಸುತ್ತಿದ್ದೆವು. ಆದರೆ ನಮ್ಮ ಕಾಲೇಜದಲ್ಲಿ ಷೇಕ್ಸ್‌ಪಿಯರನ ಮೇಲೆ ಇಂಗ್ಲಿಷ್‌ದಲ್ಲಿ ಮತ್ತು ಕ್ರೀಡಾಭವನದಲ್ಲಿ ಕನ್ನಡದಲ್ಲಿ ಹೀಗೆ ಅವರ ಎರಡು ವ್ಯಾಖ್ಯಾನಗಳನ್ನು ಏರ್ಪಡಿಸಲಾದ ಸಂಗತಿ ಗೊತ್ತಾದಾಗ ನಮ್ಮ ಆನಂದಕ್ಕೆ ಮಿತಿಯೆ ಇರಲಿಲ್ಲ. ನಾನು ಅಂದು ಉಪನ್ಯಾಸ ಆರಂಭವಾಗುವದಕ್ಕಿಂತ ಒಂದು ಗಂಟೆ ಮುಂಚಿತವೇ ಹೋಗಿ ಪ್ರಥಮ ಸಾಲಿನ ಡೆಸ್ಕ್ ಹಿಡಿದು ಕುಳಿತು ಚಾತಕಪಕ್ಷಿಯಂತೆ ಕಾಯುತ್ತಿದ್ದೆ. ನಗರದ ಗಣ್ಯ ಕನ್ನಡ ಕಾರ್ಯಕರ್ತರೊಡನೆ ಶ್ರೀ ಅವರು ಬಂದರು. ಅವರನ್ನು ನಾನು ಕಂಡದ್ದು ಅದೇ ಪ್ರಥಮ ಸಲ.

ಪ್ರಿನ್ಸಿಪಾಲ ಸಂದಿಮಂಠರು, ಇತರ ಪ್ರೊಫೆಸರರು, ಹಾಗೂ ಕನ್ನಡದ ಕಾರ್ಯಕರ್ತರೊಡನೆ ಶ್ರೀಯವರು ಸಭಾಮಂದಿರವನ್ನು ಪ್ರವೇಶಿಸಿದಾಕ್ಷಣ ಸಭಿಕರೆದ್ದು ಗೌರವ ಸೂಚಿಸಿದರು. ಸಂದಿಮಂಠರು ಅವರನ್ನು ಪರಿಚಯಿಸುತ್ತ – ಶ್ರೀಯವರು ಮೈಸೂರು ಮಹಾರಾಜಾ ಕಾಲೇಜಿನ ಗಣ್ಯ ಪ್ರೊಫೆಸರರು, ಖ್ಯಾತ ವಾಗ್ಮಿಗಳು, ಶ್ರೇಷ್ಠ ಕನ್ನಡಿಗರು. ಅವರನ್ನು ನಮ್ಮ ಮಧ್ಯದಲ್ಲಿಂದು ಬರಮಾಡಿಕೊಳ್ಳಲಿಕ್ಕೆ ನನಗೆ ತುಂಬಾ ಸಂತೋಷವಾಗುತ್ತದೆ ಇತ್ಯಾದಿ ಎರಡೇ ನುಡಿಯಲ್ಲಿ ಮುಗಿಸಿದರು. ಶ್ರೀಯವರು ಬಂದಾಕ್ಷಣ ಪ್ರೊ॥ ಬಸವನಾಳರು ಅದೇ ಮುದ್ರಿಸಿ ಪ್ರಕಟವಾದ 'ಚೆನ್ನಬಸವ ಪುರಾಣ'ದ ಪರಿಷ್ಕೃತ ಆವೃತ್ತಿಯನ್ನು ಅವರಿಗೆ ಕೊಟ್ಟಿದ್ದರು. ಅದನ್ನು ಕಂಡು ಆನಂದಿತರಾಗಿ ಭಾಷಣದ ಆರಂಭದಲ್ಲಿಯೆ ಆ ಗ್ರಂಥವನ್ನು ಭಕ್ತಿಯಿಂದ ಕಣ್ಣಿಗೆ ಒತ್ತಿಕೊಂಡು ನಮಿಸಿ ಇತರ ಕನ್ನಡ ಕಾವ್ಯಗಳೆಲ್ಲ ಇಷ್ಟೇ ಪಾಂಡಿತ್ಯಪೂರ್ಣವಾಗಿ ಪರಿಷ್ಕೃತಗೊಳ್ಳಬೇಕು, ಇಂತು ಸೊಗಸಾಗಿ ಪ್ರಕಟವಾಗಬೇಕು ಎಂದಾಶಿಸಿ

ಸಂಪಾದನೆ ಮಾಡಿದ ಪ್ರೊ॥ ಬಸವನಾಳರ ಪಾಂಡಿತ್ಯಕ್ಕೆ, ಅರ್ಪಣ ಭಾವಕ್ಕೆ ಕೃತಜ್ಞತೆಯನ್ನು ಸೂಚಿಸಿ ಮುಖ್ಯ ವ್ಯಾಖ್ಯಾನವನ್ನು ಆರಂಭಿಸಿದರು. ಷೇಕ್ಸ್ಪಿಯರ್ ಕವಿಗಿದ್ದ ಮಾನವ ಸ್ವಭಾವದ ಅನಂತ ಪರಿಚಯ ಅದ್ಭುತವಾದುದು ಹಾಗೂ ಅಚ್ಚರಿಪಡುವಂಥದು. ಅದನ್ನಾತ ಜನತೆಯ ನಡೆನುಡಿಯಿಂದ ಎಂತು ಗ್ರಹಿಸಿದ ಎಂಬುದನ್ನು ತಿಳಿಸಿ ಐತಿಹಾಸಿಕ ನಾಟಕಗಳನ್ನೆತ್ತಿಕೊಂಡು ಅಲ್ಲಿ ಒಡಮೂಡಿದ ಕವಿಯ ಸ್ವದೇಶಾಭಿಮಾನವನ್ನು ರಾಜನೀತಿಯನ್ನು ವಿವರಿಸುತ್ತಾ King John ನಾಟಕದೊಳಗಿನ ಕೆಳಗಿನ ಸಾಲುಗಳನ್ನು ಉದ್ಧರಿಸಿದರು :

"This England never did, nor never shall,
Lie at the proud foot of a conquerer,
But when it first did help to wound itself:
Now these her princes are come home again,
Come the three corners of the world in arms,
And we shall shock them,
Nought shall make us rue
If England to itself do rest but true."

ನಂತರ ಆತನ ಕಾಮೆಡಿಗಳನ್ನು ವಿವೇಚಿಸುತ್ತ ಪ್ರಮುಖ ನಾಟಕಗಳಿಂದ ವಿಶೇಷವಾಗಿ Merchant of Venice, Much Ado, As you like it ಹಾಗೂ Twelveth Night ನಾಟಕಗಳಿಂದ ಸಮೃದ್ಧವಾಗಿ ಸಾಲುಗಳನ್ನು ಉದ್ಧರಿಸುತ್ತ ಕವಿಯ ದೈವದತ್ತವಾದ ಕಾವ್ಯ ಪ್ರತಿಭೆಯನ್ನು, ನಾಟ್ಯ ಕೌಶಲ್ಯವನ್ನು, ಪಾತ್ರ ಪೋಷಣೆಯ ವೈವಿಧ್ಯವನ್ನು ಕೊಂಡಾಡಿದರು. ಆಗ ಕೂಡಲೆ ಕನ್ನಡದಲ್ಲಿ ಮಾಡಬೇಕಾದ ಇನ್ನೊಂದು ಭಾಷಣದ ನೆನಪಾಗಿ, ಅಷ್ಟೊತ್ತಿಗೆ ಒಂದು ಗಂಟೆ ಮೂವತ್ತೈದು ನಿಮಿಷ ಕ್ರಮಿಸಿದ್ದರಿಂದ, ಅಚ್ಚ ಪ್ರಾಯದ ಯುವಕರಾದ ನಿಮಗೆ ಟ್ರ್ಯಾಜಿಡಿಯ ಕಣ್ಣೀರಿನ ಪರಿಚಯ ಮಾಡುವುದು ಬೇಡವೆಂದು ಹೇಳಿ ಮುಗಿಸಿದರು. ನಂದಿಮಠರು ಆಭಾರ ಪ್ರದರ್ಶನ ಮಾಡಲಿಕ್ಕೆ ಪ್ರೊ॥ ರಾಮಸ್ವಾಮಿಯವರಿಗೆ ಕಣ್ಸನ್ನೆ ಮಾಡಿ ಸೂಚಿಸಿದರು. ಅವರು ಧೈರ್ಯ ಮಾಡಲಿಲ್ಲ. ಶ್ರೀಯವರ ವಾಗ್ಝರಿಯಿಂದ ಅಷ್ಟೊಂದು ಮಂತ್ರಮುಗ್ಧರಾಗಿದ್ದರು. ನಂದಿಮಠರೆ ನಾಲ್ಕು ನುಡಿ ಹೇಳಿ ಮುಗಿಸಿದರು. ಈ ಭಾಷಣ ವೈಯಕ್ತಿಕವಾಗಿ ನನ್ನಲ್ಲಿ ಷೇಕ್ಸ್ಪಿಯರನ ಬಗೆಗೆ ಎಲ್ಲಿಲ್ಲದ ಭಕ್ತಿಯನ್ನು ಬೆಳೆಸಿತು. ಆತನ ಅಷ್ಟೂ ನಾಟಕಗಳನ್ನು ಓದದಿದ್ದರೆ ಇಂಗ್ಲಿಷ್ ಕಲಿತುದು ಸಾರ್ಥಕವಾಗದು ಎಂದೆನ್ನುವ ನಿರ್ಧಾರಕ್ಕೆ ಬಂದೆ. ಬಿ. ಎ. ಪಾಸಾಗುವದರೊಳಗಾಗಿ ಅವನ ಇಪ್ಪತ್ತಾರು ನಾಟಕಗಳನ್ನು ಕೊಂಡು ಓದಿದೆ, ಇಂದಿಗೂ ಓದುತ್ತೇನೆ. ಅಂದು ಹುಟ್ಟಿದ ಪೂಜ್ಯಭಾವ ಇಂದಿಗೂ ಹಚ್ಚ ಹಸಿರಾಗಿದೆ.

ಆ ನಂತರ ಜಮಖಂಡಿ ಸಾಹಿತ್ಯ ಸಮ್ಮೇಲನದಲ್ಲಿ ಅವರನ್ನು ಎರಡನೆ ಸಲ ಕಂಡೆ (೧೯೩೮). ಮಾನ್ಯ ಡಿ. ವಿ. ಗುಂಡಪ್ಪನವರು ನಿವೃತ್ತರಾಗಿ ಶ್ರೀಯುವರು ಪರಿಷತ್ತಿನ ಉಪಾಧ್ಯಕ್ಷರೆಂದು ಆಯ್ಕೆಯಾಗಿದ್ದರು. ನಾನು ಹಾಜರಾದುದು ಅದೇ ಪ್ರಥಮ ಸಾಹಿತ್ಯ ಸಮ್ಮೇಲನ. ಕೊನೆಯದಿನ ಒಂದೊಂದು ಭಾಗದಿಂದ ಒಬ್ಬೊಬ್ಬರು ಆಭಾರ ಪ್ರದರ್ಶನ ಮಾಡುವ ಪರಿಪಾಠವನ್ನು ನಿಲ್ಲಿಸಿ ಸರ್ವರ ಪರವಾಗಿ ಶ್ರೀಯುವರೊಬ್ಬರೆ ಕೃತಜ್ಞತೆಯನ್ನು ಸೂಚಿಸಿದರು. ಅವರ ತುಂಬಿದ ಮುಖ, ಮುಖಕ್ಕೊಪ್ಪುವ ಅಂಗಸೌಷ್ಠವ, ಎರಡಕ್ಕೂ ಭೂಷಣವಾದ ಜರತಾರಿ ರುಮಾಲದ ಕಟ್ಟು, ರೋಮರೋಮದಿಂದ ಸೂಸುತ್ತಿದ್ದ ಕನ್ನಡ ಅಭಿಮಾನಕ್ಕೆ ಸಾಕ್ಷಿಯಾಗಿ ಸಂತಸವನ್ನು ಸೂಚಿಸುತ್ತಾ ಮುಖದ ತುಂಬ ಮಿನುಗುತ್ತಿದ್ದ ನಗೆಯನ್ನು ಕಂಡು, ನುಡಿಯನ್ನು ಕೇಳಿ ನನಗಿದ್ದ ಪೂಜ್ಯಭಾವ ಇಮ್ಮಡಿಗೊಂಡಿತು.

ಆಮೇಲೆ ಮೂರನೆ ಸಲ ಬೆಳಗಾಂವಿಯ ಸಾಹಿತ್ಯ ಸಮ್ಮೇಲನದಲ್ಲಿ ಕಂಡೆ (೧೯೩೯). ಅಕ್ಕನ ಬಳಗವನ್ನು ಪ್ರಥಮ ಸಲ ಸ್ಥಾಪಿಸಿದ ಶಹಾಪುರದ ಬಳ್ಳೂರ ಶಾಂತ ವೀರಮ್ಮನವರು ಮಾತಾಡುವ ಸಂದರ್ಭದಲ್ಲಿ ಶ್ರೀಯುವರನ್ನು ಕಂಡಾಗ ಸಾಕ್ಷಾತ್ ಬಸವಣ್ಣನವರನ್ನು ನೋಡಿದಂತಾಯಿತು ಎಂದು ಅವರನ್ನು ಸ್ತುತಿಸಿದರು. ನಂತರ ಶ್ರೀಯುವರು ಮಾತನಾಡುವಾಗ ಆ ತಾಯಿಗೆ ಕೃತಜ್ಞತೆಯನ್ನು ಸಲ್ಲಿಸುತ್ತಾ ತಾವು ಬಸವಣ್ಣನವರ ಬಾಲ, ಸರಸ್ವತಿಯ ಗುಡಿಯಲ್ಲಿ ಕಸಗೂಡಿಸುವವ; ತಾಯಿ ವಾತ್ಸಲ್ಯ ದಿಂದ ನೀಡಿದ ದೊಡ್ಡ ಗೌರವಕ್ಕೆ ಪಾತ್ರನಲ್ಲ ಎಂದು ಹೇಳಿದ ಸೌಜನ್ಯ ಅವರದೆ. ಇನ್ನಾರಲ್ಲಿಯೂ ಅಂಥದು ಸಿಗುತ್ತಿರಲಿಲ್ಲ.

ಆಗ ನಾನು ಲಿಂಗರಾಜ ಕಾಲೇಜಿನ ಕರ್ನಾಟಕ ಸಂಘದ ಕಾರ್ಯದರ್ಶಿ ಆಗಿದ್ದೆ. ಸಮ್ಮೇಲನ ಮುಗಿದ ಮರುದಿನ ಷೇಕ್ಸ್‌ಪಿಯರನ ಬಗೆಗೆ ಭಾಷಣ ಮಾಡಬೇಕೆಂದು ಕೇಳಿಕೊಂಡೆ. ಸಮ್ಮೇಲನದ ಮೂರು ದಿನದ ಒತ್ತಡದಿಂದ ಅವರ ಧ್ವನಿ ಬಿದ್ದಿತ್ತು. ಆ ಕಾರಣ ಸಾಧ್ಯವಿಲ್ಲೆಂದು ಸೂಚಿಸಿದರು. ಆಗಲೂ ನನ್ನ ಹೆಗಲಮೇಲೆ ಕೈಹಾಕಿ ನನ್ನ ಉತ್ಸಾಹವನ್ನು ಭಂಗಗೊಳಿಸದಂತೆ, ಇನ್ನೊಮ್ಮೆ ಅವಶ್ಯ ಬರುವೆನೆಂದು ತಿಳಿಸಿದರು. ಆದರೆ ಅವರು ತೋರಿಸಿದ ಸೌಜನ್ಯಕ್ಕೆ ಆತ್ಮೀಯತೆಗೆ ನಾನು ಮಾರುಹೋದೆ.

೧೯೪೪ರ ಡಿಸೆಂಬರದಲ್ಲಿ ೨೮ನೆ ಸಾಹಿತ್ಯ ಸಮ್ಮೇಲನ ರಬಕವಿಯಲ್ಲಿ ನಡೆಯಲಿತ್ತು. ಅಲ್ಲಿ ನಾನು ಸಾಂಗ್ಲಿ ಸಂಸ್ಥಾನದ ಹೈಸ್ಕೂಲಿನ ಹೆಡ್‌ಮಾಸ್ತರ ನಾಗಿದ್ದೆ. ಪೂರ್ವಭಾವಿಯಾದ ಪ್ರಚಾರ ಕಾರ್ಯವನ್ನು ನಡೆಯಿಸಿದ್ದೆವು. ಪ್ರಮುಖ ಕಾರ್ಯಕರ್ತರಲ್ಲಿ ನಾನೂ ಒಬ್ಬನಾಗಿದ್ದೆ. ಆಗಸ್ಟ ತಿಂಗಳಲ್ಲಿ ಶ್ರೀಯುವರು ಸಾಂಗ್ಲಿ ಕಾಲೇಜದಲ್ಲಿ ಉಪನ್ಯಾಸವೀಯಲಿದ್ದಾರೆಂದು ತಿಳಿದಾಕ್ಷಣ ನಾನೂ ಹೋದೆ. ಅಲ್ಲಿ ಕರ್ನಾಟಕ ಸಂಘದ ಭಾಷಣವೂ ಸಹ ಇಂಗ್ಲಿಷದಲ್ಲಿಯೆ ನಡೆಯುವ ರೂಢಿ. ಆ ಪ್ರಕಾರ ಸಂಘದ ಭಾಷಣಮಾಡಿ ಡಿಬೇಟಿಂಗ್ ಯೂನಿಯನ್ನದ ಪರವಾಗಿ

'Shakespeare as a Statesman' ಅಂತಾ ಮಾತಾಡಿದರು. ಅಂದೇ ಸಾಯಂಕಾಲ ಸಾಂಗ್ಲಿಯ ಜಿಮ್‌ಖಾನಾ ಕ್ಲಬ್ಬಿನಲ್ಲಿ 'Hymns from the Upanishat' ಎನ್ನುವ ಉಪನ್ಯಾಸವಿತ್ತರು.

"ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂಗಮಯ"

ಎಂಬೀ ಮಂತ್ರಗಳನ್ನೆತ್ತಿಕೊಂಡು ಒಂದು ಗಂಟೆ ನಲವತ್ತೈದು ನಿಮಿಷಗಳವರೆಗೆ ಅಸ್ಖಲಿತವಾದ, ಅಮೋಘವಾದ ಉಪನ್ಯಾಸವಿತ್ತರು. ಕೊನೆಯಲ್ಲಿ ಉಪನಿಷತ್ತಿನ ಋಷಿಗಳನ್ನು ನೆನೆದಾಗ ರಸಋಷಿ ವರ್ಡ್ಸ್‌ವರ್ಥ್‌ನಂಥ ಕವಿ ನನ್ನ ಸ್ಮರಣೆಗೆ ಬರುತ್ತಾನೆಂದು ತಿಳಿಸಿ ಅವನ ಕೆಳಗಿನ ಚರಣಗಳನ್ನು ಉದ್ಧರಿಸಿ ಕುಳಿತರು :

"And I have felt
A Presence that disturbs me with the joy
Of elevated thoughts ; a sense sublime
Of something far more deeply interfused,
Whose dwelling is the light of setting suns
And the round ocean, and the living air,
And the blue sky, and in the mind of man :
A motion and a spirit, that impels
All thinking things, all objects of all thought,
And rolls through all things."

ಆಗ ಒಬ್ಬ ವಯೋವೃದ್ಧರು ಆದರೆ ಪ್ರಗಲ್ಭ ಸಂಸ್ಕೃತ ಪಂಡಿತರು ಆಭಾರ ಮನ್ನಿಸಲೆದ್ದರು. ಅವರ ಮೊದಲ ವಾಕ್ಯ : "At the outset I must express my Colossal ignorance. I am now seventyfive. I was all along under the false impression that except at Poona there was no Sanskrit scholarship and much less down Miraj. But before today's speaker I am a child and must learn Sanskrit at his feet"' ಎಂದು ಹೇಳುವಾಗ ಅವರ ಕಣ್ಣಲ್ಲಿ ಹನಿ ಮಿನುಗುತ್ತಿತ್ತು. ನಾನಾ ಬಗೆಯಲ್ಲಿ ಉಪನ್ಯಾಸದ ಘನತೆಯನ್ನು ಹೊಗಳಿದರು. ಆದರೆ ನಮ್ಮ ರಾಜಾಸಾಹೇಬರು ಹಾಜರಿಲ್ಲ. ಅದೇ ಒಂದು ಹಳಹಳಿಯುಳಿಯಿತು. ಅವರಿದ್ದರೆ ಎಲ್ಲರಿಗಿಂತ ಮಿಗಿಲಾಗಿ ಆನಂದಿಸುತ್ತಿದ್ದರು ಎಂದು ತಿಳಿಸಿ ಕೊನೆಗೊಳಿಸಿದರು.

ಮಧ್ಯೆ ಪ್ರೊ॥ ಮುಗಳಿಯವರ ಮನೆಯಲ್ಲಿ ಶ್ರೀಯವರೊಡನೆ ಮಾತಾಡಲು ಒಂದು ಗಂಟೆ ದೊರೆತಿತ್ತು. ಆಗ ರಬಕವಿಗೆ ಬರಬೇಕೆಂದು ಆಮಂತ್ರಣವಿತ್ತೆ. ಹೃದಯ ಅಶಕ್ತವಾಗಿದೆ, ಕಾರಿನಲ್ಲಿ ಕರೆದೊಯ್ಯುವಂತಿದ್ದರೆ ಅವಶ್ಯ ಬರುತ್ತೇನೆ. ಅದರ ವ್ಯವಸ್ಥೆ ಮಾಡಿ ಬರೆಯಬೇಕೆಂದು ಸೂಚಿಸಿದರು. ನಿಜವಾಗಿ ನನಗೊಂದು ಭಾಗ್ಯವೆ ದೊರೆತಂತಾಯಿತು. ಆದರೆ ಎಲ್ಲಿಂದ ಕಾರು ತರಬೇಕು ? ಹೈಸ್ಕೂಲ್ ಹೆಡ್‌ಮಾಸ್ತರನಾಗಿದ್ದರೂ ನನ್ನ ಸಂಬಳ ನಲವತ್ತು ರೂಪಾಯಿ ಮಾತ್ರವಿತ್ತು. ಏನೇನೋ ಪ್ರಯತ್ನ ಮಾಡಿದೆ. ಕೊನೆಗೆ ನನ್ನ ಸ್ನೇಹಿತರಾದ ಶ್ರೀ ಅರಬಳ್ಳಿ ತಿಪ್ಪಣ್ಣಪ್ಪನವರು ತಮ್ಮ ಕಾರು ಕೊಡಲು ಒಪ್ಪಿದರು. ಅವರು ವರ್ತಕರು, ರಬಕವಿಯಲ್ಲಲ್ಲದೆ ಮಹಾಲಿಂಗಪುರ ಮತ್ತು ಹುಲ್ಯಾಳ ಎನ್ನುವ ಎರಡು ಗ್ರಾಮಗಳಲ್ಲಿಯೂ ಸೀರೆಯ ಅಂಗಡಿಗಳನ್ನು ನಡೆಸಿದ್ದರು. ಅಲ್ಲಿ ಹೋಗಿ ಬರಲಿಕ್ಕೆಂದು ಒಂದು ಚಿಕ್ಕ ಹಳೆಯ ಕಾರು ಇಟ್ಟುಕೊಂಡಿದ್ದರು. ತಾವೇ ಸ್ವತಃ ಡ್ರೈವಿಂಗ್ ಮಾಡುತ್ತಿದ್ದರು. ಡ್ರೈವರನನ್ನು ಇಟ್ಟಿರಲಿಲ್ಲ ಮತ್ತು ವ್ಯವಸಾಯಿ ಡ್ರೈವರನ ಕೈಯಲ್ಲಿ ಕಾರು ಕೊಡುತ್ತಿರಲಿಲ್ಲ. ಹೇಗೋ ಅವರ ಮತ್ತು ನನ್ನ ಮಿತ್ರರಾದ ದಿ. ಲಕ್ಷ್ಮಣರಾವ್ ಬದಾಮಿರವರನ್ನು ಕುಡಚಿ ಸ್ಟೇಶನಕ್ಕೆ ಕಾರು ತಕ್ಕೊಂಡು ಹೋಗಿ ಶ್ರೀಯವರನ್ನು ಕರೆದು ತರಲು ಒಪ್ಪಿಸಿದರು. ಅವರೂ ಸಂತೋಷದಿಂದ ಒಪ್ಪಿಕೊಂಡರು. ೧೮-೧೦-೧೯೪೪ರಂದು ನನ್ನ ಗುರುಗಳಾಗಿದ್ದ ಲಿಂ. ಮುರಿಗೆಯ್ಯನವರು ಬಾಗೋಜಿಮಠ ಟ್ರಸ್ಟಿನ ವಾರ್ಷಿಕೋತ್ಸವವಿತ್ತು. ಅದಕ್ಕೆ ಮುಖ್ಯ ಅತಿಥಿಯಾಗಿ ಬರಲು ಶ್ರೀಯವರು ಒಪ್ಪಿಕೊಂಡಿದ್ದರು. ೧೭-೧೦-೧೯೪೪ರಂದು ಬೆಂಗಳೂರು-ಮಿರಜ್ ಪ್ಯಾಸೆಂಜರದಿಂದ ಧಾರವಾಡದಿಂದ ಹೊರಡುವುದೆಂದು ಗೊತ್ತಾಗಿತ್ತು. ಆ ದಿನ ನನ್ನ ಇನ್ನೊಬ್ಬ ಮಿತ್ರರೊಡನೆ ಮೋಸಂಬಿಹಣ್ಣು, ರಸವನ್ನು ತೆಗೆಯಲಿಕ್ಕೆ ಜ್ಯೂಸ್ ಎಕ್ಸಟ್ರ್ಯಾಕ್ಟರ್, ಥರ್ಮಾಸ್‌ದಲ್ಲಿ ಬಿಸಿಹಾಲು ತಕ್ಕೊಂಡು ಹೋದೆವು. ಸುಮಾರು ೬-೩೦ ಗಂಟೆಗೆ ಕುಡಚಿ ಸ್ಟೇಶನದಲ್ಲಿ ಇಳಿಸಿಕೊಂಡಾಕ್ಷಣ "ಶ್ರೀಕಂಠಯ್ಯನವರೆ ನನಗೆ ಅತಿ ಆನಂದವಾಗಿದೆ" ಎಂದು ಹೇಳಿದೆ. ಆಗ ತಕ್ಷಣ "ಅಂಗಡಿ, ಆ ಆನಂದ ಪರಸ್ಪರ" ಎಂದು ಹೇಳಿ ನನ್ನನ್ನು ಅಪ್ಪಿಕೊಂಡು ಭುಜದ ಮೇಲೆ ಮುಖವಿಟ್ಟರು. ಅವರ ಆನಂದಬಾಷ್ಪದಿಂದ ನನ್ನ ಭುಜ ಒದ್ದೆಯಾಗಿತ್ತು. ಓರ್ವ ಹುಂಡೆಕಾರನ ಮನೆಯಲ್ಲಿ ಹಣ್ಣಿನ ರಸ ತೆಗೆದು ಕುಡಿಸಿ ಮೇಲೆ ಹಾಲು ಕುಡಿಸಿ ಶ್ರೀಯವರ ಪ್ರಯಾಣದ ಆಯಾಸ, ಬೇಸರಗಳನ್ನು ಶಾಂತಗೊಳಿಸಿದೆವು. ಅದೇ ಟ್ರೇನಿನಿಂದ ನಮ್ಮ ಇನ್ನೋರ್ವ ಅತಿಥಿ ಮುಧೋಳದ ಮೃತ್ಯುಂಜಯಸ್ವಾಮಿಗಳೂ ಬಂದಿದ್ದರು. ಅವರನ್ನೂ ಕರೆದುಕೊಂಡು ಹೊರಡುವಷ್ಟರಲ್ಲಿ ಆಗಲೇ ರಾತ್ರಿ ೮ ಗಂಟೆಯಾಯಿತು. ಅಷ್ಟರಲ್ಲಿ ಬಸ್ಸುಗಳೆಲ್ಲ ಹೋಗಿದ್ದವು. ಆದ್ದರಿಂದ ನಮ್ಮ ಕಾರೇ ಕೊನೆಗೆ ಹೊರಟಿತ್ತು. ೮ ಮೈಲು ಹೋಗುವಷ್ಟರಲ್ಲಿ ಮುಂದಿನ ಗಾಲಿ ಪಂಕ್ಚರ್ ಆಯಿತು. ಬೇರೆ ಸ್ಟೇಪನಿ ಇರಲಿಲ್ಲ. ಸಮೀಪ ಊರೂ ಇರಲಿಲ್ಲ. ಅಮಾವಾಸ್ಯೆಯ ಕಾಳ್ಗತ್ತಲೆ, ಕಾರ್ಮೋಡ

ಮುಂಸುಕಿತ್ತು. ಇನ್ನೆಂತು ಎಂದು ಯೋಚಿಸುತ್ತಿರುವಾಗ ದೊಡ್ಡ ಮಳೆ ಧಾರಾಕಾರ ವಾಗಿ ಸುರಿಯಲಾರಂಭಿಸಿತು. ಆದರಲ್ಲಿಯೆ ಪಂಕ್ಚರ್ ಆದ ಗಾಲಿಯ ಮೇಲೆ ನಿಧಾನವಾಗಿ ಮುಂದೆ ಸಾಗಿದೆವು. ೫ ಮೈಲು ಹೋಗುವಷ್ಟರಲ್ಲಿ ಹಿಂದಿನ ಗಾಲಿ ಪಂಕ್ಚರ್ ಆಗಿ ಟೈರು ಮತ್ತು ಟ್ಯೂಬು ಕಳಚಿ ಹೊರಗೆ ಬಿದ್ದು ಕಂಟ ಮಾತ್ರ ಉಳಿದಿತ್ತು. ಸುದೈವ ಕಾರಿಗೆ ಅಪಘಾತವಾಗಲಿಲ್ಲ. ನಾನೆಷ್ಟು ಭಕ್ತಿಯಿಂದ, ಕಾಳಜಿ ಯಿಂದ ಅವರನ್ನು ಕರೆದುಕೊಂಡು ಹೋಗಬೇಕೆಂದು ಏನೆಲ್ಲ ಸಿದ್ಧತೆ ಮಾಡಿ ಕೊಂಡಿದ್ದರೂ ಇಂತೆಲ್ಲ ಅನಾಹುತ ಘಟಿಸಿತೆಂದು ಮಿಡುಕುತ್ತಿದ್ದೆ. ನನ್ನ ಮುಖ ನೋಡಿ ಅವರೇ ಸಂತೈಸತೊಡಗಿದರು. ಮಳೆ ನಿಂತಿತು. ಅವರನ್ನು ಕಾರಿನಲ್ಲಿಯೆ ಬಿಟ್ಟು, ನಾನು ಮತ್ತು ನನ್ನ ಗೆಳೆಯರು ಮೂರು ಮೈಲು ನಡೆದು ತೇರದಾಳಕ್ಕೆ ತಲ್ಪಿದೆವು. ಆಗ ರಾತ್ರಿ ೧೨ರ ಮೇಲಾಗಿತ್ತು. ಇಬ್ಬರೂ ಪೂರ್ತಿ ತೋಯಿಸಿ ಕೊಂಡು ಒದ್ದೆಯಾಗಿದ್ದೆವು. ಅಲ್ಲಿ ವಿಷ್ಣುಪಂತ ಮುರಳಿಕರರೆನ್ನುವ ಓರ್ವ ದೇಶಪಾಂಡೆ ಯುವರಿದ್ದರು. ಅವರೊಬ್ಬ ಮಹಾನುಭಾವರು, ದೊಡ್ಡ ಆತ್ಮ. ಧಾರಾಳ ಮನಸ್ಸು. ಕಾಣಲಿಕ್ಕೂ ಗಾಂಧಿಯವರಂತೆಯೆ. ನಿಜವಾಗಿ ಜಮೀನುದಾರರು, ಅಂಥ ಉದಾರ ಹೃದಯರು ಸಿಕ್ಕುವದು ಅಪರೂಪ. ನನ್ನ ಬಗೆಗೂ ಪ್ರೇಮವಿತ್ತು ಅವರಿಗೆ. ಎಬ್ಬಿಸಿದ ಕೂಡಲೆ ಸಂತೋಷದಿಂದ ಬರಮಾಡಿಕೊಂಡು ನಾಲ್ಕು ಛತ್ರಿ ಸಹಿತ ತಮ್ಮ ಜೇಷ್ಠ ಪುತ್ರನನ್ನೆ ಒಂದು ದೊಡ್ಡ ಚಕ್ಕಡಿಯಲ್ಲಿ ಕಾರುಬಿಟ್ಟು ಬಂದ ಸ್ಥಳಕ್ಕೆ ಕಳಿಸಿದರು. ಶ್ರೀಯುವರು ಉಳಿದವರ ಸಹಿತ ಬಂದು ತಲ್ಪಿದಾಗ ರಾತ್ರಿ ೩ ಗಂಟೆಗೆ ಸಮೀಪಿಸಿತ್ತು. ಅಂಥ ಅಪರಾತ್ರಿಯಲ್ಲಿ ಸಹ ನಮ್ಮೆಲ್ಲರಿಗೆ ಬಿಸಿನೀರಿನಿಂದ ಮುಖಮಾರ್ಜನೆ ಮಾಡಿಸಿ ಮಡಿಬಟ್ಟೆಗಳನ್ನು ತೊಡಿಸಿ ತಿಂಡಿ ತಿನಿಸಿ, ಬಿಸಿ ಹಾಲು ಕುಡಿಸಿ ಮಲಗಿಸಿದರು. ಆ ಪುಣ್ಯಾತ್ಮರನ್ನು ಇಂದು ಕೃತಜ್ಞತೆಯಿಂದ ನೆನೆಯಬೇಕು. ಮರುದಿನ ಬೆಳಿಗ್ಗೆ ಅದೇ ಚಕ್ಕಡಿಯಲ್ಲಿ ರಬಕವಿಯವರೆಗೆ ಕಳಿಸಿದರು. ನಾಲ್ಕು ಮೈಲು ದಾರಿಯುದ್ದಕ್ಕೂ ಚಕ್ಕಡಿಯಲ್ಲಿ ಕುಳಿತುಕೊಳ್ಳದೆ ಹಿಂದಿನಿಂದ ನಡೆಯುತ್ತಿದ್ದೆ. ಆಗ ನನ್ನ ಎಂದಿನ ಕುತೂಹಲವನ್ನು ಶಾಂತಪಡಿಸಿಕೊಳ್ಳಲು ಹೆದರುತ್ತಾ ಕೇಳಿದೆ : "ಷೇಕ್ಸ್‌ಪಿಯರರ ಮೇಲೆ ನಿಮಗಿರುವ ಅಗಾಧವಾದ ಪ್ರಭುತ್ವವನ್ನು ಎಂತು ಸಾಧಿಸಿದಿರಿ ?" "ನಾನು ಇಂಟರ್ ಆರ್ಟ್ಸ್‌ದಲ್ಲಿ ಏಳು ಸಲ ನಪಾಸಾಗಿದ್ದೆ. ಪ್ರತಿಸಲ ನಾಲ್ಕು ನಾಟಕದಂತೆ ೨೮ ನಾಟಕಗಳನ್ನು ಅಭ್ಯಸಿಸಬೇಕಾಯಿತು. ಅಲ್ಲದೆ ನನ್ನ ಪ್ರೊಫೆಸರು ದಿಗ್ಗಜರಿದ್ದರು. ಅದು ಅವರು ನೀಡಿದ ಪುಣ್ಯ" ಎಂದು ಹೇಳಿದರು. ಆಗ ನಾನು ನಗಹತ್ತಿದೆ. "ಇಲ್ಲ ಅಂಗಡಿ ನಾನು ಹೇಳಿದ್ದು ತಮಾಷೆಗಲ್ಲ, ಅಕ್ಷರಶಃ ಸತ್ಯಸಂಗತಿ" ಎಂದರು. "ನಿಮಗಿಂತ ದಿಗ್ಗಜಗಳೆಂಥವರು ?" ಎಂದು ಪುನಃ ಕೇಳಿದೆ. "ಇಲ್ಲ ಅಂಗಡಿ ನಿಜವಾಗಿ ಇದ್ದರು" ಎಂದು ಅಭಿಮಾನದಿಂದ ಹೇಳಿದರು. ಸ್ವಾಮಿ ಗಳು "ಮಕ್ಕಳೇನು ಮಾಡುತ್ತಾರೆ ?" ಎಂದು ವಿಚಾರಿಸಿದರು. "ನಾನು ೩೧ ವರ್ಷ ದವನಿದ್ದಾಗ ಮನೆಯವರು ಗತಿಸಿದರು. ಇದ್ದ ಒಬ್ಬಾಕೆ ಮಗಳು, ಎರಡು ಹೆಣ್ಣು

ಹಡೆದು ವಿಧವೆಯಾದಳು. ಒಬ್ಬನೆ ಮಗ ಆಳುಮಗನ ಪ್ರಮಾದದಿಂದ ಕಣ್ಣು ಕಳೆದುಕೊಂಡ" ಎಂದು ತಿಳಿಸಿದಾಗ ನನ್ನ ಕಣ್ಣೀರು ಧಾರೆಗಟ್ಟಿದವು. ಒಡನೆ ಆಶ್ಚರ್ಯವೂ ಆಯಿತು. ಇಷ್ಟೊಂದು ದುರಂತವಾಗಿದ್ದರೂ ಅದನ್ನೆಲ್ಲ ನಂಜುಂಡನಂತೆ ನುಂಗಿಕೊಂಡು, ಹೃದಯ ಅಶಕ್ತವಾಗಿದ್ದರೂ ಕನ್ನಡಕ್ಕಾಗಿ ಎಂಥ ಪ್ರೇಮ ! ಯಾವ ಶ್ರಮವನ್ನೂ ಲೆಕ್ಕಿಸದೆ ಶ್ರಮಿಸುತ್ತಿದ್ದಾರಲ್ಲ, ನನ್ನಂಥ ಯುವಕರು ನಾಚಿ ತಲೆ ಬಾಗಬೇಕು ಎಂದು ನನಗೆ ನಾನೇ ಹೇಳಿಕೊಂಡೆ. ಬೆಳಗಿನ ೧೦ ಗಂಟೆಗೆ ರಬಕವಿಗೆ ತಲ್ಪಿದೆವು. ರಾತ್ರಿ ಬಾರದ್ದಕ್ಕೆ ಚಿಂತಿಸುತ್ತಿದ್ದ ಸರ್ವರಿಗೂ ಆನಂದವಾಯಿತು. ಕಾರಿನ ಟೈರು ಮತ್ತು ಟ್ಯೂಬು ಸಂಪೂರ್ಣ ಹಾಳಾಗಿದ್ದವು. ಎರಡರ ಬೆಲೆ ಒಂದು ಸಾವಿರಕ್ಕೆ ಕಡಿಮೆಯಿರಲಿಲ್ಲ. ಬಡವ ಅಂಗಡಿ ಕೊಡುವದೆಂತು ಎಂದು ಕನಿಕರಿಸಿ ಶ್ರೀ ಅರಬಳ್ಳಿಯವರನ್ನು ಕೂಡಲೆ ಕರೆಸಿಕೊಂಡು ಕ್ಷಮಿಸಬೇಕೆಂದು ನನ್ನ ಪರವಾಗಿ ವಿನಂತಿಸಿದರಲ್ಲದೆ ಮರುದಿನ ಅವರ ಮನೆಗೇ ಬಂದರು. ಅಲ್ಲಿ ಕಾಫಿ ತಕ್ಕೊಂಡು ಪುನಃ ಬಿನ್ನವಿಸಿದರು. ಶ್ರೀ ಅರಬಳ್ಳಿಯವರೂ ದೊಡ್ಡ ಮನದ ವರ್ತಕರು, ನನ್ನನ್ನು ಕ್ಷಮಿಸಿದರು. ಅವರನ್ನು ಎಂತು ಸ್ತುತಿಸಿದರೂ ಅವರ ಉಪಕಾರ ತೀರದು. ಶ್ರೀ ಅವರು ಒಟ್ಟು ಮೂರು ದಿನ ನನ್ನ ಅತಿಥಿಯಾಗಿದ್ದರು. ನನಗಂತೂ ವಿದುರನ ಮನೆಗೆ ಕೃಷ್ಣ ಬಂದಂತಾಗಿತ್ತು. ಅವರ ಮಗನಂತೆ ಮೂರು ದಿನ ಉಪಚರಿಸಿದೆ. ಸ್ಕೂಲಿನಲ್ಲಿ ಷೇಕ್ಸ್‌ಪಿಯರನ ಬಗೆಗೆ ಇಂಗ್ಲಿಷ್‌ದಲ್ಲಿ ಭಾಷಣ ಮಾಡಿದರು. ರಬಕವಿ ಚಿಕ್ಕ ಗ್ರಾಮವಾಗಿದ್ದರೂ ಮುಧೋಳ, ಜಮಖಂಡಿ ಮುಂತಾದ ಊರುಗಳಿಂದಲೂ ಜನ ಬಂದಿದ್ದರು. ಒಂದು ಗಂಟೆ ಮಾತಾಡಿದರು. ಟ್ರಸ್ಟಿನ ಉತ್ಸವದ ದಿನ ಸಾಯಂಕಾಲ ಭಾಷಣ ಮಾಡಿದರು. ಸಾರ್ವಜನಿಕರಿಗಾಗಿ ಕನ್ನಡದಲ್ಲಿ ಭಾಷಣ ಮಾಡಿದರು. ಮರಾಠಿಗರು ಕನ್ನಡದ ಉಪ್ಪನ್ನುಂಡು ಕನ್ನಡಕ್ಕೇ ವೈರಿಗಳಾಗಬಾರದು, ಭಾರತದ ಸಂಸ್ಕೃತಿಗೇ ದ್ರೋಹ ಮಾಡಿದಂತಾಗುತ್ತದೆಂದು ಗುಡುಗಿದರು. ಒಂದು ಗಂಟೆ ನಲವತ್ತು ನಿಮಿಷ ಮಾತಾಡಿದರು. "ಎಲ್ಲಿಂದ ನಿಮಗೆ ಈ ಶಕ್ತಿ ಬರುತ್ತದೆ, ಹೃದಯ ಬೇರೆ ಅಶಕ್ತವಾಗಿದೆ" ಎಂದು ಕೇಳಿದೆ. "ಕನ್ನಡವೆಂದರೆ ಅಂಥ ಬಲ ಬರುತ್ತದೆ. ಅಲ್ಲದೆ ಭಾಷಣಕ್ಕೆ ನಿಂತರೆ ವಿಷಯದೊಡನೆ ತನ್ಮಯನಾಗಿಬಿಡುತ್ತೇನೆ. ನನ್ನನ್ನು ನಾನು ಸಂಪೂರ್ಣ ಮರೆತಿರುತ್ತೇನೆ. ಅದೇ ನನ್ನ ಗುಟ್ಟು" ಎಂದು ತಿಳಿಸಿದರು.

ಸಾಂಗ್ಲಿ ರಾಜರಿಗಾಗಿ ದರಬಾರ ಹಾಲಿನಲ್ಲಿ ಶ್ರೀ ಅವರ ಉಪನ್ಯಾಸವನ್ನಿಟ್ಟಿದ್ದೆ. ಕರೆದುಕೊಂಡು ಬರಬೇಕೆಂದು ತಂತಿ ಬಂತು. ಆ ಪ್ರಕಾರ ಕರೆದುಕೊಂಡು ಹೋದೆ. ದರಬಾರ ಹಾಲಿನಲ್ಲಿ 'The burden of the prophets' ಎನ್ನುವ ವಿಷಯದ ಮೇಲೆ ನಲವತ್ತೈದು ನಿಮಿಷ ಮಾತಾಡಿದರು. ರಾಜರಿಗೆ ಅಷ್ಟೇ ಬಿಡುವಿತ್ತು. ಅಂಥ ಉದ್ಬೋಧಕ ಉಪನ್ಯಾಸ ಬೇರೆ ಎಲ್ಲಿಯೂ ನಾನು ಕೇಳಿಲ್ಲ. ಆ ದಿನ

ರಾತ್ರಿ ದಿವಾಣರಾಗಿದ್ದ ಜೈತಮಂಗಲಕರರಲ್ಲಿ ವಸತಿ ಮಾಡಿ ಬೆಳಿಗ್ಗೆ ಮೇಲಿನಿಂದ ಹೊರಟೆವು. ಮಧ್ಯ ಕುಡಚಿ ಸ್ಟೇಶನದಲ್ಲಿ ಅವರಿಗೆ ನಿರೋಪ ಹೇಳಿ ಪಾದ ಮುಟ್ಟಿ ನಮಸ್ಕರಿಸಿ ಇಳಿದು ರಬಕವಿಗೆ ಹೋದೆ. ಅವರು ಹಾಗೇ ಧಾರವಾಡಕ್ಕೆ ಪ್ರಯಾಣ ಬೆಳೆಸಿದರು.

# ಧಾರವಾಡದಲ್ಲಿ ಬಿ.ಎಂ.ಶ್ರೀ.

– ರಾ. ಯ. ಧಾರವಾಡಕರ

ಇಸ್ವಿ ಸನ್ ೧೯೩೭ರ ಫೆಬ್ರುವರಿ ತಿಂಗಳವೆಂದು ಕಾಣುತ್ತದೆ. ಧಾರವಾಡದ ಕರ್ನಾಟಕ ಕಾಲೇಜಿನ ವಸತಿಗೃಹಗಳ ವಿದ್ಯಾರ್ಥಿಗಳು ಪ್ರೊ॥ ಬಿ. ಎಂ. ಶ್ರೀಯವರ ಉಪನ್ಯಾಸವನ್ನು ಕಾಲೇಜಿನ ಟೆನಿಸ್ ಮೈದಾನದಲ್ಲಿ ಏರ್ಪಡಿಸಿದ್ದರು. ಸಮಯ, ರಾತ್ರಿ ೧೦ ಘಂಟೆಗೆ – ಭೋಜನಾನಂತರ. ವಸತಿಗೃಹಗಳ ಭೋಜನವೆಂದರೆ ಕೇಳುವದೇನು ? ಎಲ್ಲರೂ ಭರ್ಜರಿಯಾಗಿ ಊಟ ಮಾಡಿದರು. ಅನಂತರ ರಾತ್ರಿ ೯ ಘಂಟೆಗೆ ಭಾಷಣ. ಇಷ್ಟು ಊಟವಾದ ಮೇಲೆ ಏನು ಭಾಷಣ ಎಂದು ನಮ್ಮಲ್ಲಿ ಹಲವರು ಗೊಣಗಿದರು. ಆದರೂ ಭಾಷಣಕಾರರಿಗೆ ಒಂದು ಛಾನ್ಸ್ ಕೊಟ್ಟು ನೋಡೋಣ. ಮನಸ್ಸು ಹಿಡಿದರೆ ಕೂಡೋಣ, ಇಲ್ಲವಾದರೆ ಎದ್ದು ಬಂದರಾಯಿತು ಎಂಬ ಅರೆಮನಸ್ಸಿನಿಂದಲೇ ನಾವು ಹಲವರು ಉಪನ್ಯಾಸ ಕೇಳಲು ಹೋದೆವು.

ರಾತ್ರಿ ಹಿಟ್ಟು ಚೆಲ್ಲಿದ ಹಾಗೆ ಬೆಳದಿಂಗಳು ಬಿದ್ದಿತ್ತು. 'ಇದು ಹಾಲುಗಡಲಿನಾಸೀಮೆ, ಇಲ್ಲಿ ಚಂದ್ರಮನೆ ಸ್ವಾಮಿ' ಎನ್ನುವ ಹಾಗೆ ಬೆಳದಿಂಗಳು ಮೋಹಕವಾಗಿದ್ದಿತು. ಮದವೇರಿದ ಟಿಂವಕ್ಕಿಗಳು ಅಲ್ಲಲ್ಲಿ ಚೀತ್ಕಾರ ಮಾಡುತ್ತಿದ್ದವು. ಅಷ್ಟು ರಾತ್ರಿ ಆಗಿದ್ದರೂ, ವಿದ್ಯಾರ್ಥಿ ಸಮೂಹ, ಊರ ನಾಗರಿಕರು ಕಿಕ್ಕಿರಿದು ನೆರೆದಿದ್ದರು. ದೇವರು ಕೆಳಗಿಳಿದು ಬಂದು ಉಪನ್ಯಾಸ ಕೇಳಲು ಕುಳಿತುಕೊಳ್ಳುವ ವಾತಾವರಣ. ಸರಿಯಾಗಿ, ಹತ್ತಕ್ಕೆ ಐದು ನಿಮಿಷವಿರುತ್ತಲೆ ಬಂದ ಶ್ರೀಯವರು, ತಮ್ಮ ಅಮೋಘವಾದ ಉಪನ್ಯಾಸವನ್ನು ಪ್ರಾರಂಭಿಸಿದರು. ನುರಿತ ಸಂಗೀತಗಾರ ಮೊದಲನೆಯ ಆಲಾಪದಲ್ಲಿಯೇ ಹೃದಯಕ್ಕೆ ಲಗ್ಗೆ ಹಾಕುವ ಹಾಗೆ. ಶ್ರೀಯವರು ಸುತ್ತಲಿನ ಪ್ರಶಾಂತತೆ, ಬೆಳದಿಂಗಳು ಎಲ್ಲರನ್ನೂ ನೋಡಿ, ಮುಗುಳುನಗೆ ನಕ್ಕು – ಷೇಕ್ಸ್‌ಪಿಯರನ ಮರ್ಚೆಂಟ್ ಆಫ್ ವೆನೀಸದಲ್ಲಿಯ –

How sweet the moonlight sleeps upon the bank !
Here will we sit, and let the sounds of music
Creep in our ears ; soft stillness and night
Become the touches of sweet harmony.
Sit Jessica

– ಎಂಬ ಸಾಲುಗಳನ್ನು ಹೇಳಿ, ಹಾಲು ಚೆಲ್ಲಿದ ಆಕಾಶದ ಕಡೆಗೆ ನೋಡಿ,

Look how the floor of heaven
Is thick inlaid with patines of bright gold ;
There is not the smallest orb which thou beholdest
But in his motion like an angel sings ...
SUCH HARMONY IS IN IMMORTAL SOULS

– ಎಂದು ಕ್ಷಣಕಾಲ ಕಣ್ಣು ಮುಚ್ಚಿ ನೆರೆದವರೆಲ್ಲರ ಹೃದಯಗಳನ್ನು ಮಿಡಿದರು: ತೃಪ್ತಿಪಡಿಸಿದರು; ತಣಿಸಿದರು. ಹೊರಗೆ ಜ್ಯೋತ್ಸ್ನಾವರ್ಷ. ಟೆನಿಸ್ ಗ್ರೌಂಡುಗಳ ಮೇಲೆ ಶ್ರೀಯವರ ವಾಗ್ವರ್ಷ. ಅಖಂಡ ಎರಡು ಗಂಟೆ ಕಾಲ ಷೇಕ್ಸ್‌ಪಿಯರ್ ಸಾಮ್ರಾಜ್ಯದಲ್ಲಿ ಶ್ರೋತೃಗಳನ್ನು ಮೀಯಿಸಿ ಮೀಯಿಸಿ, ತೃಪ್ತಿಪಡಿಸಿದರು. Such harmony is in immortal souls ಮಾತ್ರ ಎನ್ನುವ ಜಾಗೆ ಮಾಡಿದರು. ಏನು ಶ್ರೀಕಂಠಯ್ಯನವರ ಕಂಠಶ್ರೀ ಎಂದು ತುಂಬು ಹೃದಯದಿಂದ ವರ್ಣಿಸುವ ಜನವೇ ಅಪಾರ ಸಾಗರದಂತೆ ಹೊರಬಿದ್ದಿತು ... ಹೀಗೆ, ಧಾರವಾಡಕ್ಕೂ ಶ್ರೀಕಂಠಯ್ಯನವರಿಗೂ ಬಿಡಲಾಗದ ನಂಟು.

ಆಗಿನ ಕಾಲದಲ್ಲಿ ಶ್ರೀಯವರು, ಮಾಸ್ತಿಯವರು, ತಿ. ನಂ. ಶ್ರೀ. ಅವರು, ವಿ. ಸೀ. ಅವರು, ಮೂರ್ತಿರಾಯರು, ಕೆ. ವಿ. ರಾಘವಾಚಾರ್ಯರು, ಶಿವಮೂರ್ತಿಶಾಸ್ತ್ರಿಗಳು, ಜಿ. ಪಿ. ರಾಜರತ್ನಂ ಅವರು, ಅ. ನ. ಕೃ. ಅವರು, ಉತ್ತರ ಮತ್ತು ಮೈಸೂರು ಕರ್ನಾಟಕದ ಮಧ್ಯೆ ಸಾಂಸ್ಕೃತಿಕ ರಾಯಭಾರಿಗಳಾಗಿ, ಅಂತಃಕರಣದ ಸೇತುವೆಯಾಗಿ ಕೆಲಸಮಾಡಿದರು. ಈ ವಿದ್ವಾಂಸರು, ಉತ್ತರ ಕರ್ನಾಟಕಕ್ಕೆ ಬಂದಸಲವೆಲ್ಲ, ಜನ ಮಂತ್ರಮುಗ್ಧರಾಗಿ ಇವರ ಭಾಷಣಗಳನ್ನು ಕೇಳಲು ಮುಕುರುತ್ತಿತ್ತು.

ಶ್ರೀಯವರು ಕೇವಲ ಇಪ್ಪತ್ತೇಳು ವರ್ಷದವರಿದ್ದಾಗಲೇ, ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದವರು ಅವರನ್ನು ಆಮಂತ್ರಿಸಿ, ಡಿಸೆಂಬರ್ ತಿಂಗಳಲ್ಲಿ ಅವರ ಉಪನ್ಯಾಸದ ಏರ್ಪಾಡು ಮಾಡಿದ್ದರು. ಅದರ ಫಲವೇ 'ಕನ್ನಡ

ಮಾತು ತಲೆಯೆತ್ತುವ ಬಗೆ' ಎಂಬ ಪ್ರಬಂಧ. ಹೀಗಾಗಿ ಧಾರವಾಡವೆಂದರೆ ಶ್ರೀಯವರಿಗೆ ಅಚ್ಚುಮೆಚ್ಚು. ಶ್ರೀಯವರೆಂದರೆ ಧಾರವಾಡದವರಿಗೆ ತುಂಬ ಅಭಿಮಾನ.

೧೯೪೪ ಜೂನ್‌ದಲ್ಲಿ ಧಾರವಾಡದಲ್ಲಿ ಕೆ. ಇ. ಬೋರ್ಡಿನ (ಕರ್ನಾಟಕ ಎಜ್ಯುಕೇಶನ್ ಬೋರ್ಡ್) ಆರ್ಟ್ಸ್ ಕಾಲೇಜ್ ಪ್ರಾರಂಭವಾಯಿತು. ಆಗ, ಧಾರವಾಡದಲ್ಲಿ ೧೯೧೭ರಲ್ಲಿ ಪ್ರಾರಂಭವಾಗಿದ್ದ ಕರ್ನಾಟಕ ಕಾಲೇಜ್ ಮಾತ್ರ ಇತ್ತು. ಅದು ಸರ್ಕಾರಿ ಕಾಲೇಜು. ಅದಕ್ಕೆ ಎಮ್.ಎಸ್.ಎಮ್. ರೈಲ್ವೆಯವರ ಭವ್ಯವಾದ ಕಟ್ಟಡ. ಅಲ್ಲಿಯ ಪ್ರಾಧ್ಯಾಪಕರೆಲ್ಲ ಬಹುಮಟ್ಟಿಗೆ ತುಂಬ ಸೀನಿಯರ್ ಇದ್ದವರು. ಅವರಲ್ಲನೇಕರು, ಆ ದಿವಸಗಳಲ್ಲಿ ಕಾರುಗಳನ್ನಿಟ್ಟುಕೊಂಡು ಕಾಲೇಜಿಗೆ ಬರುವವರು. ಹೀಗಾಗಿ ಶ್ರೀಮಂತಿಕೆ ಆ ಕಾಲೇಜಿನಲ್ಲಿ ತುಂಬಿ ತುಳುಕುತ್ತಿತ್ತು. ಇಂಥ ಸ್ಥಾಪಿತ ಅರ್ಮಡಾದ ಕೂಡ ಸ್ಪರ್ಧಿಸಬೇಕಾದರೆ, ಚುಕ್ಕಾಣಿ ಹಿಡಿಯಬೇಕಾದ ಕಪ್ತಾನ ನಿಜವಾಗಿ ಗಟ್ಟಿಗನೇ ಆಗಿರಬೇಕು ಎಂದು ಆಡಳಿತ ಮಂಡಳಿ ನಿರ್ಧರಿಸಿತು. ಆ ಮೇರೆಗೆ, ಅವರು ಬೆಂಗಳೂರಿಗೆ ಹೋಗಿ ಶ್ರೀಯವರನ್ನು ವಿಜ್ಞಾಪಿಸಿದರು. ಇದರಲ್ಲಿ ನಿಟ್ಟೂರ ಶ್ರೀನಿವಾಸರಾಯರು, ಮಾಸ್ತಿಯವರು, ಸಂಪದ್ಗಿರಿರಾಯರೂ ಸಹಾಯ ಮಾಡಿದರೆಂದು ನಾನು ಕೇಳಿದ್ದೇನೆ. ತತ್ಪರಿಣಾಮವಾಗಿ, ಶ್ರೀಯವರು ಧಾರವಾಡಕ್ಕೆ ಈ ಸಲ ಅತಿಥಿಯಾಗಿ ಬರದೆ, ಯಜಮಾನರಾಗಿಯೇ ಬಂದರು. ೧೯೪೪ರಲ್ಲಿ ನಾನು ಮುಂಬಯಿಯಲ್ಲಿ ಸಾಕಷ್ಟು ಮಟ್ಟಿನ ಒಳ್ಳೆಯ ಸರಕಾರಿ ನೌಕರಿಯಲ್ಲಿದ್ದೆ. ಇದು ಹೊಸ ಖಾಸಗಿ ಕಾಲೇಜು. ನನಗೆ ಇವರು ಕೊಡಮಾಡಿದ ಸಂಬಳ. ನನಗೆ ಅಲ್ಲಿ ದೊರೆಯುತ್ತಿದ್ದ ಸಂಬಳದ ಕೇವಲ ಅರ್ಧದಷ್ಟು. ಆದರೂ, ನಾನು ನನ್ನ ನಾಡಿನಲ್ಲಿ ಇರುತ್ತೇನೆ, ಶ್ರೀಯವರಂಥ ವಿದ್ವಾಂಸರ ಸಾನ್ನಿಧ್ಯ ದೊರಕುತ್ತದೆ ಎಂಬ ವಿಚಾರಗಳು, ನಾನು ಧಾರವಾಡಕ್ಕೆ ಬರುವಂತೆ ಪ್ರೇರೇಪಿಸಿದವು. ನಾನು ಮುಂಬಯಿಯಿಂದ ಧಾರವಾಡಕ್ಕೆ ರೈಲಿನಲ್ಲಿ ಬರುವ ಉದ್ದಕ್ಕೂ ನಾನು ವಿದ್ಯಾರ್ಥಿಯಾಗಿದ್ದಾಗ ಓದಿದ್ದ ಶ್ರೀಯವರ ಸಾಲುಗಳು ನನ್ನ ತಲೆಯಲ್ಲಿ ಸಿನದಿಸುತ್ತಿದ್ದವು – 'ಆಹ ಎಲ್ಲಿಡಗಿತೊ ಆರ್ಯ ಧರ್ಮದ ಕರುಣ ಆರ್ಯ ಧರ್ಮದ ಪುರುಕ ಉರಿಯುವನೆ ಬಲ್ಲ, ಭಾವಗಳು ರಾಗಗಳು ಬಗೆಬಗೆಯ ಭೋಗಗಳು . . . ಸತ್ಯವೊಂದೆ ಗೆಲ್ಲುವುದಂ, ಅನೃತವಲ್ತು ; ಅಮೃತವೊನೆ ವಿದ್ಯೆಯೆ. ಅವಿದ್ಯೆಯಲ್ತು : ವಿಶ್ವಭಾರತಿ ಶರಣು. ಕಿರುತೀರ್ಥವಲ್ತು ...' ನಾನು ಧಾರವಾಡ ಮುಟ್ಟಿದೊಡನೆ ಯಾವಾಗ ಶ್ರೀಯವರನ್ನು ಕಂಡೇನೋ, ಅವರಿಗೆ ನನ್ನ ನಮನವನ್ನು ಸಲ್ಲಿಸಿ, ಅವರ ಬಳಿಗದಲ್ಲಿ ಒಬ್ಬ ಕೆಲಸಗಾರನಾಗಿ ಸೇರುವ ಭಾಗ್ಯಕ್ಕಾಗಿ ತೃಪ್ತಿ ವ್ಯಕ್ತಪಡಿಸುವರೇನೋ ಎಂಬ ತವಕ ನನಗೆ. ಆ ಮೇರೆಗೆ, ನಾನು ಅವರು ವಾಸಿಸುತ್ತಿದ್ದ ಬಂಗಲೆಗೆ ಹೋದೆ. ಅವರು. ಆಗ ರೈಲ್ವೆ ನಿಲ್ದಾಣದ ಆಚೆಗಿದ್ದ ಪ್ಲೈವುಡ್ ಫ್ಯಾಕ್ಟರಿಯೆದುರಿಗಿನ ಭವ್ಯ

ಬಂಗಲೆಯಲ್ಲಿ ಒಬ್ಬರೇ ವಾಸಿಸುತ್ತಿದ್ದರು. ಆಡಳಿತವರ್ಗ ಅವರಿಗೆ ಒಬ್ಬ ಸೇವಕ ಹಾಗೂ ಒಬ್ಬ ಅಡುಗೆಯವನನ್ನು ಕೊಟ್ಟಿದ್ದರು. ನಾನು ಊಹಿಸಿದ್ದ ಶ್ರೀ ಹಿಮಾಲಯ ಸದೃಶ ಗಂಭೀರ ವ್ಯಕ್ತಿ ; ಯಾವಾಗಲೂ ಪಾಂಡಿತ್ಯವನ್ನೇ ಸಾರುವ ಮಾತುಗಾರಿಕೆ ; ಭರ್ಜರಿ ಪೋಷಾಕಿನಲ್ಲಿರುವವರು ಎಂದು ಭಾವಿಸಿದ್ದೆ. ನಾನು ಅವರನ್ನು ಕಂಡಾಗ, ತೀರ ಸಾದಾ-ಸೀದಾ ವೇಷದಲ್ಲಿದ್ದ ಶ್ರೀಯವರು ಹೊರಬಂದರು. "ಓಹೋ! ನೀವೇನೇ ಧಾರವಾಡಕರರು ; ಬಹಳ ಚೆನ್ನಾಯಿತು. ಇಂದೇ ರಿಪೋರ್ಟ್ ಮಾಡಿಬಿಡಿ ; ನಾಳೆಯಿಂದ ಕೆಲಸ ಪ್ರಾರಂಭಿಸೋಣ" ಎಂದು ಹೇಳಿ, ಈ ಚಿಕ್ಕ ಯುವಕನ ಕೈ ಕುಲುಕಿ, ಬೆನ್ನುತಟ್ಟಿ ಆಶೀರ್ವದಿಸಿ ಕಳಿಸಿದರು. ನಾನೂ ನಮಸ್ಕರಿಸಿ ಬಂದೆ. ಮರುದಿವಸವಾದರೂ ಶ್ರೀಯವರು ಕಾಲೇಜಿಗೆ ಬರುವಾಗ, ತಮ್ಮ ಭರ್ಜರಿ ಸೂಟಿನಲ್ಲಿ ಬರುವರೆಂದು ಭಾವಿಸಿದ್ದೆ. ಆದರೆ, ಅವರು ಪುನಃ ಸಾದಾ ವೇಷದಲ್ಲಿಯೇ ಬಂದರು. ದೊಡ್ಡ ಅಂಚಿದ್ದ ಕಚ್ಚೆಧೋತರ, ಕ್ಲೋಸ್ ಕಾಲರ್ ಕೋಟ್, ಮೇಲೊಂದು ವಪ್ಪ ಕಂಬಳಿ ಟೊಪ್ಪಿಗೆ. ನಾವು ಈವರೆಗೆ ನೋಡಿದ್ದ ಪ್ರೊಫೆಸರ್ – ಪ್ರಿನ್ಸಿಪಾಲರಿಗೂ, ಶ್ರೀಯವರಿಗೂ ಅಜಗಜಾಂತರ! ಆದರೆ ಅವರು ಒಮ್ಮೆ ಮಾತು ಶುರು ಮಾಡಿದರೆಂದರೆ ಸಾಕು, ಅಸೂನ ಗಂಗಾಪ್ರವಾಹ ಪ್ರವಹಿಸು ತ್ತಿತ್ತು ...

ನನ್ನ ಸುದೈವ, ಶ್ರೀಯವರು ಇಂಗ್ಲಿಷ್ ಕಲಿಸುತ್ತಿದ್ದರು. ನನ್ನ ಪಾಲಿಗೆ ಕನ್ನಡ ಮತ್ತು ಇಂಗ್ಲಿಷ್ ಬಂದವು. ಅವರು ಪ್ರಥಮ ವರ್ಷದಲ್ಲಿ ಪೊಯೆಟ್ರಿ ಸಿಲೆಕ್ಷನ್ ಕಲಿಸಿದರೆ, ನಾನು ಮೆಕಾಲೆ ಬರೆದ ಜಾನ್ಸನ್ ಮತ್ತು ಗೋಲ್ಡ್‌ಸ್ಮಿತರ ಜೀವನಗಳನ್ನು ಕಲಿಸುತ್ತಿದ್ದೆ. ನನ್ನ ಕಲಿಸುವಿಕೆಯನ್ನೂ, ವಿದ್ಯಾರ್ಥಿಗಳು ತುಂಬಾ ಮೆಚ್ಚಿದ್ದರು. ಇದರಿಂದ ಶ್ರೀಯವರೂ ತುಂಬಾ ಅಭಿಮಾನ ಪಟ್ಟುಕೊಂಡರು. ಮರುವರುಷ ಅವರು ಮಿಲ್ಟನನ 'ಪ್ಯಾರಡೈಸ್ ಲಾಸ್ಟ್' ಕಲಿಸುತ್ತಿದ್ದರು ; ನಾನು ಬರ್ಕನ ಅಮೇರಿಕನ್ ಟ್ಯಾಕ್ಸೇಷನ್ ಕಲಿಸುತ್ತಿದ್ದೆ. ನನ್ನ ಪರಿಶ್ರಮವನ್ನು ಮೆಚ್ಚಿಕೊಂಡ ಶ್ರೀಯವರು ನನ್ನನ್ನು ಕಾಲೇಜ್ ಯೂನಿಯನ್‌ದ ಕಾರ್ಯಾಧ್ಯಕ್ಷನನ್ನಾಗಿ ಮಾಡಿದರು. ಹೀಗಾಗಿ ಅವರ ಸಂಪರ್ಕ ಇನ್ನೂ ನಿಕಟವಾಯಿತು. ಆದರೂ, ಅವರು ಕಾಲಕಾಲಕ್ಕೆ ಅಭ್ಯಾಸ ಪರಿಶ್ರಮಗಳ ಮಹತ್ವವನ್ನು ನನಗೆ ಸೂಚಿಸದೆ ಹೋಗಲಿಲ್ಲ. ಶ್ರೀಯವರು ಮಿಲ್ಟನ್‌ನನ್ನು ನೀರು ಕುಡಿದ ಹಾಗೆ ಕುಡಿದಿರಬಹುದು. ಪ್ಯಾರಡೈಸ್ ಲಾಸ್ಟ್ ಸಾವಿರ ಸಲ ಕಲಿಸಿರಬಹುದು. ಆದರೂ, ಪ್ರತಿಸಲ ಅವರು ಅಷ್ಟೇ ತಯಾರಿ ಮಾಡಿ ಕ್ಲಾಸಿಗೆ ಹೋಗುತ್ತಿದ್ದರು. ಒಂದು ಸಲ, ನಾನು ಅವರ ಕೈಯಲ್ಲಿ ಪ್ಯಾರಡೈಸ್ ಲಾಸ್ಟ್ ಪುಸ್ತಕ ಹಾಗೂ ಇನ್ನೊಂದು ಕೆಂಪುಬೈಂಡಿನ ಪುಸ್ತಕ ನೋಡಿದೆ. ನನಗೆ ಆ ಇನ್ನೊಂದು ಪುಸ್ತಕ ಯಾವುದೆಂಬುದರ ಬಗ್ಗೆ ಕುತೂಹಲ. ಅದಕ್ಕಾಗಿ ಶ್ರೀಯವರನ್ನು ಕೇಳಿದೆ – "ಸರ್ ಇದಂತೂ ಪಠ್ಯಪುಸ್ತಕವಾಯಿತು ; ಇನ್ನೊಂದು

ಪುಸ್ತಕ ಯಾವುದು ?" ಎಂದೆ. ಆಗ ಅವರು "ಅದು Releigh on Milton. I have read it 200 times and I am reading it again. To get the proper inspiration, I never go to the class unless I read Releigh again" ಎಂದು ಹೇಳಿದರು. ನನಗೆ ಎದೆ ಝಲ್ಲೆಂದಿತು. ಶ್ರೀಕಂಠಯ್ಯನವರಂಥ ಪ್ರಕಾಂಡ ಪಂಡಿತರು, ಇಡೀ ಇಂಗ್ಲಿಷ್ ಸಾಹಿತ್ಯವನ್ನು ಅರಗಿಸಿ ಕುಡಿದವರು, ಒಂದು ಚಿಕ್ಕ ಇಂಟರ್‌ಮೀಡಿಯೇಟ್ ಕ್ಲಾಸಿಗೆ ಕಲಿಸಲು ಹೋಗಬೇಕಾದರೆ, ಎರಡು ನೂರಾ ಒಂದನೆಯ ಸಲ ರ್ಯಾಲೆ ಓದುತ್ತಾರಲ್ಲ : ಅಂದಮೇಲೆ, ನಮ್ಮಂಥವರು ಎಷ್ಟು ಮಾರ್ಗವನ್ನು ಕ್ರಮಿಸಬೇಕು : ಇದು ನನ್ನನ್ನು ಯಾವಾಗಲೂ ಅಭ್ಯಾಸ ಪ್ರವೃತ್ತನನ್ನಾಗಿ ಮಾಡಿತು.

ಶ್ರೀಕಂಠಯ್ಯನವರು ಕಲಿಸುವ ಪದ್ಧತಿಯೂ ಅಂಥದೇ. ಅವರು ಪರೀಕ್ಷೆಗಾಗಿ ಅಷ್ಟು ಮಹತ್ವ ಕೊಡುತ್ತಿದ್ದಿಲ್ಲ. ಅವರ ಮೇರೆಗೆ. ಜ್ಞಾನ ಮುಖ್ಯ. ಯಾವುದೋ ಒಂದು ಸಂದರ್ಭ ಬಂದರೆ, ಭಾರತೀಯ ಪುರಾಣಗಳು. ಗ್ರೀಕ್ ಐತಿಹ್ಯಗಳು, ರೋಮನ್ ಕಥಾನಕಗಳು – ಇವುಗಳ ನಡುವಿನ ಸಾಮ್ಯವನ್ನು ವಿಶ್ಲೇಷಿಸಿ ವಿದ್ಯಾರ್ಥಿಗಳಲ್ಲಿ ಹೆಚ್ಚಿನ ಜ್ಞಾನದಾಹ ಕುದುರುವಂತೆ ಮಾಡುವರು. ಒಂದೊಂದು ಸಲ ಏನೂ ಮಹತ್ವವಿಲ್ಲದ ಚಿಕ್ಕ ಕವನವೆಂದು ಕಂಡುಬಂದ ಕವನದ ಬಗ್ಗೆ ಗಂಟೆಗಟ್ಟಲೆ ಹೇಳುವರು. ಅವರು ಯಾವುದೋ ಒಂದು ಚಿಕ್ಕ ಕವನದಲ್ಲಿಯ He took out the souls from his pocket ಎಂಬುದನ್ನು, ಗಂ-ಭೀ-ರವಾಗಿ, ಸಾಭಿನಯವಾಗಿ ಹೇಳಿದ ರೀತಿಯನ್ನು ಅವರ ಅಂದಿನ ವಿದ್ಯಾರ್ಥಿಗಳು ಇಂದಿಗೂ ನೆನೆಯುತ್ತಾರೆ. ಹೀಗಾಗಿ, ಶ್ರೀಯವರು ವರ್ಗಗಳಲ್ಲಿ ಪರೀಕ್ಷಾ ವಿದ್ಯಾರ್ಥಿಗಳನ್ನು ಸಿದ್ಧಪಡಿಸಿದಷ್ಟೇ, ಅಥವಾ ಅದಕ್ಕೂ ಹೆಚ್ಚು ಕವಿಗಳನ್ನು, ಲೇಖಕರನ್ನು, ವಿಮರ್ಶಕರನ್ನು ನಿರ್ಮಿಸಿದರು. ಇಂದು ಖ್ಯಾತನಾಮ ಸಾಹಿತಿಗಳಾಗಿರುವ ಕೀರ್ತಿನಾಥ ಕುರ್ತಕೋಟಿ, ಶಂಕರ ಮೊಕಾಶಿ ಪುಣೇಕರ್ ಮೊದಲಾದವರೆಲ್ಲ ಆಗ, ಶ್ರೀಯವರ ಪದತಲದಲ್ಲಿ ವಿದ್ಯಾರ್ಥಿಗಳಾಗಿ ಬೆಂಚಿನ ಮೇಲೆ ಕುಳಿತು ಅವರ ಉಪನ್ಯಾಸಗಳನ್ನು ಕೇಳಿದವರೇ.

ಶ್ರೀ, ಬರಿಯ ಪದ್ಯಗಳ ಬಗ್ಗೆ ಮಾತ್ರ ಹೇಳುತ್ತಿರಲಿಲ್ಲ: ವಿದ್ಯಾರ್ಥಿಗಳಿಗೆ ಆ ಆ ಕವಿಗಳ ಸಮಗ್ರ ಸಾಹಿತ್ಯ ಹಾಗೂ ಜೀವನಗಳ ನಿಕಟ ಪರಿಚಯವಾಗಬೇಕೆಂದು ವರ್ಗಗಳ ಅವಧಿ ಮುಗಿದ ಮೇಲೆ ಸೆಮಿನಾರುಗಳನ್ನು ನಡೆಸುವರು. ಅವರಿಗೆ ಹೆಚ್ಚಿಗೆ ಓದಲು ಪುಸ್ತಕಗಳನ್ನು ಒದಗಿಸಿ ಕೊಡುವರು.

ಶ್ರೀಯುವರು ಬರಿಯ ಮೇಷ್ಟ್ರರಲ್ಲ. He was a Poet and cause of Poetry that was in others. ಅವರು ಸ್ವತಃ ಕವಿಗಳಾಗಿದ್ದರು : ಅನೇಕ ಕವಿಗಳ ನಿರ್ಮಾಪಕರಾಗಿದ್ದರು. ನನಗೊಂದು ಘಟನೆ ಇಂದಿಗೂ ಜ್ಞಾಪಕ್ಕೆ ಬರುತ್ತದೆ. ಅವರು ಹಾಕಿಕೊಟ್ಟ ಮಾರ್ಗವನ್ನೇ ನಾನೂ ಅನುಸರಿಸಲು ಅನೇಕ

ಸಲ ಯತ್ನಿಸಿದ್ದೇನೆ. ಶ್ರೀಯವರು ಕೆ. ಇ. ಬೋರ್ಡ್‌ದಲ್ಲಿದ್ದಾಗ, ಒಬ್ಬ ವಿದ್ಯಾರ್ಥಿ ಇಂಗ್ಲಿಷ್ ಭಾಷೆಯಲ್ಲಿ ಕವನಗಳನ್ನು ಬರೆಯುತ್ತಿದ್ದ. ಅದನ್ನು ಅವನು ನನಗೂ ತೋರಿಸಿದ್ದ. ಆ ಪದ್ಯಗಳಲ್ಲಿ ಪ್ರಾಸವೇನೋ ಇರುತ್ತಿತ್ತು. ಆದರೆ, ಭಾವ, ರಸ ಕಾಣುತ್ತಿರಲಿಲ್ಲ. ಆ ವಿದ್ಯಾರ್ಥಿ ತನ್ನ 'ಕವನ'ಗಳನ್ನು ಶ್ರೀಯವರಿಗೂ ತೋರಿಸಿದ. ಆಗ ನಾನೂ ಎದುರಿನಲ್ಲಿದ್ದೆ. ಶ್ರೀಯವರು ಏನೋ ಒಬ್ಬ ದೊಡ್ಡ ಕವಿಯು ಕವನ ಗಳನ್ನು ಓದುವವರ ಹಾಗೆ, ಅವನ ಎಲ್ಲ ಕವನಗಳನ್ನು ಚಾಚೂ ಬಿಡದೆ ಓದಿ, "ಪರವಾ ಇಲ್ಲ, They are very fine. You keep it up. You have a very good promise" ಎಂದು ಹೇಳಿ, ಅವನ ಬೆನ್ನು ತಟ್ಟಿ ಕಳಿಸಿದರು. ಆ ವಿದ್ಯಾರ್ಥಿ ಹೋದಮೇಲೆ ನಾನು ಸಹಜವಾಗಿ ಶ್ರೀಯವರನ್ನು ಕೇಳಿದೆ. "ಸರ್, ನಿಜವಾಗಿಯೂ ಆ ಕವನಗಳು ಅಷ್ಟು ಒಳ್ಳೆಯವಿದ್ದವೆ. ಅವ ನನಗೂ ತೋರಿಸಿದ್ದ. ಯಾಕೋ ಅವು ನನ್ನ ಮನಸ್ಸನ್ನು ಹಿಡಿದಿರಲಿಲ್ಲ. ನೀವು ತುಂಬಾ ವರ್ಣಿಸಿಬಿಟ್ಟಿ ರಲ್ಲಾ" ಎಂದೆ. ಆಗ ಶ್ರೀಯವರು, "ಇಲ್ಲಿ ನೋಡಿ ಧಾರವಾಡಕರ್, ನಿಮಗೊಂದು ಮಾತು ಹೇಳುತ್ತೇನೆ. ಬರೆಯುವವರ ಬಗ್ಗೆ ನಾವು ಕೆಟ್ಟ ಮಾತನ್ನು ಆಡಬಾರದು. ನಾಲ್ಕು ಒಳ್ಳೆಯ ಮಾತನ್ನು ಆಡೋಣ. ಆ ವ್ಯಕ್ತಿಯಲ್ಲಿ ನಿಜವಾದ ಅಂತಸ್ಸತ್ವ ವಿದ್ದರೆ, ಅವ ಪ್ರಯತ್ನವನ್ನು ಮುಂದುವರಿಸಿ, ಹೆಚ್ಚೆಚ್ಚು ಬರೆಯುತ್ತಾನೆ. ಇಲ್ಲ ವಾದರೆ, ಅಲ್ಲಿಯೇ ಕಮರಿಹೋಗುತ್ತಾನೆ. ಹುಟ್ಟಿದ ಮಗುವಿನ ಜಾತಕ ಬರೆ ಅಂದರೆ, ನಾವು ಮರಣ ದಿವಸವನ್ನೇ ಹೇಳುವುದೆ ? ಮಗು ಬದುಕಲಿ, ಬೆಳೆಯಲಿ, ದೇವರ ಕೃಪೆ ಇದ್ದರೆ, ಘನವಂತನಾದೀತು" ಎಂದು ಹೇಳಿದರು. ಎಂಥ ಅಮೋಘ ಉಕ್ತಿಗಳಿವು ... ಯಾರಾದರೂ ಸಾಯುವದಾದರೆ, ಅವರು ನಮ್ಮ ಕೈಯಿಂದೇಕೆ ಸಾಯಬೇಕು ? ಸತ್ವವಿದ್ದ ಬೀಜ ಎಂಥ ಕಂಟಿಯಲ್ಲಿ ಬಿದ್ದರೂ ಫಲಿಸುತ್ತದೆ. ಯಾರೋ ತಮ್ಮ ಕವಿತೆಗಳನ್ನು ಒಬ್ಬ ಮಹಾಕವಿಗೆ ತೋರಿಸಿದಾಗ, ಅವರು ಹೇಳಿದ ರಂತೆ, "ಏನೂ ಪರವಾಗಿಲ್ಲ, ಹೀಗೆ ಪದ್ಯ ಬರೆಯುತ್ತ ಹೋಗು, ನೀನು ಬರೆ ಬರೆದಂತೆ, ನಿನ್ನ ಗದ್ಯವಾದರೂ ಸುಧಾರಿಸುತ್ತದೆ" ಎಂದು. ಈ ಮಾತಿಗೂ, ಶ್ರೀಯವರ ಮಾತಿಗೂ ಎಷ್ಟು ಅಂತರ !!

ಆಡಳಿತವರ್ಗದವರು ಶ್ರೀಯವರ ವಾಸ್ತವ್ಯಕ್ಕಾಗಿ ಊರ ಹೊರಗಿನ ಭವ್ಯ ವಾದ ಬಂಗಲೆಯನ್ನು ಕೊಟ್ಟಿದ್ದರೆಂದು ಹೇಳಿದೆನಷ್ಟೆ. ಅದು ಅವರು ಕಲಿಸುವ ಕಾಲೇಜಿನಿಂದ ಸುಮಾರು ಎರಡು-ಎರಡೂವರೆ ಮೈಲಿ ದೂರದಲ್ಲಿತ್ತು. ಶ್ರೀ ದಿನಾಲು ಟಾಂಗಾದಲ್ಲಿ ಮದಿಹಾಳದಲ್ಲಿದ್ದ ಕಾಲೇಜಿಗೆ ಬಂದು, ಟಾಂಗಾದಲ್ಲಿ ಮರಳಿ ಹೋಗುತ್ತಿದ್ದರು. ಈ ವ್ಯವಸ್ಥೆ ಅವರಿಗೆ ಸರಿ ಕಾಣಲಿಲ್ಲ. ಒಂದು : ಇದು ಕಾಲ ಮತ್ತು ಹಣದ ಅಪವ್ಯಯ, ಎರಡು : ಅವರಿಗೆ ತಮ್ಮ ಕಾಲೇಜಿನ, ತಮ್ಮ ವಿದ್ಯಾರ್ಥಿ ಗಳ ಪರಿಸರದಲ್ಲಿಯೇ ಇರಬೇಕೆಂಬ ಅಪೇಕ್ಷೆ. ಅದಕ್ಕಾಗಿ ಕಾಲೇಜು ಆವಾರದಲ್ಲಿಯೇ

ಇದ್ದ ಒಂದು ವಿಭಾಗವನ್ನು ತಮ್ಮ ವಾಸ್ತವ್ಯಕ್ಕಾಗಿ ಮಾರ್ಪಡಿಸಿದರೆ, ಅನುಕೂಲ ವಾಗುತ್ತದೆಂದು ಸೂಚಿಸಿದರು. ಆ ರೀತಿ, ಆಡಳಿತವರ್ಗ ಸಮರ್ಪಕವಾಗಿಯೇ ಬದಲಾವಣೆಯನ್ನು ಮಾಡಿ ಶ್ರೀಯವರ ವಾಸ್ತವ್ಯಕ್ಕೆ ಅನುಕೂಲ ಮಾಡಿಕೊಟ್ಟಿತು. ಸಾಮಾನ್ಯವಾಗಿ, ತಮ್ಮ ಪಾಠ ಮುಗಿದಮೇಲೆ ಅವರು ಇಪ್ಪತ್ತು ಅಡಿಯಲ್ಲಿದ್ದ ತಮ್ಮ ಮನೆಗೇ ಹೋಗಿ, ಅಲ್ಲಿ ಪುನಃ ತಮ್ಮ ವ್ಯಾಸಂಗದಲ್ಲಿ ನಿರತರಾಗಿರುತ್ತಿದ್ದರು. ಸಾಯಂಕಾಲ, ಕಾಲೇಜಿನ ವಿಶಾಲವಾದ ಆಟದ ಮೈದಾನದಲ್ಲಿ ವಾಕ್ ಮಾಡುತ್ತಿದ್ದರು, ಇಲ್ಲವೆ, ಆಗ ಬರುತ್ತಿದ್ದ ಮೈಸೂರು ವಿಶ್ವವಿದ್ಯಾನಿಲಯದ ನಿಘಂಟಿನ (?) ಪ್ರೂಫುಗಳನ್ನು ಪರಿಶೀಲಿಸುವುದರಲ್ಲಿ ನಿರತರಾಗುತ್ತಿದ್ದರು.

ಶ್ರೀಯವರಿಂದ ಆಶೀರ್ವಾದ ಪಡೆದ ಅನೇಕ ಯುವಕರು ಇಂದು ಒಳ್ಳೆಯ ಹೆಸರನ್ನು ಮಾಡಿಕೊಂಡಿದ್ದಾರೆ. ಶ್ರೀ ಕೀರ್ತಿನಾಥ ಕುರ್ತಕೋಟಿ ಹಾಗೂ ಶಂಕರ ಮೊಕಾಶಿ ಪುಣೇಕರ್ ಬಗ್ಗೆ ಈಗಾಗಲೇ ಹೇಳಿದ್ದೇನೆ. ೧೯೪೫ ರಲ್ಲಿ ಎಂದು ಕಾಣುತ್ತದೆ ; ಧಾರವಾಡದ ಸಾತ್ವಿಕ ಕವಿ ಶ್ರೀ ಸಾಲಿ ರಾಮಚಂದ್ರರಾಯರು ಕೆ. ಇ. ಬೋರ್ಡಿನಿಂದ ನಿವೃತ್ತರಾದರು. ಅದೇ ವರ್ಷ ಒಬ್ಬ ಯುವ ವಿದ್ಯಾರ್ಥಿ ಮುಂಬಯಿ ವಿಶ್ವವಿದ್ಯಾಲಯದ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ರ‍್ಯಾಂಕ್ ಬಂದಿದ್ದ. ಈ ವಿದ್ಯಾರ್ಥಿಯ ಸತ್ಕಾರ ಹಾಗೂ ಸಾಲಿ ರಾಮಚಂದ್ರರಾಯರ ಬೀಳ್ಕೊಡುಗೆ, ಎರಡನ್ನೂ ಕಲೆಹಾಕಿ, ಕೆ. ಇ. ಬೋರ್ಡ್‌ನವರು ಒಂದು ಸಮಾರಂಭವನ್ನು ಹಮ್ಮಿದ್ದರು. ಶ್ರೀಯವರು ಸಭಾಧ್ಯಕ್ಷರು. ನಾನು ಮಾತುಗಾರರಲ್ಲಿ ಒಬ್ಬ. ನಾನು ಸಾಲಿಯವರ ಬಗ್ಗೆ ಮಾತಾಡಬೇಕಿತ್ತು. "ಸಾಲಿಯವರ ಶೈಲಿ, ಷೆಲ್ಲಿಯ ಶೈಲಿ" ಎಂದು, ಏನೇನೋ 'ಪಾಂಡಿತ್ಯಪೂರ್ಣ'ವಾಗಿ ಮಾತಾಡಿದ ನೆನಪು ನನಗಿದೆ. ಶ್ರೀಯವರು ಸಾಲಿಯವರ ಬಗ್ಗೆ ಮಾತನಾಡಿ, ಯುವ ವಿದ್ಯಾರ್ಥಿಯನ್ನು ಕುರಿತು "ಮಗು, ನಿನಗೆ ಉಜ್ವಲವಾದ ಭವಿಷ್ಯವಿದೆ ; ನೀನು ಹೀಗೆಯೇ ನಿನ್ನ ಪ್ರಯತ್ನ ವನ್ನು ಮುಂದುವರಿಸು. ದೇವರು ನಿನಗೆ ಕಲ್ಯಾಣ ಮಾಡುತ್ತಾನೆ" ಎಂದು ಆ ವಿದ್ಯಾರ್ಥಿಯ ಮೈದಡವಿ, ಆಶೀರ್ವದಿಸಿದರು. ಹೀಗೆ, ಶ್ರೀಯವರಿಂದ ಆಶೀರ್ವಾದ ಹೊಂದಿದ ಆ ಯುವ ವಿದ್ಯಾರ್ಥಿಯೇ, ಇಂದು ಕೊಲ್ಲಾಪುರದ ಶಿವಾಜಿ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿರುವ ಖ್ಯಾತ ಸಾಹಿತಿ, ಶಾಂತಿನಾಥ ದೇಸಾಯಿ ಅವರು. ಶ್ರೀಯವರ ಆಶೀರ್ವಾದ ಹುಸಿ ಹೋಗುತ್ತಿರಲಿಲ್ಲ.

ನಾವು ಕಾಲೇಜಿನಲ್ಲಿ ಅನೇಕ ಸಂಘಗಳನ್ನು ಪ್ರಾರಂಭಿಸಿದಂತೆ, ಕನ್ನಡಕ್ಕಾಗಿ ಆಗ ತುಂಬಾ ಪ್ರಚಲಿತವಿರುವ 'ಕರ್ನಾಟಕ ಸಂಘ' ಎಂಬ ಹೆಸರಿನ ಸಂಘ ವನ್ನೂ ಪ್ರಾರಂಭಿಸಿದೆವು. ಶ್ರೀಯವರಿಗೆ ಈ ಹೆಸರು ಮನಸ್ಸಿಗೆ ಬರಲಿಲ್ಲ. ಅಕಾಡೆಮಿಕ್ ಇರುವ ಪ್ರತಿಯೊಂದು ವಿಷಯದ ವಿವರದಲ್ಲಿಯೂ ಅವರು ಮನಸ್ಸು

ಹಾಕುತ್ತಿದ್ದರು. "ಕರ್ನಾಟಕದ ಧಾರವಾಡದಲ್ಲಿ 'ಕರ್ನಾಟಕ ಸಂಘ'ವೆಂದರೇನು ? ಮಹಾರಾಷ್ಟ್ರದಲ್ಲಿ, ಆಂಧ್ರಪ್ರದೇಶದಲ್ಲಿ, ತಮಿಳುನಾಡಿನಲ್ಲಿ ಕರ್ನಾಟಕದ ಹೆಸರಿನ ಸಂಘ ಸರಿ; ಅದನ್ನು ಬಿಟ್ಟು ಇಲ್ಲಿ ಕರ್ನಾಟಕದ ಬಗ್ಗೆ ನಾವೇನು ಮಾಡುವದಿದೆ. ಆದ್ದರಿಂದ, ಸಾಂಸ್ಕೃತಿಕ ಕರ್ನಾಟಕ ಹಾಗೂ ಭಾಷಿಕ ಸಾಹಿತ್ಯಕ ಕನ್ನಡವನ್ನೊಳಗೊಂಡ ಒಂದು ಸಮಮನಸ್ಕರ ತಂಡವನ್ನು ಕಟ್ಟೋಣ. ಅದು ಮನೆತನ ಇದ್ದ ಹಾಗೆ ಇರಲಿ. ಅವರೆಲ್ಲ ಅಣ್ಣತಮ್ಮಂದಿರು. ಅದಕ್ಕಾಗಿ 'ಕರ್ನಾಟಕ ಸಂಘ' ಅನ್ನುವದಕ್ಕಿಂತ, 'ಕನ್ನಡ ಬಳಗ' ಎಂದು ಹೆಸರಿಟ್ಟರೆ ಒಳ್ಳೆಯದಲ್ಲವೆ ?" ಎಂದು ನಿರ್ಧಾರವನ್ನು ನಮಗೇ ಬಿಟ್ಟರು. ಅವರ ಮಾತಿನ ಹಿಂದಿನ ತರ್ಕ ಹಾಗೂ ಭಾವನೆ ನಮಗೆ ಸರಿಯೆನ್ನಿಸಿದವು. ಹೀಗಾಗಿ, ಕಾಲೇಜಿನಲ್ಲಿ 'ಕನ್ನಡ ಬಳಗ' ಪ್ರಾರಂಭವಾಯಿತು. ಕನ್ನಡ ಸ್ಫೂರ್ತಿಯಿಂದ ಅನೇಕ ವಿದ್ಯಾರ್ಥಿಗಳು ದೀಪ್ತರಾದರು.

ಕರ್ನಾಟಕ ಏಕೀಕರಣ, ಸಮಸ್ತ ಕನ್ನಡಿಗರ ಭಾವೈಕ್ಯ – ಇವು ಶ್ರೀಯುವರ ಜೀವನದುಸಿರಾಗಿದ್ದವು. ಹರಿಹರದ ಬಳಿಯ ತುಂಗಭದ್ರೆಯ ಮೇಲಿನ ಸೇತುವೆ, ಬರಿಯ ಸಿಮೆಂಟ್ ಕಾಂಕ್ರೀಟಿನ ಸೇತುವೆಯಾಗದೆ, ಉತ್ತರ ಮತ್ತು ಮೈಸೂರು ಕನ್ನಡಿಗರ ಹೃದಯವನ್ನು ಬೆಸೆಯುವ ಭಾವನಾತ್ಮಕ ಬಂಧನವಾಗಬೇಕೆಂದು ಅವರ ಪ್ರಬಲವಾದ ಇಚ್ಛೆ. ಇದಕ್ಕಾಗಿ ಅವರು, ಕರ್ನಾಟಕ ಏಕೀಕರಣದ ಬಗ್ಗೆ ಅಷ್ಟೇ ತೀವ್ರವಾದ ಭಾವನೆಯುಳ್ಳವರನ್ನು ಕಾಲೇಜಿಗೆ ಮೇಲಿಂದ ಮೇಲೆ ಬರಮಾಡಿಕೊಳ್ಳುತ್ತಿದ್ದರು. ಹೀಗೆ ಬಂದವರಲ್ಲಿ ಕೈ. ವಾ. ಶಿ. ಶಿ. ಬಸವನಾಳ ಅವರು ಹಾಗೂ ದಿವಂಗತ ಮುದವೀಡು ಕೃಷ್ಣರಾಯರ ನೆನಪು ನನಗಿದೆ. ಶಿ. ಶಿ. ಬಸವನಾಳ ಅವರು ವಿದ್ಯಾರ್ಥಿಗಳನ್ನುದ್ದೇಶಿಸಿ ಕರ್ನಾಟಕ ಏಕೀಕರಣದ ಬಗ್ಗೆ ಉದ್ಬೋಧಕವಾಗಿ ಮಾತನಾಡಿದರಲ್ಲದೆ, ಸಭೆಯ ಕೊನೆಯಲ್ಲಿ ಶ್ರೀಯುವರು ಅಧ್ಯಕ್ಷ ಭಾಷಣ ಮಾಡಿ, ಸಮಗ್ರ ಕರ್ನಾಟಕದ ಒಂದು ಭೂಪಟವನ್ನು ಹೊರತೆಗೆದು, ಹೃದಯಗಳ ಏಕೀಕರಣದ ದ್ಯೋತಕವಾಗಿ ತಾವು ಹಾಗೂ ಬಸವನಾಳರು ಅದರ ಮೇಲೆ ತಮ್ಮ ಹಸ್ತಾಕ್ಷರವನ್ನು ಹಾಕಬೇಕೆಂದು ಬಿನ್ನವಿಸಿದರು. ಬಸವನಾಳರು ರುಜು ಮಾಡಿದ ಮೇಲೆ ತಾವು ರುಜು ಹಾಕಿ, ಅದನ್ನು ತಮ್ಮ ಪ್ರಾಚಾರ್ಯರ ಕಚೇರಿಯಲ್ಲಿ ಹಾಕಿದ್ದರು. ನಾನು ಆ ಕಾಲೇಜಿನ ಪ್ರಿನ್ಸಿಪಾಲನಾಗಿದ್ದಾಗಲೂ ಸಹ ಅದನ್ನು ಒಂದು ಸಾಂಸ್ಕೃತಿಕ ಪ್ರತೀಕವೆಂಬಂತೆ ಕಾಯ್ದಿರಿಸಿದ್ದೆ.

ಶ್ರೀಯುವರು ಧಾರವಾಡದಲ್ಲಿದ್ದಾಗ, ಅವರನ್ನು ಸರಿಯಾಗಿ ಕಾಣಲಿಲ್ಲ, ಅವರಿಗೆ ಸಿಗಬೇಕಾದ ಮರ್ಯಾದೆ ಅವರಿಗೆ ಸಿಗಲಿಲ್ಲ ಎಂಬ ಮಾತು ಒಂದೊಂದು ಸಲ ಅಲ್ಲಲ್ಲಿ ಕೇಳಿ ಬರುತ್ತದೆ. ನನ್ನ ಮಟ್ಟಿಗೆ, ಇದು ತುಂಬಾ ಸತ್ಯಕ್ಕೆ ದೂರವಾದುದು. ಶ್ರೀಯುವರು ವಿನಚರಿಯನ್ನೇನಾದರೂ ಇಟ್ಟಿದ್ದರೆ, ಅವರಲ್ಲಿ

ಯಾವ ವಿಷಯ ಉಲ್ಲಿಖಿತವಾಗಿವೆಯೋ ಗೊತ್ತಿಲ್ಲ. ಆದರೆ, ಅವರನ್ನು ತೀರ ಸನಿಹದಿಂದ ನೋಡಿದ ನನ್ನಂಥವರಿಗೆ ಇದು ಸರಿಯಾದ ಅಭಿಪ್ರಾಯವೆಂದು ಕಂಡುಬರುವುದಿಲ್ಲ.

ಈ ಅಭಿಪ್ರಾಯ ಉಂಟಾಗಲು, ಆ ಕಾಲದಲ್ಲಿ ಆ ಕಾಲೇಜಿನ ಬಗ್ಗೆ ನಡೆದ ಅಪಪ್ರಚಾರವೂ ಕಾರಣವೆಂದು ತೋರುತ್ತದೆ. ಕೆ. ಇ. ಬೋರ್ಡ್ ಕಾಲೇಜನ್ನು ಸ್ಥಾಪಿಸಿದವರು ನಿತಾಂತ ದೇಶಭಕ್ತರು. ಸೆರೆಮನೆ, ಉಪವಾಸ, ವನವಾಸಗಳನ್ನು ಕಂಡವರು. ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಅಗ್ರಗಣ್ಯ ಪಾತ್ರವನ್ನು ವಹಿಸಿದವರು. ಸ್ವಾತಂತ್ರ್ಯ ಹೋರಾಟಕ್ಕೆ ಧ್ಯೇಯವಾಗಿರುವ ವಿದ್ಯಾರ್ಥಿಗಳ ಪಡೆಯೂ ಬೇಕಾಗುತ್ತದೆ ಎಂಬ ದೃಷ್ಟಿಯಿಂದ ಧಾರವಾಡದ ಕರ್ನಾಟಕ ಹೈಸ್ಕೂಲ್, ಕೆ. ಇ. ಬೋರ್ಡ್ ಹೈಸ್ಕೂಲ್, ಹಳೆಯ ವಿಕ್ಟೋರಿಯಾ ಹೈಸ್ಕೂಲ್ ಮೊದಲಾದ ಶಿಕ್ಷಣ ಸಂಸ್ಥೆಗಳ ಕರಣಧಾರತ್ವವನ್ನು ವಹಿಸಿದವರು. ಈ ಸಂಸ್ಥೆಗಳನ್ನು ಗಟ್ಟಿ ಮುಟ್ಟಾಗಿ ಸಿಮೆಂಟ್ ಕಾಂಕ್ರೀಟ್ ಹಾಕಿ ನಿಲ್ಲಿಸಿದವರು. ಈ ಸಂಸ್ಥೆಯಲ್ಲಿ ಆಗ ಖ್ಯಾತ ಸ್ವಾತಂತ್ರ್ಯಯೋಧರೂ, ಪಂಡಿತರೂ ಆದ ಶ್ರೀ ದ. ಪ. ಕರಮರಕರ್ ಮೊದಲಾದವರು ಗೌರವ ಪಾಠವನ್ನು ಹೇಳುತ್ತಿದ್ದ ಕಾಲವದು. ಕೆ. ಇ. ಬೋರ್ಡಿನ ಈ ಶಿಕ್ಷಣ ಸಾಮ್ರಾಜ್ಯ ಹಾಗೂ ಯಶಸ್ಸು ಅನೇಕ 'ಬಿಳಿ ಛಾಯೆಯ' ಧಾರವಾಡಿಗರಿಗೆ ಸಮಾಧಾನವನ್ನು ತಂದಿರಲಿಲ್ಲ. ಆದ್ದರಿಂದ. ಈ ಕೆ. ಇ. ಬೋರ್ಡ್ ಕಾಲೇಜು ಪ್ರಾರಂಭವಾದಾಗ ಯಾವಾಗಲೂ ಅದರ ಬಗ್ಗೆ ಪಿಸುಮಾತಿನ ಅಪಪ್ರಚಾರವನ್ನು ಪ್ರಾರಂಭಿಸಿಯೇ ಇದ್ದರು. ಖ್ಯಾತ ಗಣಿತಜ್ಞರಾದ ರ್‍ಯಾಂಗ್ಲರ್ ಕಟ್ಟಿಯವರ ನೇತೃತ್ವದಲ್ಲಿ ವಿಕ್ಟೋರಿಯಾ ಕಾಲೇಜನ್ನು ಸ್ಥಾಪಿಸಿ, ಅದನ್ನು ಅಸಹಕಾರ ಆಂದೋಲನದ ಮೂಲಕ ಮುಚ್ಚಬೇಕಾಯಿತು. ಈಗ, ಫೀನಿಕ್ಸ್ ಪಕ್ಷಿ ತನ್ನ ಬೂದಿಯಲ್ಲಿಯೇ ಪುನರ್ಜನ್ಮ ಪಡೆಯುವಂತೆ, ಅದೇ ಸ್ಥಳದಲ್ಲಿ, ಅದೇ ನೆಲದಲ್ಲಿ, ಅದೇ ಕಟ್ಟಡಗಳಲ್ಲಿ ಕೆ. ಇ. ಬೋರ್ಡ್ ಕಾಲೇಜು ಪ್ರಾರಂಭವಾಯಿತು. ಇದು ಎಷ್ಟೋ ಜನರಿಗೆ ಅಪಥ್ಯವನ್ನುಂಟುಮಾಡಿತು. ಈ ಪ್ರಯತ್ನ ಅಯಶಸ್ವಿಯಾಗ ಬೇಕೆಂದು ಅವರು ಪಿಸುಮಾತಿನ, ಬಹಿರಂಗವಾದ ಅಪಪ್ರಚಾರವನ್ನೇ ಮಾಡುತ್ತಿದ್ದರು. ಕಟ್ಟಿ ಕಾಲೇಜ್ ಹೋದಮೇಲೆ ಈ ಕಾಲೇಜು ಬಂದದ್ದರಿಂದ ಆಗ ಕಟ್ಟಿ ಕಾಲೇಜು, ಈಗ ತಟ್ಟಿ ಕಾಲೇಜು ಎಂದು ಅಪಹಾಸ್ಯಕರವಾದ ಮಾತುಗಳನ್ನು ನಮ್ಮೆದುರಿಗೇ ಈ ಪ್ರತಿಷ್ಠಿತರು ಆಡುತ್ತಿದ್ದರು. ಆಗ, ಧಾರವಾಡದಲ್ಲಿದ್ದ ಇನ್ನೊಂದು ಕಾಲೇಜಿನ ಭವ್ಯ ಕಟ್ಟಡದ ಕೂಡ ಈ ಕಟ್ಟಡದ ತುಲನೆ ಮಾಡಿದರೆ, ಇದು ತಟ್ಟಿ ಕಾಲೇಜೇ ಸರಿ. ನನಗೇ ಗೊತ್ತು. ಮಾರ್ಚ್ ೧೫ಕ್ಕೆ ಕಾಲೇಜು ಮುಗಿದಮೇಲೆ ನಾವು ನಮ್ಮ ನಮ್ಮ ಊರಿಗೆ ಹೋಗಿ, ಜೂನ್ ೧೫ರ ಸುಮಾರಿಗೆ ಧಾರವಾಡಕ್ಕೆ ಮರಳಿದಾಗ (ಜೂನ್ ೨೦ಕ್ಕೆ ಕಾಲೇಜು ಸುರು), ನನಗೆ ಗೊತ್ತಿದ್ದ ಹಲವು ಬೇರೆ ಕಾಲೇಜಿನ

'ಮಿತ್ರರು' "ಏನು ಧಾರವಾಡಕರ್, ಯಾವಾಗ ಊರಿಂದ ಬಂದಿರಿ? ಯಾಕೆ ಬಂದಿರಿ? ನಿಮ್ಮ ಕಾಲೇಜ್ ಕ್ಲೋಸ್ ಆಗಿದೆಯೆಂದು ಗೇಟಿಗೆ ನೋಟೀಸ್ ಹಾಕಿ ಬಿಟ್ಟಿದ್ದಾರಲ್ಲಾ! ನಿಮಗೆ ತಿಳಿಸಿಲ್ಲವೇನು? ಯಾಕೆ ಸುಮ್ಮನೆ ಖರ್ಚು ಮಾಡಿಕೊಂಡು ಬಂದಿರಿ? ಸುರುವಾಗಲು ಇನ್ನೂ ನಾಲ್ಕೈದು ದಿವಸವಿದೆ, ಪರತ ಹೋಗಿಬಿಡಿರಿ" ಎಂದು ಹೇಳುತ್ತಿದ್ದರು. ಈ ಅಪಪ್ರಚಾರ ಎಷ್ಟರಮಟ್ಟಿಗೆ ಪ್ರಬಲವಾಗಿತ್ತೆಂದರೆ, ಎಷ್ಟೋ ಸಲ ನಾನೂ ಇದನ್ನು ನಂಬಿ, ಕೊನೆಗೆ ಹೋಗಿ ಕಾರ್ಯದರ್ಶಿಗಳನ್ನು ಕೇಳಬೇಕಾಯಿತು. ಅವರು "ಈಗಂತೂ ಹೋಗಿ ನೋಡಿರಿ, ಗೇಟ್ ತೆಗೆದಿದೆಯೋ ಇಲ್ಲವೋ? ಕಟ್ಟಡ ಇದೆಯೋ ಇಲ್ಲವೋ? ನಿಮಗೇ ಖಚಿತವಾಗುತ್ತದೆ" ಎಂದು ಹೇಳಿದರು. ಕಾಲೇಜಿನ ನಿವೇಶನವನ್ನು ಹುಬ್ಬಳ್ಳಿ ಮಾರ್ಗದಲ್ಲಿರುವ ವಿಸ್ತೀರ್ಣವಾದ ಹೊಸ ನಿವೇಶನಕ್ಕೆ ಸ್ಥಳಾಂತರಿಸಿದಾಗ, ಬೇರೊಂದು ಕಾಲೇಜಿನ ಒಬ್ಬ ಹಿರಿಯ ಪ್ರಾಧ್ಯಾಪಕರು "ಹುಕ್ಕೇರಿಕರ್ ಸರಿಯಾದ ಸ್ಥಳಕ್ಕೆ ಕಾಲೇಜ್ ಒಯ್ದಿದ್ದಾರೆ. ಮೈಲಾರ ಲಿಂಗದ ಗುಡ್ಡಕ್ಕೆ ಮುಂದೆ ಕಟ್ಟಿಗೆ ಕುಳ್ಳು ಹೋಗಿವೆ, ಹಿಂದಿನಿಂದ ಕಾಲೇಜ್ ಹೊರಟಿದೆ" ಎಂದು ಕಟೂಕ್ತಿಗಳನ್ನಾಡಿದರು. (ಮೈಲಾರ ಲಿಂಗನ ಗುಡ್ಡ ಎಂದರೆ, ಧಾರವಾಡದ ರುದ್ರಭೂಮಿ. ಕಾಲೇಜು ಸತ್ತು ಸ್ಮಶಾನಕ್ಕೆ ಹೊರಟಿತು ಎಂದು ಇವರ ಅಭಿಪ್ರಾಯ.) ಇಂಥ ವಾತಾವರಣದಲ್ಲಿ, ಪರಿಸರದಲ್ಲಿ, ನಾವೆಲ್ಲ ಕೆಲಸ ಮಾಡಬೇಕಾಗಿ ಬಂದದ್ದರಿಂದ ಈ ಅಪಪ್ರಚಾರದ ಪಿಸುಮಾತು ತುಂಗಭದ್ರಾ ನದಿಯನ್ನು ದಾಟಿಯೂ ಹರಡಿರಲು ಸಂಭವವಿದೆ.

ಇನ್ನೊಂದು ಕಾರಣ, ನನಗೆ ಗೊತ್ತಿದ್ದ ಮಟ್ಟಿಗೆ, ಬಿ. ಎಂ. ಶ್ರೀಯವರು ಧಾರವಾಡಕ್ಕೆ ಬರುವದರಲ್ಲಿಯೇ, ಅವರ ಆರೋಗ್ಯ ಬಹುಮಟ್ಟಿಗೆ ಹಾಳಾಗಿತ್ತು. ಅವರಿಗೆ ರಕ್ತದ ಒತ್ತಡ ಹಾಗೂ ಎದೆ ಬೇನೆ ಇದ್ದವು. ಶಿಕ್ಷಣ ಸಂಸ್ಥೆಯ ಕಾರ್ಯಾಧ್ಯಕ್ಷರೂ, ಖ್ಯಾತ ಸ್ವಾತಂತ್ರ್ಯಯೋಧರೂ, ನಿಷ್ಠಾವಂತ ರಚನಾತ್ಮಕ ಕಾರ್ಯಕರ್ತರೂ ಆಗಿದ್ದ ದಿವಂಗತ ಡಾ॥ ಎನ್. ಬಿ. ಕಬ್ಬೂರ ಅವರು ವೈಯಕ್ತಿಕವಾಗಿ ಶ್ರೀಯವರ ಪ್ರಕೃತಿಯ ಮೇಲ್ವಿಚಾರಣೆ ಮಾಡುತ್ತಿದ್ದರು. ಶ್ರೀಯವರು ಉದ್ವೇಗಕರವಾದ ವಾತಾವರಣದಲ್ಲಿ ಹೋಗಬಾರದೆಂದೂ, ಅನಗತ್ಯವಾದ ಸಭೆ-ಸಮಾರಂಭಗಳಲ್ಲಿ ಭಾಗವಹಿಸಿ ದೈಹಿಕ ಹಾಗೂ ಮಾನಸಿಕ ಒತ್ತಡಕ್ಕೆ ಒಳಗಾಗಬಾರದೆಂದೂ ಡಾ॥ ಕಬ್ಬೂರ ಅವರು ಅವರಿಗೆ ಸಲಹೆ ಮಾಡಿದ್ದರು. ಸಂಸ್ಥೆಗೆ ಆಗದವರು ಇದೇ ಮಾತುಗಳನ್ನೇ ತಿರುಗಿಸಿ, ಕೆ. ಇ. ಬೋರ್ಡ್ ಆಡಳಿತವರ್ಗ ಶ್ರೀಯವರನ್ನು ಬಂದಿಯನ್ನಾಗಿ ಮಾಡಿದೆ; ಅವರಿಗೆ ಎಲ್ಲಿಯೂ ಹೊರಗೆ ಬಿಡುವುದಿಲ್ಲ. ಅವರಿಗೆ ಯಾವ ಸ್ವಾತಂತ್ರ್ಯವೂ ಇಲ್ಲ – ಎಂಬ ಪ್ರಚಾರವನ್ನು ಪ್ರಾರಂಭಿಸಿತು. ಆದರೂ, ಡಾ॥ ಕಬ್ಬೂರ ಅವರು ಶ್ರೀಯವರಿಗೆ ತಮ್ಮ ಸಲಹೆಯನ್ನೇ ಪುನಃ ಪುನಃ ಮುಂದುವರಿಸಿದರು.

ಒಂದು ಸಲ ಹೀಗಾಯಿತು: ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘ – ಹಳೆಯ ಸಾಂಸ್ಕೃತಿಕ ಭಾಷಿಕ ಸಂಸ್ಥೆಯಲ್ಲವೆ? ಶ್ರೀಯವರಿಗೂ, ಸಂಘದ ಬಗ್ಗೆ ಅಪಾರವಾದ ಅಭಿಮಾನವಿದ್ದಿತು. ಸಂಘದ ಅಧಿಕಾರಿಗಳು ಒಂದು ಭಾಷಣ ಕ್ಕಾಗಿ ಶ್ರೀಯವರನ್ನು ಆಮಂತ್ರಿಸಿದರು. ಇವರೂ ಒಪ್ಪಿಕೊಂಡರು. ಡಾ॥ ಕಬ್ಬೂರ ಅವರಿಗೆ ಅಳುಕು ಇದ್ದೇ ಇದ್ದಿತು. ಭಾಷಣದ ಏರ್ಪಾಡು ಮಾಡಿದ್ದೇ ಸಂಘದ ಅಟ್ಟದ ಮೇಲೆ. ಶ್ರೀಯವರು ಆ ಮೆಟ್ಟಿಲುಗಳನ್ನು ಹತ್ತಿಕೊಂಡು ಹೋಗಬೇಕು. ಇವರು ಅಲ್ಲಿ ಹೋಗುವದರಲ್ಲಿಯೇ ಸಭಾಗೃಹ ಶ್ರೋತೃಗಳಿಂದ ಕಿಕ್ಕಿರಿದು ತುಂಬಿಹೋಗಿತ್ತು. ಇವರು ದಾರಿ ಮಾಡಿಕೊಂಡು ವೇದಿಕೆಯತ್ತ ಹೋದರು. ಸೂಜಿ ಬಿದ್ದರೆ ಕೇಳಿಸಬೇಕು ಅನ್ನುವಷ್ಟು ಶಾಂತತೆ ಸಭೆಯಲ್ಲಿ ನೆಲಸಿತ್ತು. ಕಾಲೇಜಿನ ಪ್ರಾಚಾರ್ಯರಾದ ಮೇಲೆ ಧಾರವಾಡದಲ್ಲಿ ಅದು ಶ್ರೀಯವರ ಮೊದಲ ಸಾರ್ವಜನಿಕ ಕಾರ್ಯಕ್ರಮ. ಎಲ್ಲರೂ ಅವರ ಮಾತನ್ನು ಕೇಳಲು ಕುತೂಹಲಿಗಳಾಗಿದ್ದರು. ವ್ಯಾಖ್ಯಾತರ ಔಪಚಾರಿಕ ಪರಿಚಯವಾದ ಕೂಡಲೇ, ಶ್ರೀಯವರು ಎದ್ದುನಿಂತರು. ಪ್ರಚಂಡ ಕರತಾಡನ ಪುರಸ್ಕಾರ. ಗ್ರೀಕ್ ಮೂರ್ತಿ ನಿಂತಹಾಗೆ ನಿಂತ ಶ್ರೀಯವರಿಗೆ ತುಂಬಾ ಅಭಿಮಾನವೆನಿಸಿತು. ಅವರು ಪ್ರಾಸ್ತಾವಿಕ ನಾಲ್ಕು ಮಾತುಗಳನ್ನಾಡಿ, "ನನಗೆ ಈವರೆಗೆ ಹೊರಗೆ ಬಂದು ನಿಮ್ಮನ್ನೆಲ್ಲ ಸಂದರ್ಶಿಸುವ ಅನುಕೂಲವಿರಲಿಲ್ಲ. ಕನ್ನಡ ಸಾಹಿತ್ಯದ ಸ್ವತಂತ್ರ ಒಲವುಗಳ ಬಗ್ಗೆ ಈಗ ನಿಮ್ಮ ಕೂಡ ಮಾತಾಡಲು ಅವಕಾಶ ದೊರಕಿದೆ..." ಎನ್ನುತ್ತಲೇ, ನಾಲ್ಕು ಅಥವಾ ಆರನೆಯ ಸಾಲಿನಲ್ಲಿ ಕುಳಿತ ಒಬ್ಬ ವ್ಯಕ್ತಿ, ಸಭಾ ಮರ್ಯಾದೆ ಭಂಗವಾಗುವ ಹಾಗೆ; "ಇದಕ್ಕೆಲ್ಲ ನೀವೇ ಕಾರಣ. ನೀವೇ ಬಂದಿಯಾಗಿ ಆ ನಾಲ್ಕು ಗೋಡೆಗಳ ನಡುವೆ ಕುಳಿತಿದ್ದಿರಿ. ಸ್ವಾತಂತ್ರ್ಯದ ಬಗ್ಗೆ ನಿಮಗೆ ಮಾತನಾಡಲು ಅಧಿಕಾರವಿಲ್ಲ. ನೀವು ದಾಸರು, ಗುಲಾಮರು. ಮೈಸೂರು ಅರಸರ ಸೇವಕರು" ಎಂದು ಮೊದಲಾಗಿ ಕೂಗಿತು. ಆಗ ಧಾರವಾಡದಲ್ಲಿದ್ದ ಒಬ್ಬ ಹಿರಿಯ ಸಾಹಿತಿ ಈ ಎರಡು ವ್ಯಕ್ತಿಗಳನ್ನು ಸಾಕಿತ್ತು. ಇವರು ಯಾರಿಗೆ ಬೇಕಾದವರಿಗೆ ಏನು ಬೇಕಾದರೂ ಮಾತಾಡಿ, ಸಭೆಗಳಲ್ಲಿ ಕಹಿನಗೆ ನಗುತ್ತಿದ್ದರು. ದಿವಂಗತ ಕವಿಭೂಷಣ ಬೆಟಗೇರಿ ಕೃಷ್ಣಶರ್ಮ, ಪ್ರೊ॥ ವಿ. ಕೃ. ಗೋಕಾಕ್ ಮೊದಲಾದ ಹಿರಿಯ ಸಾಹಿತಿಗಳೆಲ್ಲರೂ ಇವರ ಕಹಿನಾಲಗೆಯ ಬೆಂಕಿಯನ್ನು ಉಂಡವರೇ. ಈಗ ಈ ಪ್ರಯೋಗ ಬಿ. ಎಂ. ಶ್ರೀ. ಅವರ ಮೇಲಾಗಿತ್ತು. ಇಡೀ ಸಭಾಗೃಹ ತಲ್ಲಣಿಸಿತು. ಇಂಥ ಸುಪ್ರಸಿದ್ಧ ವಿದ್ವಾಂಸರಿಗೆ, ಸದ್ಗೃಹಸ್ಥರಿಗೆ ಈ ರೀತಿ ಮಾತನಾಡುವದೇ? ಆದರೆ ಯಾರಿಗೂ ಈ ಈರ್ವರ ನಾಲಗೆಯನ್ನು ಎದುರಿಸುವ ಸಾಮರ್ಥ್ಯವಿರಲಿಲ್ಲ. ಶ್ರೀಯವರೂ ಸಹ ಕ್ಷಣಮಾತ್ರ ಚಲವಿಚಲಿತ ರಾದರು. ಆದರೆ, ರೇಗಿದಾಗ ಶ್ರೀಗಳವರು ಕೆರಳಿದ ಸಿಂಹವಾಗುತ್ತಿದ್ದರು. "ದಾಸನೇ? ಹಾಗೂ, ನಾನು ದಾಸ. ನಾವೆಲ್ಲರೂ ದೇವರ ದಾಸರು. ಇದರಲ್ಲಿ

ಅವಮಾನಪಡುವ ವಿಷಯ ಏನಿದೆ ? ದೇವರ ದಾಸರಾದ ಈ ಕವಿಗಳ ಒಂದು ಸಾಹಿತ್ಯ ಪರಂಪರೆಯೇ ಕನ್ನಡದಲ್ಲಿ ಪ್ರಾರಂಭವಾಯಿತು. ಅವರು ದಾಸನ ಮಾಡಿಕೊ ಎನ್ನ ಸಾಸಿರನಾಮದ ವೆಂಕಟರಮಣ ಎಂದು ಪ್ರಾರ್ಥಿಸಿಕೊಂಡರು. ಇನ್ನೂ ಹಲವರು ಹೀಗೆ ದೇವರ ದಾಸರಾಗಿ, ಆವನಿಗೆ ಶರಣರಾಗಿ ಶರಣರೆನಿಸಿಕೊಂಡು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ಇವರೆಲ್ಲ ಪ್ರಾತಃಸ್ಮರಣೀಯರು. ಇವರ ಬಗ್ಗೆ ನಾಚುಗೆ ಪಡಬೇಕಾದುದು ಏನಿದೆ ? ನನ್ನ ಬಗ್ಗೆ ನನಗೆ ನಾಚುಗೆ ಇಲ್ಲ. ನನ್ನ ವಿಚಾರಗಳಿವೆ, ನಂಬುಗೆಗಳಿವೆ, ತತ್ವಗಳಿವೆ. ಅವು ನಿಮಗೆ ಸರಿಕಾಣಲಿಕ್ಕಿಲ್ಲ, ಆದರೆ ಅವನ್ನ ಇಟ್ಟುಕೊಳ್ಳುವ ಸ್ವಾತಂತ್ರ್ಯ ನನಗಿದೆ ..." ಎನ್ನುವ ಈ ಧಾಟಿಯಲ್ಲಿ ಸುಮಾರು ೪೫ ನಿಮಿಷ ಕಾಲ ಅದ್ಭುತ ನೈಗೆರಾ ಭೋರ್ಗರೆದ ಹಾಗೆ ಭೋರ್ಗರೆದರು. ಭಾಷಣಕ್ಕೆ ವ್ಯತ್ಯಯವುಂಟು ಮಾಡಿದವರು ಸುಮ್ಮನೆ ಕುಳಿತರು. ಇತರರು ತೃಪ್ತಿಯಿಂದ ಈ ವಾಗ್ವೈಖರಿಯನ್ನು ಆಲಿಸಿದರು. ಜನಕ್ಕೇನೋ ಇದರಿಂದ ತೃಪ್ತಿಯಾಯಿತು. ಆದರೆ ಬಿ. ಎಂ. ಶ್ರೀಯವರ ರಕ್ತದ ಒತ್ತಡ ಹೆಚ್ಚಾಗಿತ್ತು. ಡಾ॥ ಕಬ್ಬೂರ ಅವರ ಸಲಹೆ ಪುನಃ ಸರಿಯೆಂದು ಕಂಡಿತು. ಆಮೇಲೆ, ಶ್ರೀಯವರು ಸಾಮಾನ್ಯವಾಗಿ ಹೊರಗೆಲ್ಲಿಯೂ ಹೋಗುತ್ತಿರಲಿಲ್ಲ.

ಆದರೆ, ಅವರು ತೀರಿಕೊಳ್ಳುವ ಸಮಸಮಯದಲ್ಲಿ ಪುನಃ ಇನ್ನೊಂದು ಇಂಥ ಘಟನೆ ಅನಿವಾರ್ಯವಾಗಿ, ಆಕಸ್ಮಿಕವಾಗಿ ಘಟಿಸಿತು. ೧೯೪೫ರ ಅಕ್ಟೋಬರ್ ಸುಮಾರಿಗೆ ಎಂದು ಕಾಣುತ್ತದೆ. ಅಖಿಲ ಭಾರತ ಮುಂದಾಳುಗಳಲ್ಲಿ ಒಬ್ಬರಾಗಿದ್ದ ಡಾ॥ ಪಟ್ಟಾಭಿ ಸೀತಾರಾಮಯ್ಯನವರು ನಮ್ಮ ಕಾಲೇಜಿಗೆ ಭೆಟ್ಟಿಯಿತ್ತರು. ಪ್ರಾಂಶುಪಾಲ ಶ್ರೀಕಂತಯ್ಯನವರು, ಡಾ॥ ಕಬ್ಬೂರ ಅವರು ಮೊದಲಾದ ಪ್ರಮುಖರು ಅವರನ್ನು ಬರಮಾಡಿಕೊಂಡರು. ಆಗ, ನಾನು ಕಾಲೇಜ್ ಯೂನಿಯನ್‌ದ ಕಾರ್ಯಾಧ್ಯಕ್ಷನಾಗಿದ್ದೆ. ವಿದ್ಯಾರ್ಥಿಗಳನ್ನು ಸಾಲಾಗಿ ನಿಲ್ಲಿಸಿ, ಅಖಿಲ ಭಾರತ ಮಟ್ಟದ ಮುಖಂಡನಿಗೆ ಸಲ್ಲಬೇಕಾದ ಮರ್ಯಾದೆಯೊಡನೆ ಗೌರವ ರಕ್ಷೆ ಕೊಡಿಸಿದೆವು. ಕಾಲೇಜಿನ ಸೆಂಟ್ರಲ್ ಹಾಲಿನಲ್ಲಿ ಪಟ್ಟಾಭಿಯವರ ಭಾಷಣದ ಏರ್ಪಾಟಾಗಿದ್ದಿತು. ಅವರು ಮಾತನಾಡುತ್ತ ಭಾಷಾವಾರು ಪ್ರಾಂತಗಳ ವಿಷಯ ವಾಗಿ ಏನೋ ಅಸಮಾಧಾನದ ಮಾತನ್ನಾಡಿದರು. ಆಂಧ್ರ ಮೊದಲಾಗಲಿ, ಉಳಿದ ಪ್ರಾಂತಗಳ ಬಗ್ಗೆ ಆಮೇಲೆ ನೋಡೋಣ ಎನ್ನುವದು ಅವರ ಅಭಿಪ್ರಾಯವಾಗಿತ್ತೋ ಏನೋ ನನಗೆ ಸರಿಯಾಗಿ ಕೇಳಿಸಲಿಲ್ಲ. ಪಟ್ಟಾಭಿ ಮಾತನಾಡುತ್ತಿದ್ದಂತೆಯೇ, ಶ್ರೀಯವರ ಮುಖ ಕೆಂಪೇರ ಹತ್ತಿತು. ಪಟ್ಟಾಭಿ ಭಾಷಣ ಮುಗಿಯುವದೊಂದೇ ತಡ, ಅಧ್ಯಕ್ಷೀಯ ಭಾಷಣ ಕಾರ್ಯಕ್ರಮದ ಪಟ್ಟಿಯಲ್ಲಿ ಇರದಿದ್ದರೂ, ಶ್ರೀಯವರು ಮೈಕನ್ನು ತಮ್ಮೆಡೆಗೆ ಎಳೆದುಕೊಂಡು ಪಟ್ಟಾಭಿಯವರ ವಾದಸರಣಿಯನ್ನು ಛಿದ್ರವಿಚ್ಛಿದ್ರ ಮಾಡಿದರು. ಅವರ ಧ್ವನಿಯಲ್ಲಿ ಗುಡುಗಿತ್ತು, ರೋಷವಿತ್ತು, ಅಸಮಾಧಾನವಿತ್ತು. ಪಟ್ಟಾಭಿ ಏನೋ ಮಧ್ಯ ಮಾತಾಡಹೋದರು. ಆಗ

ಶ್ರೀ ಮಂತ್ರಷ್ಠೂ ಕೆರಳಿ "A seasoned teacher need not learn anything from a politician" ಎಂದು ಆರ್ಭಟಿಸಿದರು. ಸಭೆ ಮುಗಿಯಿತು. ಆದರೆ, ಸಭೆಯ ಕಾವು ಮಾತ್ರ ಇನ್ನೂ ಮುಗಿದಿರಲಿಲ್ಲ. ಡಾ॥ ಕಬ್ಬೂರ ಅವರು ಪುನಃ "ಶ್ರೀಕಂಠಯ್ಯನವರೇ, ಇಷ್ಟೇಕೆ ಕೆರಳಿದಿರಿ. ಆಮೇಲೆ ಅವರಿಗೆ ಹೇಳಲಿಕ್ಕಾಗುತ್ತಿತ್ತು" ಅಂದರು. ಆದರೆ, ಶ್ರೀ, ಅದೇ ಗಡಸು ಧ್ವನಿಯಲ್ಲಿ "Dr. Kabbur, I do not want any interference from these politicians in a cultural and vital subject like the linguistic provinces. If these provinces do not come up, ನಮ್ಮ ಏಳ್ಗೆಯೇ ಇಲ್ಲ" ಎನ್ನುವ ಧಾಟಿಯಲ್ಲಿ ಉತ್ತರಕೊಟ್ಟರು. ಪಟ್ಟಾಭಿ ಪಕ್ಕದಲ್ಲಿಯೇ ಇದ್ದರು. "I will make a crusade of this. I will tell all my fellowmen what Pattabhi said and what we feel about it." ಅಂದಿನಿಂದ ಶ್ರೀಯವರು ಪುನಃ ನಾಡಹಬ್ಬದ ಭಾಷಣಗಳ ಆಮಂತ್ರಣಗಳನ್ನು ಸ್ವೀಕರಿಸಹತ್ತಿದರು. ಬಾಗಿಲುಕೋಟೆಯ ಸಕ್ರಿ ಹೈಸ್ಕೂಲಿನ ಆಡಳಿತವರ್ಗದವರು ಆಗ ನಾಡಹಬ್ಬವನ್ನು ಅತ್ಯಂತ ಅದ್ದೂರಿಯಿಂದ ನಡೆಸುತ್ತಿದ್ದರು. ನಮ್ಮ ಪೂಜ್ಯ ತಂದೆಯವರು ಆ ಸಂಸ್ಥೆಯ ಅಧ್ಯಕ್ಷರಾಗಿದ್ದರು. ಶ್ರೀಯವರಿಗೂ ನಮ್ಮ ತಂದೆಯವರ ಪರಿಚಯವಿದ್ದಿತು. ಈ ಮೊದಲು ಅವರು ಬಾಗಿಲುಕೋಟೆಗೆ ತಮ್ಮ ಶಿಷ್ಯ ಪರಿವಾರದೊಡನೆ ಬಂದಾಗ ನಮ್ಮ ಮನೆಯಲ್ಲಿಯೇ ತಂಗಿದ್ದರು. ಬಾಗಿಲುಕೋಟೆಯ ಆಮಂತ್ರಣ ಬಂದಕೂಡಲೇ, ಅವರು ನನಗೆ ಹೇಳಿಕಳಿಸಿ ತಾವು ಬಾಗಿಲುಕೋಟೆಯ ಆಮಂತ್ರಣ ಒಪ್ಪಿರುವದಾಗಿ ಹೇಳಿದರು. ನನಗೇನೋ ಅಳುಕು. ಆದರೂ ನಾನೂ ಅವರ ಕೂಡ ಬಾಗಿಲುಕೋಟೆಗೆ ಹೋದೆ. ನಮ್ಮ ಮನೆಯಲ್ಲಿಯೇ ತಂಗಿದ್ದರು. ಅಂದಿನ ಭಾಷಣ ಕೇಳಲು ಸುಮಾರು ೮-೧೦ ಸಾವಿರ ಜನ ನೆರೆದಿದ್ದರು. ಶ್ರೀಯವರು ಆಗ ಭಾಷಾವಾರು ಪ್ರಾಂತಗಳ ಬಗ್ಗೆ ಸ್ವಲ್ಪಮಾತ್ರ ಪ್ರಸ್ತಾಪ ಮಾಡಿ ಕನ್ನಡ ಸಾಹಿತ್ಯದ ಬಗ್ಗೆ ಸುದೀರ್ಘವಾಗಿ ಮಾತಾಡಿದರು. ಜನರು ತಮ್ಮ ಜ್ಞಾನದಾಹವನ್ನು ಸಂಪೂರ್ಣವಾಗಿ ತೃಪ್ತಿಪಡಿಸಿಕೊಂಡರು. ಮರುದಿವಸ ಊರಿನ ಅನೇಕ ಪ್ರಮುಖರು ಬಂದು ಶ್ರೀಯವರನ್ನು ಕಂಡು ತಮ್ಮ ಗೌರವವನ್ನು ವ್ಯಕ್ತ ಮಾಡಿದರು. ಶ್ರೀಯವರೂ ತೃಪ್ತರಾದಂತೆ ಕಂಡರು.

ಶ್ರೀಯವರು ಘನ ವಿದ್ವಾಂಸರು. ಪ್ರಗಲ್ಭ ವಾಗ್ಮಿಗಳು, ಉತ್ತಮ ಶಿಕ್ಷಕರು, ಶಿಷ್ಯವತ್ಸಲರು, ಹಿರಿಯ ಸಾಹಿತಿಗಳು, ಶಾಸ್ತ್ರಜ್ಞರು, ಭಾಷಾವಾರು ಪ್ರಾಂತ ರಚನೆಯಲ್ಲಿ ಮುಂಚೂಣಿಯಲ್ಲಿದ್ದವರು, ಉತ್ತರ ಕರ್ನಾಟಕ ಮತ್ತು ಮೈಸೂರು ನಡುವಿನ ಸಾಂಸ್ಕೃತಿಕ ಸೇತುವೆಯಾಗಿದ್ದವರು. ಅವರ ವ್ಯಕ್ತಿತ್ವ ಅದ್ಭುತವಾಗಿದ್ದಿತು. ಆದರೆ, ತೀರ ಸನಿಹದಿಂದ ಅವರನ್ನು ನೋಡಿದ ನನಗೆ ಅವರು ಆಡಳಿತಗಾರರೆಂದು

ಅಷ್ಟೇ ಸಮರ್ಥರಿದ್ದರೆ ಎಂಬುದರ ಬಗ್ಗೆ ಸಂಶಯ. ವಿದ್ವಾಂಸ, ಕವಿ, ಅನೇಕ ಸಲ ಒಳ್ಳೆಯ ಆಡಳಿತಗಾರನಾಗಲಾರ ಎಂಬ ಮಾತನ್ನು ಅನೇಕ ಸಲ ಕೇಳುತ್ತಿರುತ್ತೇವೆ. ಶ್ರೀಯವರ ಬಗ್ಗೆಯೂ ಇದೇ ಮಾತನ್ನೇ ಹೇಳಬಹುದಿತ್ತೇನೋ. ಯಾಕೆಂದರೆ, ತೀರ ಸಣ್ಣಸಣ್ಣ ಮಾತುಗಳು ಅವರನ್ನು ಕ್ಷೋಭೆಗೆ ಒಳಗು ಮಾಡುತ್ತಿದ್ದವು. ಅನೇಕ ಸಲ ಭಾವಾವಿಷ್ಟರಾಗುತ್ತಿದ್ದರು. ಆಡಳಿತದಲ್ಲಿ ಬಲಗೈ ಮಾಡಿದ್ದು ಎಡಗೈಗೆ ಗೊತ್ತಿರಬಾರದು ಎಂದು ಹೇಳುತ್ತಾರೆ. ಆದರೆ, ಶ್ರೀಯವರು ತಮ್ಮ ಸಮಸ್ಯೆಯನ್ನು ಅನೇಕರೆದುರಿಗೆ ಚರ್ಚಿಸುತ್ತಿದ್ದರು. ಎಷ್ಟೋ ಜನ ಇದರ ದುರ್ಲಾಭವನ್ನು ಪಡೆಯುತ್ತಿದ್ದುದೂ ಉಂಟು. ಒಂದು ಹೊಲಸು ಮೂಕಿ ಅರ್ಜಿ (anonymous letter) ಸಹ ಅವರಿಗೆ ಬಹಳ ದೊಡ್ಡದಾಗಿ ಕಾಣುತ್ತಿತ್ತು. ಅದಕ್ಕಾಗಿ ತುಂಬಾ ಪೇಚಾಡುತ್ತಿದ್ದರು. ನನ್ನಂಥ ಸಣ್ಣವರು ಈ ಮಾತನ್ನು ಈಗ ಹೇಳಬಾರದು. ಆದರೆ, ಆಗ ಅವರು ಕ್ಷೋಭೆಗೆ ಒಳಗಾಗುತ್ತಿದ್ದುದನ್ನು ನೋಡಿದರೆ, ಮನಸ್ಸಿಗೆ ಬೇಜಾರಾಗುತ್ತಿತ್ತು. ಏನೇ ಆಗಲಿ, ಶ್ರೀಯವರು ಕೆ. ಇ. ಬೋರ್ಡ್ ಕಾಲೇಜಿಗೆ ಪ್ರಥಮ ಪ್ರಿನ್ಸಿಪಾಲರಾಗಿ ದೊರಕಿದ್ದರಿಂದಲೇ ಆ ಕಾಲೇಜು ಗಟ್ಟಿಯಾಗಿ ಕಾಲೂರಿ ನಿಲ್ಲಲು ಸಾಧ್ಯವಾಯಿತು. ಅವರು ಅದಕ್ಕೆ ಭದ್ರವಾದ ಅಕೆಡೆಮಿಕ್ ತಳಪಾಯವನ್ನು ಹಾಕಿದರು.

೧೯೪೭ರ ಜನವರಿ ಐದನೆಯ ತಾರೀಖು. ನಾನು ಪ್ರೊ॥ ರಂ. ಶ್ರೀ. ಮುಗಳಿಯವರನ್ನು ಕನ್ನಡ ಬಳಗದ ಕಾರ್ಯಕ್ರಮಕ್ಕಾಗಿ ಆಮಂತ್ರಿಸಿದ್ದೆ. ಅವರು ಆಗತಾನೆ ತಮ್ಮ ರನ್ನನ ಕೃತಿ ರತ್ನವನ್ನು ಬರೆದಿದ್ದರು. ಅದರ ಮುನ್ನುಡಿಯನ್ನು ಶ್ರೀಯವರು ಬರೆಯಬೇಕೆಂದು ಅವರ ಅಪೇಕ್ಷೆ ಇದ್ದಿತು. ಅದಕ್ಕಾಗಿ ಶ್ರೀಯವರನ್ನು ಭೆಟ್ಟಿಯಾಗೋಣ ಅಂದರು. ನಾನು ಅವರ ಅನುಕೂಲ ಕೇಳಿಕೊಂಡು ಬರುತ್ತೇನೆ ಎಂದು ಹೇಳಿ ಶ್ರೀಯವರನ್ನು ಕೇಳಿದೆ. ಅವರು ಅವಶ್ಯ ಬರಬಹುದು ಎಂದು ಹೇಳಿದರು. ಬಳಗದ ನಮ್ಮ ಕಾರ್ಯಕ್ರಮ ಮುಗಿದ ಕೂಡಲೆ, ನಾವಿಬ್ಬರೂ ಶ್ರೀಯವರಲ್ಲಿ ಹೋದೆವು. ಸುಮಾರು ಒಂದೂವರೆ ಗಂಟೆಯ ಆ ಸಂದರ್ಶನದಲ್ಲಿ ಹೆಚ್ಚಾಗಿ ಮಾತಾಡಿದವರು ಶ್ರೀಯವರೇ. "ತಮಗೆ ಆಯಾಸವಾಗುತ್ತಿರಬಹುದು, ನಾವು ಇನ್ನು ಬರುತ್ತೇವೆ" ಎಂದು ಎರಡು-ಮೂರು ಸಲ ನಾನು ಹೇಳಿದೆ. "ಇರಲಿ. ಮಾತಾಡದೆ ಏನು ಮಾಡುವುದು" ಎಂದು ಹೇಳಿ ಅವರು ಮಾತನ್ನು ಮುಂದುವರಿಸುತ್ತಿದ್ದರು ನಾವು ಅವರನ್ನು ಬೀಳ್ಕೊಂಡು ಹೊಸ್ತಿಲದಿಂದ ಹೊರಗೆ ಕಾಲಿಡುತ್ತಿದ್ದಂತೆಯೇ ಶ್ರೀಯವರ ಮಗಳು "ಧಾರವಾಡಕರರೇ" ಎಂದು ಗಟ್ಟಿಯಾಗಿ ಕಿರಿಚಿಕೊಂಡರು. ನಾನು ಒಳಗೆ ಹೋಗಿ ನೋಡುವದರಲ್ಲಿಯೇ ಶ್ರೀಯವರು ತಮ್ಮ ವಿರಾಮಕುರ್ಚಿಯಲ್ಲಿ ಒರಗಿಕೊಂಡಿದ್ದರು. ಅದೇ ಪ್ರಸನ್ನ ಮುಖಮುದ್ರೆ, ಅದೇ ಭಾವ, ಅದೇ ಎಳೆನಗು. ಇನ್ನೂ ಮಾತಾಡುತ್ತಿರುವರೇನೋ ಎಂಬ ಭಾವನೆ. ನಾನು ಮಾತನಾಡಿಸಿದರೆ, ಮಾತನಾಡಲಿಲ್ಲ. ಕೈಕಾಲು ತಿಕ್ಕಿದೆವು. ಯಾವುದಕ್ಕೂ

ಪ್ರತಿಕ್ರಿಯೆ ಇರಲಿಲ್ಲ. ಸಮೀಪದಲ್ಲಿಯೇ ಇರುತ್ತಿದ್ದ ಡಾ॥ ಕಬ್ಬೂರ ಮತ್ತು ಡಾ॥ ಬಿ. ಎಚ್. ಕಮಲಾಪುರ ಅವರನ್ನು ತೀವ್ರವೇ ಕರೆತರಲು ಇಬ್ಬರು ವಿದ್ಯಾರ್ಥಿಗಳನ್ನು ಸೈಕಲ್ ಮೇಲೆ ಕೊಟ್ಟು ಕಳಿಸಿದೆ. ನಾಲ್ಕೈದು ನಿಮಿಷಗಳಲ್ಲಿಯೇ ಡಾ॥ ಕಮಲಾಪುರ ಬಂದರು. ಶ್ರೀಯುವರ ಕೈ ಮುಟ್ಟಿ ನೋಡಿದರು. ಡಾಕ್ಟರರ ಮುಖ ಮ್ಲಾನವಾಯಿತು. ನಾವಿಬ್ಬರೂ ಹೊರಗೆ ಹೋದೆವು. ನಾನು "ಏನು ಡಾಕ್ಟರೇ, ಏನಾಗಿದೆ ?" ಎಂದು ಕೇಳಿದೆ. "ಸಾರಿ, ಅವರ ಪ್ರಾಣಪಕ್ಷಿ ಹಾರಿಹೋಗಿದೆ. ಡಾ॥ ಕಬ್ಬೂರ ಅವರು ಬರಲಿ, ಬಂದಮೇಲೆಯೇ ಹೇಳೋಣವಂತೆ" ಅಂದರು. ಅಷ್ಟರಲ್ಲಿಯೇ ಡಾ॥ ಕಬ್ಬೂರ ಅವರೂ ಬಂದರು. ಅವರೂ ನೋಡಿದರು. ಅವರು ಮುಂದಿನ ಕ್ರಿಯೆಗಳ ಬಗ್ಗೆ ಅವರ ಮಗಳನ್ನು, ಮಗನನ್ನು ಕೇಳೋಣ ಎಂದು ನನ್ನ ಕಿವಿಯಲ್ಲಿ ಹೇಳಿದರು. ದೇಹವನ್ನು ಬೆಂಗಳೂರಿಗೆ ಕಳಿಸಬೇಕೆ ? ಅಥವಾ ಇಲ್ಲಿಯೇ ಧಾರವಾಡದಲ್ಲಿಯೇ ಸಂಸ್ಕಾರ ಮಾಡಬೇಕೆ ? ಇಲ್ಲಿಯೇ ಸಂಸ್ಕಾರ ಮಾಡುವುದಾದರೆ, ಶ್ರೀಯುವರ ಆಪ್ತಮಿತ್ರರಾರಾದರೂ ಬರಬೇಕೆ – ಎಲ್ಲರನ್ನೂ ಕೇಳಿದೆವು. ಅವರ ಮಗಳು ಮತ್ತು ಮಗ ಅಷ್ಟೇ ಧೈರ್ಯದಿಂದ, ಸಮಾಧಾನದಿಂದ, "ಇಲ್ಲ, ಇಲ್ಲಿಯೇ ಮುಗಿಸಿಬಿಡೋಣ. ಅಲ್ಲಿಂದ ಬರುವವರು ಯಾರೂ ಇಲ್ಲ" ಎಂದರು. ಇಷ್ಟನ್ನುವದರಲ್ಲಿಯೇ ಶ್ರೀಯುವರು ವೈಕುಂಠವಾಸಿಗಳಾದ ಸುದ್ದಿ ದಳ್ಳುರಿಯಂತೆ ಊರ ತುಂಬೆಲ್ಲ ಹಬ್ಬಿತ್ತು. ಕರ್ನಾಟಕ ಕಾಲೇಜಿನಿಂದ ಪ್ರೊ॥ ಕೋರಿಯಾ ಅಫೊನ್ಸೊ ಮೊದಲಾದ ಹಿರಿಯ ಪ್ರಾಧ್ಯಾಪಕರು ಬಂದು ಪಾರ್ಥಿವ ಶರೀರಕ್ಕೆ ಪುಷ್ಪಗುಚ್ಛವನ್ನು ಅರ್ಪಿಸಿದರು. ಊರಿನ ಪ್ರಮುಖರೂ ಬಂದು ಅಂತ್ಯದರ್ಶನವನ್ನು ಪಡೆದರು. ವಿದ್ಯಾರ್ಥಿಗಳಂತೂ ಧಾರಾಕಾರವಾಗಿ ಕಣ್ಣೀರು ಸುರಿಸುತ್ತ, ಶ್ರೀಯುವರ ದೇಹವನ್ನು ನೋಡುತ್ತ ಅಚಲವಾಗಿ ನಿಂತಿದ್ದರು. ಕ್ಷಣಮಾತ್ರದಲ್ಲಿ, ವಿಕ್ಟೋರಿಯಾ ಹೈಸ್ಕೂಲ್, ಕರ್ನಾಟಕ ಹೈಸ್ಕೂಲ್, ಕೆ. ಇ. ಬೋರ್ಡ್ ಹೈಸ್ಕೂಲ್, ಕೆ. ಇ. ಬೋರ್ಡ್ ಟ್ರೈನಿಂಗ್ ಕಾಲೇಜ್, ಕೆ.ಇ. ಬೋರ್ಡ್ ಪ್ರಾಥಮಿಕ ಶಾಲೆ, ಸಂಸ್ಥೆಗಳ ವಿದ್ಯಾರ್ಥಿಗಳು, ಅಧ್ಯಾಪಕ ವೃಂದ ಸಮುದ್ರ ನೆರೆದಂತೆ ನೆರೆಯಿತು. ಕಾಲೇಜಿನ ಆವರಣದ ತುಂಬೆಲ್ಲ ಕಣ್ಣೀರು ಸುರಿಸುತ್ತಿರುವ ಬರಿಯ ಮ್ಲಾನವದನಗಳೇ. ಶ್ರೀಯುವರ ಪ್ರಸನ್ನ ಮುಖದ ಭೌತಿಕ ದೇಹವನ್ನು ಎಲ್ಲರ ದರ್ಶನಕ್ಕಾಗಿ ಅವರ ಮನೆಯ ಮುಂದಿನ ವರಾಂಡದಲ್ಲಿ ಇಡಲಾಗಿತ್ತು. ಮೂರು ಗಂಟೆಯ ಸಮಯಕ್ಕೆ ರಾಜೋಚಿತ ಮರ್ಯಾದೆಯೊಂದಿಗೆ ಶ್ರೀಯುವರ ಪಾರ್ಥಿವ ಶರೀರದ ಮೆರವಣಿಗೆ ರುದ್ರಭೂಮಿಯ ಕಡೆಗೆ ಸಾಗಿತು. ಈಗ ಶ್ರೀ ಕೇವಲ ಅವರ ಮನೆಯವರ ಸ್ವತ್ತಾಗಿರಲಿಲ್ಲ, ಸಮಗ್ರ ಧಾರವಾಡದ ಸ್ವತ್ತಾಗಿದ್ದರು. ೧೯೧೧ರಲ್ಲಿ ತಮ್ಮ ಆಯುಷ್ಯದ ಇಪ್ಪತ್ತೇಳನೆಯ ವರ್ಷದಿಂದ ಶ್ರೀಯುವರಿಗೆ ಒದಗಿದ್ದ ಧಾರವಾಡದ ನಂಟು, ಅವರ ಜೀವನದ ಅರವತ್ತೆರಡನೆಯ ವರ್ಷದಲ್ಲಿ ಅವರನ್ನು ತನ್ನ ಗರ್ಭದಲ್ಲಿಯೇ ಲೀನ ಮಾಡಿಕೊಂಡಿತು. ೧೯೪೬ರ ಜನವರಿ ಐದರಂದು ಅವರ ಪಾರ್ಥಿವ

ಶರೀರವನ್ನು ಭಗವಾನ್ ಅಗ್ನಿನಾರಾಯಣನಿಗೆ ಸಮರ್ಪಿಸಲಾಯಿತು. ಆ ಪಾಂಡಿತ್ಯ, ಆ ಭವ್ಯ ಸುಂದರ ವ್ಯಕ್ತಿತ್ವ, ಆ ಎಳೆನಗು, ಆ ಭೋರ್ಗರೆವ ವಾಗ್ಮಿತೆ, ಆ ಕಾವ್ಯ, ಆ ರಸಿಕತೆ, ಆ ಸ್ನೇಹ, ಆ ಶಿಷ್ಯವಾತ್ಸಲ್ಯ, ಆ ದರ್ಶನ – ಎಲ್ಲವೂ ಕ್ಷಣಮಾತ್ರದಲ್ಲಿ ಭೂತಕಾಲದ ವಿಷಯಂಗಳಾಗಿದ್ದವು. ಮಾನಸಿಕವಾಗಿ ದೈಹಿಕವಾಗಿ, ಉತ್ತರ ದಕ್ಷಿಣ ಕರ್ನಾಟಕದ ಸುಂದರ ಬಂಧುರ ಸಾಮರಸ್ಯವನ್ನು ಅಪೇಕ್ಷಿಸುತ್ತಿದ್ದ ಶ್ರೀಯವರು ಆ ಸಾಮರಸ್ಯದ ಸೇತುವೆಯಾಗಿ, ಸಾಂಸ್ಕೃತಿಕ ರಾಯಭಾರಿಯಾಗಿ, ಹಳೆಯ ಮೈಸೂರಿನಲ್ಲಿ ಮೂಡಿ, ಉತ್ತರ ಕರ್ನಾಟಕದವರೆಗೆ ಕೈ ಚಾಚಿದ ಸುವರ್ಣ ಮನೋಹರ ಸೇತುವೆಯಾಗಿ, ಧಾರವಾಡದ ನೆಲದಲ್ಲಿ ತಮ್ಮ ಪಂಚಪ್ರಾಣಗಳನ್ನು ಅರ್ಪಿಸಿದರು. ಇಡೀ ಧಾರವಾಡವೇ 'ಹಾ' ಎಂದಿತು.

ಶ್ರೀಯವರ ನಿಧನಾನಂತರ, ಕಾಲೇಜಿನ ವಾರಸುದಾರಿಕೆ ಕೆಲಕಾಲ ನನ್ನ ಅಸಮರ್ಥ ಭುಜಗಳ ಮೇಲೆ ಬಿದ್ದಿತು. ಆಡಳಿತವರ್ಗದವರು ನನ್ನನ್ನು ತಾತ್ಪೂರ್ತಿಕ ಪ್ರಿನ್ಸಿಪಾಲನನ್ನಾಗಿ ನೇಮಿಸಿದರು. ನಾನು ಪ್ರಾಚಾರ್ಯನಾಗಿ ಕೆಲಸ ವಹಿಸಿಕೊಂಡ ಮೇಲೆ, ಶ್ರೀಯವರಿಗೆ ಕೊನೆಯ ನಮನವಾಗಿ, ಅವರದೊಂದು ತೈಲಚಿತ್ರವನ್ನು ಕಾಲೇಜಿನ ಸಭಾಭವನದಲ್ಲಿ ಹಾಕಿದೆವು ; ಶ್ರೀಯವರ ಹೆಸರಿನಲ್ಲಿ ಶ್ರೀಕಂಠಯ್ಯ ಸುವರ್ಣಪದಕದ ವ್ಯವಸ್ಥೆ ಮಾಡಿದೆವು ; ಶ್ರೀಯವರ ಹೆಸರಿನಲ್ಲಿ ಕಾಲೇಜ್ ವಿದ್ಯಾರ್ಥಿಗಳಿಗಾಗಿ ಪ್ರಬಂಧ ಸ್ಪರ್ಧೆಯನ್ನೇರ್ಪಡಿಸಿದೆವು ; ಕುರ್ತಕೋಟಿ, ಮೊಕಾಶಿ ಪುಣೇಕರ್, ಗೋವಿಂದ ಕಣೇಕಲ್ ಮೊದಲಾದ ವಿದ್ಯಾರ್ಥಿಗಳ ಕವನ ಸಂಕಲನವನ್ನು ಶಿವಪುತ್ರಪ್ಪ ಆನಾಡ ಅವರ ಆರ್ಥಿಕ ಸಹಾಯದ ಮೂಲಕ ಪ್ರಕಟಿಸಿ, ಶ್ರೀಯವರ ಪದತಲದಲ್ಲಿ ಅದನ್ನು ಸಮರ್ಪಿಸಿದೆವು. ಅವರು ಕೊಟ್ಟ ಸ್ಫೂರ್ತಿಯನ್ನು ನೆನೆದುಕೊಂಡು ಕಾಲೇಜಿನ ತೇರನ್ನು ಹಾಗೆಯೇ ಮುಂದೆ ಮುಂದೆ ಸಾಗಿಸಿಕೊಳ್ಳುತ್ತ ಬಂದೆವು.

# ಶ್ರೀಯವರೊಡನೆ ಕೊನೆಯ ಸಂದರ್ಶನ

– ರಂ. ಶ್ರೀ. ಮುಗಳಿ

"ಬನ್ನಿ ಮುಗಳಿ ಬನ್ನಿ, ಕೂತುಕೊಳ್ಳಿ" ಮುಖದ ಮೇಲೆ ನಯವಾಗಿ ಹಾಸ್ಯ ಮಾಡುವ ತಮ್ಮ ಅಪರೂಪವಾದ ಮುಂಗುಳ್ನಗೆಯಿಂದ ಶ್ರೀಯವರು ಮಲಗಿದಲ್ಲಿಂದಲೇ ನನ್ನನ್ನೂ ನನ್ನ ಮಿತ್ರರಾದ ಶ್ರೀ ಧಾ. ರಾ. ಯ. ಅವರನ್ನೂ ಬರಮಾಡಿದರು.

ಕೆ. ಇ. ಬೋರ್ಡಿನ ಹೊಸ ಆರ್ಟ್ಸ್ ಕಾಲೇಜಿಗೆ ಪೂಜ್ಯ ಬಿ. ಎಂ. ಶ್ರೀಕಂಠಯ್ಯನವರು ಪ್ರಿನ್ಸಿಪಾಲರಾಗಿ ಬಂದಮೇಲೆ ಹಲವು ಸಲ ಅವರನ್ನು ಕಂಡಿದ್ದೆ. ನಮ್ಮ ಕಾಲೇಜಿನ ಕರ್ನಾಟಕ ಸಂಘದ ಪ್ರಾರಂಭೋತ್ಸವಕ್ಕೆ ಅವರಿಗೆ ಬರುವದಾಗದು ಎಂದು ತಿಳಿಸಿದ ಮೇಲೆ ಎಷ್ಟೂ ಶ್ರಮವಾಗದಂತೆ ನೋಡಿಕೊಳ್ಳುವೆನೆಂದು ಭರವಸೆ ಕೊಟ್ಟು ಕರೆಸಿಕೊಂಡೆ. ಆದರೆ ಅವರು ಸಾಂಗಲಿಗೆ ಬಂದಮೇಲೆ ಶ್ರಮವಾಗುವುದೇನೂ ತಪ್ಪಲಿಲ್ಲ. ನನ್ನ ಪ್ರಯತ್ನ ಮೀರಿ ಒಂದೇ ದಿನದಲ್ಲಿ ಬೆಳಗಿನಿಂದ ಸಂಜೆಯವರೆಗೆ ಅವರು ನಾಲ್ಕು ಭಾಷಣಗಳನ್ನು ಮಾಡಿದರು. ಮಧ್ಯಾಹ್ನದ ಒಂದು ಭಾಷಣವಂತೂ ಅವರಿಗೆ ಬಹಳ ತೊಂದರೆ ಕೊಟ್ಟಿತು. ಆದರೆ ಸಾಂಗಲಿ ನಗರದಲ್ಲಿ ಸಂಜೆಯ ಹೊತ್ತು 'ಉಪನಿಷತ್ತಿನಲ್ಲಿಯ ಪ್ರಾರ್ಥನೆಗಳು' ಎಂಬ ವಿಷಯವನ್ನು ಕುರಿತು ಇಂಗ್ಲಿಷಿನಲ್ಲಿ ಎರಡು ಘಂಟೆಯವರೆಗೆ ಅವರು ಅದ್ಭುತವಾಗಿ ಮಾತಾಡಿದರು. ಅದು ಬರೀ ಮಾತಲ್ಲ, ಆತ್ಮಾನುಭವದ ಗೀತವಾಯಿತು. ಆಮೇಲೆ ರಬಕವಿಯ ಸಮ್ಮೇಲನದಲ್ಲಿ ಅವರನ್ನು ಕಂಡಾಯಿತು. ಮುಂದೆ ಒಂದು ವರ್ಷದವರೆಗೆ ಅವರ ಭೆಟ್ಟಿಯೆ ಆಗಲಿಲ್ಲ. ಆಗಬೇಕೆಂದು ಹವಣಿಸಿಯೂ ಆಗಲಿಲ್ಲ. ಈ ವರ್ಷದ ನಾಡಹಬ್ಬದಲ್ಲಿ ಮೊದಲ ದಿನದ ಉಪನ್ಯಾಸ ಗೋಕಾಕದಲ್ಲಿ ಅವರದು; ಮರುದಿನ ನನ್ನದು. ಹೀಗೆ ಕಾಣುವ ಯೋಗ ಹತ್ತಿರ ಬಂದು ತಪ್ಪಿಹೋಯಿತು. ಕೊನೆಗೆ ೧೯೪೬ರ ಜನವರಿ ೩೧ಕ್ಕೆ ಧಾರವಾಡಕ್ಕೆ ಬಂದವನು ಕೇಳಿದೆ: ಶ್ರೀಕಂಠಯ್ಯನವರ ಮೈಯಲ್ಲಿ ಒಂದೆರಡು ತಿಂಗಳು ಸರಿಯಾಗಿರಲಿಲ್ಲ, ಈಗ ಗುಣವಾಗಿದೆ, ಎಂದು. ಕಾಣಬೇಕೆಂಬ ಹಂಬಲ ಹೆಚ್ಚಿತು. ಅವರ ಕಾಲೇಜಿನಲ್ಲಿ ನಾನೊಂದು ಉಪನ್ಯಾಸ

ಕೊಡಬೇಕೆಂದು ಮಿತ್ರರಾದ ಧಾ.ರಾ.ಯ.ರು ಅಗ್ರಹಪಡಿಸುತ್ತಿದ್ದರು. ಅವರು ಆ ಕಾಲೇಜಿನಲ್ಲಿಯ ಪ್ರಾಧ್ಯಾಪಕರು. ಶ್ರೀಯವರ ಆರೋಗ್ಯ ನೋಡಿ ಅದನ್ನು ಗೊತ್ತು ಮಾಡೋಣ ಎಂದು ಕಾಲೇಜಿನ ಆವಾರದಲ್ಲಿಯ ಅವರ ನಿವಾಸಕ್ಕೆ ಮಧ್ಯಾಹ್ನ ಎರಡು ಘಂಟೆಗೆ ಹೋದೆ. ಆಗ ಮೇಲಿನಂತೆ ಅವರು ಬರಮಾಡಿ ಕೊಂಡರು. ನಾನೂ ಧಾ.ರಾ.ಯ.ರೂ ಅವರ ಮಂಚದ ಹತ್ತಿರವೇ ಕುರ್ಚಿಯೆಳೆದು ಕೊಂಡು ಮಾತಾಡುತ್ತಾ ಕುಳಿತೆವು. ತಮ್ಮ ಶಾಲನ್ನು ಹೊದ್ದುಕೊಂಡು ಅವರು ಮಲಗಿದ್ದರು. ಮೋರೆಯ ಮೇಲೆ ಬೇನೆಯ ಕಳೆ ಎಳ್ಳಷ್ಟೂ ಇರಲಿಲ್ಲ. ಇಷ್ಟೇ ಯಾಕೆ, ಈಗಲೆ ಎದ್ದು ದೊಡ್ಡ ಸಭೆಯೆದಿರು ಭಾಷಣಮಾಡಬೇಕೆಂದರೆ ಇವರು ಸಿದ್ಧರಾಗಬಹುದು ಎಂಬುವಷ್ಟು ತುಂಬುಕಳೆ ಅವರ ಮೊಗದಲ್ಲಿತ್ತು. ಬೇನೆಯಂತೂ ಹೋಗಿತ್ತು, ಆದರೆ ನಿತ್ರಾಣವೂ ಇರಲಿಲ್ಲ. ಆಯಾಸವಾಗಬಾರದೆಂದೋ ಮುನ್ನೆಚ್ಚರ ವೆಂದೋ ಮಲಗಿದಂತೆ ತೋರುತ್ತಿತ್ತು.

ಮೊದಲು ಕುಶಲಪ್ರಶ್ನೆಯಾಯಿತು. ಆಮೇಲೆ ನನ್ನ ಉಪನ್ಯಾಸದ ಪ್ರಸ್ತಾಪ ಹೊರಟಿತು. ಆ ಹೊತ್ತಿಗೆ ಹುಡುಗರು ಹೆಚ್ಚಾಗಿ ಇರಲಿಲ್ಲವೆಂದು ತಿಳಿಯಿತು. ಬೇಕಾದರೆ ಉಪನ್ಯಾಸ ಇಡಿಸಿ ಎಂದು ಶ್ರೀಯುತರು ಧಾ.ರಾ.ಯ.ರಿಗೆ ಹೇಳಿದರು. ನಾನೇ ಅದೀಗ ಬೇಡವೆಂದು ರದ್ದು ಮಾಡಿಸಿದೆ. ಮುಂದೆ ಮಾತು ಸಾಗಿತು. ಬೆಳಗಾವಿ ಜಿಲ್ಲೆಯ ಮತ್ತು ಕನ್ನಡ ಸಂಸ್ಥಾನಗಳ ಪ್ರಮುಖ ಊರುಗಳಿಗೆಲ್ಲ ಹೋಗಿದ್ದರೂ ಶ್ರೀಯವರು ಗೋಕಾಕಕ್ಕೆ ಹೋಗಿರಲಿಲ್ಲ. ಅಂತೇ ಅಲ್ಲಿಯ ಗೆಳೆಯರ ಅಗ್ರಹದ ಕರೆಯನ್ನು ಮನ್ನಿಸಿ ನಾಡಹಬ್ಬದ ಮೊದಲದಿನವೇ ಹೋದರು. ಅವರಿಗೆ ತೊಂದರೆ ಯಾಗಬಾರದೆಂದು ಒಂದು ಕಾರಿನಲ್ಲಿ ಕರೆದುಕೊಂಡು ಹೋಗಿದ್ದರು. ದಾರಿಯಲ್ಲಿ ಘಟಪ್ರಭೆಯ ತಡಸಲನ್ನು ನೋಡಲಿಕ್ಕೆಂದು ಹೋದರಂತೆ, ತಿರುಗಿ ಬರುವಾಗ ಕಾಲೇ ಏಳಲಿಲ್ಲವಂತೆ. ಸ್ವಲ್ಪ ತಡೆದು ಹೇಗೋ ಮರಳಿ ಬಂದೆನೆಂದರು. ಆಮೇಲೆ ನಾಡಹಬ್ಬದ ಉಪನ್ಯಾಸಗಳಿಗಾಗಿ ಗದಗು, ಬಾಗಲಕೋಟೆ, ವಿಜಾಪುರ, ಸೊಲ್ಲಾಪುರ, ಪುಣೆ ಮುಂತಾದ ಸ್ಥಳಗಳಿಗೆ ಬಿರುಗಾಳಿಯಂತೆ ಸಂಚರಿಸಿ ಬಂದರು. ಅವರ ಆ ಕೊನೆಯ ಭಾಷಣಗಳೂ ಅತ್ಯಂತ ಆವೇಶಯುಕ್ತವಾದವು. ಅವರಿಂದ ಕನ್ನಡ ಜನಕ್ಕೆ ಕೊನೆಯ ಸಂದೇಶವನ್ನೂ ಸ್ಫೂರ್ತಿಯನ್ನೂ ಕೊಡಿಸಲು ಯಾವುದೋ ಶಕ್ತಿ ಅವರನ್ನು ಎಳೆದುಕೊಂಡು ಹೋದಂತಾಯಿತು.

"ಈ ತಿರುಗಾಟ ಹೆಚ್ಚು ಮಾಡಿ ನೀವು ಬಹಳ ಆಯಾಸಮಾಡಿಕೊಂಡಿರಿ" ಎಂದು ನಾನಾಡಿದೆ. ಅದರಿಂದಲೇ ಒಂದೆರಡು ತಿಂಗಳು ಅನಾರೋಗ್ಯವಾಯಿತೆಂದು ನಾನು ಸೂಚಿಸುತ್ತಿರಬಹುದೆಂದು ತಿಳಿದು ಅವರು ತಟ್ಟನೆ ಆಡಿದರು. "ಅದಲ್ಲ ಮುಗಳಿ, ಆ ಸಂಚಾರ ಮಾಡಿಕೊಂಡು ಬಂದಮೇಲೆ ಒಂದು ತಿಂಗಳು ಸರಿಯಾಗಿಯೇ ಇದ್ದೆ. ಅಷ್ಟು ದಿನ ಈ ಕಾಯಿಲೆ ಕಾಯಬೇಕಾದ್ದಿರಲಿಲ್ಲ !" ಆ ಮಾತನ್ನು ನಾನು ಮುಂದು

ವರಿಸಲಿಲ್ಲ. ಇನ್ನೂ ಹಾಸಿಗೆಯಲ್ಲಿದ್ದಾರೆ, ಯಾವ ಮಾತನ್ನೂ ಬೆಳೆಸಕೂಡದು, ಬೇಗನೆ ಹೊರಡಬೇಕು ಎಂದೇ ನನ್ನ ಮನೋವೃತ್ತಿಯಾಗಿತ್ತು. ಸ್ವಲ್ಪ ಹೊತ್ತಿನ ಮೇಲೆ ಒಂದು ಗಾಡಿಗೆ ಹೋಗಬೇಕಾಗಿಯೂ ಇದ್ದಿತೆಂದು ಗಡಿಯಾರ ನೋಡುತ್ತಲೇ ಇದ್ದೆ.

ತಮ್ಮ ಕಾಲೇಜಿನಲ್ಲಿ ಬಿ. ಎ. ವರ್ಗಗಳನ್ನು ಆರಂಭಿಸುವ ಬಗ್ಗೆ ಯೂನಿವರ್ಸಿಟಿಗೆ ಅರ್ಜಿ ಹಾಕಿದ ಸಂಗತಿಯನ್ನು ಅವರು ಹೇಳಿದರು. ಆರ್ಟ್ಸ್‌ಗಿಂತ ಸೈನ್ಸ್ ಕಡೆ ವಿದ್ಯಾರ್ಥಿಗಳಲ್ಲಿ ಒಲವು ಹೆಚ್ಚಾಗಿರುವುದರ ಮಾತು ಬಂತು. ವಿಜ್ಞಾನ ವಿಭಾಗವನ್ನು ಬೆಳೆಸದೆ ಯಾವ ವಿದ್ಯಾಲಯವೂ ಇಂದು ಬೆಳೆಯುವುದು ಅಶಕ್ಯ ಎನ್ನುವುದಾಯಿತು. ಈ ಹೊತ್ತಿಗೆ ಇಂಗ್ಲಿಷ್, ಕನ್ನಡ, ಸಂಸ್ಕೃತ ಮುಂತಾದ ವಿಷಯಗಳನ್ನು ಓದುವಲ್ಲಿ ಮತ್ತು ಅವುಗಳ ಪ್ರಯೋಜನ ಪಡೆಯುವ ವಿಷಯದಲ್ಲಿ ವಿದ್ಯಾರ್ಥಿಗಳ ಅನಾಸ್ಥೆ ಎಷ್ಟೆಂಬುದನ್ನು ವಿವರಿಸುತ್ತ ಅವರು ಮಾತನಾಡಿದರು. ತರುವಾಯ "ನನ್ನ 'ರನ್ನನ ಕೃತಿರತ್ನ' ಪುಸ್ತಕಕ್ಕೆ ತಾವು ಮುನ್ನುಡಿ ಬರೆಯಲೊಪ್ಪಿದ್ದು ತಿಳಿದು ಸಂತೋಷವಾಯಿತು. ಪ್ರಕಾಶಕರು ಪ್ರಕಟನೆಯ ದಿನವೊಂದನ್ನು ಗೊತ್ತುಮಾಡಿದ್ದಾರೆ. ಅಷ್ಟರೊಳಗೆ ನೀವು ಬರೆಯುವುದು ಎಷ್ಟುಮಟ್ಟಿಗೆ ಸಾಧ್ಯವೆಂದು ನಾನೇ ಮುಂದಾಗಿ ನಿಮಗೆ ಬರೆಯಲಿಲ್ಲ" ಎಂದೆ.

"ಸರಿ ತಪ್ಪೇನು? ಅದರ ಕೆಲವು ಅಚ್ಚಾದ ಪುಟಗಳನ್ನು ತರಿಸಿ ಓದಿದ್ದೇನೆ. ಸರ್ವಸಂಗ್ರಹವಾಗಿ ಸ್ವತಂತ್ರ ದೃಷ್ಟಿ ಇಟ್ಟುಕೊಂಡು ಬರೆದಿದ್ದೀರಿ. ಗದಾಯುದ್ಧದ ಮೇಲೆ ಮಲ್ಲಿನಾಥ ಟೀಕೆಯಂತಿದೆ ಬರೆವಣಿಗೆ" ಎಂದರು.

"ತಾವು ಗದಾಯುದ್ಧವನ್ನು ಆಳವಾಗಿ ಓದಿ ತಿಳಿದವರು. ನನ್ನ 'ಕೃತಿರತ್ನ'ವನ್ನು ಎಲ್ಲ ಓದಿದ ಮೇಲೆ ತಮ್ಮ ಅಭಿಪ್ರಾಯ ನನಗೆ ಬೇಕು." "ಅಯ್ಯೋ, ಇಂಗ್ಲಿಷ್ ವ್ಯಾಸಂಗದಲ್ಲಿ ನಾನು ಆಯುಷ್ಯ ಕಳೆಯಬೇಕಾಯ್ತು. ಕನ್ನಡ ಓದಲು ನಿಮಗಿದ್ದ ಸಂಧಿ ನನಗೆ ದೊರೆಯಲಿಲ್ಲ. ಮುನ್ನುಡಿಯನ್ನು ಸಂತೋಷದಿಂದ ಬರೆಯುತ್ತೇನೆ." ಈ ಸುಮಾರಿಗೆ ಶ್ರೀಯವರು ತಮ್ಮ ಮಗಳನ್ನು ಕರೆದು ನಾವು ಬಂದುದನ್ನು ತಿಳಿಸಿ, ಚಹ ತರಲು ಹೇಳಿದರು. ಚಹ ಬಂದಿತು. ಅದನ್ನು ತೆಗೆದುಕೊಳ್ಳುತ್ತಲೇ ಮುಂದೆ ಮಾತು ನಡೆದವು. "ಈಗ ನನಗೆ ಚೆನ್ನಾಗಿ [illegible]. ಸೋಮವಾರದಿಂದ ಕ್ಲಾಸುಗಳಿಗೆ ಪಾಠ ಹೇಳಬೇಕೆಂದಿದ್ದೇನೆ" ಎಂದರು. ನಾವು ಅವರನ್ನು ಕಂಡದ್ದು ಶನಿವಾರ ಜನವರಿ ೫ನೇ ತಾರೀಖಿನ ದಿನ. ಒಂದೆರಡು ದಿನದಲ್ಲಿಯೇ ಅವರ ಹುಟ್ಟುಹಬ್ಬವನ್ನು ಮಾಡುವ ಸಿದ್ಧತೆ–ಮನೆಯಲ್ಲಿ ನಡೆದಿತ್ತು. ಕಾಯಿಲೆಯಿಂದ ಎದ್ದು ಅವರು ಮೊದಲಿನಂತೆ ಓಡಾಡುವರೆಂದು ಮಕ್ಕಳ ಹಾಗೂ ಮೊಮ್ಮಕ್ಕಳ ಮುಖದಲ್ಲಿ ಸಂತೋಷ ಸೂಸುತ್ತಿತ್ತು.

ಮಾತಿಗೆ ಮಾತು ಬಂದು ಶ್ರೀಯವರೆಂದರು, "ಮದ್ರಾಸ ಸಮ್ಮೇಲನಕ್ಕೆ ಈ ಸಲ ನಾನು ಹೋಗಲಿಲ್ಲ. ಮಿತ್ರರು ಬಹಳ ಕರೆದರು. ದೇಹ ಸ್ಥಿತಿ ಹೋಗ ಗೊಡಲಿಲ್ಲ. ನನ್ನ ಮನಸ್ಸೆಲ್ಲಾ ಅಲ್ಲೇ ಇತ್ತು. ಪರಿಷತ್ತಿನ ಸಾಮಾನ್ಯ ಅಧಿವೇಶನದಲ್ಲಿ ನಮ್ಮ ನಾಡನ್ನು ಹಲವು ಪ್ರದೇಶಗಳಾಗಿ ಹಂಚಿ ಪ್ರದೇಶ ಸಮಿತಿಗಳನ್ನು ಸ್ಥಾಪಿಸ ಬೇಕೆಂದು ಗೊತ್ತಾಯಿತಂತೆ. ಅದು ನನಗೆ ಸಂತೋಷದ ವಿಷಯ."

"ನಿಜ. ನಿಮ್ಮ ಬಹುದಿನದ ಕನಸು ಈಗ ನನಸಾಯಿತು" ಎಂದೆ.

ಈ ಮಾತು ಮುಗಿದೊಡನೆ "ನಿಮ್ಮ ನಾಡಹಬ್ಬದ ಲೆಕ್ಚರುಗಳ ವಿಷಯ ಮತ್ತು ಅದರ ಪ್ರತಿಕ್ರಿಯೆ ನಾನು ಸ್ವಲ್ಪಮಟ್ಟಿಗೆ ಕೇಳಿದ್ದೇನೆ" ಎಂದು ನಾನು ಸಹಜವಾಗಿ ಆಡಿದೆ. ಅದಕ್ಕೆ ಅವರು ತಾವು ಲೆಕ್ಚರುಗಳಲ್ಲಿ ಹೇಳಿದ ಅಭಿಪ್ರಾಯ ವನ್ನು ಸಂಗ್ರಹಿಸಿ ಮತ್ತು ಅದರ ವಿವರಣೆ ಮಾಡುತ್ತಾ ಆಡಿದರು. ಈ ಕೊನೆಯ ಮಾತೇ ಬಹಳ ಹರಡಿಕೊಂಡು ಅವರ ತೀವ್ರವಾದ ವಿಚಾರಧಾರೆಯನ್ನೂ ಧಾರಾಳವಾದ ವಾಗ್ಧಾರೆಯನ್ನೂ ಪರಿಯಿಸಿತು. ಆದರೂ ಅವರು ಸ್ವರವನ್ನೆತ್ತರಕ್ಕೆ ಒಯ್ಯದೆ ಮುಖದಲ್ಲಿ ಕೆಂಪುತಾರದೆ ಇಳಿತರದಲ್ಲಿಯೆ ಮಾತಾಡಿದರು. "ಇಲ್ಲಿ ನೋಡಿ, ನಮ್ಮ ಕನ್ನಡ ನಾಡಿನಲ್ಲಿ ಕಾಂಗ್ರೆಸಿಗರು ಎಂಥ ತ್ಯಾಗ ಮಾಡಿದ್ದಾರೆ, ಸೇವೆ ಮಾಡಿದ್ದಾರೆ ದೇಶದ ಸಲುವಾಗಿ. ಆದರೆ ರಾಷ್ಟ್ರೀಯ ಸಭೆಯ ಕ್ಯಾಬಿನೆಟ್ಟಿನಲ್ಲಿ ಅವರಿಗೆ ಸ್ಥಾನವಿಲ್ಲ. ಅದನ್ನವರು ಬೇಡುವುದಿಲ್ಲ. ಏಕೀಕರಣದ ಕೂಗನ್ನು ಮೇಲಿನ ವರೆಗೆ ಹೋಗಿ ಒತ್ತಿಹೇಳಿ ಮುಟ್ಟಿಸುವುದಿಲ್ಲ. ಇದನ್ನು ಮಾಡಿ ಎಂದು ನಾನು ಹೇಳಿದ್ದು. ಆಂಧ್ರ-ಕರ್ನಾಟಕ ಒಂದೇ ಪ್ರಾಂತವಾಗಲಿ ಎಂದು ಪಟ್ಟಾಭಿಯವರು ಇಲ್ಲಿ ಬಂದು ಹೇಳಿದಾಗ ನಾನು ಎದ್ದುಹೋಗಿ ಹೇಳಬೇಕೆಂದು ಮಾಡಿದ್ದೆ. ಇವರ ಭಾಷಾನ್ವಯ ಪ್ರಾಂತರಚನೆಯ ತತ್ವವೆಲ್ಲಿ ಹೋಯಿತು ? ... ತತ್ವ ಎಲ್ಲಿದೆ ? ಮಹಾತ್ಮರಂಥವರು ಸುಭಾಷರು ಅಧ್ಯಕ್ಷರಾಗಿ ಆರಿಸಿಬಂದರೆ ಅದು ತಮ್ಮ ವೈಯಕ್ತಿಕ ಸೋಲು ಎಂದರು. ಕಾಂಗ್ರೆಸ್ ಪ್ರಮುಖರು ಅವರನ್ನು ಹೊರಗೆ ಹಾಕಿದರು. ಈಗ ಅವರಿಗೆ ಸ್ವಾತಂತ್ರ್ಯವೀರ ಎನ್ನುತ್ತಿದ್ದಾರೆ. ಈ ರಾಜಕಾರಣ ನಮಗೆ ತಿಳಿಯುವದಿಲ್ಲವೆ ? ತತ್ವ ಎಲ್ಲಿದೆ ?" ಈ ರೀತಿ ಮಾತನಾಡಿ ಒಂದೆರಡು ನಿಮಿಷ ತಡೆದು ಕೊನೆಗೆ "ನನಗೆ ಗೊತ್ತಿದೆ ಈಗ ನನ್ನ ತಲೆಕಾಯಬಾರದು" ಎಂದು ಸುಮ್ಮನಾದರು.

ಎರಡುವರೆಯಾಯಿತು. ಗಡಿಯಾರ ನೋಡಿ ನಾನು ಹೊರಡಲೆದ್ದೆ. ಶ್ರೀಯವರು ತಮ್ಮ ಹಾಸಿಗೆಯಲ್ಲಿ ಮಲಗಿದ್ದಲ್ಲಿಯೇ ತುಸು ಎದ್ದಂತೆ ಮಾಡಿ ನನ್ನ ಕೈ ಕುಲುಕಿ ಒರಗಿದರು. "ನಾನು ಹೋಗಿ ಬರುತ್ತೇನೆ" ಎಂದು ಹೇಳಿ ಹೊರಟೆ. ಧಾ.ರಾ.ಯು.ರು ನಾನೂ ಅವರ ಮನೆಯ ಹೊರಗೆ ಹೋಗಿ ಒಂದು ಮಿನಿಟು ಆಗಿತ್ತೋ ಇಲ್ಲವೋ ಅಷ್ಟರಲ್ಲಿ "ಮುಗಳಿಯವರೇ ಬನ್ನಿ" ಎಂಬ ಕೂಗು ಕೇಳಬಂತು.

ಅದು ಶ್ರೀಯವರ ಕುರುಡನಾದ ಮಗನಿಂದ ಬಂದ ಕರೆ. ಇನ್ನೇನೋ ಹೇಳುವುದಕ್ಕೆ ಕರೆದರೆಂದು ಭಾವಿಸಿ ನಾವು ಹೋಗಿ ನೋಡುತ್ತೇವೆ, ಶ್ರೀ ಅವರು ಗೋಣು ಚೆಲ್ಲಿ ಕಣ್ಣು ಮುಚ್ಚಿಬಿಟ್ಟಿದ್ದರು.

ಡಾಕ್ಟರನ್ನು ಸಾಧ್ಯವಾದಷ್ಟು ಬೇಗ ಕರೆದು ತಂದು ಎಲ್ಲ ಉಪಚಾರ ಮಾಡಿಯಾಯಿತು. ಆದರೆ ಒಮ್ಮಿಂದೊಮ್ಮೆಲೆ ಹೃದಯ ಕ್ರಿಯೆ ನಿಲ್ಲಿಸಿ ಮೃತ್ಯು ಅವರನ್ನು ತನ್ನ ವಶಕ್ಕೆ ತೆಗೆದುಕೊಂಡುಬಿಟ್ಟಿತ್ತು. ಬರಸಿಡಿಲೆರಗಿದ ಮರದ ಗೂಡಿನೊಳಗಿನ ಹಕ್ಕಿಹಿಂಡು ಕಿರುಚುವಂತೆ ಮನೆ ಮಕ್ಕಳೆಲ್ಲ ಗೊಳೋ ಎಂದು ಅಳತೊಡಗಿದರು. ಕಾಲೇಜಿನ ವಿದ್ಯಾರ್ಥಿಗಳು, ಗುರುಗಳು, ಊರ ಹಿರಿಯರು ಬರಹತ್ತಿದರು. ಎಲ್ಲರ ಮುಖದ ಮೇಲೆ ದುಃಖದ ಕಾರ್ಮೋಡ ಕವಿಯಿತು. ಆದರೆ ಆ ಕುರುಡ ಮಗನೆಂತಹ ವೇದಾಂತಿ! ಅಕ್ಕನಿಗೂ, ಸಣ್ಣ ಪುಟ್ಟ ಹುಡುಗರಿಗೂ "ಸಮಾಧಾನ ತಂದುಕೊಳ್ಳಿ" ಎಂದು ತಿರುತಿರುಗಿ ಹೇಳುತ್ತ ತನ್ನ ಕಣ್ಣಲ್ಲಿ ತೊಟ್ಟು ಹನಿಯಿಲ್ಲದೆ ಕಂಠದಲ್ಲಿ ಉಬ್ಬಿಲ್ಲದೆ ಗೊಮ್ಮಟನಂತೆ ಆತ ನಿಂತಿದ್ದಾನೆ. ತನಗೆ ಸರ್ವಸ್ವವಾದ ಜೀವನಾಧಾರವಾದ ತಂದೆ ಕೈಬಿಟ್ಟು ಹೋಗಿರುವಾಗ ಕುರುಡನಾದರೂ ಎಲ್ಲ ತಿಳಿವಳಿಕೆಯುಳ್ಳ ಬೆಳೆದ ಮಗನು ತೋರಿದ ನಿಶ್ಚಲತೆ ನನ್ನನ್ನು ಬೆರಗುಗೊಳಿಸಿತು. ಇದು ಪ್ರತ್ಯಕ್ಷ ಕೃತಿಯಲ್ಲಿ ಮಾಡಿ ತೋರಿಸಿದ ವೇದಾಂತ ಎಂದುಕೊಂಡೆ. ಶ್ರೀಯವರು ಕಂಡ ಬಾಳಿನ ಒಳಗಣ್ಣು ಈ ಪುತ್ರರತ್ನದಲ್ಲಿದೆ ಎಂದು ಅಂಥ ಶೋಕದ ಪ್ರಸಂಗದಲ್ಲಿಯೂ ನನ್ನಲ್ಲಿ ನಾನು ಸಂತವಿಸಿಕೊಂಡೆ.*

---

* ಡಾ॥ ರಂ. ಶ್ರೀ. ಮುಗಳಿಯವರ 'ರನ್ನನ ಕೃತಿರತ್ನ' (ದ್ವಿತೀಯ ಮುದ್ರಣ ೧೯೬೮)ದ ಪ್ರಾಸ್ತಾವಿಕ ಪುಟಗಳಿಂದ ತೆಗೆದುಕೊಂಡದ್ದು.

## ಭಾಷೆಯನ್ನು ಕುರಿತು – ಬಿ.ಎಂ.ಶ್ರೀ. : ಕೆಲವು ಸೂಕ್ತಿಗಳು

"ಜನರಿಗೆ ಹಿರಿಯರಿಂದ ಬರುವ ಒಡವೆಗಳಲ್ಲಿ ಭಾಷೆಯೂ ಒಂದು. ಅದು ಚೆನ್ನಾಗಿದ್ದಷ್ಟೂ ಭೂಷಣ."

*　　　*　　　*

"ಭಾಷೆ ಎನ್ನುವುದು ನಿತ್ಯಗಟ್ಟಲೆಯ ವ್ಯವಹಾರಕ್ಕಾಗಿ ಇರುವುದು ಮಾತ್ರವಲ್ಲ. ಅದರ ಮುಖ್ಯಕಾರ್ಯ ಒಂದು ಜನಾಂಗವನ್ನು ಸಂಸ್ಕಾರದಲ್ಲಿ ಮುಂದಕ್ಕೆ ತೆಗೆದುಕೊಂಡು ಹೋಗಲು ಸಾಧಕವಾಗುವುದು."

*　　　*　　　*

"ಈ ಕೆಲಸ ಕಷ್ಟಪಟ್ಟು ನಮ್ಮ ಬುದ್ಧಿಶಕ್ತಿಯನ್ನೆಲ್ಲಾ ವೆಚ್ಚಮಾಡಿ ಕಲಿಯುವ ಪರಭಾಷೆಯಿಂದ ನೆರವೇರುವುದಿಲ್ಲ. ಯಾವುದು ಸರಾಗವಾಗಿ ಒಲಿದು ಬಂದಿರುತ್ತದೆಯೋ, ಯಾವುದು ನಮ್ಮನ್ನು ಬೆನ್ನಟ್ಟಿ ಬಂದು ರಕ್ತಗತವಾಗಿರುತ್ತದೆಯೋ, ಅಂಥ ಭಾಷೆಯಿಂದ ಮಾತ್ರವೇ ಇದು ಸಾಧ್ಯ."

*　　　*　　　*

"ಇಂಡಿಯಾದಲ್ಲಿ ವಿದ್ಯಾವಂತನೆನ್ನುವ ಪ್ರತಿಯೊಬ್ಬನೂ ಇಂಗ್ಲಿಷ್, ಸಂಸ್ಕೃತ, ತನ್ನ ಕಡೆಯ ದೇಶಭಾಷೆ ಈ ಮೂರನ್ನೂ ಚೆನ್ನಾಗಿ ತಿಳಿದಿರಬೇಕು."

*　　　*　　　*

"ಎರಡಲ್ಲ ಇಪ್ಪತ್ತು ದೇಶಭಾಷೆಗಳಿದ್ದರೂ ಒಗ್ಗಟ್ಟಿಗೆ ಕುಂದಕವಿಲ್ಲ ... ಒಂದೇ ಏಕಭಾಷೆಯಿಲ್ಲದೆ ಏಕರಾಜ್ಯವಿಲ್ಲ ಎಂಬ ಮಾತು ಸುಳ್ಳು. ಐಕ್ಯಮತ್ಯವೆಂದರೆ ಎಲ್ಲರೂ ಒಂದೇ ಪಡಿಯಚ್ಚಾಗಿ ಸ್ವತಂತ್ರವನ್ನು ನೀಗಿಕೊಳ್ಳಬೇಕೆಂದಲ್ಲ."

*　　　*　　　*

"ಕನ್ನಡ ನಾಡಿಗೆ ಕನ್ನಡವೇ ಗತಿ. ಅನ್ಯಥಾ ಶರಣಂ ನಾಸ್ತಿ. ಸಂಸ್ಕೃತವಲ್ಲ, ಇಂಗ್ಲಿಷಲ್ಲ, ಹಿಂದಿಯೆಲ್ಲ, ಕನ್ನಡ."

ಭಾಗ : ಎರಡು

# ಸಾಹಿತ್ಯ ನಿಧಿ

"... ಕನ್ನಡದೊಳಿಂದಾವಾವ
ಕಲಕಂಠ ಕೇಳುತಿದೆ ಅದರ ಗಾನದೊಳೆಲ್ಲ
ತೋರುತಿದೆ ನೀವು ತೆರೆದಾ ನವ್ಯ ಅಕ್ಷುಲ್ಲ
ಧೀರಗತಿ, ಸುವಿಶಾಲ ವಿಶ್ವವಿಸ್ತರ ಭಾವ.

– 'ಶ್ರೀನಿವಾಸ'
(ಮಾಸ್ತಿ ವೆಂಕಟೇಶ ಅಯ್ಯಂಗಾರ್)

# ಕನ್ನಡ ನವೋದಯ ಮತ್ತು ಬಿ.ಎಂ.ಶ್ರೀ. : ಕರ್ನಾಟಕದ ಏಕೀಕರಣ

– ಎಸ್. ಚಂದ್ರಶೇಖರ್

ಕನ್ನಡ ಸಾಹಿತ್ಯದ ವಿವಿಧ ಮಾರ್ಗಗಳನ್ನು ಚಾರಿತ್ರಿಕ ಸಂದರ್ಭಗಳಲ್ಲಿಟ್ಟು ವಿಶ್ಲೇಷಿಸಿರುವ ವಿಮರ್ಶಕರು ಬಿ. ಎಂ. ಶ್ರೀಯವರನ್ನು ಕನ್ನಡ ನವೋದಯದ ಆಚಾರ್ಯರೆಂದು ಭಾವಿಸುತ್ತಾರೆ.[1] ಸಾಹಿತ್ಯ, ಭಾಷೆ ಈ ವಿಚಾರಗಳಲ್ಲಿ ಹೊಸ ಮಾರ್ಗವನ್ನು ಹುಡುಕುವುದಷ್ಟೆ ನವೋದಯವೆನ್ನುವುದಾದರೆ ಈ ಹೇಳಿಕೆ ಸಮಂಜಸವಾದೀತು. ಆದರೆ ಸಮಗ್ರ ಸಾಂಸ್ಕೃತಿಕ ನವೋದಯದ ಬಗ್ಗೆ ವಿಚಾರ ಮಾಡುವಾಗ ಈ ಅಭಿಪ್ರಾಯವನ್ನು ಒಪ್ಪುವುದು ಸರಿಯಾಗಲಾರದು. ಅಂದರೆ ಸಾಹಿತ್ಯಕ ನವೋದಯಕ್ಕೂ ಮತ್ತು ಎಲ್ಲವನ್ನು ಒಳಗೊಂಡ ಸಾಂಸ್ಕೃತಿಕ ನವೋದಯಕ್ಕೂ ಇರುವ ವ್ಯತ್ಯಾಸವನ್ನು ಇಲ್ಲಿ ಗಮನಿಸಬೇಕು.

ಆಧುನಿಕ ಭಾರತದಲ್ಲಿ ನವೋದಯ ಪ್ರಾರಂಭವಾದದ್ದು ೧೯ನೇ ಶತಮಾನದ ಆದಿಯಲ್ಲಿ. ಈ ನವೋದಯದ ಆಚಾರ್ಯ ಪುರುಷನೊಬ್ಬ ಇದ್ದನೆಂದು ಹೇಳುವುದಾದರೆ ಆ ಪಟ್ಟವನ್ನು ರಾಜಾ ರಾಮಮೋಹನರಾಯರಿಗೆ ಸಕಾರಣವಾಗಿಯೇ ಕಟ್ಟಲಾಗಿದೆ. ರಾಯ್, ಭಾರತದ ಇಡೀ ಸಂಸ್ಕೃತಿಯನ್ನು ವಿಮರ್ಶಿಸಿ, ಅಂಧಾನುಕರಣೆ, ಅವೈಚಾರಿಕತೆ, ಭಾರತೀಯ ಹಕ್ಕುಗಳ ನಿರಾಕರಣೆ, ಶೋಷಣೆ ಇವುಗಳ ವಿರುದ್ಧ ಸಮರ ಸಾರಿದ ವ್ಯಕ್ತಿ. ಪತ್ರಿಕಾ ಸ್ವಾತಂತ್ರ್ಯ, ಭಾರತೀಯ ಭಾಷೆಗಳ ಪುನರುಜ್ಜೀವನ, ಸಾಮಾಜಿಕ-ಧಾರ್ಮಿಕ ಸುಧಾರಣೆ ಇವುಗಳಿಗಾಗಿ ಹೋರಾಡುತ್ತಾ, ಪ್ರಜಾಭಿಪ್ರಾಯ ರೂಪಿಸಿ, ಬ್ರಿಟಿಷ್ ಕಂಪೆನಿ ಆಡಳಿತದ ವಿರುದ್ಧ, ಇಂಗ್ಲೆಂಡಿನ ಪಾರ್ಲಿಮೆಂಟಿಗೆ ದೂರು ಸಲ್ಲಿಸಿದ ಭಾರತೀಯ. ನಿಜ, ರಾಯ್ ಕೂಡ ಪಾಶ್ಚಾತ್ಯ ಉದಾರವಾದ, ಇಂಗ್ಲಿಷ್ ವಿದ್ಯೆಯಿಂದ ಪ್ರಭಾವಿತರಾಗಿದ್ದವರೇ. ಆದರೆ ಅವರು ಬ್ರಿಟಿಷ್ ಸಾಮ್ರಾಜ್ಯಶಾಹಿಯನ್ನು ಆಳದಲ್ಲಿ ದ್ವೇಷಿಸುತ್ತಿದ್ದರು. ಬ್ರಿಟಿಷರ ಸಹಕಾರದಿಂದಲೇ ಅವರನ್ನು ವಿರೋಧಿಸುವ ಒಂದು ಶಕ್ತಿಯ ಸಂಘಟನೆಗಾಗಿ ಶ್ರಮಿಸಿದವರು

ಕೂಡಾ.[2] ಇದು ಸತ್ವಯುತ ಭಾರತೀಯ ನವೋದಯ ಮತ್ತು ರಾಷ್ಟ್ರೀಯತೆಯ ಕುರುಹು ಎಂದು ನನ್ನ ಅನಿಸಿಕೆ.

ರಾಯ್ ಅವರಿದ್ದ ಬಂಗಾಳದಲ್ಲಿ ಅಥವಾ ಗೋವಿಂದ ರಾನಡೆ ಅವರಿದ್ದ ಮಹಾರಾಷ್ಟ್ರದಲ್ಲಿ ಹುಟ್ಟಿ ಬೆಳೆದ ನವೋದಯ ಕರ್ನಾಟಕದಲ್ಲಿ ಕಾಣುವುದಿಲ್ಲ. ಬಂಗಾಳಿ ಭಾಷೆಯಲ್ಲಿ ರಚಿತವಾದಂಥ 'ನೀಲ ದರ್ಪಣ್-ಜಮೀಂದಾರ್ ದರ್ಪಣ್' ದಂಥ ಕೃತಿಗಳು, ಮರಾಠಿಯಲ್ಲಿ, 'ಬಾಂಬೆ ದರ್ಪಣ್', 'ಪ್ರಭಾಕರ' ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾದ, ಆಗಿನ ಪ್ರಚಲಿತ ಸಾಮಾಜಿಕ-ಆರ್ಥಿಕ ಸಮಸ್ಯೆಗಳನ್ನು ಚಿತ್ರಿಸುವ ಸಾಹಿತ್ಯ ಕೃತಿಗಳು ಕನ್ನಡ ನವೋದಯದ ಸಂದರ್ಭದಲ್ಲಿ ಹುಟ್ಟಲಿಲ್ಲ.[3] ಅಂದರೆ ಭಾರತದ ಇತರ ಪ್ರಾಂತ್ಯಗಳ ನವೋದಯಕ್ಕೂ, ಕರ್ನಾಟಕದ ನವೋದಯಕ್ಕೂ ವ್ಯತ್ಯಾಸವಿದೆ ಎಂದಾಯಿತು.

ಆಶ್ಚರ್ಯಕರವಾದರೂ, ಕನ್ನಡ ನವೋದಯ, ಕರ್ನಾಟಕದ ನವೋದಯಗಳ ಬಗ್ಗೆ ಕನ್ನಡ ಸಾಹಿತಿ ವಿಮರ್ಶಕರು, ಇತಿಹಾಸಕಾರರು ಬರೆದಿದ್ದಾರಾದರೂ, ನವೋದಯವೆಂದರೆ ಏನು ಎಂಬುದನ್ನು ವ್ಯಾಖ್ಯಾನಿಸಿಲ್ಲ. ಕರ್ನಾಟಕದ ವಿಷಯದಲ್ಲಿ ಇದು ಕಷ್ಟವಾದ ಕೆಲಸವೇ. ಆದರೂ ಈಗಾಗಲೇ ಈ ಬಗ್ಗೆ ವಿವರಿಸಿರುವುದನ್ನು ಕರ್ನಾಟಕದ ಸಂದರ್ಭಕ್ಕೂ ಅನ್ವಯಿಸಬಹುದು ಎನಿಸುತ್ತದೆ. ಕರ್ನಾಟಕ, ಸ್ವಾತಂತ್ರ್ಯ ಪೂರ್ವದಲ್ಲಿ ಹಲವಾರು ಆಡಳಿತಗಳಲ್ಲಿ ಹಂಚಿಹೋಗಿತ್ತು. ಅವುಗಳಲ್ಲಿ ಮುಂಬೈ ಕರ್ನಾಟಕದ್ದು ಒಂದು ರೀತಿಯ ನವೋದಯವಾದರೆ, ನಿಜಾಂ ಕರ್ನಾಟಕ, ಹಳೆಯ ಮೈಸೂರುಗಳ ನವೋದಯವೇ ಬೇರೆ ರೀತಿಯವು. ಏಕೆಂದರೆ ಆಯಾ ಪ್ರದೇಶಗಳ ರಾಜಕೀಯ-ಆರ್ಥಿಕ ಸ್ಥಿತಿ ಸಹಜವಾಗಿಯೇ ಈ ನವೋದಯ ಚಳುವಳಿಯನ್ನು ನಿಯಂತ್ರಿಸುತ್ತಲೂ, ಪ್ರೇರೇಪಿಸುತ್ತಲೂ ಇದ್ದವು. ಮೈಸೂರು ರಾಜರು ಉದಾರ ವಾದಿಗಳಾದ್ದರಿಂದ ಈ ಭಾಗದ ನವೋದಯವೂ ಉದಾರ ರೀತಿಯದೇ. ಬ್ರಿಟಿಷ್ ಭಾಗಗಳಲ್ಲಿ ರಾಷ್ಟ್ರೀಯ ಚಳುವಳಿಯ ಪ್ರಭಾವ ಹೆಚ್ಚಾಗಿದ್ದುದರಿಂದ ಅಲ್ಲಿನ ನವೋದಯವೂ ಹೆಚ್ಚು ಚುರುಕಾದದ್ದಾಗಿತ್ತು. ಹೈದರಾಬಾದು ಪ್ರಾಂತ್ಯದಲ್ಲಿ ಹೆಚ್ಚು ದಮನಕಾರಿ ಆಡಳಿತವಿದ್ದುದರಿಂದ ಮತ್ತು ಅಲ್ಲಿನ ಪ್ರಜ್ಞಾವಂತರಿಗೆ ಹೊರ ಸಂಪರ್ಕವೂ ಕಡಿಮೆ ಇದ್ದುದರಿಂದಲೋ ಏನೋ ಆ ಕರ್ನಾಟಕ ಪ್ರಾಂತ್ಯದಲ್ಲಿ ನವೋದಯ ಚಳುವಳಿ ನಿಧಾನಗತಿಯದಾಗಿತ್ತು.

ನವೋದಯ ಮತ್ತು ರಾಷ್ಟ್ರೀಯತೆ ಒಂದಕ್ಕೊಂದು ಪೂರಕವಾಗಿದ್ದವೆಂದು ಒಪ್ಪಿಕೊಳ್ಳುತ್ತಾ, ಕನ್ನಡ ನವೋದಯ ಮತ್ತು ಕರ್ನಾಟಕದ ನವೋದಯದ ಬಗ್ಗೆ ಹೆಚ್ಚು ಅರ್ಥಪೂರ್ಣವಾಗಿ ಚರ್ಚಿಸಬಹುದು. ಜಿ. ಎಸ್. ಶಿವರುದ್ರಪ್ಪನವರು ವ್ಯಾಖ್ಯಾನಿಸಿರುವಂತೆ, ಕನ್ನಡ ನವೋದಯ ಸಾಹಿತ್ಯ ಇಲ್ಲಿ 'ಉಪರಾಷ್ಟ್ರೀಯ ಸಾಹಿತ್ಯ'ವಾಗಿಯೂ, ಕರ್ನಾಟಕದ ನವೋದಯ 'ಉಪರಾಷ್ಟ್ರೀಯ'ವಾಗಿಯೂ

ಪರಿಗಣಿತವಾಗಿದೆ. ಜಿ. ಎಸ್. ಎಸ್. ಹೇಳುವಂತೆ ರಾಷ್ಟ್ರೀಯತೆಯನ್ನು 'ವಿಶಾಲಾರ್ಥದಲ್ಲಿ ರಾಷ್ಟ್ರಕ್ಕೆ ಸಂಬಂಧಿಸಿರುವಿಕೆ' ಎಂದೂ, ಉಪರಾಷ್ಟ್ರೀಯತೆಯನ್ನು 'ರಾಷ್ಟ್ರದ ಅಂಗವಾದ ಉಪರಾಷ್ಟ್ರಕ್ಕೆ ಸಂಬಂಧಿಸಿರುವಿಕೆ' ಎಂದೂ, ಒಪ್ಪಿಕೊಂಡು ಈ ಹಿನ್ನೆಲೆಯಲ್ಲಿಯೇ ಈ ಲೇಖನದಲ್ಲಿ ಬಿ.ಎಂ.ಶ್ರೀಯವರನ್ನು ಕುರಿತು ಚರ್ಚಿಸಲಾಗಿದೆ.[4]

## ಕನ್ನಡ ನವೋದಯ ಮತ್ತು ಕರ್ನಾಟಕದ ನವೋದಯ

ಈ ಸಂದರ್ಭದಲ್ಲಿ ಆಗಬಹುದಾದ (ಆಗಿರುವ ?) ಒಂದು ಗೊಂದಲವನ್ನು ನಿವಾರಿಸಿಕೊಳ್ಳುವುದು ಬಹಳ ಮುಖ್ಯ. ವಿಶೇಷವಾಗಿ 'ಶ್ರೀ'ಯವರನ್ನು ಅಧ್ಯಯನ ಮಾಡುವಾಗ ಇದು ತುಂಬಾ ಅಗತ್ಯವೆಂದು ನನ್ನ ನಂಬಿಕೆ. ಇಲ್ಲಿಯವರೆಗೂ ಅವರನ್ನು ಕನ್ನಡ ನವೋದಯದ ಆಚಾರ್ಯ ಪುರುಷರೆಂದು ಒಪ್ಪಿಕೊಳ್ಳಲಾಗಿದೆ. ಇದು ಕನ್ನಡ ಸಾಹಿತ್ಯಕ ನವೋದಯಕ್ಕೆ ಸಂಬಂಧಪಟ್ಟಂತೆ ಮಾತ್ರ ಎಂದು ಈ ಸಂದರ್ಭದಲ್ಲಿ ಇಟ್ಟುಕೊಳ್ಳಬಹುದು. ಏಕೆಂದರೆ ಅವರು ಸಾಹಿತ್ಯಕ ವಿಷಯದಲ್ಲಿ ಬಿಟ್ಟರೆ, ಕರ್ನಾಟಕದ ನವೋದಯದ ಬಗ್ಗೆ ಅಂದರೆ, ನವೋದಯದ ಇತರ ಬಹು ಮುಖ್ಯ ಅಂಗಗಳಾದ ಸ್ವಾತಂತ್ರ್ಯ ಹೋರಾಟ, ಸಾಮಾಜಿಕ-ಆರ್ಥಿಕ ಸಮಸ್ಯೆಗಳ ಬಗ್ಗೆ ಅಷ್ಟಾಗಿ ಗಮನ ಕೊಟ್ಟಿಲ್ಲ. ಅಂದಿನ ರಾಜಕಾರಣಗಳನ್ನು ಹೊರತು ಪಡಿಸಿಯೂ, ಈ ನಿಟ್ಟಿನಿಂದ ನೋಡಿದಾಗ ಇಲ್ಲಿ ಕನ್ನಡ ನವೋದಯಕ್ಕೂ, ಕರ್ನಾಟಕದ ನವೋದಯಕ್ಕೂ ಇರಬಹುದಾದ ವ್ಯತ್ಯಾಸವನ್ನು ಸ್ಥೂಲವಾಗಿ ಗುರುತಿಸಿಕೊಳ್ಳಬಹುದು. ರಾಜಾ ರಾಮಮೋಹನರಾಯ್, ರವೀಂದ್ರನಾಥ ಠಾಕೂರ್, ಶರಶ್ಚಂದ್ರ, ಇವರು ಪ್ರಾರಂಭಿಸಿದ ಬಂಗಾಳಿ ಸಾಹಿತ್ಯಕ ನವೋದಯಕ್ಕೂ ಬಾಲ್‌ಶಾಸ್ತ್ರಿ ಝಂಬೇಕರ ಮುಂತಾದವರು ಅಡಿಪಾಯ ಹಾಕಿದ ಮರಾಠಿ ಸಾಹಿತ್ಯಕ ನವೋದಯಕ್ಕೂ, 'ಶ್ರೀ'ಯವರ ಕನ್ನಡ ನವೋದಯಕ್ಕೂ ಇರುವ ವ್ಯತ್ಯಾಸವೂ ಸ್ಪಷ್ಟವಾಗುತ್ತದೆ.

ಅದೇ ರೀತಿ ಕರ್ನಾಟಕಕ್ಕೆ ಬಂದರೆ. ಗೋವಿಂದ ಪೈ, ಕುವೆಂಪು, ಬೇಂದ್ರೆ, 'ಶ್ರೀ'ಯವರಿಗೂ ಇರುವ ಸಾಮ್ಯ, ವ್ಯತ್ಯಾಸಗಳೂ ಮನದಟ್ಟಾಗುತ್ತವೆ. ಪೈ, ಕುವೆಂಪು, ಬೇಂದ್ರೆ ತಮ್ಮ ಸಂದರ್ಭದ ಆಗುಹೋಗುಗಳೆಲ್ಲವನ್ನೂ, ಅಂದರೆ, ಸ್ವಾತಂತ್ರ್ಯ ಹೋರಾಟ, ದೇಶಭಕ್ತಿ, ಏಕೀಕರಣ, ಸಾಮಾಜಿಕ-ರಾಜಕೀಯ-ಆರ್ಥಿಕ ವಿಷಯಗಳೂ ಸೇರಿದಂತೆ ನೂತನ ಸಾಹಿತ್ಯಕ ಬೆಳವಣಿಗೆಗೆ ಪ್ರೋತ್ಸಾಹಕರಾಗಿ ಅವುಗಳನ್ನು ತಮ್ಮ ಸಾಹಿತ್ಯಕ ಅಭಿವ್ಯಕ್ತಿಗಳಾಗಿಸಿಕೊಂಡವರು.[5] 'ಶ್ರೀ'ಯವರ ಸಾಹಿತ್ಯಕ್ಕೆ ಸಾಮಗ್ರಿಗಳಾದದ್ದು, ಪಾಶ್ಚಾತ್ಯ ಸಾಹಿತ್ಯಕ ಮಾದರಿಗಳು, ಕನ್ನಡ ಭಾಷೆಯ ಉದ್ಧಾರ, ಕರ್ನಾಟಕ ಏಕೀಕರಣ. ಮಿಕ್ಕೆಲ್ಲ ವಿಷಯಗಳು ಅವರ ಸಾಹಿತ್ಯ ನಿರ್ಮಿತಿಯಲ್ಲಿ ಗೌಣವಾಗಿವೆ.

ಒಟ್ಟಾರೆ, ಕನ್ನಡ ನವೋದಯವೆಂದರೆ, ಸಾಹಿತ್ಯಕ ಮಾರ್ಗಗಳ ಅನ್ವೇಷಣೆ, ಭಾಷಾಭಿವೃದ್ಧಿಯೆಂದೂ, ಕರ್ನಾಟಕದ ನವೋದಯವೆಂದರೆ, ಸಾಹಿತ್ಯವೂ ಸೇರಿದಂತೆ ಮಿಕ್ಕೆಲ್ಲ ಕ್ಷೇತ್ರಗಳಲ್ಲಿನ ನವೋದಯ, ಪುನರುಜ್ಜೀವನವೆಂದೂ ಈ ಅಧ್ಯಯನದ ದೃಷ್ಟಿಯಿಂದ ಪರಿಗಣಿಸಬಹುದು.

## ಬಿ. ಎಂ. ಶ್ರೀ. ಮತ್ತು ನವೋದಯ

ಅಂದಿನ ಮೈಸೂರು ಸಂಸ್ಥಾನಕ್ಕೆ 'ಮಾದರಿ ಸಂಸ್ಥಾನ'ವೆಂಬ ಹೆಗ್ಗಳಿಕೆ ಇದ್ದು, 'ರಾಜರ್ಷಿ' ಎನಿಸಿಕೊಂಡ ಅರಸರಿಂದ ಆಳಿಸಿಕೊಳ್ಳುತ್ತಿದ್ದ ಕಾಲ. ಬಿ.ಎಂ.ಶ್ರೀ. ಈ ಚಾರಿತ್ರಿಕ ಸನ್ನಿವೇಶದಲ್ಲಿ ಮೇಲು ಮಧ್ಯಮ ವರ್ಗದಿಂದ ಬಂದವರು. ಇಂಗ್ಲಿಷ್ ವಿದ್ಯಾಭ್ಯಾಸ ಪಡೆದು, ಪಾಶ್ಚಾತ್ಯವಾದುದನ್ನು ಒಪ್ಪಿಕೊಂಡವರು.[6] ಭಾರತದ ನವೋದಯ, ಆಧುನಿಕೀಕರಣ ಎಲ್ಲವೂ ಬ್ರಿಟಿಷ್‌ರಿಂದ ಆದವೇ ಎಂದು ಖಚಿತವಾಗಿ ನಂಬಿದ್ದವರು. ಅವರು ಕನ್ನಡ ನವೋದಯ 'ಕನ್ನಡದ ಪುನರುಜ್ಜೀವನ'ವನ್ನು "ಇಂಗ್ಲಿಷಿನ ಸಂಪರ್ಕ ಮತ್ತು ಆ ಸಂಪರ್ಕದಿಂದ ಉಂಟಾದ ನಮ್ಮ ಪುರಾತನ ಚರಿತ್ರೆಯ, ಸಂಸ್ಕೃತಿಯ ಜ್ಞಾನ, ಹೆಮ್ಮೆ" ಎಂದು ವ್ಯಾಖ್ಯಾನಿಸಿದರು. ಅವನತ ಸ್ಥಿತಿಗಿಳಿದಿರುವ ಕನ್ನಡ ಮತ್ತು ಆಗತಾನೇ ಪ್ರಾರಂಭವಾಗಿದ್ದ ಕನ್ನಡ ಸಾಹಿತ್ಯ ಪರಿಷತ್ತು 'ಅರಮನೆ, ಗುರುಮನೆ ಮತ್ತು ಜನರ ಬೆಂಬಲದಿಂದಲೇ ಬೆಳೆಯಬೇಕು' ಎಂಬ ಹಂಬಲವಿಟ್ಟುಕೊಂಡವರು.[7]

ಪುನರುಜ್ಜೀವನವೆಂದರೆ ಶ್ರೀಯವರಿಗೆ "ಒಂದು ಚೇತನ ... ತನ್ನ ಜೀವ ಪುಷ್ಟಿಯನ್ನೆಲ್ಲಾ ಸೇರಿಸಿಕೊಂಡು ಅದರ ಫಲವಾಗಿ ಹೊಸದೊಂದು ಆತ್ಮವಾಗಿ, ಹೆಚ್ಚು ಶಕ್ತಿಯಿಂದ, ಹೆಚ್ಚು ಮುಕ್ತಿಯಿಂದ ಕಾಣಿಸಿಕೊಳ್ಳುವುದು." 'ಮುಕ್ತಿ' ಎಂದರೆ ಅವರ ಸ್ಪಷ್ಟ ಅರ್ಥ 'ಬಿಡುಗಡೆ, ಸ್ವಾತಂತ್ರ್ಯ'. ಎಂಥ ಸ್ವಾತಂತ್ರ್ಯ? "ಅಜ್ಞಾನದಿಂದ, ಅಸತ್ಯದಿಂದ, ಅಧರ್ಮದಿಂದ, ಪಾಪವಾಸನೆಯಿಂದ."[8] ಅಂದರೆ ಇದು ಆಧ್ಯಾತ್ಮಿಕ ಮುಕ್ತಿ, ಲೌಕಿಕ ಮುಕ್ತಿಯಲ್ಲ. ಅಂದರೆ 'ಶ್ರೀ'ಯವರ ಪುನರುಜ್ಜೀವನ ನವೋದಯ, ಅವರ ಸಮಕಾಲೀನರು ಕಲ್ಪಿಸಿಕೊಂಡ, ಭಾರತೀಯ ಪುನರುಜ್ಜೀವನ, ನವೋದಯದಿಂದ ಹೊರಗೆ ನಿಲ್ಲುವಂಥದು. ಹೇಗೆಂದರೆ ಈ ನವೋದಯ, ಪುನರುಜ್ಜೀವನ, ಆಧ್ಯಾತ್ಮಿಕ ಮುಕ್ತಿಯ ಜೊತೆಗೆ, ಲೌಕಿಕ ಮುಕ್ತಿಯನ್ನೂ ಅಂದರೆ ಸ್ವಾತಂತ್ರ್ಯ, ಸಮಾನತೆಗಳನ್ನು ಅರಸಿ ಹೊರಟದ್ದು. ಮೈಸೂರು ಈ ರೀತಿಯ ಸತ್ವಯುತ ಸಾಹಿತ್ಯಕ ನವೋದಯವನ್ನು ಕಂಡದ್ದು ಕುವೆಂಪು, ರಾಜರತ್ನಂ ಕೃತಿಗಳಲ್ಲಿ.

'ಶ್ರೀ'ಯವರು ರಾಷ್ಟ್ರೀಯತೆ, ಮತ್ತು ನವೋದಯದ ಪ್ರಮುಖ ಪ್ರವಾಹವಾದ ಸ್ವಾತಂತ್ರ್ಯ ಹೋರಾಟದ ಬಗೆಗೆ ಮಾತನಾಡಿದ್ದು ಎಲ್ಲೋ ಸೂಚ್ಯವಾಗಿ; ಮತ್ತು

ಶ್ರೀಯವರ 'ರಾಷ್ಟ್ರೀಯತೆ'ಯನ್ನು ಬೇರೆ ಯಾವ ಕನ್ನಡ ನವೋದಯ ಸಾಹಿತಿಗಳ 'ರಾಷ್ಟ್ರೀಯತೆ'ಯೊಡನೆಯೂ ಹೋಲಿಸುವುದು ಕಷ್ಟವಾದ್ದರಿಂದ ಇದನ್ನು 'ಶ್ರೀ ರಾಷ್ಟ್ರೀಯತೆ' ಎಂದೇ ಕರೆಯಬೇಕು ಎನಿಸುತ್ತದೆ. ಏಕೆಂದರೆ ಬಹುತೇಕ ಎಲ್ಲ ಸಮಕಾಲೀನ ಸಾಹಿತಿಗಳು ಅಂದಿನ ಭಾರತ ಬ್ರಿಟಿಷರ 'ದಾಸ್ಯ'ದಲ್ಲಿದೆ ಎಂದೂ, ಶ್ರೀಯವರೂ ಇದ್ದ ಮೈಸೂರು 'ಉಭಯ ದಾಸ್ಯ'ದಲ್ಲಿದೆಯೆಂದೂ (ಪರೋಕ್ಷವಾಗಿ ಬ್ರಿಟಿಷರ ಮತ್ತು ಪ್ರತ್ಯಕ್ಷವಾಗಿ ಅವರ ಕೈಗೊಂಬೆಯಾದ ಊಳಿಗಮಾನ್ಯ ವ್ಯವಸ್ಥೆಯ ಪ್ರತಿನಿಧಿಗಳಾದ ಒಡೆಯರ) ಬಲವಾಗಿ ನಂಬಿದ್ದರು. ಆದರೆ ಸ್ವಾತಂತ್ರ್ಯ ಹೋರಾಟ ತನ್ನ ಮಹತ್ತ್ವದ ಘಟ್ಟ ಮುಟ್ಟಿದ್ದ ೧೯೩೦ರ ಚಾರಿತ್ರಿಕ ಹಂತದಲ್ಲೂ ಶ್ರೀಯವರಿಗೆ ಭಾರತವಾಗಲಿ, ಮೈಸೂರಾಗಲಿ ದಾಸ್ಯದಲ್ಲಿವೆ ಎಂದು ಅನಿಸಿರಲೇ ಇಲ್ಲ.[9]

ಶ್ರೀಯವರ ಈ ತಾತ್ವಿಕ ಹಿನ್ನೆಲೆಯಲ್ಲಿಯೇ ಅವರ ಸಾಹಿತ್ಯವನ್ನು ಅಭ್ಯಸಿಸು ವುದು ಅರ್ಥಪೂರ್ಣ. ಈಗಾಗಲೇ ಈ ಲೇಖನದಲ್ಲಿ ಹೇಳಿರುವಂತೆ ಶ್ರೀಯವರ ಬಗ್ಗೆ ಅಭ್ಯಸಿಸಿರುವವರು ಈ ಬಗ್ಗೆ ಗಮನ ಕೊಟ್ಟಂತಿಲ್ಲ. ಈ ವಿಷಯವಾಗಿಯೂ ಒಂದು ಒಳನೋಟ ಕೊಟ್ಟಿರುವವರು ಜಿ. ಎಸ್. ಎಸ್. ಒಬ್ಬರೇ, ಅದೂ ಪ್ರಾಸಂಗಿಕವಾಗಿ. ಭಾರತ ಸ್ವಾತಂತ್ರ್ಯ ಹೋರಾಟದ ಬಗೆಗೆ 'ಶ್ರೀ'ಯವರು ತಾಳಿದ 'ಮೌನ'ವನ್ನು 'ಆಶ್ಚರ್ಯಕರವಾಗಿದೆ' ಎಂದೂ, ಅವರಿಗೆ (ಶ್ರೀ) "ರಾಜಭಕ್ತಿ, ಮತ್ತು ಕನ್ನಡ ಸಾಹಿತ್ಯಕ್ಕೆ ಹೊಸ ಹಾದಿ ನಿರ್ಮಿಸುವ ಕಳಕಳಿ ಇವಿಷ್ಟೆ ಪ್ರಧಾನ ವಾಗಿದ್ದುಕೊಂಡು ... ಅಂದಿನ ರಾಜಕೀಯ ಆಂದೋಳನಕ್ಕೆ ಅಭಿವ್ಯಕ್ತಿ ಕೊಡುವ ಜವಾಬ್ದಾರಿಯಿಂದ ಹೇಗೋ ಪಾರಾದಂತೆ ತೋರುತ್ತದೆ" ಎಂದು ಅಭಿಪ್ರಾಯ ಪಟ್ಟಿದ್ದಾರೆ.[10]

'ಶ್ರೀ' ಸಾಹಿತ್ಯವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅವರು ಸ್ವಾತಂತ್ರ್ಯ ಹೋರಾಟಕ್ಕೂ ತಮ್ಮದೇ ಆದ ರೀತಿಯಲ್ಲಿ ಅಭಿವ್ಯಕ್ತಿಸಿರುವುದೂ ಗೊತ್ತಾಗುತ್ತದೆ. ಆದರೆ ಅದು ಕೊನೆಯದಾಗಿ ಸಾಮ್ರಾಜ್ಯಶಾಹಿ ಬ್ರಿಟಿಷರ ಮತ್ತು ಭಾರತವನ್ನು ಬ್ರಿಟಿಷರ ವಸಾಹತುವನ್ನಾಗಿರಿಸಲು ಒಪ್ಪಿ, ಅವರ ದಾಸ್ಯವನ್ನು ಒಪ್ಪಿಕೊಂಡು, ಅಲ್ಪತೃಪ್ತಿಯಿಂದಿದ್ದ ರಾಜಶಾಹಿಯ ಪರವಾಗಿ ನಿಲ್ಲುವ ಮೂಲಕ. ಇದು ಒಂದು ರೀತಿಯ ನೇತ್ಯಾತ್ಮಕ ಮತ್ತು ಪ್ರಗತಿಪರವಲ್ಲದ ಅಭಿವ್ಯಕ್ತಿ ಎಂದು ನನ್ನ ಅನಿಸಿಕೆ. ಇಂಗ್ಲಿಷ್ ಗೀತಗಳನ್ನು ಅನುವಾದಗಳೆಂದು ಪರಿಗಣಿಸಿದರೂ, ಶ್ರೀಯವರ ಸ್ವಂತ ಸಾಹಿತ್ಯ ಕೃತಿಗಳಾದ 'ಹೊಂಗನಸುಗಳು' ಮತ್ತು 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' ಎರಡರಲ್ಲೂ ನಮಗೆ ಈ ವಿಷಯ ಸ್ಪಷ್ಟವಾಗಿ ತಿಳಿಯುತ್ತದೆ. ಅದನ್ನು ಸ್ವಲ್ಪ ವಿವರವಾಗಿ ಇಲ್ಲಿ ಪರಿಶೀಲಿಸಬಹುದು.

೧೯೧೪ರಲ್ಲಿಯೇ ರಚಿತವಾದ 'ಭರತಮಾತೆ' ಎಂಬ ಕವನದಲ್ಲಿ 'ರಾಷ್ಟ್ರೀಯ' ಭಾವನೆ ಇದೆ. ಆದರೆ ಅದಕ್ಕೆ ಮಿಗಿಲಾಗಿ ಸಾಮ್ರಾಜ್ಯಶಾಹಿ ಬ್ರಿಟನ್ನಿನ ಪರವಾದ

ಭಕ್ತಿ ಹೆಚ್ಚಾಗಿದೆ. 'ಭರತಮಾತೆ'ಯಿಂದಲೇ ಭಾರತವನ್ನು 'ಕಡಲರಾಣಿ ಬ್ರಿಟಾನಿಯಾಳ' ಕೈಗೆ ಒಪ್ಪಿಸುವಂಥ ಚಾರಿತ್ರಿಕ ಆಶಯ ಈ ಕೃತಿಯಲ್ಲಿದೆ. ೧೯೧೪ರ ಭಾರತೀಯ ಚಾರಿತ್ರಿಕ ಘಟ್ಟದ ಕಲ್ಪನೆಯಿರುವವರಿಗೆ ಈ ಕವನ ಶ್ರೀಯವರ ಇಂಗಿತವನ್ನು ಸ್ಪಷ್ಟಪಡಿಸುತ್ತದೆ. ಬ್ರಿಟಿಷರು ತೀವ್ರವಾದಿ ಸ್ವಾತಂತ್ರ್ಯ ಹೋರಾಟಗಾರರನ್ನು ನಿರ್ದಯವಾಗಿ ಬೇಟೆಯಾಡಿ ಕೊಲ್ಲುತ್ತಿದ್ದ ಕಾಲ ಅದು. ಅವರು ರಾಷ್ಟ್ರೀಯತೆಯ ಹುಟ್ಟನ್ನಡಗಿಸುವ ಕಾರ್ಯದಲ್ಲಿ ಮಗ್ನರಾಗಿದ್ದ ಚಾರಿತ್ರಿಕ ಘಟ್ಟದಲ್ಲಿ ಈ ಕವನ ಹುಟ್ಟಿದೆ. ಶ್ರೀಯವರು ರಾಷ್ಟ್ರೀಯವಾದಿಗಳನ್ನೇ ಕುರಿತಂತೆ ಭರತಮಾತೆಯಿಂದಲೇ ಹೇಳಿಸಿರುವ ಈ ಸಾಲುಗಳನ್ನು ಗಮನಿಸಬಹುದು,

> "ಕಡೆಗೆ ನೆನೆದೆನು, ನನ್ನ ಮನೆತನ ನೇರವಾಗುವ ತೆರವನು,
> ಕಡಲರಾಣಿ ಬ್ರಿಟಾನಿಯಾಳ ನನ್ನಿನಿಯ ತಂಗಿಯ ನೆರವನು,"

ಇದು ಭರತಮಾತೆಯ ವ್ರತ ಮತ್ತು ಹಿತವಚನ. ಮುಂದುವರಿದು ಬ್ರಿಟಿಷ್ ಸಾಮ್ರಾಜ್ಯವಾದವನ್ನು ವಿರೋಧಿಸುತ್ತಿದ್ದವರನ್ನು ಛೇಡಿಸುವಂತೆ ಈ ಸಾಲುಗಳು ರಚಿತವಾಗಿವೆ :

> "ಮುರಿಯಲಾಕೆಯ ವ್ರತವನಸುರರ ಮಕ್ಕಳುರಿದುರಿದೆದ್ದರು"

ಎನ್ನುತ್ತಾ ಒಂದು ದೀಕ್ಷೆಯನ್ನು ತೊಟ್ಟು, ಬೇರೆಯವರಿಗೆ ಭಾಷೆ ಕೊಟ್ಟಂತಿದೆ ಈ ಕೆಳಗಿನ ಸಾಲುಗಳು,

> "ಭರತಮಾತೆಯೆ, ಭರತಮಾತೆಯೆ, ನಿನ್ನ ಮಾತನು ಮರೆಯೆವು,
> ಹಿರಿಯ ಬಳಗದ ಕಾರ್ಯ ಚದುರೆಯ ಸಾಕುತಾಯಿಯ ತೊರೆಯೆವು,
> ಒಂದೆ ಜನವಾಗಿರುವೆವು – ಒಲಿದೊಂದೆ ಭಾರವ ಹೊರುವೆವು "

ಈ ದೀಕ್ಷೆಯಲ್ಲಿ ಭಾರತೀಯರನ್ನೆಲ್ಲಾ ಬ್ರಿಟಾನಿಯಾಳಿಂದ ಬೇರ್ಪಡಿಸದೆ ಬೆಸೆಯುವಂಥ ಭಾವನೆ ತುಂಬಿದೆ.[11]

ಇದೇ ರೀತಿ ೧೯೪೩ರಲ್ಲಿ ಬರೆದ 'ಧರ್ಮಯುದ್ಧ' ಕವನದ ಆಶಯವೂ ಆಗ ನಡೆಯುತ್ತಿದ್ದ ಎರಡನೇ ಜಾಗತಿಕ ಯುದ್ಧದಲ್ಲಿ, ಫಾಶಿಸ್ಟ್ ಶಕ್ತಿಗಳೊಡನೆ ಸೆಣಸುತ್ತಿದ್ದ ಬ್ರಿಟಿಷ್ ಮಿತ್ರ ರಾಷ್ಟ್ರಗಳಿಗೆ ಗೆಲುವು ಬಯಸುವುದೇ ಆಗಿದೆ. ಇಲ್ಲಿ ಗಮನಿಸಬೇಕಾದ ಭಾರತೀಯ ಚಾರಿತ್ರಿಕ ಅಂಶವೂ ಒಂದಿದೆ. ಅದು ಮಹಾತ್ಮ ಗಾಂಧಿಯವರು ಇದೇ ಸಮಯದಲ್ಲಿ ಬ್ರಿಟಿಷರಿಗೆ 'ಭಾರತ ಬಿಟ್ಟು ತೊಲಗಿ' ಎಂದು ಒತ್ತಾಯಿಸಿ, ಭಾರತೀಯರಿಗೆ 'ಮಾಡು ಇಲ್ಲವೆ ಮಡಿ' ಎಂದು ಕರೆಯಿತ್ತಿದ್ದ ಸನ್ನಿವೇಶ. ಬ್ರಿಟಿಷರು, ಭಾರತಕ್ಕೆ ಸಂಪೂರ್ಣ ಸ್ವಾತಂತ್ರ್ಯ ಕೊಡುವ ಖಚಿತ ಆಶ್ವಾಸನೆ ಕೊಡದಿದ್ದರೆ, ಭಾರತ ಈ ಯುದ್ಧದಲ್ಲಿ ಮಿತ್ರ ರಾಷ್ಟ್ರಗಳ ಪರವಾಗಿ ಭಾಗಿಯಾಗದು ಎಂದು ಎಚ್ಚರಿಸಿ, ರಾಜಕೀಯ-ಸಂವಿಧಾನಾತ್ಮಕ ತಲೆದೋರಿದ್ದ

ಘಟ್ಟ ಕೂಡಾ. ಶ್ರೀಯವರ ಕವನದ ಆಶಯ ಇದಕ್ಕೆ ಪೂರಕವಾಗಿ ನಿಲ್ಲುವಂಥದಲ್ಲ. ಇದಕ್ಕೆ ವಿರುದ್ಧ ದಿಕ್ಕಿನಲ್ಲಿ ನಿಲ್ಲುವಂಥದು. 'ಧರ್ಮಯುದ್ಧ' ಕವನ,

"ಕಾಳಗ ಧಣಿಗೆ ಮುಡಿಪಾಗಿಟ್ಟು ತನುಮನಧನವ ತೇಯುವೆವು"

ಎಂದು ಘೋಷಿಸುತ್ತದೆ. 'ಕಾಳಗ ಧಣಿ' ಬ್ರಿಟನ್ ಎಂದು ಬೇರೆ ಹೇಳಬೇಕಾಗಿಲ್ಲ. ಭಾರತದಲ್ಲಿ ಬ್ರಿಟನ್ ಅನ್ನು ವಿರೋಧಿಸುತ್ತಿದ್ದವರನ್ನು (ಆಗ ಮುಖ್ಯವಾಗಿ ಗಾಂಧಿ ಮತ್ತು ಕಾಂಗ್ರೆಸ್) ಮೂದಲಿಸುವಂತೆ ಇದೆ ಈ ಸಾಲು.

"ಋಣವಿದಲ್ಲವೆ ಭರತಮಾತೆಯ"

ಅಂದರೆ ಬ್ರಿಟನ್ನಿಗಾಗಿ, ಅವರ ಸಾಮ್ರಾಜ್ಯಷಾಹಿ ಯುದ್ಧಕ್ಕಾಗಿ 'ತನು ಮನ ಧನ' ತೇಯುವುದು ಭಾರತೀಯರು ತೀರಿಸಬೇಕಾಗಿರುವ ಋಣ ಎನ್ನುವರ್ಥದಲ್ಲಿ ಪದ್ಯ ಸಾಗುತ್ತದೆ.[12]

ಶ್ರೀಯವರಿಗೆ ತಮ್ಮ ರಾಷ್ಟ್ರೀಯಂತೆ, ಭಾರತ ಸ್ವಾತಂತ್ರ್ಯ ಮಾದರಿಗಳ ಸ್ಪಷ್ಟ ಅರಿವಿತ್ತು. ಅದೂ ಸೂಚ್ಯವಾಗಿಯೇ ನಮಗೆ ತಿಳಿಯುತ್ತದೆ. ೧೯೪೦ರಲ್ಲಿ, ಒಂದು ಪುಸ್ತಕಕ್ಕೆ ಬರೆದ ಮುನ್ನುಡಿಯಿಂದ ಇದನ್ನು ಗ್ರಹಿಸಬಹುದು. ಆ ಪುಸ್ತಕ ಮೈಸೂರನ್ನಾಳಿದ (೧೮೧೧–೧೮೬೮) ಮುಮ್ಮಡಿ ಕೃಷ್ಣರಾಜ ಒಡೆಯರನ್ನು ಕುರಿತದ್ದು. ಮುಮ್ಮಡಿ ಕೃಷ್ಣರಾಜರು, ಬ್ರಿಟಿಷರಿಗೆ ಅತೀವ ನಿಷ್ಠೆಯಿಂದಿದ್ದವರು. ರಾಜ್ಯವನ್ನು ಕಸಿದುಕೊಂಡರೂ ಗೊಣಗದೆ, ನಮ್ರವಾಗಿ, ವಿಧೇಯರಾಗಿ ಅದನ್ನು ವಾಪಸು ಪಡೆಯಲು ಪ್ರಯತ್ನಿಸಿದವರು. ೧೮೫೭ರಲ್ಲಿ ನಡೆದ ಮೊದಲ ಭಾರತ ಸ್ವಾತಂತ್ರ್ಯ ಸಂಗ್ರಾಮ ಕಾಲಕ್ಕೆ, ಭಾರತೀಯ ಕ್ರಾಂತಿಕಾರರನ್ನು ಬಗ್ಗು ಬಡಿಯಲು ಬ್ರಿಟಿಷರಿಗೆ ಸೈನ್ಯ, ಧನ ಸಹಾಯವಿತ್ತು ನೆರವಾದವರು. ಮತ್ತು ತಮ್ಮ 'ಸಾಮ್ರಾಜ್ಯ ಷಾಹಿ' ಸೇವೆಗಾಗಿ 'ಮೆಚ್ಚುಗೆಯ ಪತ್ರ'ವನ್ನು ಬ್ರಿಟನ್ನಿನ ರಾಣಿ ವಿಕ್ಟೋರಿಯಾಳಿಂದ ಪಡೆದವರು. ಎಲ್ಲಕ್ಕೂ ಮುಖ್ಯವಾಗಿ, ಮೈಸೂರು ಆಡಳಿತವನ್ನು ತಮ್ಮ ಮನೆತನಕ್ಕೆ ಮರಳಿ ಪಡೆದುಕೊಂಡವರು. ಶ್ರೀಯವರು ಈ ಪುಸ್ತಕಕ್ಕೆ ಮುನ್ನುಡಿ ಬರೆಯುತ್ತಾ "ಈಗಿನ ಹೋರಾಟದ ಭಾರತವೂ, ಒಕ್ಕೂಟದ ಕನಸುಗಳನ್ನು ಕಾಣುತ್ತಿರುವ ಕರ್ನಾಟಕವೂ ಅವರು (ಮುಮ್ಮಡಿ ಕೃಷ್ಣರಾಜರು) ತೋರಿಸಿ ಕೊಟ್ಟಿರುವ ಮಹಾಪಥವನ್ನು ಮನಸ್ಸಿಗೆ ತಂದುಕೊಂಡು ಕೃತಾರ್ಥರಾಗಬಹು ದಲ್ಲವೆ ?" ಎಂದು ಸಲಹೆ ಕೊಡುತ್ತಾರೆ.[13] ಅಂದರೆ ಶ್ರೀಯವರಲ್ಲಿ 'ರಾಷ್ಟ್ರೀಯತಾ' ಭಾವ ೧೮-೧೯ನೇ ಶತಮಾನದ 'ರಾಷ್ಟ್ರೀಯ ಭಾವನೆ'ಯ ಮಟ್ಟದಲ್ಲಿಯೇ ಇತ್ತು. ಭಾರತ ವಸಾಹತು ಆಗಿ, ಸಾಮ್ರಾಜ್ಯಷಾಹಿಯ ಹಿಡಿತದಲ್ಲೇ ಇರುತ್ತಾ, ಭಾರತೀಯರು 'ತಮ್ಮಿಷ್ಟ ಸಿದ್ಧಿ' ಪಡೆಯಬೇಕು ಎನ್ನುವ, ೨೦ನೇ ಶತಮಾನದ ಒಂದು ರೀತಿಯ ಪ್ರತಿಗಾಮಿ ಎನ್ನಬಹುದಾದ ಉದಾರತೆ ಇದು.

**ಏಕೀಕರಣ**

ಶ್ರೀಯವರ ಕರ್ನಾಟಕದ ಏಕೀಕರಣ ಕಲ್ಪನೆಯೂ, ಅವರ 'ರಾಷ್ಟ್ರೀಯತೆ'ಗೆ ಪೂರಕವಾಗಿ ನಿಲ್ಲುವಂಥಾದ್ದೇ. ಅವರಿಗೆ ಎಲ್ಲಿಯೂ ಗೊಂದಲವಾಗಲಿ, ವಿರೋಧಾಭಾಸಗಳಾಗಲಿ ಇಲ್ಲ.

ಏಕೀಕರಣ ಪ್ರಯತ್ನವೂ ನವೋದಯದ ಮತ್ತು ರಾಷ್ಟ್ರೀಯತೆಯ ಒಂದು ಅಂಗವಾಗಿ ಮೈತಳೆದದ್ದೇ. ಆದರೆ ಇಲ್ಲೂ ಶ್ರೀಯವರ 'ನವೋದಯ'ದ ಛಾಪು ಎದ್ದು ಕಾಣಿಸುತ್ತದೆ. ಇದು ಏಕೀಕರಣಕ್ಕಾಗಿ, ಸ್ವಾತಂತ್ರ್ಯಕ್ಕಾಗಿ, ಹಗಲಿರುಳೂ ದುಡಿದವರ, ರಾಷ್ಟ್ರೀಯವಾದಿಗಳ ಮಾದರಿಯದಲ್ಲ. ಇದನ್ನೂ ನಾವು ಶ್ರೀಯವರ 'ಕಲ್ಪನೆಯ, ಕನಸಿನ ಏಕೀಕರಣ'ವೆಂದೇ ಹೇಳಬೇಕಾಗುತ್ತದೆ.

ಏಕೀಕರಣ ಚಳುವಳಿ ಮೂಲತಃ ಹರಿದು ಹಂಚಿಹೋಗಿದ್ದ ಕನ್ನಡ ಪ್ರದೇಶಗಳನ್ನು ಒಂದುಗೂಡಿಸಿ ಒಂದೇ ಆಡಳಿತ ಘಟಕವನ್ನಾಗಿಸಬೇಕೆಂದು ಪ್ರಾರಂಭವಾಯಿತು. ಸ್ವಾತಂತ್ರ್ಯದ ಹಂಬಲದ ಜೊತೆ ತಳುಕು ಹಾಕಿಕೊಂಡೇ ಬೆಳೆದ ಹಂಬಲವಿದು. ಸ್ವಾತಂತ್ರ್ಯ, ರಾಷ್ಟ್ರೀಯತೆಯ ಕುರುಹಾದರೆ, ಏಕೀಕರಣ ಪರಿಮಿತ ಅರ್ಥದಲ್ಲಿ ಉಪರಾಷ್ಟ್ರೀಯತೆಯ ಕುರುಹು. ಮೊದಲು ಇದು ನಾಡಭಾಷೆ. ಸಂಸ್ಕೃತಿಯ ಪುನರುತ್ಥಾನಕ್ಕಾಗಿ, ನಂತರ ರಾಜಕೀಯ-ಆಡಳಿತ ಏಕೀಕರಣಕ್ಕಾಗಿ ಹಂಬಲಿಸುತ್ತಾ ಹೋರಾಟದ ರೂಪ ಪಡೆಯಿತು. ರಾಷ್ಟ್ರೀಯ ಚಳುವಳಿಗೆ ಪೂರಕವಾಗಿಯೇ ಏಕೀಕರಣ ಚಳುವಳಿಯೂ ಬೆಳೆಯಿತು. ಕರ್ನಾಟಕದ ಮಟ್ಟಿಗೂ ಇದು ನಿಜ.

ಏಕೀಕರಣ ಚಳುವಳಿ, ಸ್ವಾತಂತ್ರ್ಯ ಚಳುವಳಿಯ ರಾಷ್ಟ್ರೀಯ ವಾಹಿನಿಯಿಂದ ಕವಲೊಡೆದು, ಕೇವಲ ಸಂಕುಚಿತ ಪ್ರಾಂತೀಯ ಹೋರಾಟವಾಗದಂತೆ ಎಚ್ಚರ ವಹಿಸಲಾಯಿತು ಕೂಡಾ.[14] ಏಕೆಂದರೆ ಈ ರೀತಿಯ ಕವಲುಗಳು ಪ್ರಾಂತೀಯ ಭಾವನೆಗಳನ್ನು ಕೆರಳಿಸಿ, ಸ್ವಾತಂತ್ರ್ಯ ಚಳುವಳಿಯನ್ನು ದುರ್ಬಲಗೊಳಿಸಿ ಮುಖ್ಯವಾದ ರಾಷ್ಟ್ರೀಯ ಉದ್ದೇಶಕ್ಕೆ ಎರವಾಗಿಬಿಡಬಹುದೆಂಬ ಸಕಾರಣವಾದ ಭಯವೂ ಅಂದಿನ ರಾಷ್ಟ್ರೀಯ ನಾಯಕರಲ್ಲಿತ್ತು. ಈ ರೀತಿಯ ಪ್ರಾಂತೀಯ ಭಾವನೆಗಳ ಬೆಳವಣಿಗೆಯನ್ನು ವಿವಿಧ ರಾಜ್ಯಗಳಲ್ಲಿ ಕಂಡು ಅದರ ಲಾಭವನ್ನು ಒಟ್ಟು ಭಾರತಕ್ಕೆ ಪಡೆದುಕೊಂಡು ರಾಷ್ಟ್ರೀಯವಾಹಿನಿಗೆ ಸೇರಿಸಿ, ಸ್ವಾತಂತ್ರ್ಯ ಸಂಗ್ರಾಮವನ್ನು ಬಲಪಡಿಸಲು, ಅಂದಿನ ರಾಷ್ಟ್ರೀಯ ನಾಯಕರು ಯತ್ನಿಸಿದರು. ಅದಕ್ಕಾಗಿ, ಸ್ವಾತಂತ್ರ್ಯ ಚಳುವಳಿಯ ನೇತೃತ್ವ ವಹಿಸಿದ್ದ ರಾಷ್ಟ್ರೀಯ ಕಾಂಗ್ರೆಸ್, ಭಾಷಾವಾರು ರಾಜ್ಯವಿಂಗಡಣೆ ತನ್ನ ಉದ್ದೇಶಗಳಲ್ಲಿ ಒಂದು, ಎನ್ನುವುದನ್ನು ೧೯೨೦ರಲ್ಲಿ ನಾಗಪುರದಲ್ಲಿ ನಡೆದ ತನ್ನ ವಾರ್ಷಿಕ ಅಧಿವೇಶನದಲ್ಲಿ ಘೋಷಿಸಿತು. ಕೂಡಲೇ ಭಾಷಾವಾರು ಪ್ರದೇಶ ಕಾಂಗ್ರೆಸ್ ಸಮಿತಿಗಳನ್ನೂ ರಚಿಸಿತು. ಇದಕ್ಕೂ ಮುನ್ನ ೧೯೧೬ರಲ್ಲಿ, ಅನಿಬೆಸೆಂಟರ,

ಹೋಂ ರೂಲ್ ಲೀಗ್ ಕೂಡಾ ಇದೇ ರೀತಿ ಒಪ್ಪಿತ್ತು. ಕಾಂಗ್ರೆಸ್ಸಿನ ಮಟ್ಟಿಗೆ ೧೯೨೦ ರಲ್ಲೇ, ಭಾರತ ಹತ್ತೊಂಬತ್ತು ಭಾಷಾವಾರು ಪ್ರಾಂತ್ಯಗಳಾಗಿ ವಿಂಗಡನೆಯಾಗಿ, ಕನ್ನಡ ಪ್ರದೇಶಗಳಿಗೆಲ್ಲಾ ಒಂದೇ ಕಾಂಗ್ರೆಸ್ ಸಮಿತಿ ಅಸ್ತಿತ್ವಕ್ಕೆ ಬಂದಿತು. ಕೊನೆತನಕವೂ ಕಾಂಗ್ರೆಸ್, ಬಹುತೇಕ ಈ ನಿರ್ಣಯಕ್ಕೆ ಬದ್ಧವಾಗಿಯೇ ಉಳಿಯಿತು.[15]

ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯವರೇ ಕರ್ನಾಟಕ ಏಕೀಕರಣ ಚಳುವಳಿಯ ನೇತೃತ್ವವನ್ನೂ ವಹಿಸಿದ್ದರು. ಹೀಗೆ ಸ್ವಾತಂತ್ರ್ಯ ಹೋರಾಟ ಮತ್ತು ಏಕೀಕರಣ ಚಳುವಳಿ ಒಟ್ಟಿಗೇ ನಡೆದವು. ಅಂದರೆ ಏಕೀಕರಣ ಚಳುವಳಿ ರಾಜಕೀಯ ಬಣ್ಣವನ್ನು ೧೯೨೦ರಲ್ಲಿಯೇ ಪಡೆಯಿತು. ಈ ರಾಜಕೀಯವೋ ಭಾರತ ಸ್ವಾತಂತ್ರ್ಯವೇ ತನ್ನ ಏಕೈಕ ಧ್ಯೇಯವೆಂದು ಸಾರಿತ್ತು. ಸ್ವಾತಂತ್ರ್ಯವೆಂದರೆ ಪರಕೀಯರಾದ ಸಾಮ್ರಾಜ್ಯಷಾಹಿ ಬಿಳಿಯರಿಂದ ಭಾರತೀಯರ ದಾಸ್ಯ ವಿಮೋಚನೆ; ಭಾರತ ತನ್ನ ವಸಾಹತು ಕವಚವನ್ನು ಕಳಚಿ ಒಂದು ಸ್ವತಂತ್ರ ಗಣರಾಜ್ಯವಾಗುವುದು. ಅದೂ ಎಂಥ ಸ್ವಾತಂತ್ರ್ಯ? ಎಲ್ಲರಿಗೂ ಸಮಾನ ಹಕ್ಕುಗಳಿರುವವಂಥಾದ್ದು. ಜನತಾ ರಾಜ್ಯವಾಗಬೇಕಾದದ್ದು.

ಉಪರಾಷ್ಟ್ರೀಯತಾ ಭಾವನೆ ಬೆಳೆಯುವ ಕುರುಹಾಗಿ ನವೋದಯವೆಂದು ಹೆಸರು ಪಡೆದುಕೊಂಡು ಸಾಹಿತ್ಯಕ ಚಳುವಳಿಯೂ ಪ್ರಾರಂಭವಾಯಿತು. ಈ ಸಾಹಿತ್ಯದ "ಹಿನ್ನೆಲೆಗೆ ರಾಷ್ಟ್ರೀಯ ಚಳುವಳಿಯೂ, ಕರ್ನಾಟಕ ಏಕೀಕರಣ ಚಳುವಳಿಗಳೂ ಇದ್ದ ಕಾರಣ, ದೇಶಭಕ್ತಿಮೂಲವಾದ, ನಾಡು ನುಡಿಗಳ ಅಭಿಮಾನವನ್ನು ಕುರಿತಾದ ... ರಾಷ್ಟ್ರಕ್ಕಾಗಿ ತನ್ನ ಸಮಸ್ತವನ್ನೂ ತ್ಯಾಗಮಾಡುವ, ಪರಕೀಯ ಪ್ರಭುತ್ವವನ್ನು ಕಿತ್ತೊಗೆಯುವುದು ಮುಂತಾದ ಆದರ್ಶಗಳು ಈ ಸಾಹಿತ್ಯದ ಮುಖ್ಯ ವಸ್ತುಗಳಾದವು ... ಕನ್ನಡ ನವೋದಯ ಸಾಹಿತಿಗಳು ಈ ರಾಷ್ಟ್ರದ ಹಾಗೂ ತಮ್ಮ ಉಪರಾಷ್ಟ್ರೀಯತೆಯ ಚಾರಿತ್ರಿಕ ಪ್ರಜ್ಞೆಯುಳ್ಳವರಾಗಿದ್ದರು ... ತಾವು ಬರೆಯುವುದು ಭಾರತೀಯ ಪರಿಸರದಲ್ಲಿ, ಅದೂ ಕನ್ನಡ ನಾಡಿನಲ್ಲಿ ಎಂಬುದನ್ನು ಖಚಿತಪಡಿಸುತ್ತಿದ್ದರು" ಎಂದು ಕನ್ನಡ ನವೋದಯ ಮತ್ತು ನವೋದಯ ಸಾಹಿತಿಗಳ ಬಗ್ಗೆ ಜಿ. ಎಸ್. ಎಸ್. ಅಭಿಪ್ರಾಯಪಡುತ್ತಾರೆ.[16]

ಮೇಲಿನ ಈ ಅಭಿಪ್ರಾಯ ಒಟ್ಟಾರೆ ನಿಜವಾದರೂ ಶ್ರೀಯವರ ಸಾಹಿತ್ಯಾಭಿವ್ಯಕ್ತಿಯಲ್ಲಿ ವಸ್ತುವನ್ನಾಗಿ ಮತ್ತೊಂದು ಅಂಶವನ್ನೂ ನಾವು ಕಾಣಬಹುದು. ಅದು 'ಶ್ರೀ' ಪ್ರತಿಪಾದಿಸುತ್ತಿದ್ದ ವಸಾಹತುಷಾಹಿ 'ಕಡಲರಾಣಿ'ಯ ಮೇಲ್ಮೆ, ಮತ್ತು 'ಕರ್ನಾಟಕ ರತ್ನ ಸಿಂಹಾಸನಾಧೀಶ್ವರ'ರಾದ ಮೈಸೂರು ಒಡೆಯರ ಸತತ ಆಳ್ವಿಕೆ. ಅಂದರೆ ಇಲ್ಲಿ ಉಪರಾಷ್ಟ್ರೀಯತೆ (ಕನ್ನಡತಾಯಿ, ಕನ್ನಡಾಂಬೆ) ರಾಷ್ಟ್ರೀಯತೆ (ಭಾರತಾಂಬೆ, ಭರತಮಾತೆ)ಗೂ ಮಿಗಿಲಾಗಿ ರಾಜಭಕ್ತಿ (ನಾಲ್ವಡಿಕೃಷ್ಣ, ಶ್ರೀಜಯನ

ಬೆಳಕು) ಮತ್ತು ವಸಾಹತುಶಾಹಿ (ಕಡಲರಾಣಿ, ಇಂಗ್ಲೆಂಡ್ ನನ್ನಿಂಗ್ಲೆಂಡ್) ಭಕ್ತಿಯಿಂದೆ.

ಇಲ್ಲಿಯೇ ಬಹುಶಃ ನಾವು ಶ್ರೀಯವರ ರಾಷ್ಟ್ರೀಯತೆ, ಉಪರಾಷ್ಟ್ರೀಯಂತೆ ವ್ಯಕ್ತವಾದ ಬಗ್ಗೆ ಚಾರಿತ್ರಿಕ ಪ್ರಜ್ಞೆಯಿಂದ ವಿಶ್ಲೇಷಿಸಬೇಕಾಗಿರುವುದು ಕೂಡಾ. ಶ್ರೀಯವರ ಉಪರಾಷ್ಟ್ರೀಯತೆ ಅನೇಕ ವೇಳೆ ರಾಷ್ಟ್ರೀಯತೆಯ ಒಂದು ಅಂಗವಾಗಿಲ್ಲ ವೇನೋ ಅನ್ನಿಸುತ್ತದೆ. ಅವರಿದ್ದ ಚಾರಿತ್ರಿಕ ಘಟ್ಟದಲ್ಲಿ ರಾಷ್ಟ್ರೀಯತೆಯೆಂದರೆ ರಾಷ್ಟ್ರವನ್ನು ದಾಸ್ಯದಿಂದ ಮುಕ್ತಗೊಳಿಸುವುದು ಎಂದು ಅರ್ಥೈಸಿದಾಗ, ಶ್ರೀಸಾಹಿತ್ಯ ಇಲ್ಲಿ ಬಹುತೇಕ ರಾಷ್ಟ್ರೀಯ ಸಾಹಿತ್ಯವಾಗದೆ, ಸಾಮ್ರಾಜ್ಯಶಾಹಿ, ರಾಜಶಾಹಿಗಳ ಪರವಾದ ಸಾಹಿತ್ಯವಾಗುತ್ತದೆ. ಏಕೆಂದರೆ ಬಹುತೇಕ ಭಾರತವೆಲ್ಲಾ ಬ್ರಿಟಿಷರ ವಿರುದ್ಧ ಹೋರಾಡುತ್ತಿದ್ದ ಕಾಲದಲ್ಲಿ ಶ್ರೀ ಈ ಹೋರಾಟವನ್ನು ತಮ್ಮ ಸಾಹಿತ್ಯಾ ಭಿವ್ಯಕ್ತಿಗೆ ಬಳಸಿಕೊಂಡರೂ ಅದು ರಾಜರ ಪರವಾಗಿ ಮತ್ತು ಬ್ರಿಟಿಷರ ಪರವಾಗಿ ನಿಲ್ಲುತ್ತದೆ. ಅವರಿದ್ದ ಮೈಸೂರಿನಲ್ಲೂ ಪ್ರಜ್ಞಾವಂತ ಜನಸಮೂಹ, ಈ ಎರಡೂ ಶಕ್ತಿಗಳ ವಿರುದ್ಧ ಸೆಣಸುತ್ತಿದ್ದರೆ, 'ಶ್ರೀ' ಇವೆರಡೂ ಶಕ್ತಿಗಳ ಪರವಾಗಿ ನಿಂತವರು.

ಮೇಲಿನ ಅಭಿಪ್ರಾಯವನ್ನು 'ಶ್ರೀಸಾಹಿತ್ಯ'ದಲ್ಲಿ ಸಿಗುವ ಉದಾಹರಣೆ ಗಳಿಂದಲೇ ಸಮರ್ಥಿಸಬಹುದು. ಅವರ ಮೊದಲಿನ ಕವನಗಳಲ್ಲಿ ಒಂದಾದ 'ಮೈಸೂರು ಮಕ್ಕಳು'ವಿನಲ್ಲಿ ಬರುವ ಮೈಸೂರು, ಏಕೀಕೃತ ಕರ್ನಾಟಕದ ಒಂದು ಮುಖ್ಯ ಭಾಗ. ಆದರೆ ಶ್ರೀಯವರಿಗೆ ಅದು 'ನಾಲ್ವಡಿ ಕೃಷ್ಣನ ಮೈಸೂರು'. ಕರ್ನಾಟಕ ಏಕೀಕರಣವಾದ ಮೇಲೂ, ಕನ್ನಡ ಪ್ರದೇಶಗಳೆಲ್ಲಾ 'ಕರ್ನಾಟಕ ರತ್ನ ಸಿಂಹಾಸನಾಧೀಶ್ವರ ನಾಲ್ವಡಿ ಕೃಷ್ಣನ' ಆಧಿಪತ್ಯದಲ್ಲಿ ಇರಬೇಕಾದದ್ದು ; "ಕೃಷ್ಣನ್ ಬಾನ್‌ಕೊಂಡ" ಮೇಲೆ ಈ ಕರ್ನಾಟಕ 'ಶ್ರೀಜಯನ' ಬೆಳಕಿನಲ್ಲಿ ವಿಕಸಿಸ ಬೇಕಾದದ್ದು. ಏಕೆಂದರೆ ಶ್ರೀಯವರಿಗೆ ಕರ್ನಾಟಕ ರತ್ನ ಸಿಂಹಾಸನ ನಾಲ್ವಡಿ ಕೃಷ್ಣನ ಬಳಿ ಸುಭದ್ರವಾಗಿರುವ ಬಗ್ಗೆ, ಕನ್ನಡ ತಾಯ್ ಭುವನೇಶ್ವರಿ ಕೃಷ್ಣನ ಆದರಾತಿಥ್ಯ ದಲ್ಲಿ ಕ್ಷೇಮವಾಗಿರುವ ಬಗ್ಗೆ ಅಚಲವಾದ ನಂಬಿಕೆಯಿತ್ತು. ಕನ್ನಡ ತಾಯಿಯೂ, ಕರ್ನಾಟಕವೂ, ಮಹಾರಾಜರನ್ನು ಬೆಳಗುತ್ತಲೇ ಇರಬೇಕೆಂದು ಅವರ ಹಂಬಲ. ಅದಕ್ಕಾಗಿ ಎಲ್ಲರೂ ಯೋಚಿಸಿ, ದಂಡಿಯಬೇಕು ಎನ್ನುವ ಆಶಯ ಅವರದು. ಅಂದರೆ ವಸಾಹತುಶಾಹಿಯ ಕೈಗೊಂಬೆಯಾದ ಮೈಸೂರಿನ ರಾಜಶಾಹಿಯ ನೆರಳಲ್ಲಿ ಕನ್ನಡ ಮತ್ತು ಕರ್ನಾಟಕದ ನವೋದಯವಾಗಬೇಕು ಎಂಬ ಖಚಿತ ನಿಲುವು. ಇದು ಅವರ ಬಹುತೇಕ ಎಲ್ಲ ಕೃತಿಗಳಲ್ಲೂ ಎದ್ದು ಕಾಣುವ ಅಂಶ.

ಶ್ರೀಯವರಿಂದ ೧೯೨೭ರಲ್ಲಿ ರಚಿತವಾದ 'ಶ್ರೀಕೃಷ್ಣ ರಜತಮಹೋತ್ಸವ ಪ್ರಗಾಥ'ದಲ್ಲಿ ನಾಲ್ವಡಿ ಕೃಷ್ಣನನ್ನು ಹರಸಲೆಂದೇ 'ಕನ್ನಡದರಸಿ' ಬರುತ್ತಾಳೆ.

ಮೈಸೂರನ್ನು ಹರಸಲು ಬರುವ 'ಭರತಮಾತೆ, ಪ್ರೇಮಮಾತೆ'ಯೂ ಒಬ್ಬಳೇ ಬರುವುದಿಲ್ಲ. 'ಕಡಲರಾಣಿ'ಯ ಜೊತೆಗೇ ಬಂದು ಜೊತೆಯಲ್ಲಿಯೇ ಹೋಗುತ್ತಾಳೆ. ಈ ಕೆಳಗಿನ ಸಾಲುಗಳನ್ನು ಗಮನಿಸಿ,

"ಬಳಿಕ ಕೆಳದಿಯ ಕೈಯಕೊಂಡಳು,
ಮೇಗಿಲ ಮರೆಯಲಿ ಸಂದಳು."

೧೯೩೭ ರಲ್ಲಿ ಬರೆದ 'ಕನ್ನಡತಾಯ ನೋಟ'ವೂ ಕರ್ನಾಟಕ ರತ್ನ ಸಿಂಹಾಸನವನ್ನು ಹರಸುವ ಆಶಯದೊಂದಿಗೇ ಕೊನೆಗೊಳ್ಳುತ್ತದೆ ಮತ್ತು ಇದು ಶ್ರೀಯವರ ಸಾಮ್ರಾಜ್ಯವಾದ ಪರ ಏಕಾಗ್ರತೆಗೆ ಭಂಗತರುವಂಥದೂ ಅಲ್ಲ. ಇದಕ್ಕೆ ಕನ್ನಡತಾಯಿ ಯನ್ನು ಸಂತೈಸುವ ಈ ಸಾಲುಗಳನ್ನು ಗಮನಿಸಬಹುದು.

"ಒಂದೆ ಮರವಮರವಾಗಿರ್ಪಂತೆ, ಅಮರವಾಗಿನ್ನುಮದೆ ಇಹುದು,
ನಿನ್ನೊಂದು ಕರ್ನಾಟಕ ರತ್ನ ಸಿಂಹಾಸನಂ – ಬಾಳ್ಗೆ, ಅದು ಬೆಳಗೆ,
ಕನ್ನಡದ ಮುಡಿಯಾಗಿ, ಕನ್ನಡದ ನುಡಿಯಾಗಿ, ಕನ್ನಡದ ಬಾಳ ಕುಡಿಯಾಗಿ,
... ಬಾರವ್ವ ಹರಸು."

೧೯೩೮ರಲ್ಲಿ ರಚಿತವಾದ 'ಕನ್ನಡ ಬಾವುಟ'ವೂ ನಾಲ್ವಡಿ ಕೃಷ್ಣನಿದ್ದಾಗ 'ನಾಲ್ವಡಿ ಕೃಷ್ಣನ', ಅವರು ಸತ್ತಮೇಲೆ 'ಸಿರಿಯ ಜಯಚಾಮನಾ ಹಿರಿಯೊಲುಮೆ ಹೂವಾಗಿ' ಏರಿ, ಹಾರುವಂಥಾದ್ದೆ. ಇದೇ ರೀತಿಯ ರಾಜನಿಷ್ಠೆ, ಕನ್ನಡ ಸೇವೆಯಲ್ಲಿ ಅವ್ಯಾಹತ ವಾಗಿ ಮುಂದುವರಿಯುತ್ತದೆ.

ಬ್ರಿಟಿಷರನ್ನು ಪೇಚಾಟಕ್ಕೆ ಸಿಕ್ಕಿಸಿದ್ದ ಸ್ವಾತಂತ್ರ್ಯ ಹೋರಾಟಗಾರರನ್ನು ಮೂದಲಿಸುವಂತೆ, ಮಹಾರಾಜರಿಗೆ ಗೆಲುವು ಬಯಸುತ್ತಾ ೧೯೪೩ರಲ್ಲಿ ಬರೆದ 'ಧರ್ಮಯುದ್ಧ' ಕವನದ ಈ ಕೆಳಗಿನ ಸಾಲುಗಳು ಶ್ರೀಯವರ ರಾಜಭಕ್ತಿಯನ್ನು ಸಾರುತ್ತವೆ.

"ಗೆಲವು ನಮ್ಮದು ಮಾಯಕಾರರೆ !
ಗೆಲವು ನಮ್ಮದು ದ್ರೋಹಿಗಳೆ ! ಕಡೆ
ಗೆಲವು ನಮ್ಮದು, ನಮ್ಮ ಜ್ಯೋತಿ ನಮಗಿಹನು
ಗೆಲವು ಶ್ರೀ ಜಯಚಾಮಗೆ ! ...

ಹೀಗೆ ಶ್ರೀಯವರ ಹೊಂಗನಸುಗಳು ಹೊಮ್ಮುತ್ತವೆ.

ಈಗಾಗಲೇ ವಿವರಿಸಿದಂತೆ ಶ್ರೀಯವರು ಕನ್ನಡ ಪ್ರದೇಶಗಳ ಏಕೀಕರಣ ವಾಗಬೇಕೆಂಬ, ಉದ್ದೇಶದಿಂದ ತಮ್ಮ ತಾತ್ವಿಕ ಚೌಕಟ್ಟಿನ ಮಿತಿಗಳಲ್ಲಿ ಅದಕ್ಕಾಗಿ ದುಡಿದವರು. ಆದರೆ ಅದು ಮೇಲೆ ಗುರುತಿಸಿರುವಂತೆ ರಾಷ್ಟ್ರೀಯವಾದಿಗಳು,

ಅದಕ್ಕೆ ಪೂರಕವಾಗಿ ದುಡಿದ 'ಉಪರಾಷ್ಟ್ರೀಯವಾದಿಗಳು, ಬಯಸಿ ಹೋರಾಡಿದಂಥ ಏಕೀಕರಣವಲ್ಲ', ಅದನ್ನು 'ಶ್ರೀ ಏಕೀಕರಣ ಮಾದರಿ' ಎಂದೇ ಕರೆಯಬೇಕು.

ಆದರೆ ಇದು ಕನಸಿನಲ್ಲಿ ಮಾತ್ರ ಊಹಿಸಿಕೊಳ್ಳಬಹುದಾಗಿದ್ದ ಏಕೀಕರಣ, ಎಂದಿಗೂ ನನಸಾಗುವಂಥವೂ ಆಗಿರಲಿಲ್ಲ. ಏಕೆಂದರೆ ಕರ್ನಾಟಕದ ಏಕೀಕರಣ, ಭಾರತದ ಸ್ವಾತಂತ್ರ್ಯದೊಡನೆ ತಳುಕು ಹಾಕಿಕೊಂಡದ್ದು. ಕರ್ನಾಟಕ ಆಗ ಸುಮಾರು ಇಪ್ಪತ್ತು ಆಧಿಪತ್ಯಗಳಲ್ಲಿ ಹಂಚಿಹೋಗಿದ್ದು ಆ ಅಧಿಪತಿಗಳೆಲ್ಲಾ ತಮ್ಮ ಅಧೀನ ದಲ್ಲಿದ್ದ ಕನ್ನಡ ಪ್ರದೇಶಗಳನ್ನು ಮೈಸೂರು ಮಹಾರಾಜರಿಗೆ ಒಪ್ಪಿಸುವುದು ಊಹಿಸಲೂ ಅಸಾಧ್ಯವಾದದ್ದು. ಕರ್ನಾಟಕದ ಸುಮಾರು ಅರ್ಧದಷ್ಟು ಭಾಗ ಬ್ರಿಟಿಷರ ಮತ್ತು ಹೈದರಾಬಾದಿನ ನಿಜಾಮರ ಕೈಗಳಲ್ಲಿತ್ತು. ಅವರು ಆ ಭೂಭಾಗ ಗಳನ್ನು ಮೈಸೂರು ಒಡೆಯರಿಗೆ ವಹಿಸಿ ಕೊಡುತ್ತಿದ್ದರೆಂಬುದೂ ಕನಸಿನ ಮಾತೇ. ಈ ಅಧಿಪತಿಗಳು ತಮ್ಮ ರಾಜ್ಯಗಳನ್ನು ಬಿಟ್ಟುಕೊಡುವುದನ್ನು ಒಪ್ಪಿಕೊಂಡಿದ್ದರೂ, ಮುಂಬೈ ಮತ್ತು ಮದರಾಸು ಕರ್ನಾಟಕದ ಏಕೀಕರಣವಾದಿಗಳೇ ಮೈಸೂರು ಅರಸರ ಪ್ರಜೆಗಳಾಗಿ ಏಕೀಕೃತ ಕರ್ನಾಟಕದಲ್ಲಿರಲು ಒಪ್ಪುವವರಾಗಿದ್ದರು.[18] ಏಕೀಕರಣಕ್ಕೆ ಸ್ವಾತಂತ್ರ್ಯ ಒಂದು ಮೂಲಭೂತ ಅವಶ್ಯಕತೆಯಾಗಿತ್ತು. ಆದರೂ ಬಿ. ಎಂ. ಶ್ರೀ. ತಮ್ಮ ಕೊನೆಯ ದಿನಗಳವರೆಗೂ. ಭಾರತ ಸ್ವತಂತ್ರವಾಗುವುದು ಖಚಿತವಾದ ಮೇಲೂ ತಮ್ಮ ನಿಲುವನ್ನು ಬದಲಾಯಿಸಿಕೊಂಡರೆಂದು ಹೇಳುವುದು ಕಷ್ಟ.

ಕೊನೆಯದಾಗಿ ಶ್ರೀಯವರು ಸರ್ಕಾರಿ ಸೇವೆಯಲ್ಲಿದ್ದರು. ನಾಡು ನುಡಿಗಳ ಏಕೀಕರಣಕ್ಕಾಗಿ ಇದಕ್ಕಿಂತ ಹೆಚ್ಚಿನದೇನನ್ನೂ ಮಾಡಲು ಅವಕಾಶವಿರಲಿಲ್ಲ ಎನ್ನುವ ಮಾತನ್ನು ಒಪ್ಪಿಕೊಳ್ಳುವುದು ಕಷ್ಟ. ಕಾರಣ, ಸರ್ಕಾರಿ ಸೇವೆಯಲ್ಲಿದ್ದೇ, ಕುವೆಂಪು, ರಾಜರತ್ನಂ ಮುಂತಾದವರು ಉಜ್ವಲ ರಾಷ್ಟ್ರೀಯ ಸಾಹಿತ್ಯ ಕೃತಿಗಳನ್ನು ರಚಿಸ ಲಿಲ್ಲವೆ? ಮತ್ತು ಬ್ರಿಟಿಷರ ವಿರುದ್ಧವಾಗಿ, ಸ್ವಾತಂತ್ರ್ಯ ಹೋರಾಟ ರಭಸವಾಗಿ ನಡೆಯುತ್ತಿದ್ದಾಗ ಶ್ರೀಯವರು ಬ್ರಿಟನ್ನಿನ ಬಗ್ಗೆ ಅಷ್ಟು ಭಕ್ತಿಯನ್ನು ಇರಿಸಿಕೊಳ್ಳ ಬೇಕಾಗಿತ್ತೆ? ಇಲ್ಲವೆನಿಸುತ್ತದೆ. ರಾಷ್ಟ್ರೀಯಭಾವನೆಗಳನ್ನು ರಾಷ್ಟ್ರೀಯತೆಯ ವಿರೋಧಿಗಳಿಗೆ ತಿಳಿಯದಂತೆ ಅಭಿವ್ಯಕ್ತಿಸುವುದು, ಸಾಹಿತಿಗಳಿಗೆ ಹೆಚ್ಚು ಸಾಧ್ಯ ಎನ್ನುವ ಹಿನ್ನೆಲೆಯಲ್ಲಿ ನೋಡಿದಾಗ ಶ್ರೀಸಾಹಿತ್ಯ ರಾಷ್ಟ್ರೀಯ ಸಾಹಿತ್ಯವಾಗಲಿಲ್ಲ ಎಂದೇ ಹೇಳಬೇಕಾದೀತು.

ಒಟ್ಟಿನಲ್ಲಿ ಶ್ರೀ ಕನ್ನಡ ಸಾಹಿತ್ಯಕ್ಕೆ ಹೊಸ ಮಾರ್ಗಗಳನ್ನು ರೂಪಿಸುವುದರ ಮೂಲಕ, ಸಾಹಿತ್ಯಸೇವೆ ಮಾಡಿದರೆಂದೂ, ಕನ್ನಡ ಭಾಷೆಯ ಬಗ್ಗೆ ಕಾಳಜಿ ವಹಿಸಿ, ಅವನತ ಸ್ಥಿತಿಗಿಳಿದಿದ್ದ ಕನ್ನಡಕ್ಕೆ ಒಂದು ಸ್ಥಾನ ಕಲ್ಪಿಸಿಕೊಟ್ಟು, ಆ ಮೂಲಕ ಕನ್ನಡಿಗರನ್ನು ಏಕೀಕರಣಕ್ಕಾಗಿ ಹುರಿದುಂಬಿಸಿದರೆಂದು ಧಾರಾಳವಾಗಿ ಹೇಳಬಹುದು.

ಕನ್ನಡ ಪ್ರದೇಶಗಳನ್ನು ಸಂಚರಿಸಿ ಕೆಲವು ಜನರಲ್ಲಿ ಏಕೀಕರಣದ ಬಗ್ಗೆ ಆಸ್ಥೆ ಮೂಡಿಸಿದವರೆಂದೂ ಪರಿಗಣಿಸಬಹುದು. ಆದರೆ ಅವರಲ್ಲಿ ಕನ್ನಡ ನವೋದಯ, ಉಪರಾಷ್ಟ್ರೀಯತೆಯು ಒಂದು ಅಂಗವಾಗಿ ಮೈತಳೆಯಿತೆಂದಾಗಲಿ, ಈ ಉಪ ರಾಷ್ಟ್ರೀಯತೆಯು, ಕುರುಹಾದ ಏಕೀಕರಣದ ಕಲ್ಪನೆ, ರಾಷ್ಟ್ರೀಯತೆಯು ಒಂದು ಅಂಗವಾಗಿ ರೂಪುಗೊಂಡಿತು ಎಂದಾಗಲಿ ಹೇಳುವುದು ಕಷ್ಟ. ಅವರ ಸಾಹಿತ್ಯ, ಸಾಮ್ರಾಜ್ಯವಾದೀ ಬ್ರಿಟಿಷರ, ರಾಜಷಾಹಿ ಮೈಸೂರು ಅರಸರ ಬಗ್ಗೆ ಹೆಚ್ಚು ಒಲವನ್ನು ಪ್ರಕಟಿಸುತ್ತಾ ಅಭಿವ್ಯಕ್ತಿಗೊಂಡಿತೆ ಹೊರತು, ವಿಶಾಲಾರ್ಥದಲ್ಲಿ ರಾಷ್ಟ್ರೀಯತೆಯನ್ನು, ಸ್ವಾತಂತ್ರ್ಯ ಹೋರಾಟವನ್ನು, ಉಪರಾಷ್ಟ್ರೀಯತೆಯನ್ನು, ನೈಜ ಏಕೀಕರಣವನ್ನು ಬಯಸುತ್ತಾ ವ್ಯಕ್ತವಾಗಲಿಲ್ಲವೆಂದು ಹೇಳಬೇಕಾಗಿದೆ.

## ಅಡಿ ಟಿಪ್ಪಣಿಗಳು

೧. ಉದಾಹರಣೆಗೆ ನೋಡಿ. ಶಿವರುದ್ರಪ್ಪ ಜಿ. ಎಸ್., 'ಸ್ವಾತಂತ್ರ್ಯ ಚಳುವಳಿ : ಕನ್ನಡ ಸಾಹಿತ್ಯದಲ್ಲಿ', ನವೋದಯ (ಮೈಸೂರು, ೧೯೭೬), ಪು. ೭೬–೮೫.

೨. ಜಾನ್ ಆರ್. ಮೆಕ್ಲೇನ್, (ಸಂ), ದಿ ಪೊಲಿಟಿಕಲ್ ಅವೇಕನಿಂಗ್ ಇನ್ ಇಂಡಿಯಾ (ಲಂಡನ್, ೧೯೭೦), ಪು. ೧೦–೧೪.

೩. ದತ್ತ ಕೆ. ಕೆ., ರೆನೆಸಾನ್ಸ್, ನ್ಯಾಷನಾಲಿಸಮ್ ಅಂಡ್ ಸೋಶಿಯಲ್ ಚೇಂಜಸ್ ಇನ್ ಮಾಡರ್ನ್ ಇಂಡಿಯಾ (ಕಲಕತ್ತಾ, ೧೯೭೩), ಪು. ೧–೧೫.

ಮತ್ತು

ಅಂಟನೋವ ಮತ್ತು ಇತರರು, ಎ ಹಿಸ್ಟರಿ ಆಫ್ ಇಂಡಿಯಾ, ಸಂಪುಟ ೨ (ಮಾಸ್ಕೋ, ೧೯೭೮), ಪು. ೭೮–೮೦.

೪. ಶಿವರುದ್ರಪ್ಪ ಜಿ. ಎಸ್., 'ಉಪರಾಷ್ಟ್ರೀಯತೆ ಮತ್ತು ಕನ್ನಡ ಸಾಹಿತ್ಯ', ನವೋದಯ, ಪು. ೧೮–೩೨.

೫. ಶಿವರುದ್ರಪ್ಪ ಜಿ. ಎಸ್., 'ಗೋವಿಂದ ಪೈ ಅವರ ಕವಿತೆ : ನವೋದಯದ ಚೌಕಟ್ಟಿನಲ್ಲಿ', ಸಾಧನೆ, ಸಂಪುಟ ೧೨, ಸಂಚಿಕೆ ೨ (ಬೆಂಗಳೂರು, ೧೯೮೩), ಪು. ೧೮–೩೦.

ಮತ್ತು

ಶಿವರುದ್ರಪ್ಪ ಜಿ. ಎಸ್., 'ಸ್ವಾತಂತ್ರ್ಯ ಚಳುವಳಿ : ಕನ್ನಡ ಸಾಹಿತ್ಯದಲ್ಲಿ', ನವೋದಯ, ಪು. ೭೬–೮೫.

೬. ವಿವರಗಳಿಗೆ ನೋಡಿ. ರಂಗಣ್ಣ ಎಸ್. ವಿ., 'ಬಿ. ಎಂ. ಶ್ರೀಕಂಠಯ್ಯ' (ಇಂಗ್ಲಿಷ್), (ಮೈಸೂರು, ೧೯೭೨).

೭. ‘ಶ್ರೀಸಾಹಿತ್ಯ’, ‘ಆಚಾರ್ಯ ಬಿ. ಎಂ. ಶ್ರೀಯವರ ಸಮಗ್ರ ಕೃತಿ ಸಂಪುಟ (ಮೈಸೂರು, ೧೯೮೩), ಪು. ೩೦೨.

೮. ಅದೇ. ಪು. ೨೮೪–೨೮೬.

೯. ಶ್ರೀಕಂಠಯ್ಯ ಬಿ.ಎಂ., ‘ದಿ ಕನ್ನಡ ಮೂವ್‌ಮೆಂಟ್’ (ಇಂಗ್ಲಿಷ್) ಮಿಥಿಕ್ ಸೊಸೈಟಿಯ ತ್ರೈಮಾಸಿಕ, ಸಂ. ೩೧, ಸಂಚಿಕೆ ೩ ಮತ್ತು ೪, ಜನವರಿ (ಬೆಂಗಳೂರು, ೧೯೪೦), ಪು. ೨೯೭–೩೦೭.

ಶ್ರೀಯವರು ‘ಕನ್ನಡ ಚಳುವಳಿಯ’ ಬಗ್ಗೆ ತಮ್ಮ ಕನಸಿನ ಕರ್ನಾಟಕದ ಬಗ್ಗೆ ಈ ಲೇಖನದಲ್ಲಿ ಕೆಳಕಂಡಂತೆ ಹೇಳುತ್ತಾರೆ.

> "The model State will be remodelled ; Karnataka will no longer be an abode of ‘slaves’ and ‘double slaves’ – it is not that even now."

೧೦. ಶಿವರುದ್ರಪ್ಪ ಜಿ. ಎಸ್., ‘ನವೋದಯ’, ಮೇಲಿನದೇ, ಪು. ೭೭.

೧೧. ಶ್ರೀಸಾಹಿತ್ಯ, ಮೇಲಿನದೇ, ಪು. ೧೨೫–೧೨೭.

೧೨. ಅದೇ, ಪು. ೧೫೦.

೧೩. ಈ ಪುಸ್ತಕ, ಲಿಂಗಣ್ಣಯ್ಯ ಒ. ಎನ್. ಬರೆದದು. ನೋಡಿ, ಶ್ರೀಸಾಹಿತ್ಯ, ಹೆಚ್ಚಿನ ಬರಹಗಳು ಭಾಗ, ಪು. ೬೦೫.

೧೪. ವಿವರಗಳಿಗೆ ನೋಡಿ. ದಿವಾಕರ ರಂಗನಾಥ, ‘ಕರ್ನಾಟಕದ ಏಕೀಕರಣದ ಕಥೆ’, (ಹುಬ್ಬಳ್ಳಿ, ೧೯೫೭).

೧೫. ಚಂದ್ರಶೇಖರ್ ಎಸ್., ‘ಓಲ್ಡ್ ಮೈಸೂರ್ ಇನ್ ಕರ್ನಾಟಕ, ದಿ ರಿಲಕ್ಟಂಟ್ ಯೂನಿಫಿಕೇಶನ್’, ಡೆಕ್ಕನ್ ಹೆರಾಲ್ಡ್, ೩೦ ನವೆಂಬರ್, ೧೯೮೩.

೧೬. ಶಿವರುದ್ರಪ್ಪ ಜಿ. ಎಸ್., ನವೋದಯ, ಪು. ೨೮–೩೧.

೧೭. ‘ಶ್ರೀಸಾಹಿತ್ಯ’, ಹೊಂಗನಸುಗಳು ಭಾಗದ ಈ ಕವನಗಳನ್ನು ನೋಡಿ.

೧೮. ಮೂರ್ತಿರಾವ್ ಎ. ಎನ್., ‘ಬಿ. ಎಂ. ಶ್ರೀಕಂಠಯ್ಯ’ (ಇಂಗ್ಲಿಷ್), ಪು. ೧೯–೨೦, ೧೯೭೪.

# ಕನ್ನಡ ನವೋದಯ ಮತ್ತು ಬಿ.ಎಂ.ಶ್ರೀ. : ಸಾಹಿತ್ಯ

– ಎಚ್. ಎಸ್. ರಾಘವೇಂದ್ರರಾವ್

೧

ನಿರ್ದಿಷ್ಟ ಸಾಹಿತ್ಯಕ ಚಳುವಳಿಯೊಂದರ ನಾಯಕತ್ವ ವಹಿಸುವ ಸಾಹಿತಿಗಳು, ಸಾಹಿತ್ಯದ ಮೂಲಭೂತ ಸಮಸ್ಯೆಗಳ ಬಗ್ಗೆ ತಳೆಯುವ ನಿಲುವು ಒಂದು ಬಗೆಯ ಸಮರ್ಥನೆಯ ಧಾಟಿಯನ್ನು ಹೊಂದಿರುವುದು ಅನಿವಾರ್ಯವೇ ಆಗಿದೆ. ತಮ್ಮ ಕಾಲಕ್ಕೆ ಹಿಂದಿನ ಮತ್ತು ತಮ್ಮ ಕಾಲದ ಸಾಹಿತ್ಯದ ಸ್ವರೂಪವನ್ನು ಕುರಿತಾದ ಅಸಮಾಧಾನವೇ ಹೊಸ ಮಾರ್ಗಗಳ ಅನ್ವೇಷಣೆಗೆ ಪ್ರಚೋದಕ ಶಕ್ತಿಯಾಗುತ್ತದೆ. ಹಳೆಯ ಸಾಹಿತ್ಯದ ಪರಿಮಿತಿಗಳ ನಿರೂಪಣೆ ಮತ್ತು ತಮ್ಮ ಮಾರ್ಗದ ಹೊಸ ತಂತ್ರಗಳ ಸಮರ್ಥನೆಯನ್ನು ಅವ್ಯಾಹತವಾಗಿ ನಡೆಸಲಾಗುತ್ತದೆ. ಕೇವಲ ವಿಮರ್ಶಕನಾದವನು, ಪ್ರಯತ್ನಪಟ್ಟರೆ ತನ್ನ ಕಾಲದ ಸಾಹಿತ್ಯಕ ಚಳುವಳಿಗಳ ಮಿತಿಗಳನ್ನು ದಾಟಿ, ಇಡೀ ಸಾಹಿತ್ಯ ಸಂದರ್ಭವನ್ನು ವಸ್ತುನಿಷ್ಠವಾಗಿ ನೋಡಬಲ್ಲ. ಆದರೆ ಬಿ. ಎಂ. ಶ್ರೀಯವರ ಹಾಗೆ ಸೃಜನಶೀಲ ಸಾಹಿತ್ಯದ ನಿರ್ಮಾಣ ಮತ್ತು ಸಾಹಿತ್ಯ ತತ್ವಗಳ ಪ್ರತಿಪಾದನೆ ಎರಡರಲ್ಲೂ ತೊಡಗಿದ್ದ ಬರಹಗಾರರಿಗೆ ಈ ಬಗೆಯ ನಿರ್ಲಿಪ್ತತೆ ಸಾಧ್ಯವಿರಲಿಲ್ಲ. ತಾವು ಏಕೆ ಹೊಸ ರೀತಿಯಲ್ಲಿ ಬರೆಯುತ್ತಿರುವೆವೆಂದು ವಿವರಿಸುವ ಜವಾಬ್ದಾರಿ ಅವರದಾಗಿತ್ತು.

ಬಿ. ಎಂ. ಶ್ರೀಯವರೂ ಹೊಸಗನ್ನಡ ಸಾಹಿತ್ಯದ, ನಂತರದ ಹಂತಗಳಲ್ಲೊಂದರ ಅಧ್ವರ್ಯುವಾಗಿದ್ದರೆ, ಅವರ ವಿಮರ್ಶಾತ್ಮಕ ಬರವಣಿಗೆ ಮೇಲೆ ಹೇಳಿದ ಪರಿಮಿತಿಗಳಿಂದ ಬಿಡಿಸಿಕೊಳ್ಳುವುದು ಅಸಾಧ್ಯವಾಗುತ್ತಿತ್ತು. ಆದರೆ ನವೋದಯ ಸಾಹಿತ್ಯದ ಮೊದಮೊದಲ ಹಂತದ ಬರಹಗಾರರ ಮೇಲೆ ಇನ್ನೊಂದು 'ವಿಶೇಷ ಜವಾಬ್ದಾರಿ' ಇತ್ತು. ಇಂಗ್ಲಿಷ್ ಮತ್ತು ಸಂಸ್ಕೃತಗಳಿಗೆ ಅತ್ಯಂತ ಹೆಚ್ಚಿನ ಗೌರವವನ್ನು ಕೊಡುತ್ತಿದ್ದು, ಕನ್ನಡ ಸಾಹಿತ್ಯವನ್ನು ತಾತ್ಸಾರದಿಂದ ನೋಡುತ್ತಿದ್ದ ಅಂದಿನ ಸಾಂಸ್ಕೃತಿಕ ವಾತಾವರಣದಲ್ಲಿ, ಹಳಗನ್ನಡ, ನಡುಗನ್ನಡ ಸಾಹಿತ್ಯ ಕೃತಿಗಳ

ಯೋಗ್ಯತೆಯನ್ನು ಅನಾವರಣ ಮಾಡಿ, ಅವುಗಳಿಗೆ ಮನ್ನಣೆ ದೊರಕಿಸುವ ಹೊಣೆಗಾರಿಕೆ ಕೂಡ ನವೋದಯದ ಹಿರಿಯರದೇ ಆಗಿತ್ತು. ಇಲ್ಲದೆ ಹೋದರೆ ತಮ್ಮ ಬರವಣಿಗೆ ಮತ್ತು ಹಿಂದಿನ ಕವಿಗಳ ಬರವಣಿಗೆ ಎರಡೂ- ನಿರ್ಲಕ್ಷ್ಯಕ್ಕೆ ಗುರಿಯಾಗುವ ಅಪಾಯುವಾಗುತ್ತಿತ್ತು. ಆದ್ದರಿಂದ ಹೊಸ ಹಾದಿಯನ್ನು ಹಿಡಿಯುವ ಮತ್ತು ಹಳೆಯದನ್ನು ಹೊಗಳುವ ಇಕ್ಕಟ್ಟಿನ ಪರಿಸ್ಥಿತಿ ಬಂತು. ಈ ದ್ವಿವಿಧ ಜವಾಬ್ದಾರಿಯನ್ನು ನಿರ್ವಹಿಸುವಾಗ ಕೆಲವು ಪರಸ್ಪರ ವಿರೋಧಗಳು ಕಂಡು ಬಂದಿದ್ದು ತೀರಾ ಸಹಜ.

ಸಾಹಿತ್ಯವನ್ನು ಕುರಿತಾದ ಬಿ. ಎಂ. ಶ್ರೀಯವರ ನಿಲುವುಗಳು ಯಾವುದಾದರೂ ಒಂದು ಗ್ರಂಥದಲ್ಲಿ ದೊರಕುವುದಿಲ್ಲವಾದ್ದರಿಂದ, ಸಾಂದರ್ಭಿಕ ಬರಹಗಳಿಂದ ಅವುಗಳನ್ನು ಹುಡುಕಿ ತೆಗೆಯಬೇಕಾಗುತ್ತದೆ. ತಾವು ಬರೆಯುತ್ತಿರುವ ಸಾಹಿತ್ಯದ ಒಳ್ಳೆಯ ಗುಣಗಳನ್ನೇ ಹಿಂದಿನ ಕೃತಿಗಳಲ್ಲೂ ಅರಸುವ. ತಮಗೆ ಹಿಡಿಸದ ಲಕ್ಷಣಗಳನ್ನು ನಿರ್ಲಕ್ಷಿಸುವ ಇಲ್ಲವೇ ತಿರಸ್ಕರಿಸುವ ಪ್ರವೃತ್ತಿಯನ್ನು ಈ ಎಲ್ಲ ಬರಹಗಳಲ್ಲೂ ಗುರುತಿಸಬಹುದು.

ಇಲ್ಲಿಯೇ ಇನ್ನೊಂದು ಮಾತು. ನವೋದಯದ ಪ್ರಾರಂಭಿಕ ಹಂತಗಳಲ್ಲಿ ರೂಪಿತವಾದ ಸಾಹಿತ್ಯಕ ನಿಲುವುಗಳೆಲ್ಲವನ್ನೂ ಬಿ. ಎಂ. ಶ್ರೀಯವರೇ ರೂಪಿಸಲಿಲ್ಲ. ಉತ್ತರ ಕರ್ನಾಟಕ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ರೂಪಿತವಾದ ಸಾಹಿತ್ಯವು ವಿಭಿನ್ನವಾದ ಪ್ರೇರಣೆಗಳನ್ನು ಪಡೆದಿತ್ತು. ಹಳೆಯ ಮೈಸೂರಿನಲ್ಲೂ, ಡಿ. ವಿ. ಜಿ., ಮಾಸ್ತಿ ಮುಂತಾದ ಸಮಕಾಲೀನರ ನಿಲುವುಗಳು, ಎಲ್ಲ ಸಂದರ್ಭಗಳಲ್ಲೂ ಬಿ. ಎಂ. ಶ್ರೀಯವರೊಡನೆ ಏಕಮತವಾಗಿರಲಿಲ್ಲ. ಹಾಗೆಯೇ ಕಾವ್ಯಕ್ಕೆ ಸಂಬಂಧಪಟ್ಟಂತೆ ಬಿ. ಎಂ. ಶ್ರೀಯವರ ಕೃತಿಗಳು ಮತ್ತು ನಿಲುವುಗಳು ಬೀರಿದ ಪ್ರಭಾವವನ್ನು ಗದ್ಯ ಹಾಗೂ ಕಥಾಸಾಹಿತ್ಯದಲ್ಲಿ ಗುರುತಿಸಲಾಗುವುದಿಲ್ಲ. ನವೋದಯದ ಸಂದರ್ಭದಲ್ಲಿ ಸೃಷ್ಟಿನಿರತರಾಗಿದ್ದ ಒಂದು ಗುಂಪಿನ ಕವಿಗಳ ಧೋರಣೆಯನ್ನು ಮಾತ್ರ ಬಿ. ಎಂ. ಶ್ರೀಯವರ ನಿಲುವುಗಳು ಪ್ರತಿನಿಧಿಸುತ್ತವೆ. ಅವರ ವ್ಯಕ್ತಿತ್ವದಿಂದ ಪ್ರಭಾವಿತರಾಗಿ ಅವರನ್ನು ಮೆಚ್ಚಿಕೊಂಡವರೆಲ್ಲರೂ ಅವರ ನಿಲುವುಗಳನ್ನು ಒಪ್ಪಲಿಲ್ಲ. ಆದರೆ ಈ ಬಗೆಯ ಭಿನ್ನಾಭಿಪ್ರಾಯಗಳು, ಬಿ. ಎಂ. ಶ್ರೀಯವರ ವ್ಯಕ್ತಿತ್ವದ ಘನತೆಗೆ ಹಾಗೂ ಅಂದಿನ ವಿಮರ್ಶಾ ವಾತಾವರಣದ ಸೌಜನ್ಯಕ್ಕೆ ಭಂಗ ಬರದಂತಹ ನಯವಾದ ಭಾಷೆಯಲ್ಲಿ ವ್ಯಕ್ತವಾಗಿರುವುದರಿಂದ, ಸಾಲುಗಳ ಮಧ್ಯೆ ಓದಿದಾಗ ಮಾತ್ರ ಅವುಗಳನ್ನು ಗ್ರಹಿಸಬಹುದು. ಬೇಂದ್ರೆ, ಕಡೆಂಗೋಡ್ಲು ಶಂಕರ ಭಟ್ಟ, ಎ. ಎನ್. ಮೂರ್ತಿರಾವ್ ಮುಂತಾದವರ ಹಲವು ಲೇಖನಗಳಲ್ಲಿ ಈ ಭಿನ್ನಾಭಿಪ್ರಾಯದ ಸೆಲೆಗಳನ್ನು ಗುರುತಿಸಬಹುದು. ಬೇಂದ್ರೆಯವರಂತೂ ಪ್ರಾಚೀನ ಕಾವ್ಯಗಳ ಮೌಲ್ಯಮಾಪನ ಹಾಗೂ ವ್ಯಾಖ್ಯಾನದ ಕಾರ್ಯದಲ್ಲಿ ಹೆಚ್ಚು

'ದೇಶೀಯ'ವೂ, ಅಂತರ್ದೃಷ್ಟಿಯುಕ್ತವೂ ಆದ ಮಾರ್ಗವನ್ನು ಹಿಡಿದಿದ್ದಾರೆ. ಭಾರತೀಯ ದಾರ್ಶನಿಕರ ನಿಲುವುಗಳು ಬಿ. ಎಂ. ಶ್ರೀಯವರ ಮೇಲೆ ಕಡಿಮೆ ಪ್ರಭಾವ ಬೀರಿದುದನ್ನು ಅರಿತ ಬೇಂದ್ರೆಯವರು ತಮ್ಮ ಬರವಣಿಗೆಯಲ್ಲಿ ಅವುಗಳನ್ನು ರೂಢಿಸಿಕೊಂಡರು.

ಇನ್ನು ಮುಂದೆ ಸಾಹಿತ್ಯವನ್ನು ಕುರಿತ ಬಿ. ಎಂ. ಶ್ರೀಯವರ ನಿಲುವುಗಳನ್ನು ಸಂಗ್ರಹಿಸುವ, ವಿಮರ್ಶಿಸುವ ಕೆಲಸ ಮಾಡಲಾಗಿದೆ.

(೧) ಸಾಹಿತ್ಯದ ಕಾರ್ಯ ಯಾವುದು ಎಂಬ ಪ್ರಶ್ನೆಗೆ ಉತ್ತರವನ್ನು ಆಲೋಚಿಸುವಾಗ, ಶ್ರೀಯವರು ಅದಕ್ಕೆ ಅನೇಕ 'ಅಸಾಹಿತ್ಯಕ' ಕಾರ್ಯಗಳನ್ನು ಆರೋಪಿಸುತ್ತಾರೆ. "ಯಾವ ಕವಿಯ ಕಾವ್ಯವನ್ನೇ ತೆಗೆಯಿರಿ, ಲೋಕಶ್ರೇಷ್ಠವಾದ ನೀತಿಗಳಾಗಲೀ, ದಿವ್ಯಜೀವನಕ್ಕೆ ಮೇಲುಪಂಕ್ತಿಯಾದ ಚರಿತ್ರೆಗಳಾಗಲೀ, ರಮ್ಯವಾದ ಸಹಜ ವರ್ಣನೆಗಳಾಗಲೀ, ಮನಸ್ಸು ಮುಳುಗಿಹೋಗುವ ಕಲ್ಪನೆಗಳಾಗಲೀ, ಯಾವುದಾದರೂ ಒಂದು ನಮ್ಮ ಹೃದಯವನ್ನು ತೊಳೆದು ದುಃಖಮಯವಾದ ಈ ಸಂಸಾರದಲ್ಲೇ ಸ್ವರ್ಗಸುಖವನ್ನು ತಂದುಕೊಡುವಂತದು ಇದೆಯೆ ? ಹಿತವಾಗಿ, ಸಾರ್ಥಕವಾಗಿ ಹೊತ್ತು ಕಳೆಯಬಹುದಾದ ವಚನಕಾವ್ಯಗಳುಂಟೆ ? ಹಿಂದಿನ ಕಾಲದ ಸತ್ಯವಾದ ವೃತ್ತಾಂತವಿಲ್ಲ ; ನೀತಿ ಹೇಳಿ ಪ್ರಪಂಚಧರ್ಮವನ್ನು ಚಿತ್ರಿಸುವ ಕಟ್ಟುಕಥೆ ಇಲ್ಲ ; ಸಾಮಾನ್ಯವಾದ ವ್ಯವಹಾರ ಜ್ಞಾನವನ್ನು ಕೊಡುವ ಪ್ರಸಂಗವಿಲ್ಲ ; ಅದ್ಭುತ ಇಲ್ಲವೆ ತುಚ್ಛವಾದ ಮಹಾತ್ಮೆಯಿಂದ ಪೊಳ್ಳಾಗದಂಥ ದೇಶದ ಮಹನೀಯರ ಜೀವನ ಚರಿತ್ರೆ ಇಲ್ಲ ; ಎಲ್ಲಕ್ಕಿಂತ ಮನುಷ್ಯನ ಜೀವನೋಪಾಯಕ್ಕೂ, ಸುಖಲೋಲುಪ್ತಿಗೂ ಅನುಕೂಲಿಸತಕ್ಕ ಶಾಸ್ತ್ರಗಳ ಪರಿಚಯಕ್ಕೆ ಅವಕಾಶವಿಲ್ಲ."[1] ಈ ಮಾತುಗಳನ್ನು ಬಿ. ಎಂ. ಶ್ರೀಯವರು ತಮ್ಮ ಅಭಿಪ್ರಾಯವೆಂದು ಹೇಳುವುದಿಲ್ಲ. "ಇಂಗ್ಲಿಷ್ ಕಾವ್ಯದ ಉತ್ತಮ ಗುಣಗಳನ್ನು ಭೋಗಿಸಿ, ಅದರ ಅಂದವನ್ನು ಕಂಡ, ಇಂಪನ್ನು ಕೇಳಿದ"[2] ಜನರು ಹೀಗೆ ಹೇಳುವರೆನ್ನುವ ಶ್ರೀಯವರು ಸ್ವತಃ ತಾವು ಈ ಮಾತುಗಳನ್ನು ಒಪ್ಪುತ್ತಾರೆ. "ಆರ್ಯರೇ, ಇವರ ಮಾತನ್ನು ನಾವು ಮನಸ್ಸಿಗೆ ತೆಗೆದುಕೊಂಡರೆ ಒಳ್ಳೆಯದೆಂದು ತೋರುತ್ತದೆ. ಏಕೆಂದರೆ ಅದು ಬಲುಮಟ್ಟಿಗೆ ವಾಸ್ತವ. ಬಲುಮಟ್ಟಿಗೆ ಅದನ್ನು ನಾವು ಒಪ್ಪಬೇಕಾಗುತ್ತದೆ."[3] ಪಂಪ, ರಾಘವಾಂಕ, ಕುಮಾರವ್ಯಾಸರು ಬರೆದ ರೀತಿಗಳನ್ನು ಸಾರಾಸಗಟಾಗಿ ತಿರಸ್ಕರಿಸುವ ಧೋರಣೆಯನ್ನು, "ಬಲುಮಟ್ಟಿಗೆ ವಾಸ್ತವ" ಎಂದು ಒಪ್ಪುವ ಬಿ. ಎಂ. ಶ್ರೀಯವರು ಹಳೆಯ ಸಾಹಿತ್ಯದ ನಿಜವಾದ ಸಾಧನೆಯನ್ನು, ಆ ಪರಂಪರೆಯ ವೈಶಿಷ್ಟ್ಯಗಳನ್ನು ಗ್ರಹಿಸಿದ್ದರೆಂದು ಹೇಳುವುದು ಕಷ್ಟ. ಅಥವಾ ಅವರು ಗುರುತಿಸಿದ ಸಾಧನೆಗಳು ಅವರ ಕಾಲದ ಸಾಹಿತ್ಯಕ ಧೋರಣೆಗಳಿಂದ ಸೀಮಿತವಾಗಿದ್ದವು (ಎಲ್ಲ ಕಾಲದಲ್ಲೂ ಆಗುವಂತೆ).

ಏನೇ ಆಗಲಿ, ಇಂತಹ ಹಲವು ಅಭಿಪ್ರಾಯಗಳನ್ನು ಕ್ರೋಢೀಕರಿಸುವಾಗ, i) ಮನುಷ್ಯನ ಬದುಕನ್ನು ಉತ್ತಮಗೊಳಿಸುವ ನೀತಿಬೋಧೆ ಮತ್ತು ii) ಅವನಿಗೆ ಭಾವನಾತ್ಮಕವಾದ ಸಂತೋಷವನ್ನು ಕೊಡುವುದನ್ನು ಬಿ. ಎಂ. ಶ್ರೀಯವರು ಸಾಹಿತ್ಯದ ಪ್ರಮುಖ ನೆಲೆಗಳೆಂದು ತಿಳಿದಿದ್ದರೆಂದು ಕಾಣುತ್ತದೆ. ಇದು ನವೋದಯ ಸಂದರ್ಭದ ಮಾನವತಾವಾದೀ, ಭಾವಪ್ರದರ್ಶನಾವಾದೀ ನಿಲುವುಗಳಿಗೆ ಅನುಗುಣವಾಗಿಯೇ ಇದೆ. ಇಲ್ಲಿ ಕಾವ್ಯ ಪರಂಪರೆಯ ಒಳತುಡಿತಗಳನ್ನು ಗ್ರಹಿಸುವ ಶಕ್ತಿ ಖಂಡಿತಾ ಇಲ್ಲ.

(೨) ಮನುಷ್ಯರ ಜೀವನವಿಧಾನದಲ್ಲಿ ಬದಲಾವಣೆಯಾದಂತೆಲ್ಲ, ಹೊಸ ರೀತಿಯ ಸಾಹಿತ್ಯದ ಸೃಷ್ಟಿಯು ಆಗತ್ಯವೆಂಬ ಧೋರಣೆಯನ್ನು ಶ್ರೀಯವರು ಅನೇಕ ಕಡೆ ತಮ್ಮ ಬರವಣಿಗೆಯ ಸಮರ್ಥನೆಯಾಗಿ ಬಳಸುತ್ತಾರೆ. ಆದರೆ ತಾವು ಶ್ರೇಷ್ಠವೆಂದು ಭಾವಿಸುವ ಪಾಶ್ಚಾತ್ಯ ಸಾಹಿತ್ಯಕೃತಿಗಳನ್ನು ಹೊಗಳಲು ಈ ಧೋರಣೆ ಅಡ್ಡಿಯಾಗುವುದಿಲ್ಲ. "ಹಿಂದಿನ ಸಾಹಿತ್ಯವು ಎಷ್ಟೇ ಒಳ್ಳೆಯ ಭಾಗಗಳನ್ನು ಒಳಗೊಂಡಿದ್ದರೂ ... ಅದು ಪುರಾತನ ಪ್ರಪಂಚಕ್ಕೆ ಸೇರಿದ್ದು. ಅಲ್ಲಿ ಹುಟ್ಟಿದ್ದು, ಬೆಳೆದಿದ್ದು. ನೂತನ ಪ್ರಪಂಚದಲ್ಲಿ ಹುಟ್ಟಿ ಬೆಳೆಯುತ್ತಿರುವ ನಮಗೆ ಬೇಕಾದ ರುಚಿಗಳನ್ನೆಲ್ಲಾ ಸಂಸ್ಕಾರಗಳನ್ನೆಲ್ಲಾ ಅದು ಕೊಡಲಾರದು...ಈ ನೂತನ ಪ್ರಪಂಚಕ್ಕೆ, ಈ ನೂತನ ಸಮಾಜದ ಅಭಿಲಾಷೆಗಳು, ರುಚಿಗಳು, ಜೀವನ ವ್ಯಾಪಾರಗಳು ಇವುಗಳಿಗೆ ಅನುಕೂಲಿಸುವಂತಹ ಹೊಸ ಸಾಹಿತ್ಯವನ್ನು ನಿರ್ಮಾಣ ಮಾಡಿದಲ್ಲದೆ ... ನಮ್ಮ ಜವಾಬ್ದಾರಿಯನ್ನು ನಾವು ನಿರ್ವಹಿಸದೆ ಅಸಡ್ಡೆ ಮಾಡಿದಂತಾಗುತ್ತದೆ."[4]

ಪ್ರತಿಯೊಂದು ಕಾಲವೂ ಕೂಡ ತನ್ನ ಸಾಹಿತ್ಯದಲ್ಲಿ ಅಭಿವ್ಯಕ್ತಿಯನ್ನು ಪಡೆಯುವುದೆಂಬ ಮಾತು ನಿಜವಾದರೂ, ಎಲ್ಲ ಸಾಹಿತ್ಯಕ್ಕೂ ಸಾರ್ವಕಾಲಿಕವಾದ ಮೌಲ್ಯ, ಮಹತ್ವ ಇರುತ್ತದೆ. ಬಿ. ಎಂ. ಶ್ರೀಯವರ ಧೋರಣೆ ಇಂತಹ ಮೌಲ್ಯಗಳನ್ನು ಗುರುತಿಸುವಲ್ಲಿ ಪಡೆದಿರುವ ಯಶಸ್ಸು ಸೀಮಿತವಾದುದು. ಗದಾಯುದ್ಧದ ದುರ್ಯೋಧನನು ದುರಂತನಾಯಕನಲ್ಲವೆಂದು ತಕರಾರು ತೆಗೆಯುವ ಬೇಂದ್ರೆಯವರ ದೃಷ್ಟಿ ಪ್ರೌಢವಾದುದು. ಬೇರೊಂದು ಕಾಲದಲ್ಲಿ ತಮ್ಮ ಬರವಣಿಗೆಯ ಬಗ್ಗೆ ಕೂಡ ಇಂತಹುದೇ ಆಕ್ಷೇಪಣೆಗಳನ್ನು ಎತ್ತುವ ಅವಕಾಶವನ್ನು ಶ್ರೀಯವರೇ ಒದಗಿಸಿ ಕೊಟ್ಟಂತೆ ಆಗುತ್ತದೆ. (ಅವರ ಸೃಜನಶೀಲ ಕೃತಿಗಳು ಅನುವಾದಗಳು ಅವರ ತಾತ್ವಿಕ ನಿಲುವಿಗೆ ಮಾತ್ರ ಬದ್ಧವಾಗಿಲ್ಲವಾದ್ದರಿಂದ ಅಂತಹ ಅಪಾಯ ಸಂಭವಿಸಲಾರದು.)

(೩) ಸಾಹಿತ್ಯವು ಯಾರಿಗಾಗಿ ಎಂಬ ಪ್ರಶ್ನೆಯನ್ನು ಕೇಳಿಕೊಂಡಾಗ, ಎಲ್ಲ ಕಾಲದ ಸಾಹಿತಿಗಳಂತೆಯೇ ಬಿ. ಎಂ. ಶ್ರೀಯವರೂ ಕೂಡ ಜನಸಾಮಾನ್ಯರಿಗಾಗಿ ಎಂದೇ ಉತ್ತರಿಸುತ್ತಾರೆ. ಆದರೆ ಜನಸಾಮಾನ್ಯರು ಯಾರು ಎಂದು ಕೇಳಿದಾಗ

ದೊರೆಯುವ ಉತ್ತರಗಳು ಅವರ ವರ್ಗಪಕ್ಷಪಾತ ಹಾಗೂ ಸಮುದಾಯವನ್ನು ಕುರಿತ ಸೀಮಿತ ಕಲ್ಪನೆಗಳನ್ನು ಬಯಲಿಗೆ ತರುತ್ತವೆ.

"ರಾಜರಿಗೇ ಆಗಲಿ, ಪಂಡಿತರಿಗೇ ಆಗಲಿ ಬರೆಯುತಕ್ಕ ಕಾಲ ಆಗಿಹೋಯಿತು. ಈಗ ಗಂಡಸರು, ಹೆಂಗಸರು. ಚಿಕ್ಕವರು, ದೊಡ್ಡವರು, ಬ್ರಾಹ್ಮಣರು. ಒಕ್ಕಲಿಗರು, ಅಷ್ಟರೂ ಓದುವಂತೆ ಬರೆಯಬೇಕು.[5] ೧೯೧೧ರಲ್ಲಿ ಈ ಎಲ್ಲ ಜನರೂ ಸಾಹಿತ್ಯವನ್ನು 'ಓದುವ' ಶಕ್ತಿಯನ್ನು ಪಡೆದಿದ್ದರೇ ಎಂಬ ಪ್ರಶ್ನೆಯು ಸಹಜವಾಗಿಯೇ ಮೂಡುತ್ತದೆ. ಅನಕ್ಷರಸ್ಥ ಜನಸಾಮಾನ್ಯರಿಗೂ ಗಮಕ ಮುಂತಾದ ದೇಶೀ ಸಂವಹನ ಮಾರ್ಗಗಳ ಮೂಲಕವಾಗಿ ತಲುಪುತ್ತಿದ್ದ ನಡುಗನ್ನಡ ಸಾಹಿತ್ಯದ ಜಾಗದಲ್ಲಿ, ಸುಶಿಕ್ಷಿತ, ಉತ್ತಮಜಾತಿಯ, ಮಧ್ಯಮವರ್ಗದ ಜನರಿಗೆ ಮಾತ್ರ ತಲುಪುವಂತಹ 'ಬರವಣಿಗೆ'ಯ ಸಾಹಿತ್ಯವನ್ನು ರಚಿಸಿ, ಅದು ಹೆಚ್ಚು ಜನರಿಗೆ ತಲುಪಿತೆಂದು ಭ್ರಮಿಸುವುದು ಹೇಗೆ ಸಮಂಜಸ? ಇಂತಹ ಧೋರಣೆಯ ಮುಂದುವರಿಕೆಯೋ ಎಂಬಂತೆ, ಸುಶಿಕ್ಷಿತರೂ ಕೂಡ ಕಾವ್ಯವ್ಯಾಸಂಗಕ್ಕೆ ಅಪರಿಚಿತರಾಗಿರುವ ನಮ್ಮ ಕಾಲ ಸೃಷ್ಟಿಯಾಗಿಲ್ಲವೇ ? ಅನಕ್ಷರತೆ ಜಾಸ್ತಿಯಿರುವ ಸಮುದಾಯದಲ್ಲಿ ಸಾಹಿತ್ಯವನ್ನು ಬರಹ-ಓದುಗಳಿಗೆ ಸೀಮಿತಗೊಳಿಸಿದ್ದು ಅಪರಾಧವಾಯಿತೇ ? ಇದು ಯೋಚಿಸಬೇಕಾದ ವಿಷಯ. ನನ್ನ ಮಾತಿಗೆ ಸಮರ್ಥನೆಯಾಗಿ ಕಾವ್ಯಭಾಷೆಯನ್ನು ಕುರಿತ ಬಿ. ಎಂ. ಶ್ರೀಯವರ ಮಾತುಗಳನ್ನು ಗಮನಿಸಿ. "**ಗ್ರಾಮ್ಯವನ್ನು** ಬಿಟ್ಟು, ವಿದ್ಯಾವಂತರೂ, **ಉತ್ತಮಜಾತಿಯವರೂ** ಆಡುವ ಸ್ಫುಟವಾದ ಕನ್ನಡವನ್ನು ಗ್ರಂಥಭಾಷೆಯಾಗಿ ತಿರುಗಿಸಿಬಿಟ್ಟರೆ ಅಚ್ಚು ಹಾಕುವುದರಿಂದಲೂ, ಮಕ್ಕಳಿಗೆ ಕಲಿಸುವುದರಿಂದಲೂ ಇದೇ ನೆಲೆಯಾಗಿ ನಿಂತು ಎತ್ತಲೂ ಹರಡುತ್ತದೆ."[6] ಕೆಲವೇ ವರ್ಷಗಳಲ್ಲಿ, 'ಗ್ರಾಮ್ಯ'ವಾದ ಭಾಷೆಯನ್ನು ಕಾವ್ಯವನ್ನಾಗಿಸಿದ ಬೇಂದ್ರೆಯವರಿಗೆ ಹೋಲಿಸಿದಾಗ ಶ್ರೀಯವರ ವಾದ ಮತ್ತು ವಾಚಕವರ್ಗದ ಸ್ವರೂಪಗಳು ಸ್ಪಷ್ಟವಾಗುತ್ತವೆ.

(೪) ಸಾಹಿತ್ಯದ ರೂಪ ಮತ್ತು ನಿರೂಪಣಾ ವಿಧಾನಗಳನ್ನು ತೆಗೆದುಕೊಂಡಾಗ, ಬಿ. ಎಂ. ಶ್ರೀಯವರು ಹೇಳುವ ವಿಷಯಗಳು, ಅವರು ರಚಿಸುತ್ತಿದ್ದ ಕಿರುಕವನಗಳು, ಭಾವಗೀತೆಗಳಿಗೆ ಹೊಂದಿಕೊಳ್ಳುವಷ್ಟು ಚೆನ್ನಾಗಿ, ದೀರ್ಘವಾದ ಕಾವ್ಯಗಳಿಗಾಗಲೀ, ನಾಟಕಗಳಿಗಾಗಲೀ ಅಲ್ಲ. ಹಳಗನ್ನಡ ಕಾವ್ಯಗಳ ದೋಷಗಳನ್ನು ಚರ್ವಿತಚರ್ವಣವಾದ ಪೌರಾಣಿಕ ವಸ್ತು, ಸೂತ್ರಕ್ಕೆ ಸ್ವತಂತ್ರವನ್ನು ಮಾರಿಕೊಂಡ ಅನುಕರಣಶೀಲರೀತಿ, ಅಲಂಕಾರ, ಕವಿಸಮಯಗಳಿಂದ ಬಪ್ಪವಾದ ಭಾವಾಭಿವ್ಯಕ್ತಿ, ಉತ್ಪ್ರೇಕ್ಷೆ, ಅತಿಶಯೋಕ್ತಿಗಳಿಂದ ತುಂಬಿರುವ ಕೆಲವು ಕಡೆ ಲಜ್ಜೆಯನ್ನು ಮೀರಿ ಬರೆದಿರುವ ವರ್ಣನೆಗಳು, ಸಂಸ್ಕೃತಮಯವಾದ ಶೈಲಿ ಮತ್ತು ಕೇವಲ ಪದ್ಯದಲ್ಲೇ ಇರುವ ಕಾವ್ಯರೂಪಗಳೆಂದು ಆರು ಭಾಗಗಳಾಗಿ ವಿಂಗಡಿಸುತ್ತಾರೆ. ಇವೆಲ್ಲ ನೇತ್ಯಾತ್ಮಕವಾಗಿ ಮಾಡಿದ ಲಕ್ಷಣ ನಿರೂಪಣೆಯೇ ಹೌದು. ತಮ್ಮ ಹಾಗೂ

ಸಮಕಾಲೀನರ ಕಾವ್ಯಸೃಷ್ಟಿಯೂ ಈ ದೋಷಗಳ ನಿವಾರಣೆ ಮಾಡಬಹುದೆಂದು ಅವರು ನಿರೀಕ್ಷಿಸಿದರು. ಆದರೆ ಯಾವುದೇ ಕಾವ್ಯ ಸಂಪ್ರದಾಯಗಳಲ್ಲಿ ಸ್ವೋಪಜ್ಞತೆ ಸಾಧಿತವಾಗುವುದು ಶಿಖರಪ್ರಾಯವಾದ ಕೃತಿಗಳಲ್ಲಿ ಮಾತ್ರವೆಂಬ ಸತ್ಯವನ್ನು ಮರೆಯ ಬಾರದು. ವಾಕ್-ಸಂಪ್ರದಾಯದ ಆವಶ್ಯಕತೆಗಳನ್ನು ಪರಿಗಣಿಸಿದಾಗ ಇವರು ದೋಷವೆಂದು ಪರಿಗಣಿಸುವ ಎಷ್ಟೋ ಅಂಶಗಳು ಗುಣವಾಗಿಬಿಡುತ್ತವೆ. ವಾಕ್-ಸಂಪ್ರದಾಯವು ಸ್ವೀಕರಿಸಿದ ಸವಾಲುಗಳನ್ನು ಸ್ವೀಕರಿಸದ ಇವರು ಇಂಗ್ಲಿಷಿಗೆ ಶರಣುಹೋಗುತ್ತಾರೆ.

"ಆದರೆ ಸಧ್ಯಕ್ಕೆ, ನನಗೆ ತೋರುವುದರಲ್ಲಿ, ದೊಡ್ಡ ಕವನಗಳನ್ನಾಗಲೀ, ಸ್ವಂತ ನಾಟಕಗಳನ್ನಾಗಲೀ ಬರೆಯಬಾರದು. ಬಾವಿಯಲ್ಲಿ ಸೀನೀರು ಸಿಕ್ಕುತ್ತಿರುವಾಗ ಕಡಲಲ್ಲಿ ಹೋಗಿ ಉಪ್ಪುನೀರು ಕುಡಿಯುವುದಿಲ್ಲ. ದೊಡ್ಡತನಕ್ಕೆ ಜೆರಗಾಗಿ ನಮ್ಮ ಯೋಗ್ಯತೆಯನ್ನು ಏಕೆ ಮೀರಬೇಕು ?"[7]

(೫) ಕೊನೆಯದಾಗಿ, ಕಾವ್ಯಭಾಷೆಯನ್ನು ಕುರಿತಂತೆ ಶ್ರೀಕಂಠಯ್ಯನವರ ನಿಲುವುಗಳನ್ನು ಗಮನಿಸಬಹುದು. ಸಂಸ್ಕೃತ ಭೂಯಿಷ್ಠವಾದ, ಪಾಂಡಿತ್ಯಪೂರ್ಣವಾದ ಭಾಷೆಯನ್ನು ಅವರು ನಿರಾಕರಿಸಿದರೆನ್ನುವುದು ನಿಜ. ಅವರ ಅನುವಾದಿತ ಕವನಗಳಲ್ಲಂತೂ ಅಂತಹ ಭಾಷೆಯ ಸುಳಿವೂ ಇಲ್ಲ. ಜನರಿಗೆ ತಲುಪುವಂತಹ ಸರಳ ಭಾಷೆ ಅವರ ಗುರಿಯಾಗಿತ್ತು. ಆದರೆ ಜನರ, "ಈಗಿನ ಆಡುವ ಭಾಷೆಯಲ್ಲಿ ಕ್ರಮವಿಲ್ಲ, ಏಕರೂಪವಿಲ್ಲ ; ಪ್ರಾಂತ್ಯಭೇದವಿದೆ, ಮಿಶ್ರವಿದೆ ; ಗ್ರಾಮ್ಯವಿದೆ"[8] ಎಂಬ ತೀರ್ಮಾನಕ್ಕೆ ಬರುವ ಅವರು ಪಂಡಿತ ಮತ್ತು ಗ್ರಾಮ್ಯಗಳ ನಡುವಿನ ಮಧ್ಯ ಮಾರ್ಗವನ್ನು ಹಿಡಿಯಬೇಕೆನ್ನುತ್ತಾರೆ.

ಹೀಗೆ ಸಾಹಿತ್ಯ ತತ್ತ್ವ ಮತ್ತು ಸಾಹಿತ್ಯಕೃತಿಗಳ ವಿವಿಧ ಭಾಗಗಳಿಗೆ ಸಂಬಂಧಿಸಿದಂತೆ ಶ್ರೀಯವರು ವ್ಯಕ್ತಪಡಿಸಿರುವ ಹಲವು ನಿಲುವುಗಳು ಸಮರ್ಪಕವೂ, ಅವರ ಕಾಲದ ಸ್ಥಿತಿಗತಿಗಳಿಗೆ ಪ್ರಸ್ತುತವೂ ಆಗಿವೆ. ಬೇರೆ ಕೆಲವು ಧೋರಣೆಗಳು ನವೋದಯ ಚಳುವಳಿಯ ಆವಶ್ಯಕತೆಗಳಿಂದ ರೂಪಿತವೂ, ತನಗಿಂತ ಹಿಂದಿನದನ್ನು ಅವಿಚಾರಿತವಾಗಿ ತಿರಸ್ಕರಿಸುವ ಪ್ರತಿಕ್ರಿಯಾತ್ಮಕ ಸ್ವರೂಪದ್ದೂ ಆಗಿವೆ. ಅವರ ಸಾಹಿತ್ಯತತ್ತ್ವವು ಕ್ಲಾಸಿಕಲ್ ಮತ್ತು ರೊಮ್ಯಾಂಟಿಕ್ ಧೋರಣೆಗಳೆರಡರಿಂದಲೂ ರೂಪಿತವಾಗಿ ದ್ವಂದ್ವಗಳಿಗೆ ಎಡೆ ನೀಡಿದೆ.

## ೨

ಈ ಭಾಗವು ಶ್ರೀಯವರ ಸೃಜನಶೀಲ ಸಾಹಿತ್ಯದಲ್ಲಿ ಕಂಡುಬರುವ, ಕನ್ನಡ ನವೋದಯ ಸಾಹಿತ್ಯದ ಲಕ್ಷಣಗಳ ಸ್ಥೂಲ ಪರಿಶೀಲನೆಗೆ ಮೀಸಲಾಗಿದೆ. ಹಾಗೆ ನೋಡಿದರೆ ಶ್ರೀಯವರ ಸ್ವಂತ ಕೃತಿಗಳೆಂದು ಕರೆಯಬಹುದಾದಂದು

'ಹೊಂಗನಸುಗಳು' ಸಂಕಲನದ ಹದಿನಾಲ್ಕು ಕವನಗಳನ್ನು ಮಾತ್ರ. ಉಳಿದವೆಲ್ಲ ಅನುವಾದಗಳು. ಇದು ನಿಜಕ್ಕೂ ಸೋಜಿಗದ ಸಂಗತಿ. ಕನ್ನಡ ನವೋದಯದ ಪ್ರೇರಕಶಕ್ತಿಯಾದ ಇವರು ಇಷ್ಟೊಂದು ಕಡಿಮೆ, ಅದರಲ್ಲೂ ಕೇವಲ ರಾಜಭಕ್ತಿ, ರಾಷ್ಟ್ರಭಕ್ತಿ ಮತ್ತು ಭಾಷೆ/ಸಾಹಿತ್ಯ ಪ್ರೇಮಗಳಿಗೆ ಮೀಸಲಾದ ಕವಿತೆಗಳನ್ನು ಬರೆದು ತಮ್ಮ ಸೃಜನಶಕ್ತಿಯ ಸ್ವರೂಪದ ಬಗ್ಗೆಯೇ ಅನುಮಾನ ಮೂಡುವಂತೆ ಮಾಡುತ್ತಾರೆ. ಹೀಗಾಗಲು ಪ್ರೊ॥ ಎ. ಎನ್. ಮೂರ್ತಿರಾಯರು ಒಂದು ಕಾರಣ ಕೊಡುತ್ತಾರೆ. "ಶ್ರೀಯವರ ಪ್ರತಿಭೆ ಮಹಾಕೃತಿಯೊಂದರ ಲಯಕ್ಕೆ ಸರಿಯಾಗಿ ಮಿಡಿಯಬಲ್ಲುದು. ಆದರೆ ತಾನೇ ಆ ಮಟ್ಟದ ಕೃತಿಯನ್ನು ಸೃಷ್ಟಿಸಲಾರದು. ಬಹುಶಃ ಇದು ಅವರ ಪ್ರತಿಭೆಯ ಗುಣ. ಅದನ್ನು ಸೃಷ್ಟಿಶಕ್ತಿಯುಳ್ಳ ಪ್ರತಿಭೆ (Creative Imagination) ಎನ್ನುವುದಕ್ಕಿಂತ ಸೃಷ್ಟಿಶಕ್ತಿಗೆ ಪ್ರತಿಸ್ಪಂದನ ಕೊಡಬಲ್ಲ ಪ್ರತಿಭೆ (Responsive Imagination) ಎಂದರೆ ಸರಿಹೋದೀತೇನೋ ... ಈ ಮಾತಿನ ಜೊತೆಗೆ ಇನ್ನೂ ಒಂದನ್ನು ಸೇರಿಸುವ ಸಾಹಸ ಮಾಡಬಹುದೇನೊ. ಶ್ರೀಯವರ ಹೃದಯ ಮಿಡಿದದ್ದು ಸಾವಿರ ಬಣ್ಣದ, ಸಾವಿರ ಮುಖದ ಮಾನವ ಜೀವನಕ್ಕೆ ಸಂವಾದಿಯಾಗಿ ಎನ್ನುವುದಕ್ಕಿಂತ, 'ಆ ಜೀವನದ ಪ್ರತಿಕೃತಿಯಾದ ಸಾಹಿತ್ಯಕ್ಕೆ ಸಂವಾದಿಯಾಗಿ' ಎನ್ನುವುದು ಸತ್ಯಕ್ಕೆ ಹತ್ತಿರ ಎನ್ನಿಸುತ್ತದೆ ... ದೇಶಪ್ರೇಮ, ಭಾಷಾಪ್ರೇಮ, ಸಾಹಿತ್ಯ ಪ್ರೇಮಗಳು ಎಷ್ಟೋ ಕವಿಗಳನ್ನು ಆಕರ್ಷಿಸಿವೆ. ಶ್ರೀಯವರ ಕವಿತೆ ಆ ಕ್ಷೇತ್ರಕ್ಕೆ ಸೀಮಿತವಾದಂತೆ ತೋರುತ್ತದೆ. ಜೀವನದ ನೂರೆಂಟು ಆಸೆಗಳೂ, ಸುಖದುಃಖಗಳೂ ಅವರನ್ನು ಕಾವ್ಯಸೃಷ್ಟಿಗೆ ಪ್ರೇರಿಸಿದಂತಿಲ್ಲ."[9] ಈ ಮಾತಿಗೆ ವಿವರಣೆಯೋ ಎನ್ನುವಂತೆ ದ. ರಾ. ಬೇಂದ್ರೆಯವರು ಬಹಳ ಹಿಂದೆ ಹೀಗೆ ಹೇಳಿದ್ದಾರೆ : "ಸಂಗ್ರಹದ ಕೊನೆಗಿರುವ ಎರಡು ದೇಶಭಕ್ತಿಗೀತೆಗಳು 'ಶ್ರೀ'ಯವರ ಕಂಠಶ್ರೀಯ ಪ್ರವಾಹಗಳು. ಇವುಗಳನ್ನು ಬರೆದ ಕವಿ ಸ್ವಂತವಾಗಿ ಏನನ್ನು ಬರೆಯಲಾರ ? ಆದರೆ ಅವರಿದ್ದ ಕಾಲ ವ್ಯಂಗ್ಯಮರ್ಯಾದೆಯ ಕಾಲ. ಇನ್ನೊಬ್ಬರ ಬಾಯಿಂದ ತನ್ನ ಭಾವವನ್ನು ಹೊರಪಡಿಸಿಕೊಳ್ಳುವಲ್ಲಿ ಸೊಗಸುಕಾಣುವ ಕಾಲ. ಶ್ರೀಯವರ ಉಳಿದ ಅನೇಕ ಕೃತಿಗಳೂ ಹೀಗೆಯೇ. ಸ್ವತಂತ್ರವೆಂದರೆ ಸ್ವತಂತ್ರ, ಪರತಂತ್ರ ಎಂದರೆ ಪರತಂತ್ರ."[10] ಆದ್ದರಿಂದ ಅವರ ಅನುವಾದಿತ ಕೃತಿಗಳಲ್ಲಿಯೂ ಅವರ ವ್ಯಕ್ತಿತ್ವವನ್ನು ಕಾಣಲು ಸಾಧ್ಯವೆಂಬ ಗೃಹೀತದೊಂದಿಗೆ ನಾನು ಮುಂದುವರಿಯುತ್ತೇನೆ.

ಈಗ ನವೋದಯ ಸಾಹಿತ್ಯವೆಂದು ನಾವು ಮಾತನಾಡುವಾಗ ಬಿ. ಎಂ. ಶ್ರೀಯವರಿಂದ ಹಿಡಿದು ಅನೇಕ ವರ್ಷಗಳವರೆಗೆ ಹರಡಿರುವ ಸಮಗ್ರಕಾವ್ಯ ನಮ್ಮ ಗಮನದಲ್ಲಿರುತ್ತದೆ. ಈ ಕಾವ್ಯರಾಶಿಯಲ್ಲಿ ಕೆಲವು ಸಮಾನ ಲಕ್ಷಣಗಳನ್ನು ಗುರುತಿಸುವುದು ಸಾಧ್ಯ. ಈ ಲಕ್ಷಣಗಳ ಸ್ಥೂಲ ಹಿನ್ನೆಲೆಯಲ್ಲಿಯೂ ಅನೇಕ ಕವಿವಿಶಿಷ್ಟ ಲಕ್ಷಣಗಳಿರುತ್ತವೆ. ಆದರೆ ಬಿ. ಎಂ. ಶ್ರೀಯವರು ಇಂಗ್ಲಿಷ ಗೀತಗಳನ್ನು ರಚಿಸುತ್ತಿದ್ದ

ಕಾಲದಲ್ಲಿ, ನವೋದಯ ಕಾವ್ಯವೆನ್ನುವುದು ಭವಿಷ್ಯದ ಗರ್ಭದಲ್ಲಿತ್ತು. ಅದರ ಲಕ್ಷಣಗಳು ಖಚಿತವಾದ ರೂಪ ತಳೆದಿರಲಿಲ್ಲ. ಆದ್ದರಿಂದ ಶ್ರೀಯವರ ಕವಿತೆಯಲ್ಲಿ ಕಾಣಿಸಿಕೊಂಡ ಅನೇಕ ಲಕ್ಷಣಗಳೇ, ಕ್ರಮೇಣ ನವೋದಯದ ಕಾವ್ಯದ ಲಕ್ಷಣಗಳಾಗಿ ಮೈದಳೆದವೆನ್ನುವುದು ಹೆಚ್ಚು ಸೂಕ್ತ.

ಬದಲಾಗುತ್ತಿರುವ ಸಾಮಾಜಿಕ ಸಂದರ್ಭವೊಂದರ ಎಲ್ಲ ಒಳ ಸೂಕ್ಷ್ಮಗಳನ್ನು ಗ್ರಹಿಸಿಕೊಂಡು, ಅವಕ್ಕೆ ಪಡಿಮಿಡಿದು ನವೋದಯಕ್ಕೆ ಕಾರಣನಾಗುವ ಮಹತ್ವದ ಕವಿಯು ತನ್ನ ಜೀವನ, ಧೋರಣೆ ಮತ್ತು ಕಾವ್ಯಸೃಷ್ಟಿ ಮೂರರಲ್ಲೂ ಪರಿವರ್ತನೆಯ ಪರಿಕಾರನಾಗಿರುತ್ತಾನೆ. ಅವನ ವ್ಯಕ್ತಿತ್ವದ ಪ್ರತಿಯೊಂದು ಅಂಶವೂ ಕೂಡ ಸಂಪ್ರದಾಯದ ಉತ್ತಮಾಂಶಗಳನ್ನು ಗ್ರಹಿಸಿಯೂ ಆಧುನಿಕತೆಯ ಕಡೆಗೆ ತುಡಿಯುತ್ತದೆ. ತನ್ನ ಕಾಲದ, ತನ್ನ ಪರಿಸರದ ಇತರ ಬುದ್ಧಿಜೀವಿಗಳೊಂದಿಗೆ ಹೋಲಿಸಿದರೆ ಸ್ವಲ್ಪ ಹೆಚ್ಚು ಧೈರ್ಯಶಾಲಿಯಾಗಿ, ಭಾವುಕರಾಗಿ, ಭಿನ್ನವಾಗಿ ಕಾಣಬಹುದಾದ ಬಿ. ಎಂ. ಶ್ರೀಯವರು ವಾಸ್ತವದಲ್ಲಿ ನವೋದಯಕ್ಕೆ ಅಗತ್ಯವಾದ ವ್ಯಕ್ತಿತ್ವವನ್ನು ಹೊಂದಿರಲಿಲ್ಲ. ಅಚಲವಾದ, ಆವೇಶಯುತವಾದ ರಾಜಭಕ್ತಿ, ಇಂಗ್ಲಿಷ್ ಸಾಹಿತ್ಯದಿಂದ ಮಾತ್ರ ಕನ್ನಡಕ್ಕೆ ಮಾದರಿಗಳು ದೊರಕಬಲ್ಲವೆಂಬ ಖಚಿತವಾದ ನಂಬಿಕೆ, ದುಃಖದ ಬಗ್ಗೆ ಕರುಣೆ ತೋರಬಲ್ಲ ಮಾನವತೆಯಿದ್ದರೂ ಕೂಡ ತಾನಿರುವ ಸಾಮಾಜಿಕ ವ್ಯವಸ್ಥೆಯು ಸರಿಯಾಗಿದೆಯೆಂಬ ನಿಲುವು ಮತ್ತು ವರ್ಣಾಶ್ರಮ ಧರ್ಮದಲ್ಲಿನ ನಂಬಿಕೆಗಳು ಅವರ ವ್ಯಕ್ತಿತ್ವವನ್ನು ರೂಪಿಸಿದ ಪ್ರಧಾನ ಅಂಶಗಳು. ಇಂತಹ ಅಂಶಗಳು ಸಂಪ್ರದಾಯವಾದಿಯೊಬ್ಬನನ್ನು ರೂಪಿಸಬಲ್ಲವೇ ಹೊರತು, ಪರಿವರ್ತನೆಯ ಪ್ರವಾದಿಯನ್ನಲ್ಲ. ಬಿ. ಎಂ. ಶ್ರೀ.ಯವರ ಸ್ವಂತ ಕವನಗಳ ತುಂಬಾ ಕಾಣುವುದು ಇಂತಹ ರಾಜನಿಷ್ಠ ಸಂಪ್ರದಾಯವಾದಿಯೊಬ್ಬನ ನಿಲುವುಗಳೇ. ಭರತಮಾತೆಯ ನುಡಿ ಎಂಬ ಅವರ ಪದ್ಯ ಕೂಡ ಇಂಗ್ಲಿಷರ ಆಳ್ವಿಕೆಯ ಬಗ್ಗೆ ಮೆಚ್ಚಿಗೆ, ಕೃತಜ್ಞತೆ ಮತ್ತು ಅಭಿಮಾನಗಳನ್ನು ತೋರಿಸುವುದೇ ವಿನಾ ಸ್ವಾತಂತ್ರ್ಯದ ಬಯಕೆಯನ್ನಲ್ಲ. ೧೯೧೦ರಲ್ಲಿ ಇಂತಹ ವ್ಯಕ್ತಿತ್ವವೊಂದು ಅಸಹಜವೆಂದಾಗಲೀ, ಬಿ. ಎಂ. ಶ್ರೀಯವರು ಬೇರೆ ರೀತಿ ಇರಬೇಕಿತ್ತೆಂದಾಗಲೀ ನಾನು ಹೇಳುತ್ತಿಲ್ಲ. ಆದರೆ ಉತ್ತರ ಕರ್ನಾಟಕ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಇದೇ ಕಾಲದಲ್ಲಿ ಕೆಲವರಾದರೂ ಬ್ರಿಟಿಷರ ಆಡಳಿತದ ಬಗ್ಗೆ ಅತೃಪ್ತಿ, ಅಸ್ಪೃಶ್ಯರ ನೋವಿನ ಬಗ್ಗೆ ಕಳಕಳಿ ಮುಂತಾದ ಪ್ರಗತಿಪರ ಧೋರಣೆಗಳನ್ನು ತೋರಿಸಿರುವುದನ್ನು ಗಮನಿಸಬಹುದು. (ಮುಖ್ಯವಾಗಿ ಪಂಜೆಯವರು, ಹೊಂಗನಸುಗಳು ಪ್ರಕಟವಾಗುವ ವೇಳೆಗೆ ಅನೇಕ ಶ್ರೇಷ್ಠ ಕವಿತೆಗಳನ್ನು ರಚಿಸಿದ್ದ ಬೇಂದ್ರೆಯವರು.) ಆದ್ದರಿಂದಲೇ ಹಳೆಯ ಮೈಸೂರು ಮತ್ತು ಅದರ ಹೊರಗಿನ ಕನ್ನಡ ಸಾಹಿತಿಗಳ ನಡುವೆ ವಿರೋಧದ ಒಳಸುಳಿಯೊಂದು ಬೆಳೆದುಬಂತು.

ಇಷ್ಟೆಲ್ಲ ಹೇಳಿದರೂ ಕೂಡ, 'ಇಂಗ್ಲಿಷ್ ಗೀತಗಳು' ನಿರ್ವಿವಾದವಾಗಿ ನವೋದಯ ಕಾವ್ಯದ ಮೊಟ್ಟಮೊದಲ ಶ್ರೇಷ್ಠಕೃತಿ ; ಅದರ ಲಕ್ಷಣಗಳನ್ನು ರೂಪಿಸಿದ ಕೃತಿ ; 'ಭಾವಗೀತೆಗಳ ಭಾಷಾಂತರಕ್ಕೊಂದು ಕೈಪಿಡಿ'ಯಾದಿ ಕವಿಗಳ ಪೀಳಿಗೆಯೊಂದಕ್ಕೆ ಮಾದರಿಯಾದ ಕೃತಿ. ಇದು ಹೇಗೆ ಸಾಧ್ಯವಾಯಿತು ಎನ್ನುವುದನ್ನು ಇನ್ನುಮುಂದೆ ಯೋಚಿಸುತ್ತೇನೆ. ಅಪಾರವಾದ ಜನಸಮುದಾಯವೊಂದು ಅನಕ್ಷರತೆ, ಬಡತನ ಮತ್ತು ಸಾಂಸ್ಕೃತಿಕ ದಾರಿದ್ರ್ಯದಲ್ಲಿ ಮುಳುಗಿರುವಾಗ, **ಆ ಸಮುದಾಯದ ಒಂದು ಭಾಗ** ಮಾತ್ರ ಇದ್ದಕ್ಕಿದ್ದಂತೆ ವಿದ್ಯಾಭ್ಯಾಸ, ವೈಚಾರಿಕ ಪ್ರಗತಿ ಹಾಗೂ ಹೊಸ ಬದುಕಿಗೆ ಮೈಒಡ್ಡುವ ಅವಕಾಶವನ್ನು ಪಡೆಯುವುದು ಅಪರೂಪವಾದರೂ ಅಸಾಧ್ಯವಲ್ಲದ ಐತಿಹಾಸಿಕ ಆಕಸ್ಮಿಕ. ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕಗಳು ಹಾಗೂ ಈ ಶತಮಾನದ ಮೊದಲ ದಶಕಗಳಲ್ಲಿ ಕರ್ನಾಟಕದ ಬ್ರಾಹ್ಮಣ ಸಮುದಾಯ ಇಂತಹ ಅವಕಾಶವನ್ನು ಪಡೆಯಿತು. ವೇದಾಧ್ಯಯನ, ಪುಷ್ಕಳ ಭೋಜನಗಳಲ್ಲಿ ನಿರತರಾದ, ಡಿ. ವಿ. ಜಿ.ಯವರು ತಮ್ಮ ಜ್ಞಾಪಕ ಚಿತ್ರಶಾಲೆಯ ಸಂಪುಟಗಳಲ್ಲಿ ಚಿತ್ರಿಸುವ ವೈದಿಕ ಬ್ರಾಹ್ಮಣವರ್ಗಕ್ಕೂ, ನವರತ್ನ ರಾಮರಾವ್. ಮಾಸ್ತಿ ಮುಂತಾದವರು ಚಿತ್ರಿಸುವ ಲೌಕಿಕ ಪ್ರಗತಿಯ ಧ್ಯೇಯಗಳಿಂದ ಪ್ರೇರಿತರಾದ ಬ್ರಾಹ್ಮಣ ಯುವಕರಿಗೂ ಇರುವ ವ್ಯತ್ಯಾಸವನ್ನು ಗಮನಿಸಿ. ತಾವು ಆಳರಸರ ದತ್ತಕ ಪುತ್ರರೆಂದು ಭಾವಿಸಿದ ಈ ಜನರು ತಮಗೆ ದೊರೆತ ಸೌಲಭ್ಯಗಳು ಮತ್ತು ವೈಚಾರಿಕ ಶಿಕ್ಷಣಕ್ಕಾಗಿ ಬ್ರಿಟಿಷರಿಗೆ ಕೃತಜ್ಞರಾಗಿದ್ದರು. ಬಿಳಿಯರ ಜೊತೆಜೊತೆಯಲ್ಲಿಯೇ ಅಧಿಕಾರ ನಡೆಸುವ ಅವಕಾಶಪಡೆದ ಇವರಿಗೆ ಹಳ್ಳಿಗಳ ಬಡಜನರ ಪರಿಸ್ಥಿತಿಗಳ ಕಲ್ಪನೆ ಬಂದಿದ್ದು ಕಡಿಮೆ ಮತ್ತು ದೂರದಿಂದ. ಆಡಳಿತ ನಡೆಸಿದ ಮಾಸ್ತಿಯವರಿಗೆ ಸ್ವಲ್ಪವಾದರೂ ಜನಜೀವನದ ಪರಿಚಯವಾದರೆ, ಬಿ. ಎಂ. ಶ್ರೀಯವರ ಗ್ರಾಮಸಂಪರ್ಕ, ಅವರ ಭಾಷಣ ಪ್ರವಾಸಗಳಲ್ಲಿ ಭೇಟಿಯಾಗುತ್ತಿದ್ದ ಸುಶಿಕ್ಷಿತ ಬ್ರಾಹ್ಮಣ ಮಹನೀಯರಿಗೆ ಸೀಮಿತವಾಗಿತ್ತು.

ಇಂತಹ ಸನ್ನಿವೇಶದಲ್ಲಿ, ತಮ್ಮ ಪರಿಸರದ ನಾಲ್ಕು ಗೋಡೆಗಳ ನಡುವೆ ನವೋದಯವಾಗುತ್ತಿದೆ, ಹಳೆಯದೆಲ್ಲ ಸತ್ತು ಹೊಸ ಬದುಕು ಮೂಡುತ್ತಿದೆ ಎಂಬ ಅನಿಸಿಕೆ ಮೂಡುವುದು ಸಹಜ. ಹೊರಗಿನ ವಾಸ್ತವತೆಯಲ್ಲಿ ಭದ್ರವಾದ ನೆಲೆಗಟ್ಟಿಲ್ಲದ ಈ ನವೋದಯ ಬಿ. ಎಂ. ಶ್ರೀಯವರು ಪ್ರತಿನಿಧಿಸುತ್ತಿದ್ದ ಸಮುದಾಯ ಭಾಗಕ್ಕೆ ನಿಜವೇ ಆಗಿತ್ತು. ಈ ಸೀಮಿತ ನವೋದಯದಲ್ಲಿ ರಾಜಭಕ್ತಿ. ಇಂಗ್ಲಿಷ್ ಪ್ರೀತಿ ಮತ್ತು ಬ್ರಾಹ್ಮಣ್ಯದ ಪರವಾದ ಧೋರಣೆಗಳು ಗ್ರಾಹ್ಯವೂ. ಅಪೇಕ್ಷಣೀಯವೂ ಆಗಿದ್ದವು. ಆದರೆ ಇಂತಹ ಸನ್ನಿವೇಶದಲ್ಲಿ 'ಕನ್ನಡ ಮಾತು ತಲೆಯೆತ್ತುವ ಬಗೆ'ಯನ್ನು ಕುರಿತು ಯೋಚಿಸಿದ್ದು ಶ್ರೀ ಅವರ ಹೆಚ್ಚುಗಾರಿಕೆ. ಹದಿನೆಂಟನೆಯ ಶತಮಾನದ ಇಂಗ್ಲೆಂಡಿನಲ್ಲಿ, ವ್ಯವಸ್ಥೆಯಿಂದ ಬೇಸತ್ತು, ಅದಕ್ಕೆ

ಪ್ರತಿಭಟನೆಯನ್ನು ತೋರಿಸಿದ ರೊಮ್ಯಾಂಟಿಕ್ ಕವಿಗಳೂ ಸೇರಿದಂತೆ ಅನೇಕ ಇಂಗ್ಲಿಷ್ ಮಾದರಿಗಳು ಅವರಿಗೆ ದೊರಕಿದವು. ತಮ್ಮ ಹಿರಿಯರಿಗೆ ಅಲ್ಲ, ತಮ್ಮ ಪೀಳಿಗೆಯ ತರುಣರಿಗೆ ಆಕರ್ಷಕವಾದ ವಿಷಯಗಳನ್ನು ಕುರಿತು, ಅವರಿಗೆ ತಿಳಿಯುವ, ಹಿಡಿಸುವ ಭಾಷೆಯಲ್ಲಿ ಹೇಳುವ ಪ್ರೇರಣೆ ಬಿ. ಎಂ. ಶ್ರೀಯವರ ಅನುವಾದಗಳ ಹಿಂದೆ ಕೆಲಸ ಮಾಡಿತು. ಆದ್ದರಿಂದ ಆ ಕವಿತೆಗಳು ಆ ಸಮುದಾಯದ ಮಟ್ಟಿಗೆ ನವೋದಯದ ಸೂಚಕಗಳೇ ಆಗಿದ್ದವು. ಯಾವುದೇ ಸಮುದಾಯದಲ್ಲಿ ಹಿಂದುಳಿದ ಸ್ಥಿತಿಯಿಂದ ಪ್ರಗತಿಯ ಕಡೆಗೆ ತಿರುಗುತ್ತಿರುವ ವರ್ಗವೊಂದು ಯಾವಾಗಲೂ ಇರುತ್ತದೆ. ಅಂತಹ ವರ್ಗಕ್ಕೆ ತನ್ನಾಚೆಯ ಜಗತ್ತು ಕಾಣುವುದಿಲ್ಲ.

ಹೀಗೆ ಬಿ. ಎಂ. ಶ್ರೀಯವರ ವ್ಯಕ್ತಿತ್ವದ, ಸಂಪ್ರದಾಯಪರವಾದ ಹಿನ್ನೆಲೆಯಲ್ಲಿಯೂ, ಅವರಲ್ಲಿ ಕಂಡುಬಂದ ನವೋದಯದ ತುಡಿತಗಳನ್ನು ವಿವರಿಸಬಹುದೆಂದು ನನ್ನ ಅಭಿಪ್ರಾಯ. ಇಷ್ಟು ಹೇಳಿದ ನಂತರ ಅವರ ಬರವಣಿಗೆಯಲ್ಲಿ ಮೈತಳೆದ ಮತ್ತು ಮೈತಳೆಯದ, ಕೆಲವು ಸಮಗ್ರ ನವೋದಯದ ಲಕ್ಷಣಗಳನ್ನು ಪ್ರಸ್ತಾಪಿಸುತ್ತೇನೆ.

(೧) ಬಿ. ಎಂ. ಶ್ರೀಯವರು ತಮ್ಮ ಮಾದರಿಗೆಂದು ಆರಿಸಿಕೊಂಡ ಇಂಗ್ಲಿಷ್ ಕವಿಗಳು, ಅದರಲ್ಲೂ ರಾಬರ್ಟ್ ಬರ್ನ್ಸ್, ಷೆಲ್ಲಿ ಮುಂತಾದವರು ತಮ್ಮ ನಾಡಿನ ಜನಜೀವನದ, ಗ್ರಾಮಜೀವನದ ನಿಕಟ ಸಂಪರ್ಕವನ್ನು ಪಡೆದಿದ್ದರು. ನಿಧಾನವಾಗಿ ಮೇಲುಗೈ ಪಡೆಯುತ್ತಿದ್ದ ಕೈಗಾರಿಕೀಕರಣವನ್ನು ವಿರೋಧಿಸಿಯೋ ಎಂಬಂತೆ ಇವರು ಜಾನಪದ ಪ್ರೇರಣೆಗಳಿಗೆ, ಪ್ರಕೃತಿಯ ಆರಾಧನೆಗೆ ಮನತೆತ್ತರು. ಬಿ. ಎಂ. ಶ್ರೀಯವರು ಇಂತಹ ಕವಿಗಳನ್ನು ಮೆಚ್ಚಿಕೊಂಡಿದ್ದು ಒಂದು ಬಗೆಯ Psychological compensation ಇರಬಹುದೆಂದು ನನಗೆ ತೋರುತ್ತದೆ. ಕಾರಣ ಏನೇ ಇರಲಿ, ಅವರ ಆಯ್ಕೆ ಕನ್ನಡ ನವೋದಯದ ಪ್ರಮುಖ ಲಕ್ಷಣವನ್ನು ನಿರ್ಧರಿಸಿತು. ಮಾದ-ಮಾದಿ, ರಾಮಗೌಡ, ಪಡುವ ದಿಬ್ಬದ ಗೌಡ, ಮೇರಿ, ಅಳಿನಿಯರು ಕನ್ನಡ ಕಾವ್ಯ ಪ್ರಪಂಚವನ್ನು ಪ್ರವೇಶಿಸಿದರು. ಬಿ. ಎಂ. ಶ್ರೀಯವರ ಶಿಷ್ಟ ಭಾಷೆಯ ಕೃತಕ ಆವರಣ ಕೂಡ, ಈ ಕವನಗಳ ಜನಜೀವನದ್ರವ್ಯದ ಪ್ರಖರತೆಯನ್ನು ಕಡಿಮೆ ಮಾಡಲಿಲ್ಲ. (ಬರ್ನ್ಸ್ ಕವಿಯ ಮೂಲ ಕವನಗಳ ಭಾಷೆಯೊಂದಿಗೆ ಶ್ರೀಯವರ ಅನುವಾದಗಳನ್ನು ಹೋಲಿಸಿದಾಗ ನನ್ನ ಆಕ್ಷೇಪಣೆ ಅರ್ಥವಾಗುತ್ತದೆ.) ಏನೇ ಆದರೂ ಜನಜೀವನದ ನೋವು-ನಲಿವುಗಳನ್ನು ದೂರದಿಂದಲಾದರೂ ನೋಡಿ ಅದಕ್ಕೆ ಕಾವ್ಯದಲ್ಲಿ ರೂಪಕೊಡುವ ಪ್ರಯತ್ನ ಪ್ರಾರಂಭವಾಯಿತು. ಆದರೆ ಬರೆಯುವವರಿಗೂ, ಬರಹದ ಪಾತ್ರಗಳಿಗೂ ಅಂತರವಿದ್ದುದರಿಂದ ಕವಿತೆಗಳ ತುಡಿತವು ಬಡತನದ ಆದರ್ಶೀಕರಣ ಮತ್ತು ಅಲ್ಲಿರಬಹುದಾದ ಸುಖದ ಹುಡುಕುವಿಕೆಯ ಕಡೆಗೆ ಇತ್ತೇ ಹೊರತು ಪರಿವರ್ತನೆಯ ಕಡೆಗಿರಲಿಲ್ಲ. ಕರಿಸಿದ್ಧ, ಗಿಡ್ಡಿ,

ಬಳೆಗಾರ ಚೆನ್ನಯ್ಯ, ಮಾಚಯ್ಯ, ಚಂದಮ್ಮ, ಕಣಿವೆಯ ಮುದುಕ ಮುಂತಾದವರೆಲ್ಲ 'ಇಂಗ್ಲಿಷ್ ಗೀತ'ಗಳ ಮಾಸಪುತ್ರರು.

(೨) ಮಹಾಕಾವ್ಯಗಳಲ್ಲಿ ವಸ್ತುನಿಷ್ಠವಾಗಿ ನಿರೂಪಿತವಾಗಿರುವ ವ್ಯಕ್ತಿಗಳನ್ನು, ಘಟನೆಗಳನ್ನು ವ್ಯಕ್ತಿನಿಷ್ಠವಾಗಿ, ಮುಖ್ಯಪಾತ್ರಗಳ ವೈಯಕ್ತಿಕ ತುಮುಲಗಳ ಹಿನ್ನೆಲೆಯಲ್ಲಿ ಪರಿಶೀಲಿಸುವುದು ನವೋದಯ ಸಾಹಿತ್ಯದ ಒಂದು ಮುಖ್ಯ ಲಕ್ಷಣ. Classical ಮತ್ತು Romantic ಧೋರಣೆಗಳ ನಡುವಿನ ದ್ವಂದ್ವ ಇಂತಹ ಆಗುವಿಕೆಗೆ ಕಾರಣ. ಅಹಲ್ಯೆ, ಕೀಚಕ, ಗಂಡುಗೊಡಲಿ, ಬೆರಳ್ಗೆ ಕೊರಳ್, ಮಂಡೋದರಿ, ವಾಲ್ಮೀಕಿಯ ಭಾಗ್ಯ ಹೀಗೆ ಹತ್ತು ಹಲವು ನಿದರ್ಶನಗಳನ್ನು ಹೆಸರಿಸಬಹುದು. ಇವೆಲ್ಲವೂ ನಾಟಕಗಳೆಂಬ ಅಂಶವನ್ನು ಗಮನಿಸಿ, ಇವುಗಳ ಮೂಲ ಮಾದರಿಯನ್ನು ಹುಡುಕಹೊರಟಾಗ ಬಿ. ಎಂ. ಶ್ರೀಯವರ ಅಶ್ವತ್ಥಾಮನ್ ಮತ್ತು ಗದಾಯುದ್ಧ ನಾಟಕಗಳು ನಮಗೆ ದೊರೆಯುತ್ತವೆ. ಮಹಾಕಾವ್ಯದ ಸಮಗ್ರ ಭಿತ್ತಿಯಲ್ಲಿ ಕೆಟ್ಟವರಾದ ಈ ಪಾತ್ರಗಳ ಉದಾತ್ತೀಕರಣದ ಪ್ರಯತ್ನವು ಎಲ್ಲರಲ್ಲೂ ಒಳ್ಳೆಯದನ್ನು ಅರಸುವ ನವೋದಯದ ಧೋರಣೆಯನ್ನು ರೂಪಿಸಿತು. ಇಲ್ಲಿಯೂ ಮತ್ತೆ ಉತ್ತರ ಕರ್ನಾಟಕದ ಕವಿಗಳು ತಮ್ಮ ವಿಭಿನ್ನತೆಯನ್ನು ಕಾದುಕೊಳ್ಳುತ್ತಾರೆ.

(೩) ಧರ್ಮ ನಿರಪೇಕ್ಷತೆಯು ನವೋದಯ ಸಾಹಿತ್ಯದ ಮತ್ತೊಂದು ಲಕ್ಷಣ. ಹೀಗೆಂದರೆ ನವೋದಯ ಸಾಹಿತಿಗಳು ನಾಸ್ತಿಕರೆಂದು ಅರ್ಥವಲ್ಲ. ಸಮಕಾಲೀನ ಆಚರಣೆಗಳ, ಮತೀಯ ಹಿನ್ನೆಲೆಯಲ್ಲಿ ವೈದಿಕ ಧರ್ಮವನ್ನು ತಿರಸ್ಕರಿಸಿ, ಆರ್ಷೇಯವಾದ ಭಾರತೀಯ ವೇದಾಂತದ ಚೌಕಟ್ಟನ್ನು ಉಳಿಸಿಕೊಂಡದ್ದು ಈ ಧೋರಣೆಯ ಲಕ್ಷಣ. ಇದು ಭಾರತೀಯ ಪುನರುಜ್ಜೀವದ (Indian Renaissance) ಮೂಲನೆಲೆ ಕೂಡ ಆಗಿರುವುದು ಕೇವಲ ಕಾಕತಾಳೀಯವಲ್ಲ. ಕುವೆಂಪುರವರೂ ಸೇರಿದಂತೆ ಎಲ್ಲ ನವೋದಯ ಸಾಹಿತಿಗಳೂ ಈ ಲಕ್ಷಣಕ್ಕೆ ಬಾಹಿರರಲ್ಲ. ಈ ಬಗೆಯ ಧರ್ಮ ನಿರಪೇಕ್ಷತೆಯ ಮೂಲ ಕೂಡ ಇಂಗ್ಲಿಷ್ ಗೀತಗಳಲ್ಲಿ ಹಾಗೂ, ಬಿ. ಎಂ. ಶ್ರೀಯವರು ಮಾಡಿದ ಪ್ರಾಯೋಗಿಕ ವಿಮರ್ಶೆಯಲ್ಲಿ ದೊರೆಯುತ್ತದೆ. ಇಂಗ್ಲಿಷ್ ಗೀತಗಳ ಮೂಲಕವಿಗಳು ಬಹುಮಟ್ಟಿಗೆ ಧಾರ್ಮಿಕ ಮನೋಧರ್ಮದವರಲ್ಲ. ಇಲ್ಲಿ ಆಯ್ದಿರುವ ಕವಿತೆಗಳು ಧರ್ಮಸಂಬಂಧಿಯಲ್ಲ. ಆದರೆ ಬದುಕಿಗೆ ನೀತಿಯ ನೆಲೆಗಟ್ಟು ಬೇಕೆಂದು ಒಪ್ಪುತ್ತವೆ. ದೇವರನ್ನು ಧಿಕ್ಕರಿಸುವ ಅಶ್ವತ್ಥಾಮನ್ ದುರಂತಕ್ಕೀಡಾದರೂ ನಮ್ಮ ಸಹಾನುಭೂತಿ ಪಡೆಯುತ್ತಾನೆ. ಬಿ. ಎಂ. ಶ್ರೀಯವರು ಗುರುತಿಸುವ ಹಳಗನ್ನಡ ಸಾಹಿತ್ಯದ ಮುಖ್ಯ ದೋಷ ಅವು ಧರ್ಮಪ್ರಚಾರಕವೆನ್ನುವುದು.

ಹೀಗೆ ನವೋದಯ ಸಾಹಿತ್ಯದ – ಧಾರ್ಮಿಕವಲ್ಲದಿದ್ದರೂ, ನೈತಿಕವಾದ (Ethical), ಉದಾರವಾದ ಧೋರಣೆಗೆ – ಮೂಲವನ್ನು ಬಿ. ಎಂ. ಶ್ರೀಯವರ ಕವಿತೆಗಳಲ್ಲಿ ಕಾಣಬಹುದು.

(೪) ನವೋದಯ ಕಾವ್ಯವನ್ನು ತನ್ನ ಹಿಂದಿನ ಹಂತದಿಂದ ಬೇರ್ಪಡಿಸಿದ ಪ್ರಧಾನ ಲಕ್ಷಣವೆಂದರೆ ಅವುಗಳ ಸೀಮಿತ ಗಾತ್ರ ಮತ್ತು ಛಂದೋ ವೈವಿಧ್ಯ. ಮಹಾಕಾವ್ಯಗಳು ಮಾಡುತ್ತಿದ್ದ ಕೆಲಸವನ್ನು ಕಾದಂಬರಿ ಹಾಗೂ ನಾಟಕಗಳಿಗೆ ಬಿಟ್ಟುಕೊಟ್ಟು ಕವಿತೆಯನ್ನು ಹೆಚ್ಚು ವ್ಯಕ್ತಿನಿಷ್ಠವಾದ ಉದ್ದೇಶಗಳಿಗೆ ಬಳಸಿ ಕೊಂಡಿದ್ದು ವಿಶ್ವವ್ಯಾಪಿಯಾದ ಆಗುವಿಕೆ. ಇಂಗ್ಲಿಷ್ ಗೀತಗಳು ಸಂಪೂರ್ಣವಾಗಿ ಮತ್ತು ಹೊಂಗನಸುಗಳು ಆಂಶಿಕವಾಗಿ ಈ ಲಕ್ಷಣವನ್ನು ಒಳಗೊಂಡಿವೆ. ಮುದ್ದಣನ ನಂತರ ಕುವೆಂಪುರವರವರೆಗೆ ಯಾರಿಗೂ ಮಹಾಕಾವ್ಯ ರಚನೆ ಮಾಡಬೇಕೆಂಬ ಬಯಕೆಯು ಮೂಡಲಿಲ್ಲ. ರವೀಂದ್ರರಂತೆಯೇ ಬಿ. ಎಂ. ಶ್ರೀಯವರ ಮಾದರಿ ಕೂಡ ಹೀಗಾಗಲು ಕಾರಣ.

ನಿಯತವಾದ ಛಂದೋಬಂಧಗಳನ್ನು ಕೈಬಿಟ್ಟು, ಅಷ್ಟೇ ನಿಯತವಾದ ಛಂದೋಲಯಗಳನ್ನು ಉಳಿಸಿಕೊಂಡಿರುವುದು ನವೋದಯ ಕಾವ್ಯದ ಮತ್ತೊಂದು ಲಕ್ಷಣ. ಷಟ್ಪದಿ, ರಗಳೆ, ವೃತ್ತ, ಕಂದಗಳು ಮಾಯವಾದವು, ನಿಜ. ಆದರೆ ಮೂರು, ನಾಲ್ಕು, ಮತ್ತು ಐದು ಮಾತ್ರೆಗಳ ಜೋಡಣೆಗಳ ಫಲಿತವನ್ನು ಎಲ್ಲ ನವೋದಯ ಬಂಧಗಳಲ್ಲೂ ಗುರುತಿಸಬಹುದು. ಓಡ್, ಎಲಿಜಿ, ಸಾನೆಟ್ ಮುಂತಾದ ಅನ್ಯ ದೇಶೀಯ ಬಂಧಗಳನ್ನು ಬಳಸಿದಾಗಲೂ ಕನ್ನಡಕ್ಕೆ ಸಹಜವಾದ ಈ ಲಯ ವೈವಿಧ್ಯವು ಹಾಗೆಯೇ ಉಳಿಯಿತು. ಇಂಗ್ಲಿಷ್ ಗೀತಗಳು ಮತ್ತು ಅಶ್ವತ್ಥಾಮನ್ ಗಳಲ್ಲಿ ಇದೇ ಲಕ್ಷಣವು ಇರುವುದನ್ನು ತೀ. ನಂ. ಶ್ರೀಯವರು ತಮ್ಮ ಸಮಾಲೋಕನದ ಲೇಖನಗಳಲ್ಲಿ ತೋರಿಸಿಕೊಟ್ಟಿದ್ದಾರೆ. ಬಿ. ಎಂ. ಶ್ರೀಯವರ ಒಲವು ಹೆಚ್ಚಾಗಿ ಮಾತ್ರಾಗಣಗಳ ಕಡೆಗೇ ಹೊರತು ಅಂಶಛಂದಸ್ಸಿನ ಕಡೆಗಲ್ಲ. ಆದ್ದರಿಂದಲೇ ಅವರ ಅನುಯಾಯಿಗಳಾದ ಹಳೆಯ ಮೈಸೂರಿನ ಕವಿಗಳಿಗೆ ಅವರದೇ ಮಾದರಿ ಉಳಿಯಿತು. ಉತ್ತರದ ಕವಿಗಳಾದರೋ ಜಾನಪದ ಮಟ್ಟುಗಳಲ್ಲಿ ಪ್ರಯೋಗನಿರತರಾದರು.

(೫) ಲೇಖನದ ಹಿಂದಿನ ಭಾಗದಲ್ಲಿಯೇ ಹೇಳಿರುವಂತೆ ಸರಳವಾದ ಆದರೆ ಶಿಷ್ಟವಾದ ಕನ್ನಡದ ಬಳಕೆ ನವೋದಯ ಕಾವ್ಯದ ಸಾಕಷ್ಟು ವ್ಯಾಪಕವಾದ ಲಕ್ಷಣ. ಪ್ರಾಯಶಃ ಈ ಮಾತಿಗೆ ಅಪವಾದವಾದ ಇಬ್ಬರೇ ಮಹತ್ವದ ಕವಿಗಳೆಂದರೆ ಬೇಂದ್ರೆ ಮತ್ತು ಮಧುರಚೆನ್ನರು ಮಾತ್ರ. ಉಳಿದವರೆಲ್ಲ ಬಿ. ಎಂ. ಶ್ರೀಯವರ ಕವಿತೆಗಳು ಹಾಕಿಕೊಟ್ಟ ಈ ಮಾದರಿಯನ್ನು ಅನುಕರಿಸಿದರು. ಕೆಲವರ ಭಾಷೆ ಬಿ. ಎಂ. ಶ್ರೀಯವರಿಗಿಂತ ಹೆಚ್ಚು ಸಂಸ್ಕೃತಮಯವೂ, ಬಿಗಿಯೂ ಆದರೆ (ಪು. ತಿ. ನ., ಕುವೆಂಪು) ಬೇರೆ ಕೆಲವರ ಶೈಲಿಯು ಇನ್ನಷ್ಟು ಕನ್ನಡದ ಕಡೆಗೆ ಒಲಿಯಿತು (ಕೆ. ಎಸ್. ಎನ್., ವಿ. ಸೀ.).

ಈ ರೀತಿಯ ಮಾದರಿಯ ಅನುಕರಣೆಯಿಂದ ಕನ್ನಡ ಕಾವ್ಯಕ್ಕೆ ಆದ ಪ್ರಯೋಜನವನ್ನು ಎಲ್ಲರೂ ಬಲ್ಲರು. ಓದಬಲ್ಲ ಕನ್ನಡಿಗರೆಲ್ಲರ ಮನಸ್ಸನ್ನು,

ಹೃದಯವನ್ನು ಮುಟ್ಟಲು ಕವಿತೆಗೆ ಸಾಧ್ಯವಾಯಿತು. ಆದರೆ ಜನರು ಆದರಲ್ಲೂ ಗ್ರಾಮೀಣರು ಆಡುವ ಮಾತನ್ನು ಗ್ರಾಮ್ಯವೆಂದೂ. ಅನಪೇಕ್ಷಿತವೆಂದೂ ನಿರಾಕರಿಸಿ, ಸುಶಿಕ್ಷಿತ, ಬ್ರಾಹ್ಮಣ, ನಾಗರಿಕರ ಭಾಷೆಗೆ ಕಾವ್ಯವನ್ನು ಬಂಧಿಸಿದ್ದು ಅನೇಕ ಕವಿಗಳನ್ನು ತಪ್ಪು ದಾರಿಗೆಳೆಯಿತು. ಉದಾಹರಣೆಗೆ ಕುವೆಂಪುರವರನ್ನು ಗಮನಿಸಿ. ಮಲೆನಾಡಿನ ಹೃದಯದಿಂದ ಬಂದ ಅವರ ಭಾಷೆಯು ಆ ಪ್ರದೇಶದ ವೈವಿಧ್ಯವನ್ನೆಲ್ಲ ಒಳಗೊಂಡು ಅತಿ ಶ್ರೀಮಂತವಾಗಬಹುದಿತ್ತು. ಆದರೆ ಅವರಿಗೆ ದೊರೆತ ಮಾದರಿ ಬಿ. ಎಂ. ಶ್ರೀಯವರ ಶಿಷ್ಟಭಾಷೆಯದು· ಅವರು ಗುರುಗಳು ಬಂದ ದಾರಿಯಲ್ಲಿ ಹಿಂದೆ ನಡೆಯು ವುದಕ್ಕೆ, ತಾನು ಬ್ರಾಹ್ಮಣರಿಗಿಂತ ಬ್ರಾಹ್ಮಣನೆಂದು ತೋರಿಸಿಕೊಡುವ ಮನದಾಳದ ಬಯಕೆಯೂ ಕಾರಣವಿರಬಹುದು. ಈ ಸಂಗತಿ ಅವರ ಕವಿತೆಯ ಪರಿಮಿತಿ ಯಾಯಿತು. ಮಾಸ್ತಿ, ವಿ. ಸೀ., ಪು. ತಿ. ನ., ಕೆ. ಎಸ್. ನ. ಮುಂತಾದ ಬ್ರಾಹ್ಮಣ ಕವಿಗಳಿಗಂತೂ ಕುವೆಂಪುರವರಿಗಿದ್ದ ತಾಕಲಾಟ ಕೂಡ ಇರಲಿಲ್ಲ. ಏಕೆಂದರೆ ಅವರು ಬಯಸಿದ ಹಾಲೋಗರವನ್ನೇ ಶ್ರೀಯವರು ನೀಡಿದ್ದರು. ಬೇರೆಯ ಬಗೆಯಲ್ಲಿ ಬರೆಯಲು ಅವರಿಗೆ ಸಾಧ್ಯವೂ ಇರಲಿಲ್ಲ; ಇಷ್ಟವೂ ಇರಲಿಲ್ಲ. ಈ ಪರಿಸ್ಥಿತಿಯಿಂದ ಬಿಡುಗಡೆ ಪಡೆದವರೆಂದರೆ ರತ್ನನ ಪದಗಳ ರಾಜರತ್ನಂ ಒಬ್ಬರೇ. ಅವರು ಬರೆದಿರುವ ಇತರ ಕವಿತೆಗಳು ಶ್ರೀ ಮಾದರಿಯನ್ನು ಅನುಕರಿಸಿ ನೀರಸವಾದರೆ, ರತ್ನನ ಪದ. ನಾಗನ ಪದಗಳು ಶಾಶ್ವತವಾದವು. ಹಳೆಯ ಮೈಸೂರಿನ ಇತರ ಕವಿಗಳಲ್ಲೂ ಇಂತಹ ಪ್ರಯೋಗಪರತೆ ಸಾಧ್ಯವಾಗಿದ್ದರೆ ಅಥವಾ ಬಿ. ಎಂ. ಶ್ರೀಯವರದಕ್ಕಿಂತ ಭಿನ್ನವಾದ ಮಾದರಿಗಳು ಹುಟ್ಟಿಕೊಂಡಿದ್ದರೆ ಕನ್ನಡ ನವೋದಯ ಕಾವ್ಯ ಇನ್ನಷ್ಟು ಶ್ರೀಮಂತ ವಾಗುತ್ತಿತ್ತೆನ್ನುವುದರಲ್ಲಿ ಯಾವ ಸಂದೇಹವಿಲ್ಲ. ಇಷ್ಟೆಲ್ಲ ಹೇಳುವಾಗಲೂ ಕಾವ್ಯ ಭಾಷೆ, ಜನಭಾಷೆಯ ಯಥಾಪ್ರತಿಯಾಗಲು ಸಾಧ್ಯವಿಲ್ಲವೆಂಬ ಮಾತನ್ನು ಮರೆಯ ಲಾಗುವುದಿಲ್ಲ.

ಇಷ್ಟಕ್ಕೆ ನಿಲ್ಲಿಸಿದರೆ ಶ್ರೀಯವರಿಗೆ ಅಪಚಾರ ಮಾಡಿದಂತೆ ಆಗುತ್ತದೆ. ಏಕೆಂದರೆ ನಾನು ಚರ್ಚಿಸಿರುವುದು ಅವರ ಶೈಲಿಯೊಂದನ್ನೇ ಮಾದರಿಯಾಗಿ ಸ್ವೀಕರಿಸಿದ್ದರ ಅಪಾಯಗಳನ್ನೇ ಹೊರತು ಆ ಶೈಲಿಯ ಕುಂದು-ಕೊರತೆಗಳನ್ನಲ್ಲ. ವಾಸ್ತವವಾಗಿ ಬಿ. ಎಂ. ಶ್ರೀಯವರು ಬರೆದ ಐತಿಹಾಸಿಕ, ಸಾಮಾಜಿಕ ಸಂದರ್ಭದಲ್ಲಿ ಹಾಗೆ ಬರೆದಿದ್ದೇ ಒಂದು ಕ್ರಾಂತಿ. ಅದು ಆಮೂಲಾಗ್ರ ಪರಿವರ್ತನೆ. ಮತ್ತೆ ಜೀಂದ್ರೆ ಯವರ ಮಾತುಗಳನ್ನು ಬಳಸಿಕೊಳ್ಳುವುದಾದರೆ, "ಗೀತಗಳ ಕನ್ನಡವು ಹೊಸ ಸಾಹಿತ್ಯಕ್ಕೆ ಹದವಾದ ಕನ್ನಡವೆಂದು ಹೇಳಬಹುದಾದರೆ ಅದು ಸಾಮಾನ್ಯವಾಗಲಿಲ್ಲ. ಅದು ಸ್ವೀಕರಣೀಯವೂ, ಅನುಸರಣೀಯವೂ ಆದ ಶೈಲಿ. ಅದು ಅಚ್ಚಗನ್ನಡ. ಅದು ದೇಸಿ."[11]

(೬) ಬಿ. ಎಂ. ಶ್ರೀಯವರ ಸಾಹಿತ್ಯದಲ್ಲಿ ಕಾಣಿಸಿದ ನವೋದಯದ ಕೆಲವು ಲಕ್ಷಣಗಳನ್ನು ವಿವರಿಸಿದ ಮೇಲೆ, ನವೋದಯದಲ್ಲಿದ್ದರೂ ಅವರ ಕಾವ್ಯದಲ್ಲಿ

ಕಾಣದೆಹೋದ ಕೆಲವು ಸಂಗತಿಗಳನ್ನು ಹೆಸರಿಸಬಹುದು. ಬಹುಮಟ್ಟಿಗೆ 'ಅಕ್ಯಾಡೆಮಿಕ್' ಆಗಿ ಬದುಕಿದ ಶ್ರೀಯವರ ಜೀವನಾನುಭವದ ಕೊರತೆಯು ಅವರ ಕಾವ್ಯವಸ್ತುವಿನ ವೈವಿಧ್ಯವನ್ನು ಸೀಮಿತಗೊಳಿಸಿತು. ಮಾಸ್ತಿಯವರ ಅನುಭವ ವೈಶಾಲ್ಯದೊಂದಿಗೆ ಶ್ರೀಯವರನ್ನು ಹೋಲಿಸಿದಾಗ ನನ್ನ ಮಾತು ಸ್ಪಷ್ಟವಾಗುತ್ತದೆ. ಹಾಗೆಯೇ ಪ್ರತಿಭಾಜನ್ಯವಾದ ಕಲ್ಪನಾಶಕ್ತಿಯು ಶ್ರೀಯವರಲ್ಲಿ ಅಷ್ಟೇನೂ ಇರಲಿಲ್ಲ. ಅವರ ಸ್ವಂತ ಕವಿತೆಗಳ ಗಾತ್ರ, ಗುಣ ಮತ್ತು ಸಂಖ್ಯೆಗಳೆಲ್ಲವೂ ಕಡಿಮೆಯಾಗುವುದಕ್ಕೆ ಇದು ಕಾರಣ. ಕಥಾಸಾಹಿತ್ಯದ ರಚನೆಯಲ್ಲಿ ಶ್ರೀಯವರು ತೊಡಗದೆ ಇದ್ದುದಕ್ಕೆ ಅನುಭವ ಮತ್ತು ಕಲ್ಪನೆಗಳ ಈ ಕೊರೆಯೇ ಮೂಲವೆನ್ನಿಸುತ್ತದೆ. ಕನ್ನಡ ಭಾಷೆ, ಸಾಹಿತ್ಯ ಮತ್ತು ಅಧ್ಯಾಪನವನ್ನು ಕುರಿತಾದ ಚಟುವಟಿಕೆಗಳು ಅವರ full time activity ಆದುದರಿಂದ, ಅಂತರ್ಮುಖವಾದ ಆಲೋಚನೆಯ ಪರಿಣಾಮವಾದ ಜೀವನಸಿದ್ಧಾಂತ ಹಾಗೂ ವ್ಯಕ್ತಿತ್ವಗಳನ್ನು ರೂಪಿಸಿಕೊಳ್ಳುವುದು ಅವರಿಗೆ ಸಾಧ್ಯವಾಗಲಿಲ್ಲವೆಂದು ತೋರುತ್ತದೆ. ಒಂದುವೇಳೆ ಆಗಿದ್ದರೂ ಅದಕ್ಕೆ ಬರವಣಿಗೆಯಲ್ಲಿ ದಾಖಲೆಗಳಿಲ್ಲ. ಸಾಮಾಜಿಕವಾದ ಅನ್ಯಾಯಂಗಳನ್ನು ಜಾತೀಯ ಶೋಷಣೆಯನ್ನು ಗುರುತಿಸಿ, ಅವುಗಳ ವಿರುದ್ಧವಾದ ಪ್ರತಿಭಟನೆ ಸೂಚಿಸುವ ಧೋರಣೆ ಬಿ. ಎಂ. ಶ್ರೀಯವರಲ್ಲಿ ಅತ್ಯಲ್ಪ. ಉಳಿದ ನವೋದಯ ಕವಿಗಳಲ್ಲಿ ಇದು ಪ್ರಖರವಾಗಿದೆ. ಒಂದು ದೌರ್ಬಲ್ಯವೆನ್ನುವಷ್ಟು ಮಟ್ಟಿಗೆ ರಾಜಭಕ್ತಿಯನ್ನು ತೋರಿಸಿದ ಏಕೈಕ ನವೋದಯ ಕವಿಯೆಂದರೆ ರಾಜಾಸೇವಾಸಕ್ತ ಬಿ. ಎಂ. ಶ್ರೀಯವರು ಮಾತ್ರ. ಉಳಿದ ಕವಿಗಳು ದೇಶಭಕ್ತಿ ಮತ್ತು ರಾಜಭಕ್ತಿಗಳಲ್ಲಿ ಖಂಡಿತವಾಗಿ ಮೊದಲನೆಯದನ್ನು ಆರಿಸಿಕೊಂಡರೆ ಇವರಿಗೆ ಅವೆರಡೂ ಒಂದೇ ಆಗಿತ್ತು.

ಈ ಎಲ್ಲ ಪರಿಮಿತಿಗಳ ಪರಿಣಾಮವಾಗಿ, ಕ್ಲೀಷೆಯೊಂದನ್ನು ಬಳಸಬಹುದಾದರೆ ಬಿ.ಎಂ. ಶ್ರೀಯವರು ಕನ್ನಡ ನವೋದಯದ ಆದಿಕವಿಯಾದರೂ ಅಗ್ರಕವಿಯಾಗಲಿಲ್ಲ. ಆದರೂ ನವೋದಯದ ಅನೇಕ ಲಕ್ಷಣಗಳನ್ನು ಅವರ ಕವಿತೆ ಒಳಗೊಂಡಿತು ; ರೂಪಿಸಿತು.



ಲೇಖನದ ಈ ಭಾಗದಲ್ಲಿ ಬಿ. ಎಂ. ಶ್ರೀಯವರ ಬರಣಿಗೆಯು ತನ್ನ ಸೃಷ್ಟಿಕರ್ತನ ಸಿದ್ಧಾಂತಗಳನ್ನು ಮೀರಿನಿಂತು ಮೌಲಿಕವಾಗಿರುವುದು ಏಕೆಂದು ಚಿಂತಿಸುತ್ತಾ ಕೆಲವು ಮಾತುಗಳನ್ನು ಬರೆಯುತ್ತೇನೆ.

ಅನೇಕ ವರ್ಷಗಳ ಅಧ್ಯಾಪಕಜೀವನದಲ್ಲಿ ನಾನು ಅತ್ಯಂತ ಪ್ರೀತಿ ಮತ್ತು ಸಂತೋಷಗಳಿಂದ ಕಲಿಸಿರುವ ಎರಡು ಕೃತಿಗಳು ಅಶ್ವತ್ಥಾಮನ್ ಮತ್ತು ಇಂಗ್ಲಿಷ್ ಗೀತಗಳು. ಅದಕ್ಕಿಂತ ಹೆಚ್ಚಾಗಿ, ನನ್ನ ವಿದ್ಯಾರ್ಥಿಗಳು ಈ ಕೃತಿಗಳನ್ನು ಬಹಳ

ಉತ್ಸಾಹದಿಂದ ಸ್ವೀಕರಿಸುತ್ತಾರೆ. ಇವುಗಳಿಗಿಂತ ಎಷ್ಟೋ ಪಟ್ಟು ಉತ್ತಮವಾದ, ಸಂಕೀರ್ಣವಾದ ಕೃತಿಗಳನ್ನು ಪಾಠ ಮಾಡಿದಾಗ ನನಗೆ ಈ ಬಗೆಯ ಪ್ರತಿಕ್ರಿಯೆ ದೊರೆತಿಲ್ಲ. ಇದು ಏಕೆ ಹೀಗೆ? ಹದಿಹರೆಯದ, ಸಾಹಿತ್ಯದ ಅನುಭವಕ್ಕೆ Expose ಆಗದ ಮುಗ್ಧರನ್ನು ಆಕರ್ಷಿಸುವ ಯಾವುದೋ ಒಂದು ಗುಣ ಈ ಕೃತಿಗಳಲ್ಲಿದೆ. ಸರಳತೆ ಮತ್ತು ಸಂಕೀರ್ಣತೆಗಳ ನಡುವಿನ ಸಮಪಾಕವೊಂದನ್ನು ಶ್ರೀಯವರು ಕಂಡುಕೊಂಡಿದ್ದರೆಂದು ಕಾಣುತ್ತದೆ. ಸಂವಹನಕ್ಕೆ ಅಡ್ಡಿಯಾಗುವ ಯಾವುದೇ ಅಂಶವನ್ನು ಅವರು ಹೊರಗಿಡುತ್ತಿದ್ದರು. ಒಂದು ಭಾವನೆಯನ್ನು ಗೋಜಲು ಮಾಡಿಕೊಳ್ಳದೆ ಓದುಗರಿಗೆ ತಲುಪಿಸುವ ಕಲೆ ಅವರಿಗೆ ಸಿದ್ಧಿಸಿತ್ತು. ಅವರು ಸಾಹಿತ್ಯರಚನೆ ಮಾಡಿದ ಕಾಲದ ಸಮಗ್ರ ಕನ್ನಡ ವಾಚಕವರ್ಗವೇ ನಾನು ಕಾಲೇಜಿನಲ್ಲಿ ಪಾಠ ಹೇಳುವ ವಿದ್ಯಾರ್ಥಿಗಳಂತೆ ಇತ್ತು. ಇದು ಕನ್ನಡ ಸಾಹಿತ್ಯದ ಮಟ್ಟಿಗಂತೂ ಖಂಡಿತಾ ನಿಜ. ಆದ್ದರಿಂದ ಸಾವಿರಾರು ಜನರನ್ನು ಸೂಜಿಗಲ್ಲಿನಂತೆ ಸೆಳೆದು ಅವರನ್ನು ಸಾಹಿತ್ಯಾಧ್ಯಯನದಲ್ಲಿ ಆಸಕ್ತರಾಗಿಸಿದ್ದು ಬಿ. ಎಂ. ಶ್ರೀಯವರ ಸಾಹಿತ್ಯ ನವೋದಯಕ್ಕೆ ನೀಡಿದ ದೊಡ್ಡ ಕೊಡುಗೆ.

ಬಿ. ಎಂ. ಶ್ರೀಯವರ ಅನುವಾದ ಸಾಹಿತ್ಯ ಎಷ್ಟು ದೊಡ್ಡ ಕೊಡುಗೆಯೆಂದರೆ, ಅದು ಇತರರನ್ನು ಆ ಕ್ಷೇತ್ರಕ್ಕೆ ಪ್ರವೇಶಿಸದಂತೆ ಮಾಡಿತು. ನಾಟಕವೊಂದರ ಅತ್ಯುತ್ತಮ ಅನುವಾದಕ್ಕಾಗಿ ಲಂಕೇಶರ ಈಡಿಪಸ್ ಭಾಷಾಂತರದವರೆಗೆ, ಹಾಗೆಯೇ ಕವಿತೆಯ ಅನುವಾದಕ್ಕಾಗಿ ರಾಮಚಂದ್ರಶರ್ಮರವರೆಗೆ ಕಾಯಬೇಕಾಯಿತು. ಮಧ್ಯಂತರದಲ್ಲಿ ಅನುವಾದಗಳು ನಡೆಯಲೇ ಇಲ್ಲ. ನಡೆದರೂ ಬಹಳ ಸಾಮಾನ್ಯ ವಾದವು (ಬೇಂದ್ರೆಯವರ ಮೇಘದೂತ ಈ ಮಾತಿಗೆ ಅಪವಾದ). ಈ ಅನುವಾದ ಗಳು ಅನೇಕ ಸ್ವಂತ ಕವನಗಳ ಸೃಷ್ಟಿಗೆ ಕಾರಣವಾದವೆಂದು ನನಗೆ ತೋರುತ್ತದೆ. ಕೆ. ಎಸ್. ನರಸಿಂಹಸ್ವಾಮಿಯವರ 'ಮೈಸೂರು ಮಲ್ಲಿಗೆ' ಹಾಗೂ ತೀ. ನಂ. ಶ್ರೀ ಯವರ 'ಒಲುಮೆ'ಗಳು 'ಇಂಗ್ಲಿಷ್ ಗೀತಗಳು' ಎಂಬ ಬಳ್ಳಿಯಲ್ಲಿ ಬಿಟ್ಟ ಹೂಗಳು. ನಾಡು-ನುಡಿಗಳನ್ನು ಕುರಿತಂತೆ ಬಹುಪಾಲು ನವೋದಯ ಕವಿಗಳು ಬರೆದ ಕವಿತೆ ಗಳ ಮೂಲದಲ್ಲಿ 'ಕನ್ನಡ ತಾಯ ನೋಟ' ಮತ್ತು 'ಶುಕ್ರಗೀತೆ'ಗಳಿವೆ. ಈಗಾಗಲೇ ಹೇಳಿರುವಂತೆ ಉದಾತ್ತೀಕರಣಗೊಂಡ ದುರ್ಯೋಧನ, ಅಶ್ವತ್ಥಾಮರು ಅಂತಹ ನಾಟಕಗಳ ಪರಂಪರೆಯೊಂದಕ್ಕೆ ಜನ್ಮ ನೀಡಿದ್ದಾರೆ.

ನಾನು ಈಗ ಹೇಳುವ ಮಾತುಗಳು ಕೊಂಚ ವಿಚಿತ್ರವಾಗಿ ತೋರಬಹು ದಾದರೂ ನಿಜ. ಇತರ ನವೋದಯ ಕವಿಗಳಲ್ಲಿ ಕಾಣಲಾಗದ, ಆದ್ದರಿಂದಲೇ ಕನ್ನಡ ನವೋದಯ ಸಾಹಿತ್ಯಕ್ಕೆ ಬಿ. ಎಂ. ಶ್ರೀಯವರದೇ ಕೊಡುಗೆಯೆನ್ನಬಹುದಾದ ಅಂಶವೆಂದರೆ ಇಂಗ್ಲಿಷ್ ಸಾಹಿತ್ಯ ಮತ್ತು ಸಂಸ್ಕೃತಿಗಳಿಂದ ತಾವು ಪಡೆದ ಮತ್ತು ಪಡೆಯಬಯಸುವ ಪ್ರಯೋಜನವನ್ನು ಪ್ರಾಂಜಲವಾಗಿ ಒಪ್ಪಿಕೊಳ್ಳುವ ಅವರ

ಧೋರಣೆ. ಇಂಗ್ಲಿಷರನ್ನು ಮೋಸಗಾರರೆಂದಾಗಲೀ, ಸುಲಿಗೆಕೋರರೆಂದಾಗಲೀ ತಮ್ಮ ಬರವಣಿಗೆಯಲ್ಲಿ ಚಿತ್ರಿಸುವುದು ಅವರಿಗೆ ಸಾಧ್ಯವಾಗಲಿಲ್ಲ. ಅವರ 'ಭರತ ಮಾತೆಯ ನುಡಿ'ಯಲ್ಲಿ ಭಾರತ ಮಾತೆ ಹೀಗೆ ಹೇಳುತ್ತಾಳೆ,

"ಕಡೆಗೆ ನೆನೆದೆನು ನನ್ನ ಮಾನೆತನ ನೇರವಾಗುವ ತೆರವನು
ಕಡಲರಾಣಿ ಬ್ರಿಟಾನಿಯುಳ ಸನ್ನಿನಿಯು ತಂಗಿಯು ನೆರವನು

ಗೆಲಿದು ನಾಡನು ಬೆಸೆದಳು – ನೆಲ
ದೊಲುಮೆ ಕಟ್ಟನು ಹೊಸೆದಳು.

ಸಕಲ ಧರ್ಮದ ತಿರುಳ ಹೊರೆದಳು ಸಕಲ ಜ್ಞಾನವ ತೆರೆದಳು
ಸಕಲ ಸೀಮೆಯು ಬಳಕೆಗೆಳೆದಳು, ಸಕಲ ಕುಶಲವನೊರೆದಳು

ಅವಳ ಗುಣವನು ಮೆರೆಯಿರಿ – ಕಳೆ
ದವಳ ಕೊರತೆಯ ಮಾರೆಯಿರಿ."

ಈ ಪದ್ಯದಲ್ಲಿ ಬ್ರಿಟಿಷರಿಗೆ ಬಹಳ ಉದಾತ್ತವಾದ ಉದ್ದೇಶಗಳನ್ನು ಆರೋಪಿಸಲಾಗಿದೆ. ರಾಜಕೀಯ ಆಡಳಿತವನ್ನು ನಡೆಸುತ್ತಿದ್ದ ಬಿಳಿಯರ ವಿಷಯದಲ್ಲಿ ಈ ಮಾತು ಸುಳ್ಳು. ಆದರೆ ಬಿ. ಎಂ. ಶ್ರೀಯವರು ನಿಕಟ ಪರಿಚಯ ಹೊಂದಿದ್ದ ಶೈಕ್ಷಣಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅನೇಕ ಜನ ಬ್ರಿಟಿಷರು ನಿಷ್ಪಕ್ಷಪಾತವಾಗಿ, ದುರುದ್ದೇಶರಹಿತವಾಗಿ, ತಮ್ಮ ಐತಿಹಾಸಿಕ ಪರಿಮಿತಿಗಳೊಳಗೆ ಜ್ಞಾನಶೋಧನ, ಜ್ಞಾನದಾನ ಮತ್ತು ಜ್ಞಾನಪ್ರಚಾರಗಳಲ್ಲಿ ತೊಡಗಿದ್ದರೆನ್ನುವುದು ನಿಜ. ಅದೂ ಅಲ್ಲದೆ, ಉದ್ದೇಶ ಯಾವುದೇ ಇರಲಿ, ಸ್ವಸ್ವರೂಪ ವಿಸ್ಮೃತಿಯಿಂದ ನರಳುತ್ತಿದ್ದ ಭಾರತೀಯರಿಗೆ ಅವರದೇ ಸಂಸ್ಕೃತಿಯ ಘನತೆಯನ್ನು ಅನಾವರಣ ಮಾಡಿ, ಆತ್ಮವಿಶ್ವಾಸ ತುಂದುಕೊಟ್ಟ ಹಿರಿಮೆ ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ಸೇರಿದ್ದು. (ಇಂಗ್ಲಿಷ್ ಇಲ್ಲದಿದ್ದರೆ ನಮಗೆ ನಮ್ಮ ಸಂಸ್ಕೃತಿಯ ಹಿರಿಮೆಯ ಅರಿವು ಆಗುತ್ತಲೇ ಇರಲಿಲ್ಲ ವೆಂದು ನನ್ನ ಅಭಿಪ್ರಾಯವಲ್ಲ.) ಈ ಋಣಸ್ಮರಣೆಯನ್ನು ನಿಷ್ಠೆಯಿಂದ ಮಾಡುವ ಮೂಲಕ ಬಿ. ಎಂ. ಶ್ರೀಯವರ ಕೃತಿಗಳು ನವೋದಯ ಸಾಹಿತ್ಯದ ಅರಕೆಯೊಂದನ್ನು ತುಂಬಿವೆ.

ಸ್ತ್ರೀ-ಪುರುಷರ ಸಂಬಂಧವನ್ನು ಕೇವಲ ಶಾರೀರಿಕ ವಿವರಗಳ ಉತ್ತಾನ ಶೃಂಗಾರದ ನೆಲೆಯಲ್ಲಿ ನಿಲ್ಲಿಸದೆ, ಭಾವಭರಿತವಾದ ಪ್ರೇಮದ ನೆಲೆಗೆ ಏರಿಸಿದ್ದು ಇಂಗ್ಲಿಷ್ ಗೀತಗಳ ಮತ್ತೊಂದು ಸಾಧನೆ. ಇಲ್ಲಿನ ಶಿಷ್ಟಶೃಂಗಾರವು ದೇಹದ ತುಡಿತಗಳನ್ನು ಅರಿತರೂ ಕೂಡ ಅದರ ಬಗ್ಗೆ ಮಾತನಾಡದ ಸೌಜನ್ಯವನ್ನು ಒಳಗೊಂಡಿದೆ. ಆದರೂ ಇಂತಹ ಕವನಗಳು ಸ್ತನ-ಜಘನನಿಷ್ಠವಾದ ಹಳಗನ್ನಡ ಕಾವ್ಯಗಳಾಗಲೀ ಅಥವಾ 'ಕಾಮ'ದ ಅಭಿವ್ಯಕ್ತಿಯನ್ನು ಒಪ್ಪಿಕೊಂಡ ನವ್ಯಕಾವ್ಯವಾಗಲೀ ಮೂಡಿಸದ, ಮೈಯನ್ನು ಜುಮ್ಮುಗಟ್ಟಿಸುವ ರಮ್ಯಭಾವನೆಗಳ ಮಹಾಪೂರವನ್ನು

ಹರಿಸಿದವು. ಪು. ತಿ. ನ.ರವರ 'ಪ್ರತೀಕ್ಷೆ', ಕೆ. ಎಸ್. ನ.ರವರ 'ನಿನ್ನ ಪ್ರೀತಿಗೆ ...' ಮುಂತಾದ ಕವನಗಳನ್ನು ಹೆಸರಿಸಬಹುದು. ಇವಕ್ಕೂ ಮೂಲ ಮಾದರಿಗಳು ಇಂಗ್ಲಿಷ್ ಗೀತಗಳಲ್ಲಿ ದೊರಕುತ್ತವೆ.

ಪ್ರಜಾಪ್ರಭುತ್ವದ ಮೂವತ್ತೈದು ವರ್ಷಗಳ ಅನುಭವದ ನಂತರ, ಬಿ. ಎಂ. ಶ್ರೀಯವರ ರಾಜಭಕ್ತಿಯನ್ನು ಮೆಚ್ಚಿಗೆಯಿಂದ ಅಲ್ಲದಿದ್ದರೂ ಸಹಾನುಭೂತಿಯಿಂದ ನೋಡಬಹುದೆಂದು ನನಗೆ ತೋರುತ್ತದೆ. ಈ ರಾಜಭಕ್ತಿಯು ಇಡೀ ನವೋದಯದಲ್ಲಿ ವಿಶೇಷವಾಗಿ ಕಂಡುಬಂದಿದ್ದು ಶ್ರೀಯವರಲ್ಲಿಯೇ. ಮಾದರಿ ಮೈಸೂರಿನ ಭೌತಿಕ ಪ್ರಗತಿಯ ಅಸ್ತಿಭಾರಗಳು ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿಯೇ ಹಾಕಲ್ಪಟ್ಟವು. ಅವರು ನಿಸ್ಸಂದೇಹವಾಗಿ benevolent dictator ಆಗಿದ್ದರು. ಶ್ರೀಯವರು ಅವರನ್ನು ಮನಃಪೂರ್ವಕವಾಗಿ ಮೆಚ್ಚಿದರು. ಬ್ರಿಟಿಷರ ಆಡಳಿತಕ್ಕೆ ಹೋಲಿಸಿದಾಗ ಇಲ್ಲಿನ ಶೋಷಣೆ ಕಡಿಮೆಯೆಂದು ಕಾಣುತ್ತದೆ. (ಹೀಗೆಂದರೆ ರಾಜರು ಶೋಷಕರಲ್ಲವೆಂದಲ್ಲ. ಸಂಪತ್ತಿನ ರಫ್ತು ಇರಲಿಲ್ಲ ಅಷ್ಟೆ.) ಈ ರಾಜನಿಷ್ಠೆಯ ಎಳೆಯು ನವೋದಯದಲ್ಲಿ ಶ್ರೀಯವರಿಗೆ ದ್ವೇಷವನ್ನೂ ಸಂಪಾದಿಸಿತು. ಈ ಕೆಲವು ನವೋದಯಕ್ಕೆ ಶ್ರೀಯವರದೇ ಆದ ಕೊಡುಗೆಗಳು.

೪

"ನನ್ನ ದೃಷ್ಟಿಯಲ್ಲಿ ಅವರು ಪ್ರಥಮತಃ ಅಧ್ಯಾಪಕರಲ್ಲ, ಭಾಷಣಕಾರರಲ್ಲ : ಇವೆರಡಕ್ಕಿಂತ ಹೆಚ್ಚಾಗಿ ಕವಿಗಳು. ಅದಕ್ಕಿಂತ ಹೆಚ್ಚಾಗಿ ಅವರು ಸೇನೆಯೊಂದರ ಸೇನಾನಿ, ಕ್ರಾಂತಿಯೊಂದರ ಕೇಂದ್ರ, ಪಂಥವೊಂದರ ಪ್ರವಾದಿ."

**ಎ. ಎನ್. ಮೂರ್ತಿರಾವ್**

ಚಿತ್ರಗಳು-ಪತ್ರಗಳು, ಪುಟ ೮೯

ನನ್ನ ಲೇಖನದ ಕೊನೆಯ ಭಾಗವು, 'ನವೋದಯದ ಅನೇಕ ಸಾಹಿತ್ಯಕ ಚಟುವಟಿಕೆಗಳಿಗೆ ಶ್ರೀಯವರು ವ್ಯಕ್ತಿಯಾಗಿ ಮತ್ತು ಸಾಹಿತಿಯಾಗಿ ನೀಡಿದ ಪ್ರೇರಣೆಗಳನ್ನು ಪರಿಶೀಲಿಸುವ ಉದ್ದೇಶವನ್ನು ಒಳಗೊಂಡಿದೆ. ಬಿ. ಎಂ. ಶ್ರೀಯವರ ಅತ್ಯುತ್ತಮ ಸಾಧನೆ ನಡೆದಿರುವುದು ಈ ಕ್ಷೇತ್ರದಲ್ಲಿಯೇ. ಅದನು ಪ್ರಶಂಸಿಸಿ ನೂರಾರು ಪುಟಗಳನ್ನು ಬರೆಯಲಾಗಿದೆ. ಅದು ಸಾಲದು. ಆದರೆ ಇಲ್ಲಿ ನಾನು ಅಂತಹ ಸಾಧನೆಗಳನ್ನು ಸವಿಮರ್ಶವಾಗಿ ಸಂಗ್ರಹಿಸಲು ಮಾತ್ರ ಸಾಧ್ಯ.

ನನ್ನ ದೃಷ್ಟಿಯಲ್ಲಿ ಸಾಹಿತ್ಯ ಸೃಷ್ಟಿ, ಸಾಹಿತ್ಯ ವಿಮರ್ಶೆ, ಸಾಹಿತ್ಯ ಪ್ರಚಾರ ಮತ್ತು ಸಾಹಿತಿ ಸೃಷ್ಟಿಗಳು ಸಾಹಿತ್ಯಕ ಚಟುವಟಿಕೆಯ ಹಲವು ಬಗೆಗಳು.

ನವೋದಯದ ಸಂದರ್ಭದಲ್ಲಿ, ಏಕೀಕರಣದ ಪ್ರಯತ್ನ, ಕನ್ನಡ ಭಾಷೆಗೆ ಸ್ಥಾನ-ಮಾನಗಳನ್ನು ದೊರಕಿಸಿಕೊಡುವ ಪ್ರಯತ್ನ ಹಾಗೂ ಕನ್ನಡ ಶಿಕ್ಷಣಕ್ಕೆ ಸಂಬಂಧಪಟ್ಟಂತೆ ಮಾಡುವ ಕೆಲಸಗಳು ಸಾಹಿತ್ಯಕ ಚಟುವಟಿಕೆಗಳಲ್ಲಿಯೇ ಸೇರುತ್ತಿದ್ದವು. ಏಕೆಂದರೆ ಕನ್ನಡ ಸಾಹಿತ್ಯದ ಕೆಲಸ ಮತ್ತು ಕನ್ನಡ ಭಾಷೆಯ ಕೆಲಸ ಎಂದು ಪ್ರತ್ಯೇಕಿಸುವುದು ಆ ಕಾಲದಲ್ಲಿ ಸಾಧ್ಯವಿರಲಿಲ್ಲ. ಈ ಎಲ್ಲ ಚಟುವಟಿಕೆಗಳಲ್ಲೂ ಸಕ್ರಿಯವಾಗಿ, ಸರಭಸವಾಗಿ ಭಾಗವಹಿಸಿದ ಬಿ. ಎಂ. ಶ್ರೀಯವರು, ತಾವು ತುಂಗಭದ್ರಾ ನದಿಯ ಉತ್ತರ-ದಕ್ಷಿಣ ಭಾಗಗಳ ನಡುವಿನ ಸೇತುವೆಯಾಗಬೇಕೆಂದು ಪ್ರಯತ್ನಪಟ್ಟು, ತಮ್ಮ ಕಾಲದ ಸಾಹಿತ್ಯಕ ಚಟುವಟಿಕೆಗಳ ಕೇಂದ್ರವಾಗಿದ್ದು ಅಚ್ಚರಿಯ ಸಂಗತಿಯಲ್ಲ.

ಬಿ. ಎಂ. ಶ್ರೀಯವರು ವ್ಯಕ್ತಿಯಾಗಿ ಬೀರಿದ ಪ್ರಭಾವವನ್ನು ಅವರು ಸಾಹಿತಿಯಾಗಿ ನೀಡಿದ ಪ್ರೇರಣೆಗಳಿಂದ ಪ್ರತ್ಯೇಕಿಸುವುದು ಸುಲಭ ಸಾಧ್ಯವಲ್ಲ. ಅವರ ವ್ಯಕ್ತಿಶಃ ಪರಿಚಯವಿಲ್ಲದವರಿಗೂ ಅವರ ಸಾಹಿತ್ಯವನ್ನು ಓದುವ ಅವಕಾಶ ದೊರಕುತ್ತಿತ್ತು. ಆದ್ದರಿಂದ ಸಾಹಿತಿಯಾಗಿ ಅವರ ಪ್ರಭಾವ ಹೆಚ್ಚು ವ್ಯಾಪಕವಾದುದು. ಆದರೆ ಅವರದು ಬಹಳ ಭಾವುಕವಾದ ವ್ಯಕ್ತಿತ್ವವಾದ್ದರಿಂದ ಅದರ ನೇರ ಪರಿಣಾಮ ಹೆಚ್ಚು ತೀವ್ರವಾಗಿರಬಹುದು.

ಸಾಹಿತ್ಯ ಸೃಷ್ಟಿಗೆ ಅವರು ನೀಡಿದ ಪ್ರೇರಣೆಯು ಮೊದಲ ಹಂತ ಕನ್ನಡ ಸಾಹಿತಿಗಳಲ್ಲಿ ತಮ್ಮ ಬಗ್ಗೆ ಆತ್ಮವಿಶ್ವಾಸವನ್ನು, ಅಭಿಮಾನವನ್ನು ಮೂಡಿಸಿದ್ದು. ಅದರ ಪರಿಣಾಮವಾಗಿಯೇ ಅನೇಕ ಕಿರಿಯರು ಧೈರ್ಯವಾಗಿ ಸಾಹಿತ್ಯರಚನೆಯಲ್ಲಿ ತೊಡಗುವಂತಾಯಿತು. ಇಂಗ್ಲಿಷ್ ಸಾಹಿತ್ಯದ ಆವಶ್ಯಕತೆಯನ್ನು ಒತ್ತಿಹೇಳಿ ಅದರಿಂದ ಮಾದರಿಗಳನ್ನು ಪಡೆಯುವ ದಾರಿ ಹಾಕಿದ್ದು ಅವರು ಕೊಟ್ಟ ಎರಡನೆಯ ಪ್ರೇರಣೆ. ಹಳಗನ್ನಡ ಸಾಹಿತ್ಯವನ್ನು ಓದಿ, ಮೆಚ್ಚಿ ಅದಕ್ಕಿಂತ ಭಿನ್ನವಾದ ದಾರಿಯನ್ನು ಹಿಡಿಯಬೇಕೆನ್ನುವ ಪ್ರೇರಣೆಯೂ ಅವರಿಂದಲೇ ಬಂತು. ವಿಶ್ವವಿದ್ಯಾಲಯದಲ್ಲಿ ತಮಗಿದ್ದ ಅಧಿಕಾರಸ್ಥಾನದ ಒತ್ತಾಸೆಯಿಂದ ಅನೇಕ ವಿದ್ಯಾರ್ಥಿಗಳನ್ನು ಕನ್ನಡ ಸಾಹಿತ್ಯ ಸೃಷ್ಟಿಗೆ ಆಕರ್ಷಿಸಲು ಅವರಿಗೆ ಸಾಧ್ಯವಾಯಿತು. ಮಾಸ್ತಿಯವರಿಂದ ಪ್ರಾರಂಭವಾಗುವ ಆ ಶಿಷ್ಯವರ್ಗವು ಇಂದು ಕರ್ನಾಟಕದ ಹೆಮ್ಮೆಯಾಗಿದೆ. ಕರ್ನಾಟಕದ ವಿವಿಧ ಉಪ ಭಾಷೆಗಳನ್ನು ಬಳಸದೆ, ಸರ್ವಸಮುವಾದ ಶಿಷ್ಟಭಾಷೆಯೊಂದನ್ನು ಕಾವ್ಯದ ರಚನೆಗೆ ಒಗ್ಗಿಸಿದುದರಿಂದ, ಕಾವ್ಯದ ರಚನೆ ಮತ್ತು ಸಂವಹನಗಳು ಇಡೀ ಕನ್ನಡನಾಡನ್ನು ನೆಲೆಯಾಗಿ ಪಡೆದವು.

ಸಾಹಿತ್ಯ ಸೃಷ್ಟಿಯ ಈ ಕಸುಬಿಗೆ ಶ್ರೀಯವರು ಪ್ರೇರಣೆ ಹಾಗೂ ಘನತೆಗಳನ್ನು ನೀಡಿದ ಬಗೆಯನ್ನು, ಅದರ ಹಿಂದಿನ ಪರಿಸ್ಥಿತಿಯೊಂದಿಗೆ ಹೋಲಿಸುವ ಶ್ರೀ ಕಡೆಂಗೊಡ್ಲು ಶಂಕರಭಟ್ಟರು ಹೀಗೆ ಹೇಳುತ್ತಾರೆ :

"ಶ್ರೀಯವರು ಸಾಹಿತ್ಯಸೇವೆಗೆ ತೊಡಗುವ ಮುಂಚೆ ಹೊಸ ಆವೇಶದಿಂದ ಪ್ರೇರಿತರಾಗಿ ಕರ್ಮರಂಗಕ್ಕಿಳಿದವರೇ ಇರಲಿಲ್ಲ ಎಂದು ಹೇಳುವುದು ನನ್ನ ಆಶಯವಲ್ಲ; ಇದ್ದರು ; ಹಲವರಿದ್ದರು. ಏಕಾಂಗವಾಗಿ ಹೆಗಲಿಗೆ ನೊಗ ಕಟ್ಟಿಕೊಂಡು. ತಾವೇ ಎತ್ತುಗಳಾಗಿ ಸಾಹಿತ್ಯಕ್ಷೇತ್ರವನ್ನು ಉತ್ತವರು ಇಲ್ಲದಿರಲಿಲ್ಲ. ಆದರೆ ಹೊಸಗನ್ನಡ ಸಾಹಿತ್ಯ ವ್ಯವಸಾಯಕ್ಕೆ ಹೊಸ ಪ್ರೇರಣೆಯನ್ನೂ ಹೊಸ ಪರಿವಿಡಿಯನ್ನೂ ಹೊಸ ನೆಲೆಗಟ್ಟನ್ನೂ ಕೊಟ್ಟು, ಅದನ್ನು ಸಾರ್ವಜನಿಕ ಕರ್ತವ್ಯದ ಮಟ್ಟಕ್ಕೇರಿಸಿ, ಅದರ ತೇಜಸ್ಸು ಜನರ ತನುಮನಗಳನ್ನು ಬೆಳಗುವಂತೆಸಗಬೇಕೆಂದು ಸೊಂಟಕಟ್ಟಿ ನಿಂತವರನ್ನು ಹುಡುಕಬೇಕಾಗಿದೆ; ಈಗ ಹುಡುಕದೆ ದೊರೆಯುವವರೆಂದರೆ ಶ್ರೀಯವರೊಬ್ಬರೆ."[12]

ಸಹಜವಾಗಿಯೇ ಸಾಹಿತ್ಯ ಸೃಷ್ಟಿಯ ನಂತರ ಅದರ ಪ್ರಕಾಶನಕ್ಕಾಗಿ ಅವರು ಮಾಡಿದ ಕೆಲಸಗಳ ಕಡೆಗೆ ನಮ್ಮ ಗಮನ ಹರಿಸಬಹುದು. ಮೊದಲನೆಯದಾಗಿ ಅವರು ಮೈಸೂರು ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ಆಗಿದ್ದಾಗ, ಜಿ. ಹನುಮಂತ ರಾಯರ ನಾಯಕತ್ವದಲ್ಲಿ ಪ್ರಾರಂಭವಾದ ಪ್ರಚಾರ ಪುಸ್ತಕಮಾಲೆಯನ್ನು ನೆನಪು ಮಾಡಿಕೊಳ್ಳಬೇಕು. ವಿಜ್ಞಾನ ವಿಷಯದಲ್ಲಿ ಕನ್ನಡದಲ್ಲಿ ಗ್ರಂಥಗಳು ರಚಿತವಾದುದು ಅದೇ ಮೊದಲು. ಹಾಗೆಯೇ ಹಳಗನ್ನಡ ಕೃತಿಗಳ ಪ್ರಕಟಣೆಯ ವಿಷಯದಲ್ಲೂ ಅವರು ಅತೀವ ಆಸಕ್ತಿಯನ್ನು ತೋರಿಸಿದರು. "ದೇಶದಲ್ಲಿ ಹುಳುತಿಂದು ಹೋಗದೆ ಉಳಿದಿರುವ ಗ್ರಂಥಗಳನ್ನೆಲ್ಲ ಶೇಖರಿಸಿ ಒಂದನ್ನೂ ಬಿಡದಂತೆ ಅಚ್ಚು ಹಾಕುವುದು" ಅವರ ಯೋಜನೆಯಾಗಿತ್ತು. ಅವರು ಇಟ್ಟ ಪ್ರದುವಟ್ಟಿನಿಂದ ಪ್ರಾರಂಭವಾದ ಬಿ. ಎಂ. ಶ್ರೀ. ಸ್ವರ್ಣಪದಕ ಕವನ ಸ್ಪರ್ಧೆ ಅನೇಕ ಕವಿಗಳಿಗೆ ಉತ್ತೇಜನ ನೀಡಿತು.

ಕನ್ನಡ ಸಾಹಿತ್ಯ ಪರಿಷತ್ತಿನ ಸಂಘಟಕರಲ್ಲಿ ಒಬ್ಬರಾಗಿ ಮತ್ತು ಅದರ ಉಪಾಧ್ಯಕ್ಷರಾಗಿ ಅವರು ಮಾಡಿದ ಕೆಲಸವನ್ನು ಪ್ರತ್ಯೇಕವಾಗಿ ಪರಿಶೀಲಿಸುವುದು ಉಚಿತ. ಉಪಾಧ್ಯಕ್ಷ ಪದವಿಯನ್ನು ವಹಿಸಿಕೊಂಡ ಹೊಸದರಲ್ಲಿ ಇವರು ಅನೇಕ ಉನ್ನತವಾದ ಧ್ಯೇಯಗಳನ್ನು ಒಳಗೊಂಡ ಭಾಷಣಗಳನ್ನು ಮಾಡಿದರು. ತಮಗೆ ತಿಳಿದಮಟ್ಟಿಗೆ ಕಾರ್ಯನಿರತರಾದರು ಕೂಡ.[13] ಆದರೆ ಅವರ ಬದುಕಿನ ಈ ಅವಧಿ ಅನೇಕ ಮನಸ್ತಾಪ, ಘರ್ಷಣೆಗಳಿಂದಲೂ ಕೂಡಿದಂತೆ ಕಾಣುತ್ತದೆ. ಅವರ ಕಾರ್ಯ ನಿರ್ವಹಣೆಯ ರೀತಿ ಅನ್ಯ ಪ್ರದೇಶಗಳ ಅನೇಕ ಹಿರಿಯ ಸಾಹಿತಿಗಳ ಅಸಮಾಧಾನ ವನ್ನು ಸಂಪಾದಿಸಬೇಕಾಯಿತು. ಡಿ. ವಿ. ಜಿ. ಯವರೊಂದಿಗೆ ಅವರಿಗೆ ಬರಬಹು ದಾಗಿದ್ದ ಮನಸ್ತಾಪವನ್ನು ತಾವು ಪರಿಹರಿಸಿದೆವೆಂದು ಮಾಸ್ತಿಯವರು ಹೇಳುತ್ತಾರೆ. ಹಾಗೆಯೇ ಣ/ನ ವಿವಾದಕ್ಕೆ ಸಂಬಂಧಪಟ್ಟಂತೆ ಮೂರುಜನ ಹಿರಿಯರೊಂದಿಗೆ ಅವರಿಗೆ ಮನಸ್ತಾಪ ಬೆಳೆಯಿತು. ಮಂಗಳೂರು ಧಾರವಾಡಗಳ ಕೆಲವು ಸಾಹಿತಿ

ಗಳೊಂದಿಗೆ ಅವರು ಜಗಳವಾಡಬೇಕಾಗಿ ಬಂದ ಪ್ರಸಂಗವೂ ಮಾಸ್ತಿಯವರಿಂದಲೇ ನಿರೂಪಿತವಾಗಿದೆ.[14] ಶಿವರಾಮ ಕಾರಂತರಂತೂ, ಶ್ರೀಯವರು ಪರಿಷತ್ತನ್ನು ನಡೆಸುತ್ತಿದ್ದ ರೀತಿ ತಮಗೆ ಸರಿಬರದೆ ತಾವು ಅವರೊಂದಿಗೆ ಜಗಳವಾಡಿದೆವೆಂದು ಸ್ಪಷ್ಟವಾಗಿಯೇ ಹೇಳುತ್ತಾರೆ.[15] ಆಲೂರು ವೆಂಕಟರಾಯರು, ಗೋವಿಂದ ಪೈ ಮುಂತಾದ ಹಿರಿಯರು ಪರಿಷತ್ತಿನಿಂದ ಗಾವುದ ದೂರ ಉಳಿದುದೂ ಕೂಡ ಈ ಕಾಲದಲ್ಲಿಯೇ ಎಂದು ಕಾಣುತ್ತದೆ. "ಸಭೆಯ ವಿಧಾಯಕ ರೀತಿಗಳಲ್ಲಿ ಅನೇಕ 'ಮೇಷ್ಟರು'ಗಳಂತೆ ಅವರು ಗೊಂದಲಗೆಟ್ಟರೆ ಆಶ್ಚರ್ಯವಿಲ್ಲ"[16] ಎಂದು ಗೋಕಾಕರು ಹೇಳುತ್ತಾರೆ. 'ಶ್ರೀಕಂಠಮಠ'ದ ಸದಸ್ಯರೇ ಆಗಿದ್ದ ವಿ. ಸೀಯವರು, ತಮಗೂ ಮುಜುಗರವಾದ ಕೆಲವು ಸಂಗತಿಗಳನ್ನು ನಿರೂಪಿಸುತ್ತಾರೆ. ಇದೆಲ್ಲವನ್ನೂ ಗಮನಿಸಿದಾಗ ಪರಿಷತ್ತಿನಲ್ಲಿ ಅವರ ಕಾರ್ಯವೈಖರಿ ಸರ್ವಜನ ಸಮ್ಮತವಾಗಿರಲಿಲ್ಲವೆಂಬ ಅಂಶವು ಸ್ಪಷ್ಟವಾಗುತ್ತದೆ. ತಪ್ಪು ಯಾರದೆಂದು ಈಗ ತೀರ್ಮಾನಿಸುವುದು ಸಾಧ್ಯವಿಲ್ಲ. ಆದರೆ ಬಿ. ಎಂ. ಶ್ರೀಯವರ ಮನಸ್ಸಿಗಾದ ನೋವು, ಅವರ ಬೀಳ್ಕೊಡುಗೆಯ ಭಾಷಣದಲ್ಲಿ ತುಂಬಿರುವ ಅಪರೂಪದ ನಂಜಿನಿಂದ ಗೊತ್ತಾಗುತ್ತದೆ. "ನನ್ನ ಕನ್ನಡದ ಉರುಬಿನಲ್ಲಿ ಕಾವು ನೋವುಗಳಿಗೆ ಎಡೆ ಕೊಟ್ಟಿದ್ದೇನೆ. ಕನ್ನಡಕ್ಕಾಗಿ. ಕನ್ನಡನಾಡಿಗಾಗಿ. ಹಟಕ್ಕಲ್ಲ, ನಾನು ಕಂಡ ದಿಟಕ್ಕಾಗಿ. ಮರೆತುಬಿಡಿ, ಮನ್ನಿಸಿಬಿಡಿ ... ನಿಮ್ಮ ಪ್ರೇಮವನ್ನೆಲ್ಲಾ ನನ್ನ ಹೃದಯದಲ್ಲಿ ತುಂಬಿಕೊಂಡಿದ್ದೇನೆ – **ಹಿಡಿಯಲಾರದೆ ಅದು ಬಿರಿಯುತ್ತಿದೆ, ದಾಳಿಂಬೆಯ ಹಣ್ಣಿನಂತೆ!** ನಾನು ಇದರಲ್ಲಿ ಧನ್ಯ."[17] ಈ ನೋವನ್ನು ಒಪ್ಪಿಕೊಂಡರೂ, ಪರಿಷತ್ತಿನ ಅನೇಕ ಸಾಹಿತ್ಯಕ ಚಟುವಟಿಕೆಗಳಿಗೆ ಬಿ. ಎಂ. ಶ್ರೀಯವರಿಂದ ಹೊಸ ಜೀವ ಬಂತೆಂಬ ಸಂಗತಿಯನ್ನು ಒಪ್ಪಬೇಕಾಗುತ್ತದೆ.

ಕರ್ನಾಟಕದ ಏಕೀಕರಣ ಮತ್ತು ಕನ್ನಡ ನವೋದಯದ ಸಂದರ್ಭದಲ್ಲಿ ಬಿ. ಎಂ. ಶ್ರೀಯವರ ಸಾಧನೆಯನ್ನು ಈ ಗ್ರಂಥದ ಬೇರೆ ಲೇಖಕರು ಚರ್ಚಿಸಲಿರುವುದರಿಂದ ಅದನ್ನು ನಾನು ವಿಸ್ತರಿಸುವುದಿಲ್ಲ. ಆದರೆ ಬಿ. ಎಂ. ಶ್ರೀಯವರು ಆ ಕ್ಷೇತ್ರದಲ್ಲಿ ಮಾಡಿದ ಕೆಲಸವೂ ಕೂಡ ಸಾಹಿತ್ಯಕ ಚಟುವಟಿಕೆಗಳಿಗೆ ಪ್ರೇರಕವಾದವೆಂಬ ಮಾತನ್ನು ಹೇಳದಿದ್ದರೆ ಅಪಚಾರವಾಗುತ್ತದೆ.

ಇನ್ನು ಮುಂದೆ ಸಾಹಿತ್ಯವಿಮರ್ಶೆಗೆ ಶ್ರೀಯವರ ಕೊಡುಗೆಯನ್ನು ಸಂಕ್ಷಿಪ್ತವಾಗಿ ನೋಡಬಹುದು. ಹೊಸಗನ್ನಡ ಕವಿತೆಗೆ ಹೇಗೋ ಹಾಗೆಯೇ ವಿಮರ್ಶೆಗೂ ಕೂಡ ಅವರೇ ಆಚಾರ್ಯರಾದರೆಂದು ಹೇಳುವ ಕೀರ್ತಿನಾಥ ಕುರ್ತಕೋಟಿಯವರು ಕೆಲವು ನಿರ್ಣಾಯಕವಾದ ಮಾತುಗಳನ್ನು ಆಡಿದ್ದಾರೆ. "ಒಟ್ಟಿನಲ್ಲಿ ಶ್ರೀಯವರು ಆಧುನಿಕ ವಿಮರ್ಶಾಸಾಹಿತ್ಯವನ್ನು ಪ್ರೇರಿಸಿದರಾದರೂ ಅದಕ್ಕೆ ಭದ್ರವಾದ ತಳಹದಿಯನ್ನು ಹಾಕಲಿಲ್ಲ. ಸಾಹಿತ್ಯದ ಬಗ್ಗೆ ಅವರಿಗೆ ಅಪಾರವಾದ ಉತ್ಸಾಹವಿತ್ತು ; ಭಾಷೆಯನ್ನು ಹೊಳೆಯಂತೆ ಹರಿಯಿಸಬಲ್ಲ ವಾಕ್-ಶಕ್ತಿಯಿತ್ತು ; ಬರವಣಿಗೆಯಲ್ಲಿ ವೇಗವಿತ್ತು.

ಆದರೆ ಹೊಸ ಸಾಹಿತ್ಯದ ಮೂಲತತ್ವಗಳೇನು, ಕನ್ನಡ ಸಾಹಿತ್ಯದ ಅವಿಚ್ಛಿನ್ನ ಪರಂಪರೆಯ ಗತಿ ಯಾವದು, ಹೊಸ ಸಂಸ್ಕೃತಿಯ ಬೆಲೆಗಳಾವುವು ಮೊದಲಾದ ಅಂಶಗಳ ಬಗ್ಗೆ ಅವರು ಯಾವ ಸಿದ್ಧಾಂತಗಳನ್ನೂ ಕೊಡಲಿಲ್ಲ ... ಶ್ರೀಯವರ ನಿಜವಾದ ವಿಮರ್ಶೆಯೆಂದರೆ ಅವರು ನಿರ್ಮಿಸಿದ ಸಾಹಿತ್ಯದ ಬುಡಕ್ಕಿರುವ ನವೀನ ಪ್ರಜ್ಞೆಯಲ್ಲಿ ಎಂದು ಹೇಳಬಹುದು."[18] ಈ ಮಾತುಗಳು ನಿಜ.-ಆದರೆ ಶ್ರೀಯವರು ಪ್ರೊಫೆಶನಲ್ ವಿಮರ್ಶಕರಲ್ಲವೆಂಬ ಮಾತನ್ನು ಮರೆಯಬಾರದು. ಅವರ ಬಹುಪಾಲು ವಿಮರ್ಶಾತ್ಮಕ ಬರಹಗಳು ಭಾಷಣಗಳ ಲಿಖಿತರೂಪಗಳು ಅಥವಾ ಮುನ್ನುಡಿಗಳು. ಅಲ್ಲದೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅವರು ಸ್ಪಷ್ಟವಾಗಿ ಹೇಳುವಂತೆ, ವಿಮರ್ಶೆಯನ್ನು ಅವರು ಬುದ್ಧಿಪೂರ್ವಕವಾಗಿಯೇ ಮಾಡದೆಹೋದಂತೆ ಕಾಣುತ್ತದೆ. "ಕಾವ್ಯ ವಿಮರ್ಶೆಯ ಭಾಗದಲ್ಲಿ ವ್ಯವಸ್ಥೆಯಾಗಿ ಎಲ್ಲರೂ ಒಪ್ಪಬಹುದಾದ ಅಭಿಪ್ರಾಯಗಳು ಪ್ರಚಾರದಲ್ಲಿಲ್ಲವಾದದ್ದರಿಂದಲೂ, ಹೊಸದಾಗಿ ಸಿಕ್ಕಿರುವ ನಿಕ್ಷೇಪವನ್ನು ಕನ್ನಡಿಗರು ಇನ್ನೂ ಆಶ್ಚರ್ಯಪಟ್ಟು ಹೊಗಳಿಕೊಳ್ಳುವ ಸಂಭ್ರಮದಲ್ಲಿಯೇ ಇರುವುದರಿಂದಲೂ, ಪೂರ್ವದ ಸಂಪ್ರದಾಯವಾದ ಸಂಸ್ಕೃತ ಕಾವ್ಯ ಲಕ್ಷಣ ರುಚಿಗೂ, ಈ ಕಾಲದ ಇಂಗ್ಲಿಷ್ ಕಾವ್ಯಾಭ್ಯಾಸಬಲದಿಂದ ಉಂಟಾಗಿರುವ ಹೊಸ ರುಚಿಗೂ ಬಹಳ ತಾರತಮ್ಯ ವಿರುವುದರಿಂದಲೂ ಆ ಭಾಗಕ್ಕೆ ಇಲ್ಲಿ ಹೆಚ್ಚಾಗಿ ಪ್ರವೇಶಮಾಡುವುದು ಸೂಕ್ತವಾಗಿ ಕಾಣಲಿಲ್ಲ."[19] ನಮಗೆ ತುಂಬಾ timid ಆಗಿ ಕಾಣಬಹುದಾದ ಈ ಕಾರಣಗಳು, ಅವರು ಬರೆಯುತ್ತಿದ್ದ ಸಾಹಿತ್ಯಕ ಸಂದರ್ಭದಲ್ಲಿ ಸಮರ್ಥನೀಯವೆಂದೇ ತೋರುತ್ತದೆ. ಹಳಗನ್ನಡ ಸಾಹಿತ್ಯದ ಬಗ್ಗೆ ಶ್ರೀಯವರ ಧೋರಣೆಗಳನ್ನು ಲೇಖನದ, ಹಿಂದಿನ ಭಾಗ ವೊಂದರಲ್ಲಿ ಈಗಾಗಲೇ ಚರ್ಚಿಸಲಾಗಿದೆ. ಸಾಹಿತ್ಯ ವಿಮರ್ಶೆಯಂತಹ ಚಟುವಟಿಕೆಯು ಎ. ಆರ್. ಕೃ., ಟಿ. ಎಸ್. ವೆಂ., ಎಂ. ಆರ್. ಶ್ರೀ., ಮಾಸ್ತಿ, ವಿ.ಸೀ., ತೀ. ನಂ. ಶ್ರೀ., ಕುವೆಂಪು ಮುಂತಾದ ಹಿರಿಯರಿಂದ ಸಮರ್ಥವಾಗಿ ನಡೆಯುವಂತಾಗಲು, ಬಿ. ಎಂ. ಶ್ರೀಯವರು ದೊರಕಿಸಿಕೊಟ್ಟ ಹೊಸ ತಿಳಿವು ಮತ್ತು ದೃಷ್ಟಿಕೋನಗಳು ಕಾರಣವಾದವೆಂಬ ಸಂಗತಿಯಂತೂ ನಿರ್ವಿವಾದವಾದುದು.

ಸಾಹಿತ್ಯಪ್ರಚಾರದ ಪ್ರಮುಖ ಸಾಧನವಾಗಿ, ಉಪನ್ಯಾಸಗಳನ್ನು ಬಳಸುವ ಪರಿಪಾಠವನ್ನು ಕೂಡ ಬಿ. ಎಂ. ಶ್ರೀಯವರು ಪ್ರಬಲಗೊಳಿಸಿದರು ; ಅಂದಿನಿಂದ ಇಂದಿನವರೆಗೆ ಭಾಷಣ ಮಾಡುವುದು ಸಾಹಿತ್ಯಕ ಚಟುವಟಿಕೆಗಳ ಭಾಗವಾಗಿಯೇ ಬೆಳೆದುಬಂದಿದೆ. ಪುಸ್ತಕಗಳನ್ನು ಓದುವವರಿಗಿಂತ ಎಷ್ಟೋ ಪಟ್ಟು ಜನರನ್ನು ತಕ್ಷಣದಲ್ಲಿ ತಲಪುವುದು ಭಾಷಣಗಳಿಂದ ಸಾಧ್ಯವಾಗುತ್ತದೆ. ಶ್ರೀಯವರಿಗಿಂತ ಹೆಚ್ಚು ಬುದ್ಧಿವಂತರಾದವರು ಹಲವು ವಾಗ್ಮಿಗಳಿರಬಹುದು. ಆದರೆ ಕನ್ನಡದ ಸಂದೇಶ ವನ್ನು, ಸಾಹಿತ್ಯದ ಸೊಗಸನ್ನು ನಾಡಿನ ಮೂಲೆಮೂಲೆಗೆ ತಲುಪಿಸಬೇಕೆನ್ನುವ ಅದಮ್ಯ ಉತ್ಸಾಹ ಮತ್ತು ಶ್ರಮವರಿಯದ ದುಡಿಮೆಗಳಲ್ಲಿ ಅವರು ಯಾರಿಗೂ ಎರಡನೆಯವರಲ್ಲ. ಎಷ್ಟೋ ವರ್ಷಗಳವರೆಗೆ ಕನ್ನಡದಲ್ಲಿ ಭಾಷಣ ಮಾಡಲು

ನಿರಾಕರಿಸುತ್ತಿದ್ದ ಇವರು, ಆಮೇಲೆ ಹತ್ತು ಜೀವಮಾನಗಳಿಗೆ ಸಾಕಾಗುವಷ್ಟು ಮಾತನಾಡಿ ಮೇಲುಪಂಕ್ತಿ ಹಾಕಿಕೊಟ್ಟರು.

ಹೀಗೆ ತಮ್ಮ ಕಾಲದಲ್ಲಿ ನಡೆದ ಅದರಲ್ಲೂ ಹಳೆಯ ಮೈಸೂರಿನಲ್ಲಿ ನಡೆದ ಬಹುಪಾಲು ಸಾಹಿತ್ಯಕ ಚಟುವಟಿಕೆಗಳ ಪ್ರೇರಕಶಕ್ತಿಯಾಗಿ, ಕನ್ನಡ ಪುನರುಜ್ಜೀವನದ ನೇತಾರರಾಗಿ ಬಿ. ಎಂ. ಶ್ರೀಯವರು ಮಾಡಿದ ಕೆಲಸ, ಗಾತ್ರದಲ್ಲಿಯೂ, ಗುಣ ದಲ್ಲಿಯೂ ಅಮೋಘವಾದುದು. ಬಿ. ಎಂ. ಶ್ರೀಯವರು ಇಲ್ಲದ ಕನ್ನಡ ನವೋದಯ ವನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಿಲ್ಲವೆನ್ನುವಷ್ಟು ಅವರು ಅದರ ಅನಿವಾರ್ಯ ಅಂಗವಾಗಿದ್ದಾರೆ. ಕನ್ನಡ ನವೋದಯ ಸಾಹಿತ್ಯವು ಬಿ. ಎಂ. ಶ್ರೀಯವರ ಕನಸು ಗಳಿಗಿಂತ ಶ್ರೀಮಂತವಾಯಿತು. ಅವರಲ್ಲಿ ಇಲ್ಲದಿದ್ದ ಅನೇಕ ಆಯಾಮಗಳನ್ನು ಮೈಗೂಡಿಸಿಕೊಂಡಿತು. ಆದರೆ ಅವರು ಹಾಕಿಕೊಟ್ಟ ಮಾದರಿಗಳು ಆ ಸಾಹಿತ್ಯದ ಕೆಲವು ಗುಣದೋಷಗಳನ್ನು ಶಾಶ್ವತವಾಗಿ ನಿರ್ಧರಿಸಿದವು. ಅವರು 'ಯುಗ ಪ್ರವರ್ತಕ'ರಾದರು.

### ಅಡಿ ಟಿಪ್ಪಣಿಗಳು

೧. ಕನ್ನಡ ಮಾತು ತಲೆಯೆತ್ತುವ ಬಗೆ, ಶ್ರೀಸಾಹಿತ್ಯ, ಪು. ೨೪೮.
೨. ಕನ್ನಡ ಮಾತು ತಲೆಯೆತ್ತುವ ಬಗೆ, ಶ್ರೀಸಾಹಿತ್ಯ, ಪು. ೨೪೭.
೩. ಕನ್ನಡ ಮಾತು ತಲೆಯೆತ್ತುವ ಬಗೆ, ಶ್ರೀಸಾಹಿತ್ಯ, ಪು. ೨೪೮.
೪. ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ, ಶ್ರೀಸಾಹಿತ್ಯ, ಪು. ೨೭೫.
೫. ಕನ್ನಡ ಮಾತು ತಲೆಯೆತ್ತುವ ಬಗೆ, ಶ್ರೀಸಾಹಿತ್ಯ, ಪು. ೨೫೪.
೬. ಕನ್ನಡ ಮಾತು ತಲೆಯೆತ್ತುವ ಬಗೆ, ಶ್ರೀಸಾಹಿತ್ಯ, ಪು. ೨೫೪.
೭. ಕನ್ನಡ ಮಾತು ತಲೆಯೆತ್ತುವ ಬಗೆ, ಶ್ರೀಸಾಹಿತ್ಯ, ಪು. ೨೫೫.
೮. ಕನ್ನಡಕ್ಕೆ ಒಂದು ಕಟ್ಟು, ಶ್ರೀಸಾಹಿತ್ಯ, ಪು. ೨೫೭.
೯. ಚಿತ್ರಗಳು-ಪತ್ರಗಳು, ಎ. ಎನ್ ಮೂರ್ತಿರಾವ್, ಪು. ೮೭–೮೮.
೧೦. ಇಂಗ್ಲಿಷ್ ಗೀತೆಗಳು, ದ.ರಾ. ಬೇಂದ್ರೆ, ಸಂಭಾವನೆ, ಪು. ೬೭.
೧೧. ಇಂಗ್ಲಿಷ್ ಗೀತೆಗಳು, ದ.ರಾ. ಬೇಂದ್ರೆ, ಸಂಭಾವನೆ, ಪು. ೬೯.
೧೨. ಶ್ರೀಕಂಠಯ್ಯನವರ ಹೆದ್ದಾರಿ, ಕಡೆಂಗೊಡ್ಲು ಶಂಕರಭಟ್ಟ, ಸಂಭಾವನೆ, ಪು. ೨೩.
೧೩. ಭಾವ – ಭಾಗ ೨, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪು. ೧೫೧.
೧೪. ಭಾವ – ಭಾಗ ೨, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪು. ೧೫೨.

೧೫. ಸ್ಮತಿಪಟಲದಿಂದ – ಭಾಗ ೩, ಶಿವರಾಮ ಕಾರಂತ.

೧೬. ಶ್ರೀಕಂಠಯ್ಯನವರ ಕಾರ್ಯರಂಗ, ವಿ. ಕೃ. ಗೋಕಾಕ, ಸಂಭಾವನೆ, ಪು. ೪೧.

೧೭. ಬೀಳ್ಕೊಡಿಗೆ, ಶ್ರೀಸಾಹಿತ್ಯ, ಪು. ೩೩೫.

೧೮. ಯುಗಧರ್ಮ ಮತ್ತು ಸಾಹಿತ್ಯದರ್ಶನ, ಕೀರ್ತನಾಥ ಕುರ್ತಕೋಟಿ, ಪು. ೩೬೬.

೧೯. ಕನ್ನಡ ಸಾಹಿತ್ಯದ ಚರಿತ್ರೆ, ಶ್ರೀಸಾಹಿತ್ಯ, ಪು. ೪೦೯.

ನಾನು ಈ ಲೇಖನವನ್ನು ಬರೆಯುವಾಗ ನನಗೆ ಒದಗಿಸಲಾದ ವಿಷಯವ್ಯಾಪ್ತಿಯಿಂದ ನಿರ್ದೇಶಿತನಾಗಿದ್ದೇನೆ. ಅದರ ವಿವರಗಳು ಕೆಳಕಂಡಂತಿವೆ.

ಅ. ನವೋದಯದ ಹಿನ್ನೆಲೆಯಲ್ಲಿ ಸಾಹಿತ್ಯದ ನಿಲುವುಗಳನ್ನು ಕುರಿತ ಶ್ರೀಯವರ ವಿಚಾರಗಳು.

ಆ. ನವೋದಯದ ಅನೇಕ ಸಾಹಿತ್ಯಕ ಚಟುವಟಿಕೆಗಳಿಗೆ ಶ್ರೀಯವರು ವ್ಯಕ್ತಿಯಾಗಿ ಮತ್ತು ಸಾಹಿತಿಯಾಗಿ ನೀಡಿದ ಪ್ರೇರಣೆಗಳು.

ಇ. ಶ್ರೀಯವರ ಸಾಹಿತ್ಯದಲ್ಲಿ ಕನ್ನಡ ನವೋದಯ ಸಾಹಿತ್ಯದ ಲಕ್ಷಣಗಳು.

ಈ. ಕನ್ನಡ ನವೋದಯ ಸಾಹಿತ್ಯಕ್ಕೆ ಬಿ. ಎಂ. ಶ್ರೀಯವರ ಸಾಹಿತ್ಯದ ಕೊಡುಗೆಗಳು.

# ಕನ್ನಡ ನವೋದಯ ಮತ್ತು ಬಿ.ಎಂ.ಶ್ರೀ. : ಭಾಷೆ

— ಎಂ. ಚಿದಾನಂದಮೂರ್ತಿ

ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಕನ್ನಡ ಭಾಷೆಯನ್ನು ಕುರಿತಂತೆ ನಡೆಸಿರುವ ಚಿಂತನೆಗಳು ಮೂರು ವರ್ಗಗಳಲ್ಲಿ ಸೇರ್ಪಡೆಯಾಗುತ್ತವೆ : ೧) ಕನ್ನಡದ ಅಭಿಮಾನವನ್ನು ಉಕ್ಕಿಸಲು ಆಡಿದ ಮಾತುಗಳು ; ೨) ಇದಕ್ಕಿಂತ ಹೆಚ್ಚಾಗಿ. ಕನ್ನಡವನ್ನು ಬೆಳಸುವ ಬಗೆ ಹೇಗೆ ಎಂಬುದರ ಬಗ್ಗೆ ನಡೆಸಿದ ಆಲೋಚನೆಗಳು ; ೩) ಸಂಶೋಧನಾತ್ಮಕವಾದ ಬರಹ. ಈ ವರ್ಗೀಕರಣ ಕೇವಲ ಅನುಕೂಲಕ್ಕೆ ಮಾಡಿಕೊಂಡಿರುವುದಾಗಿಯೇ ಹೊರತು ಇಲ್ಲಿಲ್ಲ ಏಕಕಾಲಕ್ಕೆ ಕನ್ನಡಾಭಿಮಾನಿಯೂ ವಿದ್ವಾಂಸನೂ ಆಗಿದ್ದ ವ್ಯಕ್ತಿಯೇ ಹಿನ್ನೆಲೆಯಲ್ಲಿರುವುದರಿಂದ. ಕೊನೆಯ ವರ್ಗದ ಬರಹಗಳನ್ನು (ಇವು ಬಹಳ ಇಲ್ಲ) ಹೊರತುಪಡಿಸಿದರೆ, ಮೊದಲ ಎರಡು ವರ್ಗದ ಬರಹಗಳನ್ನು ಬಹುಕಡೆ ಪ್ರತ್ಯೇಕಿಸಿ ನೋಡುವುದು ಕಷ್ಟವಾಗುತ್ತದೆ. ಅವರ ಸಂಶೋಧನೆಗಳನ್ನು ಕನ್ನಡದ ಅಭಿಮಾನವು ನಿಯಂತ್ರಿಸಿಲ್ಲ. ಮತ್ತು ಕನ್ನಡಾಭಿಮಾನವು ಎಲ್ಲೂ ತಾನೇ ಸ್ವಚ್ಛಂದವಾಗಿ ಹರಿದು ಉತ್ಪ್ರೇಕ್ಷೆ, ಅತಿಪ್ರಶಂಸೆ, ದ್ವೇಷಗಳಿಗೆ ಎಡೆಕೊಟ್ಟಿಲ್ಲ. ಅವರಿಗೆ ಕನ್ನಡ ಭಾಷೆಯ ಪರಂಪರೆ ಬರಿಯ ಹೆಮ್ಮೆ ಪಟ್ಟುಕೊಂಡು ಅದರಲ್ಲೇ ವಿಶ್ರಾಂತವಾಗುವುದಕ್ಕಲ್ಲ ; ಅದನ್ನು ಮುಂದುವರಿಸಿ ಬೆಳಸಿ ಕನ್ನಡವನ್ನು ಸಮರ್ಥ ಭಾಷೆಯನ್ನಾಗಿಸಲು ಮತ್ತು ಕನ್ನಡ ಸಾಹಿತ್ಯವನ್ನು ಇನ್ನೂ ಎತ್ತರಗಳಿಗೆ ಕೊಂಡೊಯ್ಯಲು ಒಂದು ಚಿಮ್ಮು ಹಲಗೆಯಾಗಿತ್ತು.

ಈ ಶತಮಾನದ ಆರಂಭದಲ್ಲಿ ಕನ್ನಡಿಗರಿಗೆ ಕವಿದಿದ್ದ ವಿಸ್ಮೃತಿ ಕರುಣಾಜನಕ ವಾಗಿತ್ತು. ಎರಡು ಸಾವಿರ ವರ್ಷಗಳ ಸಾಂಸ್ಕೃತಿಕ ಇತಿಹಾಸವನ್ನು ಪಡೆದಿದ್ದ ಕರ್ನಾಟಕ ಮತ್ತು ಕನ್ನಡ ಭಾಷೆ, ಕೊನೆಯಪಕ್ಷ ಒಂದು ಸಾವಿರ ವರ್ಷಕ್ಕೆ ಮೇಲ್ಪಟ್ಟ ಪರಂಪರೆಯನ್ನು ಪಡೆದಿದ್ದ ಕನ್ನಡ ಸಾಹಿತ್ಯ ಇವುಗಳ ಅರಿವಿಲ್ಲದೆ ಒಟ್ಟಾರೆಯಾಗಿ ಕನ್ನಡ ಜನ, ಭಾರತೀಯ ಪುನರುಜ್ಜೀವನದ ಆ ಕಾಲದಲ್ಲಿ ಭಾರತೀಯ ಪರಂಪರೆ ಯನ್ನು ಕಂಡುಕೊಂಡು ಅದರೊಡನೆ ತಮ್ಮನ್ನು ತಾವು ಗುರುತಿಸಿಕೊಳ್ಳಲು ಕರ್ನಾಟಕದ ನೆರೆಹೊರೆಯ ತಮಿಳು, ಮರಾಠಿಗಳತ್ತವೋ ದೂರದ ಬಂಗಾಲಿ

ಯತ್ನವೋ ನೋಡುವಂತಹ ದುರ್ದೆಶೆ ಒದಗಿದಾಗ. ಉತ್ತರ ಕರ್ನಾಟಕದಲ್ಲಿ ಮುಖ್ಯ ವಾಗಿ ಆಲೂರು ವೆಂಕಟರಾಯರು, ದಕ್ಷಿಣ ಕರ್ನಾಟಕದಲ್ಲಿ ಮುಖ್ಯವಾಗಿ ಬಿ. ಎಂ. ಶ್ರೀಕಂಠಯ್ಯನವರು ಉಪನ್ಯಾಸಗಳು, ಲೇಖನಗಳು, ಸಂಘನಿರ್ಮಾಣಗಳ ಮೂಲಕ ಕನ್ನಡಿಗರಿಗೆ ಅವರ ಸಾಂಸ್ಕೃತಿಕ ಸಂಪತ್ತಿನ ಅರಿವನ್ನು ತಂದುಕೊಡಲು ಯತ್ನಿಸಿದರು. ಈ ಮುಂದಿನ ಸ್ವಲ್ಪ ದೀರ್ಘವಾದ ಉಲ್ಲೇಖ 'ಶ್ರೀ'ಯವರ ಧೋರಣೆಗಳನ್ನು ಸ್ಪಷ್ಟಪಡಿಸುತ್ತದೆ.

"...ನಮ್ಮ ಕನ್ನಡನಾಡು ಚಿಕ್ಕದಿರಬಹುದು ; ನಮ್ಮ ಕನ್ನಡಿಗರು ಸ್ವಲ್ಪ ಜನರಿರಬಹುದು ; ಚರಗವನ್ನು ಚೆಲ್ಲಿದಂತೆ ಚೆದುರಿಹೋಗಿರಬಹುದು. ಆದರೆ ಕರ್ನಾಟಕದ ಪೂರ್ವಚರಿತ್ರೆಯನ್ನೂ, ಪ್ರಕೃತ ಸಾಹಸಗಳನ್ನೂ ನೆನೆಸಿಕೊಂಡರೆ, ನಮ್ಮ ಪುರೋಭಿವೃದ್ಧಿಯಲ್ಲಿ ಯಾವ ಸಂದೇಹಕ್ಕೂ ಕಾರಣಗಳಿರುವುದಿಲ್ಲ. ಈ ಪುಣ್ಯಕ್ಷೇತ್ರದಲ್ಲಿ ಬೇರೂರಿ. ಆಕಾಶ ಹಬ್ಬಿರುವ ಎಲ್ಲಾ ಪ್ರದೇಶಗಳಿಂದಲೂ ಗಾಳಿ ಯನ್ನೂ, ಬೆಳಕನ್ನೂ, ಆಹಾರವನ್ನೂ, ತೇಜಸ್ಸನ್ನೂ ಹೀರಿಕೊಳ್ಳುವ ಉದಾರ ಹೃದಯವೊಂದನ್ನು ನಾವು ಭದ್ರವಾಗಿ ಕಾಪಾಡಿಕೊಂಡರೆ ; – ಅವರನ್ನು ಅನುಕರಿಸು ವುದು, ಇವರನ್ನು ಧಿಕ್ಕರಿಸುವುದು, ಒಬ್ಬರ ವೇಷವನ್ನು ತಾಳಿ ಕುಣಿಯುವುದು, ಮತ್ತೊಬ್ಬರ ಮಹಿಮೆಯನ್ನು ಸಹಿಸಲಾರದೆ ಕುಯುಕ್ತಿಗಳನ್ನು ಹೂಡಿ ಆಡಿಕೊಳ್ಳು ವುದು – ಈ ಅಸಭ್ಯ ಚೇಷ್ಟೆಗಳನ್ನು, ಮನೋವಿಕಾರಗಳನ್ನು ಬಿಟ್ಟು ಬಿಡುವುದಾದರೆ : ಸ್ವಪ್ರಕೃತಿ ಸ್ವಪ್ರತಿಭೆಯನ್ನು ವಿಚಾರಮಾಡಿ ಅರಿತು, ನಮ್ಮ ಆವರಣ, ನಮ್ಮ ಅನುಕೂಲ್ಯವನ್ನು ಮನದಟ್ಟು ಮಾಡಿಕೊಂಡು, ನ್ಯೂನತೆಗಳನ್ನು ದೌರ್ಬಲ್ಯಗಳನ್ನು ಪರಿಶೋಧಿಸಿ ತ್ಯಜಿಸಿ, ಸತ್ಯಸಂಧರಾಗಿ, ಋಜುಮಾರ್ಗದಲ್ಲಿ ಕರ್ಮವೀರರಾಗಿ ಮುಂದಕ್ಕೆ ಹೆಜ್ಜೆಯನ್ನಿಡುವ ಪಕ್ಷದಲ್ಲಿ – ನಮ್ಮ ಜನವೂ, ಜನದೊಡನೆ ಸಾಹಿತ್ಯವೂ, ಸಾಹಿತ್ಯದೊಡನೆ ಜನವೂ, ಅಮೂಲ್ಯವಾಗುವುದು, ಅಮೋಘವಾಗುವುದು, ಸತ್ಯ ಪ್ರತಿಷ್ಠಿತವಾಗುವುದು ; ಧರ್ಮ ಪ್ರತಿಷ್ಠಿತವಾಗುವುದು. ಆಗ್ಗೆ ಅದರ ಯಶಸ್ಸಿಗೆ ಮಿತಿಯೆಲ್ಲಿ ? ಗುಣವಿದ್ದಲ್ಲಿ ಗಾತ್ರವನ್ನು ಯಾರು ನೋಡುವರು ? ವೀರ್ಯವಿದ್ದಲ್ಲಿ ವೇಷ ಭಾಷೆಗಳನ್ನು ಯಾರು ಕೇಳುವರು ? ಎತ್ತಕಡೆಯಿಂದ ಶಿಕ್ಷೆಯನ್ನು ಪಡೆದರೂ, ಎತ್ತ ಕಡೆಯಿಂದ ಬೆಂಬಲವನ್ನು ಬಯಸಿದರೂ, ಜೇನುಹುಳು ಯಾವ ಹೂವಿನ ಮಕರಂದ ವನ್ನು ತಂದರೂ ಕೊನೆಗೆ ಎಲ್ಲಾ ತನ್ನ ಜೇನುತುಪ್ಪವನ್ನಾಗಿಯೇ ಹೇಗೆ ಮಾಡಿ ಕೊಳ್ಳುವುದೋ ಹಾಗೆ ಎಲ್ಲವೂ ಕನ್ನಡವೇ ಆಗಿಹೋದರೆ, ಆಗ ಹೊರಗಿನದು ಎಲ್ಲಿ ಬಂತು ? ಮೊದಲಿನಿಂದಲೂ ನಮ್ಮ ಕರ್ನಾಟಕದ ಚರಿತ್ರೆಯೇ ಹೀಗೆಂದು ತೋರುವುದು. ಆರ್ಯಾವರ್ತಕ್ಕೂ, ದಕ್ಷಿಣಾಪಥದ ಸಮುದ್ರದ ಗಡಿಗಳಿಗೂ ಓಡಾಡುವ ರಾಜಮಾರ್ಗವಾಗಿ, ಭಾಷೆ, ಸಂಸ್ಕೃತಿ, ಮತಗಳನ್ನು ತನ್ನಲ್ಲಿ ಯಥೇಷ್ಟ ವಾಗಿ ಚಲಿಸಿ, ಪಶ್ಚಿಮ ಸಮುದ್ರದ ಎದೆಯ ಮೇಲೆ ತನ್ನ ಹಡಗುಗಳನ್ನು

ತಾಂಡವವಾಡಿಸುತ್ತ, ಪಾರಸಿಕರು ಬ್ಯಾಬಿಲೋನಿಯ ಮತ್ತು ಈಜಿಪ್ಟ್ ದೇಶದ ಜನರು, ಗ್ರೀಕರು ರೋಮನರು ಮುಂತಾದ ನಾಗರಿಕ ಜನರೊಡನೆ ನಾಗರಿಕತೆಯಿಂದ ವ್ಯವಹರಿಸುತ್ತ ; ಐಹಿಕ ವಿಷಯದಲ್ಲಾಗಲಿ, ಪಾರಲೌಕಿಕ ವಿಷಯದಲ್ಲಾಗಲಿ. ಭಾವನಾ ಪ್ರಪಂಚದಲ್ಲಾಗಲಿ, ಕಾರ್ಯ ಪ್ರಪಂಚದಲ್ಲಾಗಲಿ ಯಾವುದರಲ್ಲೂ ಅತಿಗೆ ಹೋಗದೆ, ಒಂದೇ ಸಮನಾಗಿ. ಕ್ರಮವಾಗಿ, ಸಮ್ಮಿಳಿತವಾಗಿ ವೃದ್ಧಿ ಹೊಂದುತ್ತ ; ಅನೇಕ ಜನಜಾತಿಗಳನ್ನು ತನ್ನ ಸೊಬಗಿನಿಂದ ಸೆಳೆಯುತ್ತ ; ಅನೇಕ ರಾಜವಂಶ ಗಳನ್ನು ತನ್ನ ಪರಾಕ್ರಮದಿಂದ ಕೀರ್ತಿವಂತರನ್ನಾಗಿ ಮಾಡುತ್ತ ; ಬೌದ್ಧ ಗುರುಗಳು ಜೈನ ಯತಿಗಳು, ಶ್ರೀ ಶಂಕರಾಚಾರ್ಯರು, ಶ್ರೀ ರಾಮಾನುಜಾಚಾರ್ಯರು, ಶ್ರೀಮಧ್ವಾಚಾರ್ಯರು, ಶ್ರೀ ಬಸವೇಶ್ವರರು ಇಂತಹ ಪ್ರಧಾನರಾದ ಧರ್ಮ ಸಂಸ್ಥಾಪನಾಚಾರ್ಯರುಗಳಿಗೆ ತನ್ನ ಸಮತಾ ಬುದ್ಧಿಯಿಂದ ಆಶ್ರಯವನ್ನು ನೀಡುತ್ತಾ ; ಶಿಲ್ಪಕಲೆ, ಚಿತ್ರಕಲೆ, ಗಾನಕಲೆ, ಸಾಹಿತ್ಯಕಲೆ ಮುಂತಾದ ಆತ್ಮ ಸ್ಫುರಣೆಗಳಲ್ಲಿ ಸೌಂದರ್ಯಾನ್ವೇಷಣೆಯನ್ನು ಮಾಡುತ್ತ : ಕಾಲಕ್ಕೆ ತಕ್ಕಂತೆ ಪ್ರಜಾ ಸಮತೆಯನ್ನು ಪ್ರಜಾಹಿತವನ್ನು ಗುರಿಯಲ್ಲಿಟ್ಟುಕೊಂಡು, ಹೊಸ ಮತ, ಹೊಸ ಭಾಷೆ, ಹೊಸ ಕವನ, ಹೊಸ ಜೀವ ಮುಂತಾದ ಹೊರ ಆರಂಭಗಳನ್ನು ಉದಾರ ಹೃದಯದಿಂದ ಸ್ವೀಕಾರ ಮಾಡುತ್ತ ; ಒಡೆದು, ಪಾಲಾಗಿ ಪರಾಕ್ರಾಂತವಾಗಿ, ದುರ್ದಶೆಯಲ್ಲಿರುವಾಗ ಈಗ ಕೂಡ ; ಗರ್ವದಿಂದ ಕಾಲೋಚಿತವಾದ ಶ್ರೇಯೋ ಮಾರ್ಗವನ್ನು ಸೂಚಿಸುವ ನೂತನ ಶಿಕ್ಷಣವನ್ನು ಪಡೆದು, ಸ್ವಲ್ಪ ಕಾಲದಲ್ಲಿಯೇ ನವಚೈತನ್ಯ ಮೂಡಿ, ನಿದ್ದೆಯಳಿದು, ಮೈಮುರಿದು, ಮಲಗಿದ್ದೆದ್ದ ಸಿಂಹದಂತೆ ಮೇಲಕ್ಕೆ ನೆಗೆದು, ಕೇಸರವನ್ನು ಅಲುಗಿ, ಗರ್ಜಿಸುತ್ತಿರುವ ಈ ಕನ್ನಡನಾಡಿನ ಚರಿತ್ರೆ ಯಾವ ಕನ್ನಡಿಗನಿಗೆ ತಾನೇ ಆತ್ಮಗೌರವವನ್ನೂ, ಆತ್ಮಶ್ರದ್ಧೆಯನ್ನೂ, ಹೊಸ ಹುರುಪನ್ನೂ, ಹೊಸ ಆರಂಭವನ್ನೂ ಹೊಂದಿಸಿಕೊಡಲಾರದು ?

ಆದುದರಿಂದ, ಕನ್ನಡಿಗರೇ, ಏಳಿ, ಎಚ್ಚರಗೊಳ್ಳಿ, ಆರಂಭಮಾಡಿ : ಪೂರ್ವ ಚರಿತ್ರೆಯಂ, ವಿಶ್ವವಿದ್ಯಾಲಯದ, ಸಾಹಿತ್ಯ ಪರಿಷತ್ತಿನ, ನೂತನ ಸಾಹಿತ್ಯಕಾರರ ಉತ್ಸಾಹಪೂರಿತರಾಗಿ ಸೇವಾತುರರಾದ ಯುವಕ ದೇಶವತ್ಸಲರ ಕರ್ನಾಟಕ ಭಾಷೋಜ್ಜೀವನವನ್ನು ಸದಾ ಕಾಲದಲ್ಲಿಯೂ ತಮ್ಮ ಘನವಾದ ದಿವ್ಯ ಚಿತ್ತದಲ್ಲಿ ಪರ್ಯಾಲೋಚಿಸುತ್ತಿರುವ ನಮ್ಮ ಮೈಸೂರು ಶ್ರೀಮನ್ಮಹಾರಾಜರವರ, ಸಾಹಿತ್ಯ ಸಂಸ್ಕೃತಿಗಳ ಕಟ್ಟಿನಿಂದ ಏಕಜನತೆಯನ್ನು ಬಯಸುತ್ತಿರುವ ಸಕಲ ಕರ್ನಾಟಕರ, ಮಹತ್ಪ್ರೇರಣೆಯಿಂದ, ಮಹತ್ಪ್ರಯತ್ನದಿಂದ ಸಾಧ್ಯವಾಗದ ಕಾರ್ಯ ಯಾವುದು ? ಏಳಿ, ಎಚ್ಚರಗೊಳ್ಳಿ, ಆರಂಭಮಾಡಿ. ಹಿಂದೆ ಯುರೋಪಿನಲ್ಲಿ ರಿನೇಸಾನ್ಸ್ ಎಂಬ ಸಾಹಿತ್ಯದ ಪುನರ್ಜನ್ಮವುಂಟಾದಾಗ, ಒಬ್ಬ ಮಹಾ ಪಂಡಿತನು – 'ನಾವು ಸತ್ತವರನ್ನು ಎಬ್ಬಿಸುವುದಕ್ಕೆ ಹೋಗುತ್ತೇವೆ' ಎಂದು ಘೋಷಿಸಿದನು. **ನಾವು ಕನ್ನಡಿಗರು**,

**ಇಂದು, ಸತ್ತವರನ್ನು ಎಬ್ಬಿಸುವುದೇ ಅಲ್ಲ ; ಬದುಕಿರುವವರನ್ನು ಎಚ್ಚರಗೊಳಿಸು ವುದಕ್ಕೆ ಹೊರಟಿರುವೆವು.**[1] ಹಿಂದಿನ ಸಾಹಿತ್ಯವನ್ನು ಪ್ರಯೋಜನಕಾರಿಯಾಗಿ ಮಾಡುವುದಕ್ಕೇ ಅಲ್ಲ ; **ಹೊಸ ಉತ್ತಮ ಸಾಹಿತ್ಯವೊಂದನ್ನು ಸೃಷ್ಟಿಮಾಡುವುದಕ್ಕೆ ಹೊರಟಿರುವೆವು.** ಹೊರಟವರು ವಿಲಾಸವತಿಯ ಕೊರಳಿನ ಪುಷ್ಪಮಾಲಿಕೆಯೇ ಅಲ್ಲ, ಸಾಹಿತ್ಯ, ಮಾನವಜೀವನದ ಪುನರ್ನಿರ್ಮಾಣ ಕಾರ್ಯದಲ್ಲಿ ಬದ್ಧಕಂಕಣನಾಗಿ ರುವ ವೀರನ ಕೈಯಿನ ಖಡ್ಗವೂ ಹೌದೆಂದು ತಿಳಿದಿರುವೆವು. 'ನಾನು ಬಂದು ಶಾಂತಿ ಯನ್ನು ತರಲಿಲ್ಲ, ಖಡ್ಗವನ್ನು ತಂದೆನು' ಎಂದು ಕ್ರೂರ ಕಾರುಣ್ಯದಿಂದ ಸಾರಿದ ಒಬ್ಬ ಮಹಾತ್ಮ ಧರ್ಮಪುತ್ರನ ರಹಸ್ಯವನ್ನು ಹೃದಯದಲ್ಲಿಟ್ಟಿರುವೆವು. ಪುರಾತನ ಕರ್ಮವಾಸನೆಯಿಂದ ಆತ್ಮನು ಬದ್ಧನಾಗಿದ್ದರೂ, ಸಂಪೂರ್ಣವಾಗಿ ಬದ್ಧನಲ್ಲ : ಸ್ವತಂತ್ರನು, ಮುಕ್ತಿಗರ್ಹನು; ಹೊಸ ಕರ್ಮವನ್ನಾರಂಭಿಸಿ ವಿಶ್ವಾತ್ಮ ಪರಮಾತ್ಮನನ್ನು ತನ್ನಲ್ಲಿ ಅನುಭವಿಸಿ ಸಾಯುಜ್ಯವನ್ನು ಪಡೆಯುವ ಸಹಜವಾದ ಚೈತನ್ಯವುಳ್ಳವನು ಎಂದು ಆರ್ಯರಾದ ನಮ್ಮ ಹಿರಿಯರು ನಮಗೆ ಉಪದೇಶ ಮಾಡಿದ್ದಾರೆ. ಕನ್ನಡಿಗರಾ. ವಿಳಿ, ನಮ್ಮಲ್ಲಿ ಯಾವ ಯಾವ ಭಿನ್ನಾಭಿಪ್ರಾಯಗಳು, ಭಿನ್ನರುಚಿಗಳು ಇದ್ದರೂ, ನಮ್ಮ ನಮ್ಮಲ್ಲಿಯೇ ಅವು ಇರಲಿ. ಹಳೆಯ ಮಾರ್ಗವನ್ನು ಹಿಡಿಯುವವರು, ಹೊಸ ಮಾರ್ಗವನ್ನು ಹಿಡಿಯುವವರು, ಸಂಸ್ಕೃತಾಭಿಮಾನಿಗಳು, ಆಂಗ್ಲೇಯಾಭಿಮಾನಿಗಳು, ಭರತಮಾತೆಯಲ್ಲಿ ವೀರಾವೇಶ ವಾತ್ಸಲ್ಯವುಳ್ಳವರು, ವಿಶ್ವದೃಷ್ಟಿಯ ಸರ್ವಸಮ ಮೈತ್ರಿಯ ಸಾಧುಸಂತರು – ಯಾರೇ ಆಗಲಿ ಒಬ್ಬರಂತೆ ಒಬ್ಬರಿರುವರೆಂಬ ಬೂಟಾಟಿಕೆಯ ನಿರ್ಬಂಧ ಬೇಡ ; ಒಬ್ಬರಂತೆ ಒಬ್ಬರಿಲ್ಲವೆಂಬ ಕಿತ್ತಾಟವೂ ಬೇಡ. ನಮಗೆ ಭಗವಂತನು ದಯಪಾಲಿಸಿರುವ ವರಪ್ರಸಾದಗಳನ್ನೂ – ಬಗೆ ಬಗೆ ಯಾದ ಶಕ್ತಿ ರುಚಿಗಳನ್ನೂ, ಕನ್ನಡನಾಡಿಗೆ, ಕನ್ನಡನುಡಿಗೆ ಒಮ್ಮನಸ್ಸಿನಿಂದ ಮುಡಿಪುಕಟ್ಟೋಣ. ಒಮ್ಮೆಯಾಗಿ ಅವುಗಳ ಏಳಿಗೆಯಲ್ಲಿ ಏಳಿಗೆಯಾಗೋಣ.

ಸಾಹಿತ್ಯಕಲಾರಾಧಕರೆ, ಅಗೋ ನೋಡಿ, ಚಲನೆಯಿಲ್ಲದೆ ನಿಂತಿರುವಳು ಕರ್ಣಾಟಕ ಸರಸ್ವತೀದೇವಿ. ತಲೆಯಮೇಲೆ ಭಾರವಾದ ಕಿರೀಟ, ಅಂಗಾಂಗವೆಲ್ಲಾ ತೆರವಿಲ್ಲದೆ ಮುಳ್ಳುಹುಯ್ದಂತೆ ಹೇರಿರುವ ಜವಾಹಿರಿ, ಶಾಸ್ತ್ರ ನಿಯಮಿತವಾದ ಒಂದು ಬಗೆಯ ನಿಲವಿನ ಭಂಗಿ, ಮುಖದಲ್ಲಿ ಕಣ್ಣಿನಲ್ಲಿ ಕಡೆದ ಏನೋ ಒಂದು ಬಗೆಯಾದ ನಿಂತ ನಿಲವಿನ ನಗೆ, ಹಾಗೇ ನೋಡುವವನ ಕಣ್ಣಿಗೆ ಕಣ್ಣು ನೆಟ್ಟು ದುರುಗುಟ್ಟಿಕೊಂಡು ನೋಡುತ್ತದೆ. – ಇಲ್ಲ, ಒಮ್ಮೊಮ್ಮೆ ಆಡುವಂತೆಯೂ ಕಾಣುತ್ತದೆ. ಮೈಯೆಲ್ಲಾ ಮುಸುಕಿದ ದಪ್ಪವಾದ ಹಳೆಯ ಜರತಾರಿಯ ವಸ್ತ್ರ; ಉಸಿರು ಬಿಗಿದು ಎದೆ ಹೊಯ್ಯಲಾರಳು; – ಎದೆ ವದರುತ್ತಿದೆಯೋ ? ಬರಿಯ ನಮ್ಮೆದೆಯ ಪದರಾಟವೇಯೋ ? ಎಚ್ಚತ್ತಿರುವಳೋ, ನಿದ್ದೆ ಹೋಗುತ್ತಿರುವಳೋ? ಬನ್ನಿ, ಆಕೆಯನ್ನು ಎಚ್ಚರಿಸೋಣ. ಕಿರೀಟದ, ಜವಾಹಿರಿಯ, ಶಿಲ್ಪನಿಯಮದ,

---

೧. **ಕಪ್ಪಕ್ಷರಗಳು ನನ್ನವು.**

ಜರತಾರಿಯ, ಭಾರವನ್ನೂ ಬಿಗುಪನ್ನೂ ಬಿಡಿಸೋಣ. ವಿಶ್ವಪಾಣಿಯ, ದಿವ್ಯ ಪಾಣಿಯ, ಸಂಜೀವನ ಮಣಿಯ ಸ್ಪರ್ಶದಿಂದ ಶಾಪಗ್ರಸ್ತಳಾದ, ಶಿಲಾಮೂರ್ತಿಯನ್ನು ಜೀವವುಳ್ಳ ಚೆಲುವೆಯನ್ನಾಗಿ ಮಾಡೋಣ. ಆ ಉನ್ನತಪೀಠದಿಂದ ಆಗ ಆಕೆ ಇಳಿಯುವಳು, ನಾಡಿನಲ್ಲೆಲ್ಲಾ ಸುಳಿಯುವಳು. ಸ್ವಾತಂತ್ರ್ಯದಿಂದ ಸಹಜವಾಗಿ ಆಕೆಯ ಹೃದಯ ಆಡುವುದು. ಕಣ್ಣು ಒಲಿದ ಹೆಣ್ಣಿನ ಕಣ್ಣ ಬಿನ್ನಾಣವನ್ನೆಲ್ಲಾ ಬೆಳಗಿ ಬೀರುವುದು. ಗಾಳಿಗೆ ಕೆದರಿದ ಕೂದಲು ಕನ್ನಡನಾಡಿನ ಬಯಲುಗಳ ಮೊಲ್ಲೆ ಮಲ್ಲಿಗೆ ಗಳನ್ನು ಧರಿಸಿ ಕಂಪು ಸೂಸುವುದು. ನಗುನಗುತ ಆಕೆ ನಮ್ಮೊಡನಾಡಿಯಾಗಿ. ಮನುಷ್ಯರೊಡನೆ ಮನುಷ್ಯಳಾಗಿ, ದಿವ್ಯಾತ್ಮರೊಡನೆ ದೇವಿಯಾಗಿ, ತಾನೂ ನಲಿದು. ನಮ್ಮನ್ನೂ ನಲಿಸುವಳು. ಆಗ್ಗೆ, ಆಕೆಯೂ ಧನ್ಯಳು – ನಾವೂ ಧನ್ಯರು; ತಾಯಿ ಧನ್ಯಳಾದರೆ, ಮಕ್ಕಳೂ ಧನ್ಯರಲ್ಲವೆ ?"[2]

ಈ ಸುದೀರ್ಘ ಉಲ್ಲೇಖವನ್ನು ಬೇಕೆಂದೇ ಇಡಿಯಾಗಿ ಕೊಡಲಾಗಿದೆ. ಕನ್ನಡಾಭಿಮಾನದಿಂದ ಪ್ರೇರಿತರಾದ 'ಶ್ರೀ'ಯವರು ಮೇಲಿನ ಮಾತುಗಳಲ್ಲಿ ಮತ ಪ್ರಚಾರಕನೊಬ್ಬನ ಅತ್ಯುತ್ಸಾಹ ನಿಷ್ಠೆಗಳಿಂದ ಪ್ರವಾದಿಯೊಬ್ಬನ ಕಾಣ್ಕೆ ಉದ್ಗಾರ ಗಳೊಡನೆ ಆವಿರ್ಭವಿಸಿರುವುದನ್ನು ಓದುಗರು ಸುಲಭವಾಗಿ ಗುರುತಿಸಬಹುದು. ಇಂತಹ ಮಾತುಗಳು ಆಧುನಿಕಕಾಲದ ಕೆಲವರಿಗೆ ವಿನೋದವಾಗಿ ಕೇಳಿಸಬಹುದು. ಆದರೆ ಅಂತಹ ಉತ್ತೇಜಕಾರಿ ಪ್ರಚೋದನೆಗಳು ಇಂದಿಗೂ ಅಗತ್ಯವೆಂಬ ಮಾತು ಹಾಗಿರಲಿ, ಅಂದಿನ ದಿನಗಳಲ್ಲಂತೂ ಭಾಷೆಯ ಬಗ್ಗೆ ಭಾವುಕವಾಗಿ ಪ್ರಸ್ತಾಪಿಸಿ ಜನರಲ್ಲಿ ಭಾಷಾಪ್ರೇಮವನ್ನೂ ಆತ್ಮಪ್ರತ್ಯಯವನ್ನೂ ಬಿತ್ತುವುದು ಒಂದು ಸಾಮಾಜಿಕ ಅಗತ್ಯವಾಗಿದ್ದಿತೆಂಬಲ್ಲಿ ಅನುಮಾನವಿಲ್ಲ. 'ಶ್ರೀ'ಯವರಿಗೆ ಕನ್ನಡವು ಬರಿಯ ನುಡಿಯಲ್ಲ, ಅದು ಅವರಿಗೆ ದೇವಿ, 'ಕನ್ನಡ ದೇವಿ'. ಕರ್ನಾಟಕದ ಬಗ್ಗೆ ಸ್ಮರಿಸುವಾಗ ಅದರ ಶ್ರೀಮಂತ ಪರಂಪರೆಯನ್ನು ಸ್ಮರಿಸುವಾಗ, ಆ ಸಂಸ್ಕೃತಿಯ ಸಮನ್ವಯ ದೃಷ್ಟಿಯ ವೈಶಿಷ್ಟ್ಯವನ್ನೂ ಗುರುತಿಸಿದ್ದಾರೆ. ಅವರಿಗೆ ಭಾರತೀಯ ಭಾಷೆಗಳಲ್ಲಿ ಸಂಸ್ಕೃತದಿಂದ, ವಿದೇಶೀ ಭಾಷೆಗಳಲ್ಲಿ ಇಂಗ್ಲಿಷಿನಿಂದ ಕನ್ನಡವು ಶ್ರೀಮಂತ ವಾಗಬೇಕೆಂಬುದು ಒಂದು ಅದಮ್ಯವಾದ ಬಯಕೆ. ಇಂಗ್ಲಿಷಿಗೆ ಹೋಲಿಸಿದಾಗ ಅದು ಆಧುನಿಕವಾಗಿ ಬೆಳೆಯಬೇಕಿದ್ದ ಭಾಷೆಯಾಗಿದ್ದರೂ ಅವರ ಪ್ರೀತಿ ಕನ್ನಡವ ಬಗ್ಗೆ ಎಣೆಯಿಲ್ಲದ ರೀತಿಯಲ್ಲಿ ಬೆಳೆಯಿತು. "ನಮಗೆ ಅದು ಹೆತ್ತ ತಾಯಿ; ಮಹಾವೈಭವದಿಂದ ಬಾಳಿದ ಜನತೆಯ ಉಸಿರು."[3] "ಕನ್ನಡ ತಾಯಿಗಾಗಿ ಭಿಕ್ಷೆ ಬೇಡುವ ದಾಸಯ್ಯ ನಾನು" ಎಂದಿದ್ದಾರೆ ಒಂದು ಕಡೆ.[4]

---

೨. ಶ್ರೀ ಸಾಹಿತ್ಯ, ಮೈಸೂರು, ೧೯೮೩, ಪು. ೨೭೭–೯.

೩. ಅದೇ, ಪು. ೩೩೦.

೪. ಅದೇ, ಪು. ೨೯೭.

'ಶ್ರೀ'ಯವರ ಯೋಚನೆಯಲ್ಲಿ ಅಖಿಲ ಭಾರತ ಮಟ್ಟದ ಆಡಳಿತ ಕಾರ್ಯಗಳಿಗೆ, ಭಾರತದೊಳಗಿನ ಪ್ರಾಂತಗಳ ಮಧ್ಯೆ ಪರಸ್ಪರ ರಾಜಕೀಯ ವ್ಯವಹಾರಕ್ಕೆ ಮತ್ತು ಜ್ಞಾನಕ್ಕೆ ಇಂಗ್ಲಿಷ್ : ಭಾರತೀಯ ಪರಂಪರೆಯ ಆರ್ಷೇಯ ಭಾಷೆಯಾದ ಸಂಸ್ಕೃತವು ದೇಶಭಾಷೆಗಳನ್ನು ವೃದ್ಧಿಪಡಿಸುವುದಕ್ಕೆ : ವಿದ್ಯಾಭ್ಯಾಸಕ್ಕೆ ಮತ್ತು ದೇಶೀಯ ವ್ಯವಹಾರಕ್ಕೆ ಕನ್ನಡ – ಇವು ಮೂರರ ಪರಿಜ್ಞಾನ ಪ್ರತಿಯೊಬ್ಬ ವಿದ್ಯಾವಂತ ಕನ್ನಡಿಗನಿಗೂ ಇರಬೇಕು. ಇಂಗ್ಲಿಷ್, ಸಂಸ್ಕೃತ, ಆಯಾ ದೇಶಭಾಷೆ ಈ ಮೂರು ಭಾಷೆಗಳನ್ನೂ ಇಂಡಿಯದ ಪ್ರತಿಯೊಬ್ಬ ವಿದ್ಯಾವಂತನೂ ಚೆನ್ನಾಗಿ ತಿಳಿದಿರಬೇಕು. ಹಿಂದಿನ ಕನ್ನಡ ಸಾಹಿತ್ಯವು ಸಂಸ್ಕೃತದಿಂದ ಪುಷ್ಟಿ ಹೊಂದಿ ಬೆಳೆದುದರ ಗುಣದೋಷಗಳೇನೇ ಇರಲಿ. ಹೊಸ ಸಾಹಿತ್ಯವಂತೂ ಇಂಗ್ಲಿಷಿನಿಂದಲೇ ಬೆಳೆಯಬೇಕೆನ್ನುವುದು 'ಶ್ರೀ' ಅವರ ಪ್ರಕಾರ 'ಸ್ವತಸ್ಸಿದ್ಧ' ವಿಷಯ. "ಇಂಗ್ಲಿಷ್ ಸಾಹಿತ್ಯವೇ ನಮ್ಮ ಕಾವ್ಯಮಾಲೆಯನ್ನು ಕೈಕೊಟ್ಟು ಎತ್ತಬೇಕು : ಇಂಗ್ಲಿಷ್ ಸಾಹಿತ್ಯವೇ ಸಂಸ್ಕೃತ ಸಾಹಿತ್ಯದಿಂದ ನಮ್ಮ ಕಾವ್ಯಮಾಲೆಗೆ ಇಳಿದಿರುವ ದೋಷಗಳನ್ನು ಪರಿಹಾರಮಾಡಬೇಕು."[5]

ಕನ್ನಡ ಭಾಷೆಯನ್ನು ಬೆಳೆಸಬೇಕೆಂದು ಅಮೂರ್ತವಾಗಿ ಮಾತನಾಡುವುದು ಸುಲಭವಿರುವಷ್ಟು, ಹಾಗೆಂದರೇನು ಎಂಬ ಪ್ರಶ್ನೆ ಹಾಕಿಕೊಂಡು ಉತ್ತರಿಸುವುದು ಸುಲಭವಲ್ಲ. 'ಶ್ರೀ'ಯವರಿಗೆ ಕನ್ನಡವನ್ನು ಬೆಳೆಸುವುದರ ಬಗ್ಗೆ ಸ್ಪಷ್ಟ ಕಲ್ಪನೆಯಿತ್ತು. ಈ ವಿಷಯದಲ್ಲಿ ಅವರು ಬರೆದಿರುವ 'ಕನ್ನಡ ಮಾತು ತಲೆಯೆತ್ತುವ ಬಗೆ' ಮತ್ತು 'ಕನ್ನಡಕ್ಕೆ ಒಂದು ಕಟ್ಟು' – 'ಕನ್ನಡ ಅಕ್ಷರ ಸಂಸ್ಕರಣ' ಎಂಬ ಬರಹಗಳು ಈಗಲೂ ಗಂಭೀರ ಅಧ್ಯಯನ ಯೋಗ್ಯವಾಗಿವೆ.

'ಶ್ರೀ'ಯವರು ಕನ್ನಡ ಭಾಷೆ ಯಾವುದೇ ಮಡಿ-ಮೈಲಿಗೆ ಭಾವನೆ ಇಲ್ಲದೆ ಶಬ್ದಗಳನ್ನು ಸ್ವೀಕರಿಸಬೇಕೆಂಬ ಧೋರಣೆಯುಳ್ಳವರು. 'ರೈಲು' ಶಬ್ದ ಕನ್ನಡದಲ್ಲಿ ಎಷ್ಟು ಹಾಸುಹೊಕ್ಕಾಗಿದೆಯೆಂದರೆ, ಅದನ್ನೇ ಇಟ್ಟುಕೊಳ್ಳಬೇಕಲ್ಲದೆ ಹೊಗೆಗಾಡಿ, ಧೂಮಶಕಟ ಮೊದಲಾದ ಅನುವಾದಗಳನ್ನು ಮೊದಲು ತಿರಸ್ಕರಿಸಬೇಕು. ಒಂದು ಶಬ್ದ ಕನ್ನಡದಲ್ಲಿದ್ದರೆ ಅದರ ಜಾಗದಲ್ಲಿ ಇನ್ನೊಂದು ಭಾಷೆಯ ಶಬ್ದವನ್ನು ಆಮದು ಮಾಡಿಕೊಳ್ಳಬೇಕಾಗಿಲ್ಲ. ಬರಹದ ಭಾಷೆ ಆಡುಮಾತಿಗೆ ಹತ್ತಿರವಾಗಿರತಕ್ಕದ್ದು. ಹೀಗೆಂದಾಕ್ಷಣ ಆಡುಮಾತನ್ನು ಅದು ಇರುವಂತೆಯೇ ಬರಹದಲ್ಲಿ ತರಬೇಕೆಂದಿಲ್ಲ. ಏನೇ ಆಗಲೀ, ಯಾವುದೇ ಭಾಷೆಯಲ್ಲಿ ಗ್ರಂಥರೂಪ (Literary) ಒಂದುಂಟು. ಆಡುರೂಪ (Colloquial) ಒಂದುಂಟು. ಗ್ರಂಥರೂಪವು ಬಹುಕಾಲದಿಂದ ಲೇಖಕರು ಬಳಸಿ ಬಳಸಿ ಒಂದು ಖಚಿತ ಆಕಾರಕ್ಕೆ ಬಂದಿರುತ್ತದೆ. ಸಾರ್ವತ್ರಿಕವಾಗಿ ಒಂದೇ ರೀತಿ ಬಳಕೆಯಲ್ಲಿರುತ್ತದೆ. ಆಡುರೂಪ ಅಥವಾ ಗ್ರಾಮ್ಯರೂಪವು ಏಕರೂಪ

೫. ಅದೇ, ಪು. ೨೫೦.

ವಿಲ್ಲದೆ 'ಗ್ರಾಮ್ಯ'ವಾಗಿರುತ್ತದೆ. ಇವೆರಡರ ಮಧ್ಯೆ ಹೊಸಗನ್ನಡವು ಒಂದು ಸಮನ್ವಯವನ್ನು ಸಾಧಿಸಿಕೊಳ್ಳುವುದುಂ ಹೇಗೆ ಎಂಬ ಬಗ್ಗೆ 'ಶ್ರೀ'ಯವರು ಆಳವಾಗಿ ಯೋಚಿಸಿ ಕೆಲವು ಸೂತ್ರಗಳನ್ನು ಮುಂದಿಟ್ಟಿದ್ದಾರೆ. ಅವುಗಳ ಸಾರಾಂಶ ಹೀಗಿದೆ–

"ರೂಢಿ ಭಾಷೆಯನ್ನೇ ಆಧಾರವಾಗಿಟ್ಟುಕೊಳ್ಳುವುದು ; ಬಿಟ್ಟುಹೋದ ಪೂರ್ವದ ರೂಪಗಳನ್ನು ಸಾಧ್ಯವಾದಮಟ್ಟಿಗೆ ಬಿಟ್ಟು ಬಿಡುವುದು ; ಇನ್ನೂ ಬಳಕೆ ಯಲ್ಲಿರುವ ರೂಪಗಳನ್ನು ಉಪಯೋಗಿಸುವುದುಂ ; ಹಿಂದೆ ಇಲ್ಲದಿದ್ದರೂ ಈಚೆಗೆ ಹೊಸದಾಗಿ ಹುಟ್ಟಿರುವುಗಳಲ್ಲಿ, ಉತ್ತಮರಾಡುವ, ಎಲ್ಲಾ ಕಡೆಯೂ ಸಾಮಾನ್ಯವಾದ ವಿಧಿಬದ್ಧವಾದ ರೂಪಗಳನ್ನು ಸೇರಿಸಿಕೊಳ್ಳುವುದು. ಅತಿ ಪಾಂಡಿತ್ಯವನ್ನು ಬಿಡುವು ದಕ್ಕೆಷ್ಟೋ ಅಷ್ಟು ಹೊರತು, ಮಿಕ್ಕ ಭಾಗದಲ್ಲಿ ಗ್ರಾಮ್ಯವನ್ನೂ, ಸ್ವೇಚ್ಛಾಪ್ರವೃತ್ತಿ ಯನ್ನೂ ಒಪ್ಪಿಕೊಳ್ಳದೆ ತಡೆಯುವುದು. ಮುಖ್ಯ, ವಿದ್ಯಾರ್ಥಿಗಳು ಸಾಧಾರಣವಾಗಿ ಗ್ರಾಮ್ಯವನ್ನೂ ಪಾಂಡಿತ್ಯವನ್ನೂ ತಿರಸ್ಕರಿಸಿ ಯಾವಾಗಲೂ ಜನಸಾಮಾನ್ಯಕ್ಕೆ ಬರೆಯುತ್ತಿದ್ದೇವೆಂತಲೇ ಭಾವಿಸುತ್ತಾ, ಜನರು ಆಡುವ ಭಾಷೆಯ ಛಾಯೆಯನ್ನೇ ಹೆಗ್ಗುರುತಾಗಿಟ್ಟುಕೊಳ್ಳಬೇಕೆಂದು ಹೇಳಬಹುದು."[6]

ಶಬ್ದಕೋಶದಲ್ಲಿ ಪಡಿನೋಟ, ಮುಂಗುಡಿ, ಬಣ್ಣಿಸು ಮೊದಲಾದ ಹಳಗನ್ನಡ ರೂಪಗಳು ಬಳಕೆಗೆ ಅನರ್ಹ; ಆದರೆ ಎಲ್ಲರಿಗೂ ಅರ್ಥವಾಗುವ ಅರಿ, ಎಡೆ, ಗೆಲವು, ಹಲವು, ಹೊನ್ನು ಮುಂತಾದುವು ಆಗಬಹುದು. ರೂಢಿಯಲ್ಲಿಲ್ಲದ ಅರಾತಿ, ನಘ, ಶಿಖಿ ಇಂತಹ ಸಂಸ್ಕೃತ ಪದಗಳು ಕೂಡದು ; ಭೂಮಿ, ಕುಮಾರ, ಯುದ್ಧ ಇವೇ ಮೊದಲಾದುವು ಸಂಸ್ಕೃತಪಾದರೂ ಈಗಲೂ ಬಳಕೆಯಲ್ಲಿರುವ ಪದಗಳಾದ ಕಾರಣ ಆಗಬಹುದು. ಎದೆ, ಜೋಗಿ, ನೊಗ, ಬಸವ ಮೊದಲಾದ ತದ್ಭವಗಳು ಕನ್ನಡಕ್ಕೆ ಹೊಂದಿವೆಯಾದ್ದರಿಂದ ಆಗಬಹುದು ; ಅಮರ್ದು, ಹೊತ್ತಗೆ, ಮೊಗ ಇಂತಹ ತದ್ಭವಗಳಿಗಿಂತ ಅವುಗಳ ಸಂಸ್ಕೃತ ಮೂಲಗಳೇ ಶ್ರೇಯ.

ಇತರ ಭಾಷೆಗಳಿಂದ ಒಂದು ಭಾಷೆ ಶಬ್ದಗಳನ್ನು ಸ್ವೀಕರಿಸುವುದು "ಅಭಿಪ್ರಾಯವನ್ನು ಚೆನ್ನಾಗಿ ತಿಳಿದುಕೊಳ್ಳುವುದಕ್ಕೆ". ಹೀಗೆಂದು, ಯಾವುದೇ ಭಾಷೆಯ ಶಬ್ದಗಳನ್ನು ವಿವೇಚನೆಯಿಲ್ಲದೆ ಸ್ವೀಕರಿಸುತ್ತ ಹೋದರೆ ಅವು ಬಂದು 'ಕನ್ನಡವನ್ನು ಕೊಚ್ಚಿ ಹಾಕ'ಬಹುದು. "ಒಂದು ಕನಸಿಗೆ ಬೆಳಗಾಗಲಿಲ್ಲ ; ಒಂದು ಪೆಟ್ಟಿಗೆ ವಿಗ್ರಹವಾಗಲಿಲ್ಲ ; ಭಾಷೆ ಮಾತ್ರ ಒಂದು ಹೆಜ್ಜೆಗೆ ಸಂಪೂರ್ಣ ಪಾದೀತೇ ? ನಿಧಾನವಾಗಿ ಬೆಳೆಯಲು ಆತುರವೇನು ? ಹೊಸ ಮಾತುಗಳನ್ನು ನಿರ್ದಾಕ್ಷಿಣ್ಯವಾಗಿ ಪರೀಕ್ಷಿಸುತ್ತಾ, ಮೆಲ್ಲಗೆ ಒಗ್ಗಿ ಬಂದಹಾಗೆಲ್ಲಾ ಸೇರಿಸಿಕೊಳ್ಳುತ್ತಾ ಹೋಗೋಣ."[7]

---

೬. ಅದೇ, ಪು. ೨೫೦-೫೯.

೭. ಅದೇ, ಪು. ೨೬೨.

ಕನ್ನಡ ಶಬ್ದ ಸಾಮಗ್ರಿಯನ್ನೇ ಬಳಸಿ ಹೊಸ ಮಾತುಗಳನ್ನು ಕಟ್ಟುವ, ಹಳೆಯ ಮಾತುಗಳಿಗೆ ಹೊಸ ಅರ್ಥಗಳನ್ನು ಕಲ್ಪಿಸುವ ವಿಷಯದಲ್ಲಿ 'ಶ್ರೀ' ಅವರು ಕೊಟ್ಟಿರುವ ಸಲಹೆಗಳು ತೀರ ಸಾಧುವಾಗಿವೆ. ಗೆಜೆಟು, ಪ್ಲೇಗು, ಬೆಂಚು ಮೊದಲಾದ ಶಬ್ದಗಳು ಆಗಲೇ ಬಳಕೆಗೆ ಬಂದಿವೆ, ಒಪ್ಪಿಕೊಳ್ಳೋಣ. ಒಂದು ಶಬ್ದ "ಚನ್ನಾಗಿ ಹರಡಿದೆ ಎನ್ನುವುದಕ್ಕೆ ಹೆಂಗಸರು ಆಡುವುದೇ ಗೊತ್ತು." ಲಿಟರೇಚರ್. ಆಪ್ಷನಲ್. ಟೂರ್ನಮೆಂಟ್ – ಇಂತಹ ಪದಗಳಿಗೆ "ಸಮಾನ ಪದಗಳು ಸಿಕ್ಕುವುದು ಕಷ್ಟವಾದರೂ ಈ ಶಬ್ದಗಳನ್ನು ಗ್ರಂಥಕ್ಕೆ ಸೇರಿಸುವುದಕ್ಕಿಂತ ನಮ್ಮ ಭಾಷೆಯನ್ನೇ ಮೊದಲು ಬಿಟ್ಟುಬಿಡುವುದು ಮೇಲು." ಶಾಸ್ತ್ರ ವಿಷಯಕವಾದ ಪರಿಭಾಷೆಯ ಪದಗಳಲ್ಲಿ ಯಥಾವತ್ತಾದ ಸ್ವೀಕರಣ ಮಾಡಿಕೊಳ್ಳಲು 'ಶ್ರೀ'ಯವರ ಒಪ್ಪಿಗೆ ಇದೆ.

ವ್ಯಾಕರಣ ವಿಷಯಕ್ಕೆ ಬಂದರೆ ಅಲ್ಲಿಯೂ ಸಾಧು ಅಸಾಧು ರೂಪಗಳನ್ನು ವಿಸ್ತಾರವಾಗಿ ಚರ್ಚಿಸಿದ್ದಾರೆ. ಇಲ್ಲೆಲ್ಲ ಶ್ರೀ ಕ್ರಮಬದ್ಧ ಚಿಂತಕರಾಗಿ ಗೋಚರಿಸುತ್ತಾರೆ.

"ಕನ್ನಡ ದೇಶದಲ್ಲಿ ನೆಲೆಸಿರುವ ತೆಲುಗು. ತಮಿಳು ಭಾಷೆಗಳನ್ನಾಡುವ ಜನರು ಕನ್ನಡಿಗರಾಗಬೇಕು, ಕನ್ನಡಕ್ಕೆ ಹೊಂದಿಕೊಳ್ಳಬೇಕು, ಅದರ ಹೊಟ್ಟೆಯಲ್ಲಿ ಮುಳ್ಳಾಗಿ ನಿಲ್ಲಬಾರದು."[೮] – ಐವತ್ತು ವರ್ಷಗಳ ಹಿಂದಿನ ಅವರ ಮಾತು ಇಂದಿಗೂ ಎಷ್ಟು ಪ್ರಸ್ತುತ !

ಕನ್ನಡಲಿಪಿಯನ್ನು 'ಮುದ್ರಣ ದೃಷ್ಟಿ'ಗಾಗಿ ಮಾರ್ಪಡಿಸುವ ಉದ್ದೇಶದಿಂದ ಕನ್ನಡ ಸಾಹಿತ್ಯ ಪರಿಷತ್ತು ನೇಮಿಸಿದ್ದ ಸಮಿತಿಯ ಮುಖ್ಯಸ್ಥರಾಗಿ ಕೆಲವು ಮಾರ್ಪಾಟುಗಳನ್ನು 'ಶ್ರೀ' ಅವರು ತೋರಿಸಿಕೊಟ್ಟಿದ್ದಲ್ಲದೆ, 'ಕನ್ನಡದ ಬಾವುಟ' ಎಂಬ ಹೆಸರಿನ ತಮ್ಮ ಕವನವನ್ನು ೧೯೩೮ರಲ್ಲಿ ಆ ಮಾರ್ಪಾಟಾದ ಲಿಪಿಯಲ್ಲಿ ಅಚ್ಚುಮಾಡಿಸಿದರು.

ಭಾಷಾವೈಜ್ಞಾನಿಕ ಎಂದು ಕರೆಯಬಹುದಾದ ಒಂದು ಸಂಪ್ರಬಂಧವನ್ನು ಶ್ರೀಕಂಠಯ್ಯನವರು ಬರೆದಿದ್ದಾರೆ. 'ಪೂರ್ವದ ಹಳಗನ್ನಡ ಮತ್ತು ತಮಿಳು; ಕನ್ನಡ ಮೊದಲೊ ತಮಿಳು ಮೊದಲೊ ?' ಎಂಬ ಹೆಸರಿನ ಬರಹ (ಕ್ರಿ.ಶ. ೧೯೪೦) ಹಲವು ದೃಷ್ಟಿಗಳಿಂದ ಗಮನಾರ್ಹವಾದುದು. ಇದು ಅವರು ಕ್ರಿ.ಶ. ೧೯೪೦ರಲ್ಲಿ ತಿರುಪತಿಯಲ್ಲಿ ನಡೆದ ಅಖಿಲ ಭಾರತ ಪ್ರಾಚ್ಯ ಸಮ್ಮೇಳನದ ಕನ್ನಡ ಶಾಖೆಯಲ್ಲಿ ಇಂಗ್ಲಿಷ್‌ನಲ್ಲಿ ಮಾಡಿದ ಅಧ್ಯಕ್ಷ ಭಾಷಣ. (ಇದರ ಕನ್ನಡಾನುವಾದ ದೊರಕುವುದೇ ಹೊರತು ಮೂಲ ಇಂಗ್ಲಿಷ್ ದೊರಕುವುದಿಲ್ಲ). ಈ ಲೇಖನದ ಆಶಯವನ್ನು 'ಶ್ರೀ' ಅವರೇ ಆರಂಭದಲ್ಲಿ ಹೀಗೆ ಹೇಳುತ್ತಾರೆ –

---

೮. ಅದೇ, ಪು. ೩೦೪.

"ಪೂರ್ವದ ಹಳಗನ್ನಡವೂ ಹೀಗೆಯೇ ಸಂಧಿಕಾಲದ ರೂಪವಾಗಿದ್ದಲ್ಲಿ, ಅದರ ಹಿಂದಿನ ಕನ್ನಡವನ್ನು ಮೊದಲ ಕನ್ನಡವೆಂದು ಕರೆಯಬಹುದು. ಅದಕ್ಕೆ ಹಿಂದೆ ? ಪ್ರಥಮ ದ್ರಾವಿಡವೇ (Proto Dravidian) ? ತಮಿಳೆ ? ತಮಿಳಿನಿಂದ ಕನ್ನಡವೆ ? (ಮಲಯಾಳದಂತೆ). ಕನ್ನಡ ಮೊದಲೊ, ತಮಿಳು ಮೊದಲೊ ? ಇದು ಪ್ರಶ್ನೆ."

ಭಾಷೆ ಒಂದು ಘಟ್ಟದಿಂದ ಇನ್ನೊಂದಕ್ಕೆ ಸಂಕ್ರಮಣಗೊಂಡಾಗ, ಮತ್ತು ಕ್ರಮೇಣ ಇನ್ನೊಂದು ಅವಸ್ಥೆಗೆ ಬೆಳೆದಾಗ, ಭಾಷೆಯ ಹಳೆಯ ರೂಪಗಳು ಆಧುನಿಕ ಘಟ್ಟದಲ್ಲಿ ಪಳೆಯುಳಿಕೆಯ ರೂಪದಲ್ಲಿ ಉಳಿದಿರುತ್ತವೆ ಎಂಬ ಪ್ರಮೇಯ ವನ್ನಿಟ್ಟುಕೊಂಡು 'ಶ್ರೀ' ಮುಂದುವರಿಯುತ್ತಾರೆ. ಹಳಗನ್ನಡದಲ್ಲಿ ದೊರಕುವ ಪೂರ್ವದ ಹಳಗನ್ನಡದ ಪಳೆಯುಳಿಕೆಗಳಿಂದಲೂ ಪೂರ್ವದ ಹಳಗನ್ನಡದ ಶಾಸನ ರೂಪಗಳ ಸಹಾಯದಿಂದಲೂ (ಮತ್ತು ಹಳೆಯ ತಮಿಳಿನ ಸಹಾಯದಿಂದಲೂ) ಪೂ, ಹ, ಗ, ವನ್ನು ಪುನಾರಚಿಸಲು ಸಾಧ್ಯ. ಪೂ, ಹ, ಗ, ಕ್ಕಿಂತ ಮೊದಲಿನ ಕನ್ನಡ ದಲ್ಲಿ ಇದ್ದುದು ಅ, ಇ, ಉ, ಎ, ಒ ಮತ್ತು ಅವುಗಳ ದೀರ್ಘಗಳು – ಎಂದರೆ ಹತ್ತು ಸ್ವರಗಳು ಎಂಬ 'ಶ್ರೀ'ಯವರ ತೀರ್ಮಾನ ಈಗ ಒಪ್ಪಿತವಾದ ಸಂಗತಿ. ವ್ಯಂಜನ ಗಳಲ್ಲಿ ವರ್ಗ ಪ್ರಥಮ ತೃತೀಯ ಅನುನಾಸಿಕಗಳು (ಒಟ್ಟು ೧೫), ಯ, ರ, ಲ, ವ. ೞ, ೞ, ಸ, ಗಳು (ಒಟ್ಟು ೮) – ವ್ಯಂಜನಗಳು ಒಟ್ಟು ೨೩. ಸ್ವರ, ವ್ಯಂಜನಗಳು ಸೇರಿ ಒಟ್ಟು ೩೩ ಉಲಿಗಳು ಪೂರ್ವಗನ್ನಡದ, ಹಳಗನ್ನಡದ ಉಲಿಗಳು ಎನ್ನುತಾರೆ 'ಶ್ರೀ' ಅವರು. 'ಶ್ರೀ' ಅವರ ತೀರ್ಮಾನ ತೌಲನಿಕ ದ್ರಾವಿಡ ಭಾಷಾ ವಿಜ್ಞಾನದ ದೃಷ್ಟಿ ಯಿಂದಲೂ ಸಮ್ಮತವಾಗಿದೆ. ಇನ್ನೂ ಹಿಂದಕ್ಕೆ ಹೋದರೆ ಕನ್ನಡದಲ್ಲಿ ಗ, ಜ, ಡ. ದ, ಬ, ಗಳು ಇರಲಿಲ್ಲವೆಂಬ ಅವರ ನಿರ್ಣಯವೂ ಅಷ್ಟೇ ಸಾಧು.

ಮೂಲದ್ರಾವಿಡದಿಂದ ತೆಲುಗು ಮೊದಲು ಬೇರೆಯಾಯಿತು; ತಮಿಳು ಕನ್ನಡ ಸ್ವಲ್ಪಕಾಲ ಒಟ್ಟಿಗಿದ್ದು ಬಳಿಕ ಬೇರಾದುವು. ಪೂರ್ವ ಹಳಗನ್ನಡಕ್ಕೂ ತಮಿಳಿಗೂ ತೀರ ಹತ್ತಿರದ ಹೋಲಿಕೆ – ಒಂದರಿಂದ ಇನ್ನೊಂದಕ್ಕೆ ಕನಿಷ್ಠ ವ್ಯತ್ಯಾಸಗಳೊಂದಿಗೆ ಅನುವಾದಗಳನ್ನು ಮಾಡಬಹುದು. 'ಶ್ರೀ' ಅವರ ಪ್ರಕಾರ, ಮೇಲ್ನೋಟಕ್ಕೆ ತಮಿಳು ರೂಪಗಳು ಹಳೆಯವಾಗಿ ಕಾಣಿಸಿದರೂ, ಅನೇಕ ಕಡೆ ಕನ್ನಡದವೇ ಪೂರ್ವರೂಪಗಳು. ಅವರು ಕೊಟ್ಟಿರುವ ಉದಾಹರಣೆಗಳಲ್ಲಿ ಕೆಸಱು, ಗೆ(ಕೆ)ಯ್ದು, ಕಿವಿ ಈ ಕಡೆಗಳಲ್ಲಿ ಕನ್ನಡದ ಪದಾದಿಯ ವ್ಯಂಜನ ಕ್ – ಮೂಲದ್ರಾವಿಡದ್ದು. (ತಮಿಳು ಅದನ್ನು ಚ್ – ಆಗಿ ಮಾರ್ಪಡಿಸಿಕೊಂಡಿದೆ). ಕುಕಿಲ್ (ತಮಿಳು. ಕುಯಿಲ್,) ಬಾಗಿಲ್ (< ವಾಕಿಲ್, ತಮಿಳು, ವಾಯಿಲ್/ವಾಸಿಲ್) ಇಲ್ಲಿ ಕನ್ನಡದ ಎರಡನೇ ಅಕ್ಷರ – ಕ್ – ವೇ ಮೂಲವೆಂಬ 'ಶ್ರೀ' ಅವರ ವಾದವೂ ಸಮರ್ಪಕವೇ. 'ಶ್ರೀ' ಹೇಳುತ್ತಾರೆ – "ಈ ಕುರುಹುಗಳು, ಉಳಿಕೆಗಳು ಕನ್ನಡ ತಮಿಳಿನಿಂದ

ಹುಟ್ಟಿಲ್ಲ. ಕನ್ನಡವೇ ಮೊದಲೆಂದು ತೋರಿಸುತ್ತವೆ."[೯] ಈ ಮಾತನ್ನು 'ಶ್ರೀ' ಅವರು ಯಾವ ಅರ್ಥದಲ್ಲಿ ತೆಗೆದುಕೊಂಡಿದ್ದರೋ ತಿಳಿಯದು. ಅದು ಇರುವಂತೆಯೇ ಹೇಳುವುದಾದರೆ, ಅವರ ನಿಲುವು ಸರಿಯಾದುದಲ್ಲವೆನ್ನಬೇಕಾಗುತ್ತದೆ. ಭಾಷಾ ವಿಜ್ಞಾನವು, ತಮಿಳು ಕನ್ನಡಗಳೆರಡೂ ಪ್ರಾಚೀನಗಳಾದರೂ, ತಮಿಳು ಹೆಚ್ಚು ಪ್ರಮಾಣದಲ್ಲಿ ಮೂಲರೂಪಗಳನ್ನು ಉಳಿಸಿಕೊಂಡಿದೆ, ಕನ್ನಡವೂ ತಕ್ಕಮಟ್ಟಿನ, ಆದರೆ ಕಡಮೆ ಪ್ರಮಾಣದಲ್ಲಿ ಮೂಲರೂಪಗಳನ್ನು ಉಳಿಸಿಕೊಂಡಿದೆಯೆಂಬಷ್ಟನ್ನು ಒಪ್ಪಿಕೊಂಡಿದೆ.'ಶ್ರೀ'ಯವರ ಬರಹವು ಮೂಲದ್ರಾವಿಡದ ಅಧ್ಯಯನದಲ್ಲಿ ಕನ್ನಡವನ್ನು ಗಂಭೀರವಾಗಿ ಲಕ್ಷಿಸಬೇಕೆಂದು ಒತ್ತಿ ಹೇಳಿದುದಲ್ಲದೆ, ಅದರಲ್ಲಿ ಕೆಲವೆಡೆ ತಮಿಳಿಗಿಂತ ಹೆಚ್ಚು ಪ್ರಾಚೀನ ರೂಪಗಳಿರುವುದನ್ನು ತೋರಿಸಿಕೊಟ್ಟಿತು : ಇದು 'ಶ್ರೀ'ಯವರ ಮೇಲ್ಕಂಡ ಬರಹದ ಕಾಣಿಕೆ. 'ಶ್ರೀ'ಯವರಿಗೆ ಭಾಷಾವಿಜ್ಞಾನದಲ್ಲಿ ಇದ್ದ ಸೂಕ್ಷ್ಮ ಒಳನೋಟಗಳಿಗೆ, ಅಪಾರ ವ್ಯುತ್ಪತ್ತಿಗೆ, ತೌಲನಿಕ ದೃಷ್ಟಿಗೆ ಮೇಲ್ಕಂಡ ಸಂಪ್ರಬಂಧ ಒಳ್ಳೆಯ ಸಾಕ್ಷಿಯಾಗಿದೆ.

೯. ಅದೇ, ಪು. ೩೨೩.

# ಇಂಗ್ಲಿಷ್ ಗೀತೆಗಳು : ಒಂದು ವಿವೇಚನೆ

– ಚಿ. ನ. ಮಂಗಳಾ

೧೯೫೪-೫೭. ನಾನು ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಆನರ್ಸ್ ವಿದ್ಯಾರ್ಥಿನಿಯಾಗಿದ್ದೆ. ತರಗತಿಯಲ್ಲೊಂದು ದಿನ ಚರ್ಚೆ ಪ್ರಾರಂಭವಾಗಿತ್ತು. ಆಧುನಿಕ ಆಂಗ್ಲ ಗದ್ಯದ ಪ್ರವರ್ತಕ ಯಾರು? ಆಂಗ್ಲ ಸಾಹಿತ್ಯದ ಸುವರ್ಣ ಯುಗವೆನಿಸಿದ ಮೊದಲನೆ ಎಲಿಜಬೆತ್ ಕಾಲದಲ್ಲಿ ಗದ್ಯ ಇರಲಿಲ್ಲವೆ ? ಇತ್ತು. ಬೇಕನ್, ಬೆನ್ ಜಾನ್‌ಸನ್, ಬ್ರೌನ್, ಬರ್ಟನ್, ಸರ್ ವಾಲ್ಟರ್ ರ್‍ಯಾಲೆ ಇವರು ಕಾವ್ಯಮಯ ಗದ್ಯದ ಪಥ ಬಿಟ್ಟು ಸುಗಮವಾಗಿ ಓದಿಸಿಕೊಂಡು ಹೋಗುವ ಗದ್ಯಪ್ರಧಾನ ಗದ್ಯ ಬರೆಯಲಿಲ್ಲವೆ ? ಹಾಗಾದರೆ ಆಂಗ್ಲ ಗದ್ಯದ ಹೊಸತನಕ್ಕೆ ನಾಂದಿ ಹಾಡಿದವನು ಬೇಕನ್ ತಾನೆ ?

ಬೇಕನ್ ಆಧುನಿಕ ಆಂಗ್ಲ ಗದ್ಯವನ್ನು ಹದಗೊಳಿಸಿದವರಲ್ಲಿ ಆದ್ಯ ನಿಜ. ಆದರೆ ಅವನು ಪ್ರವರ್ತಕನಲ್ಲ. ಒಂದು ಪರಂಪರೆಯ ನಿರ್ಮಾಪಕನಲ್ಲ. ಆದ್ದರಿಂದಲೇ ಆಧುನಿಕ ಆಂಗ್ಲ ಗದ್ಯದ ಮಾತು ಬಂದರೆ ಗದ್ಯ ಪರಂಪರೆಯ ನಿರ್ಮಾಪಕನ, ಗದ್ಯ ಯುಗದ ಪ್ರವರ್ತಕನ ಸ್ಥಾನ ಫ್ರಾನ್ಸಿಸ್ ಬೇಕನ್ನನಿಗಲ್ಲದೆ ಜಾನ್ ಡ್ರೈಡನ್ನನಿಗೇ ಮೀಸಲು. ಡ್ರೈಡನನ್ನಿಗಿಂತ ಮೊದಲು ಏಬ್ರಹ್ಯಾಂ ಕೌಲಿ ಹೊಸ ರೀತಿಯ ಗದ್ಯ ಬರೆದನಾದರೂ ಆಧುನಿಕ ಆಂಗ್ಲ ಗದ್ಯದ ಅಧ್ವರ್ಯು ಡ್ರೈಡನ್.

೧೯೫೪ರಲ್ಲಿ ಇಂಗ್ಲಿಷ್ ಸಾಹಿತ್ಯ ತರಗತಿಯಲ್ಲಿ ನಡೆದ ಚರ್ಚೆಯಂತೆಯೇ ಆಗಿಂದಾಗ್ಗೆ ಉಳಿದ ಭಾಷಾಸಾಹಿತ್ಯಗಳ ಬಗ್ಗೆಯೂ ಚರ್ಚೆ ನಡೆಯುತ್ತಿರುತ್ತದೆ.

ಬಿ. ಎಂ. ಶ್ರೀಯವರ ಜನ್ಮಶತಮಾನೋತ್ಸವವನ್ನಾಚರಿಸುತ್ತಿರುವ ಕಾಲಕ್ಕೆ ಕೆಲವೊಂದು ಪ್ರಶ್ನೆಗಳು ಸಹಜವಾಗಿಯೇ ವಿಮರ್ಶಕರನ್ನು ಕಾಡುತ್ತವೆ.

ಕನ್ನಡ ಸಾಹಿತ್ಯದಲ್ಲಿ ನವೋದಯಕ್ಕೆ ನಾಂದಿ ಹಾಡಿದವರು ಯಾರು ? ಬಿ. ಎಂ. ಶ್ರೀ. ಅವರೋ ಪಂಜೆಯವರೋ ? ಪಂಜೆಯವರು ಆದ್ಯರಲ್ಲಿ ಒಬ್ಬರು ನಿಜ. ಆದರೆ ಡ್ರೈಡನ್ ಯಾವ ಕಾರಣಕ್ಕಾಗಿ ಒಂದು ಪರಂಪರೆಯ ನಿರ್ಮಾಪಕನೋ

ಅಂಥದೇ ಕಾರಣಕ್ಕಾಗಿ ಬಿ. ಎಂ. ಶ್ರೀ. ಅವರು ನವೋದಯದ ಅಧ್ವರ್ಯು : ಪರಂಪರೆಯ ಪ್ರವರ್ತಕ.

ಈ ಕಾರಣಕ್ಕಾಗಿಯೇ ಬಿ. ಎಂ. ಶ್ರೀ. ಅವರ ಇಂಗ್ಲಿಷ್ ಗೀತೆಗಳು ಆಧುನಿಕ ಕನ್ನಡ ಸಾಹಿತ್ಯದ ಮೊದಲ ಮೈಲಿಗಲ್ಲು. ನವೋದಯ ಕಾಲದ 'ನಾಂದಿ' ಗ್ರಂಥ.

ಇಂಗ್ಲಿಷ್ ಗೀತೆಗಳನ್ನು ನಾನು ಮೊದಲು ಓದಿದ್ದು, ನಾನು ಇಂಗ್ಲಿಷ್ ಆನರ್ಸ್ ವಿದ್ಯಾರ್ಥಿನಿಯಾಗಿದ್ದಾಗ. ಆದರೆ ಇಂಗ್ಲಿಷ್ ತರಗತಿಗಳಲ್ಲಲ್ಲ. ಕನ್ನಡ ಮೈನರ್ ತರಗತಿಯಲ್ಲಿ – ಪೂಜ್ಯ ವಿ. ಸೀ. ಅವರ ಶಿಷ್ಯಳಾಗಿ. ಇದನ್ನು ಹೇಳಲು ಕಾರಣವಿದೆ. ವಿ. ಸೀ. ಅವರಲ್ಲದೆ ಇನ್ನು ಯಾರಾದರೂ ಅಧ್ಯಾಪಕರು 'ದುಃಖಸೇತು'ವನ್ನು ಓದಿ ಹೇಳಿದ್ದರೆ ನಾನು ಇಂಗ್ಲಿಷ್ ಗೀತೆಗಳ ಬಗೆಗೆ ಈಗ ಬೆಳೆಸಿಕೊಂಡಿರುವ ಒಂದು ರೀತಿಯ ವೈಯಕ್ತಿಕ ಒಲವನ್ನು ಬೆಳೆಸಿಕೊಳ್ಳುತ್ತಿದ್ದೆನೋ ಇಲ್ಲವೊ. ಆದರೆ ತರಗತಿಯಲ್ಲಿ ಮೊದಲ ದಿನವೇ ವಿ. ಸೀ. ದುಃಖಸೇತುವನ್ನು ಓದಿದ ರೀತಿ, ಹೆಣ್ಣುಮಕ್ಕಳ ಬಗೆಗೆ ಕವಿಯ ಅನುಕಂಪ, ಆ ಅನುಕಂಪದ ಅಭಿವ್ಯಕ್ತಿಯಾಗಿ ಮೂಡಿಬಂದ ಕವನದ ಸಾಲುಗಳು, ಕಾವ್ಯ ಜೀವನದ ಪ್ರತಿಬಿಂಬ ಮಾತ್ರವಲ್ಲ ಅದು ಕವಿ ಮನೋಧರ್ಮದ ಬಿಂಬ ಎಂಬುದರ ಅರಿವು, ಇವು ನನಗಾದ ಕಾವ್ಯಾನುಭವ. ಕಾವ್ಯದ ಬಗೆಗೆ ಲಕ್ಷಣ ಗ್ರಂಥಗಳು ಏನೇ ಹೇಳಲಿ ವಿಮರ್ಶಕರು ಏನೇ ಬರೆಯಲಿ 'ಕಾವ್ಯ'ದ ಓದು ಬರಹ ಎರಡೂ ಒಂದು ಆಂತರಿಕ ರಸಾನುಭವ ಎನ್ನುವುದು ನನ್ನ ದೃಢವಾದ ನಂಬಿಕೆ. ಹೊಸಗನ್ನಡ ಕಾವ್ಯದ ಕೈಮರ 'ಇಂಗ್ಲಿಷ್ ಗೀತೆಗಳು' ನನ್ನ ಕನ್ನಡ ಸಾಹಿತ್ಯಾಭ್ಯಾಸದ ದಾರಿದೀಪವೂ ಆಯಿತು. ಅಲ್ಲದೆ ಇನ್ನೊಂದು ವಿಶೇಷವೆಂದರೆ ಕನ್ನಡ ಸಾಹಿತ್ಯದ ಬಗ್ಗೆ ನಾನು ವಿಶೇಷ ಒಲವನ್ನು ಬೆಳೆಸಿಕೊಳ್ಳಲು ಕಾರಣವಾದ, ಕನ್ನಡದಲ್ಲಿ ಕ್ರಿಯಾತ್ಮಕ, ರಚನಾತ್ಮಕ ಕೆಲಸಕ್ಕೆ ನನ್ನನ್ನು ಪ್ರೇರೇಪಿಸಿದ ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘವೇ ಶ್ರೀ ಅವರ ಇಂಗ್ಲಿಷ್ ಗೀತೆಗಳನ್ನು ಮೊದಲು ಪ್ರಕಟಿಸಿದ್ದು ಎಂಬ ವಿಷಯ.

ಎ. ಆರ್. ಕೃಷ್ಣಶಾಸ್ತ್ರಿಗಳೂ, ಟಿ. ಎಸ್. ವೆಂಕಣ್ಣಯ್ಯನವರೂ ೧೯೨೬ರಲ್ಲಿ ಇಂಗ್ಲಿಷ್ ಗೀತೆಗಳನ್ನು ಕರ್ನಾಟಕ ಸಂಘದಿಂದ ಪ್ರಕಟಿಸಿದರು. ಕನ್ನಡದ ಮುನ್ನಡೆಯಲ್ಲಿ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ ಪಾತ್ರ ಹಿರಿದು.

ಆಂಗ್ಲ ಸಾಹಿತ್ಯದಿಂದ ಭಾರತೀಯರು 'ತಂದುಕೊಂಡು' ತಮ್ಮದನ್ನಾಗಿಸಿಕೊಂಡ ಸಾಹಿತ್ಯ ಪ್ರಕಾರಗಳಲ್ಲಿ 'ಭಾವಗೀತೆ'ಯೂ ಒಂದು. ಆಂಗ್ಲ ಸಾಹಿತ್ಯದ ಪರಿಚಯವಾಗುವುದಕ್ಕೆ ಮೊದಲು ಕನ್ನಡದಲ್ಲಿ ಭಾವಗೀತಾತ್ಮಕ ರಚನೆಗಳು ಹುದುಗಿಕೊಂಡಿದ್ದರೂ, ನಮ್ಮದಲ್ಲದ ಒಂದು ಸಾಹಿತ್ಯ ಪ್ರಕಾರವನ್ನು ಬಳಕೆಗೆ ತಂದು ನಮ್ಮಲ್ಲಿಯೇ ಹೊಸ ಪ್ರಯೋಗಗಳನ್ನು ಮಾಡುವುದಕ್ಕೆ ಮೊದಲು

ಇಂಗ್ಲಿಷ್ ಕವನಗಳನ್ನು "ಮೂಲದ ನಡೆ, ಲಯಗತಿಗೆ ಹತ್ತಿರ ಹೊಂದುವಂತೆ ನಮ್ಮ ಜಾಯಮಾನ"ಕ್ಕೆ ಒಗ್ಗಿಸುವ ಸಾಹಸದ ಕಾರ್ಯಕ್ಕೆ ಕೈ ಹಾಕಿದ ಕೆಚ್ಚೆದೆ ಅವರದು. ಈ ಕಾರ್ಯಕ್ಕೆ ಅವರು 'ಭಾವಗೀತೆ'ಗಳನ್ನು ಮೊದಲು ಆಯ್ದುಕೊಂಡದ್ದು ತೀರ ಸಮಂಜಸ. ನುಡಿ ಬೇರೆಯಾಗಿರಬಹುದು. ನಡೆ ಬೇರೆಯಾಗಿರಬಹುದು. ಆದರೆ ಮಾನವನ ಅಗತ್ಯಗಳು, ಪ್ರವೃತ್ತಿಗಳು, ಭಾವನೆ ಕಲ್ಪನೆಗಳು, ರಾಗದ್ವೇಷಗಳು ವಿಶ್ವದಲ್ಲೆಲ್ಲಾ ಒಂದೆ. ದುಃಖಸೇತುವಿನ ಹೆಣ್ಣು ಯಾವ ದೇಶದವಳಾದರೇನು? ಯಾವ ಭಾಷೆ ಮಾತಾಡಿದರೇನು, ಅವಳು ಹೆಣ್ಣು ಎಂಬುದು ಮಾತ್ರ ನಿತ್ಯಸತ್ಯ. ವಾತ್ಸಲ್ಯ, ಪ್ರೇಮ, ಸೌಹಾರ್ದ, ದ್ವೇಷ, ಅಸೂಯೆ ಇವುಗಳ ಭಾಷೆ ಬೇರೆಯಾದರೂ, ವಾತಾವರಣ ಬೇರೆಯಾದರೂ, ರೂಪ ಬೇರೆಬೇರೆಯದಾದರೂ ಅಂತರಂಗದ ಮೂಲತತ್ವ ಒಂದೆ. ಮಾನವರು ಸಾವಿರ ಸಂಖ್ಯೆಯಲ್ಲಿದ್ದರೂ ಮಾನವ ಸ್ವರೂಪ ಒಂದೆ. ಆದ್ದರಿಂದಲೇ ಈ ಮೂಲ ಮಾನವ ಸ್ವರೂಪವನ್ನು ಪ್ರತಿನಿಧಿಸುವ ಕಾವ್ಯ ವಿಶ್ವವ್ಯಾಪಕ. ಸಾಹಿತ್ಯದ ಈ ವಿಶ್ವವ್ಯಾಪಕ ಶಕ್ತಿಗೆ ಅತ್ಯುತ್ತಮ ಉದಾಹರಣೆ ಭಾವಗೀತೆ. ಬೇರೆ ಬೇರೆ ಸಾಹಿತ್ಯ ಪ್ರಕಾರಗಳನ್ನು ಕನ್ನಡೀಕರಿಸುವ ಮೊದಲು ಆಚಾರ್ಯ ಶ್ರೀ ಅವರು 'ಇಂಗ್ಲಿಷ್ ಗೀತೆ'ಗಳನ್ನು ಬರೆದದ್ದು ಔಚಿತ್ಯಪೂರ್ಣ. ಅಂತೆಯೇ ಶ್ರೀ ಸಾಹಿತ್ಯ ಸಂಪುಟಕ್ಕೆ ಪರಿಚಯ ಕಾಣಿಕೆಯನ್ನೊದಗಿಸಿರುವ ವಿ. ಸೀ. ಅವರು ಮೊದಲಲ್ಲೇ ಒಂದು ಮಾತು ಹೇಳಿದ್ದಾರೆ. ಅದೂ ಗಮನಾರ್ಹ. "ನಾವು ೧೯೧೭ರಲ್ಲಿ ಮೈಸೂರಿಗೆ ಮೊದಲನೆಯ ವರ್ಷದ ಬಿ. ಎ. ತರಗತಿಗೆ ಹೋಗುವ ಹೊತ್ತಿಗೆ ಅವರಿಗೆ ಪತ್ನಿವಿಯೋಗವಾಗಿತ್ತು (ಸು. ೧೯೧೪). ದೇವಿಯಮ್ಮ ಎಂಬ ಹೆಸರಿದ್ದ ಆಕೆಯಲ್ಲಿ ಅವರಿಗೆ ಅತಿಶಯವಾದ ಪ್ರೇಮವಿತ್ತೆಂದೂ ಆ ಪ್ರೀತಿಯ ಪ್ರಕಾಶಕವಾಗಿ 'ಇಂಗ್ಲಿಷ್ ಗೀತೆ'ಗಳಲ್ಲಿ ಕೆಲವನ್ನು ಬರೆದರೆಂದೂ ಕೇಳಿದ್ದೇನೆ." ವಿಯೋಗದ ದುಃಖ ಭಾವಗೀತೆಯಾಗಿ ಹರಿದುದರಲ್ಲಿ ಆಶ್ಚರ್ಯವಿಲ್ಲ.

The harvest truly is plenteous
but the labourers are few.
ಬೆಳೆಯೇನೋ ಬೇಕಾದ ಹಾಗಿದೆ,
ಕುಯ್ಯುವರು ಕಡಮೆ.

ಬೇಕಾದ ಹಾಗೆ ಬೆಳೆದಿದ್ದ ಹುಲುಸಾದ ಬೆಳೆಯನ್ನು ಕನ್ನಡಿಗರಿಗಾಗಿ ಕುಯ್ಯಲು ಹೊರಟವರು ಕುಯಿಲು ಮಾಡಿ ಹೊಸ ರುಚಿಯ ಅಡುಗೆಯನ್ನು ಕನ್ನಡಿಗರಿಗೆ ಉಣಬಡಿಸಿದವರು ಶ್ರೀ. ಪ್ರೊ॥ ಎಸ್. ಅನಂತನಾರಾಯಣ ಅವರು ತಮ್ಮ 'ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ'. ಗ್ರಂಥದಲ್ಲಿ ಹೇಳಿರುವ ಹಾಗೆ "ಸಮಗ್ರ ಹೊಸತನವನ್ನು ಮೈಗೂಡಿಸಿಕೊಂಡು ತುಂಬಿಕೊಂಡು ಬಂದ ಕೃತಿ" ಇಂಗ್ಲಿಷ್ ಗೀತೆಗಳು.

ಇಂಗ್ಲಿಷ್ ಗೀತೆಗಳಲ್ಲಿ ಒಟ್ಟು (ಮೊದಲ ಕವನ ಶ್ರೀ ಅವರ 'ಕಾಣಿಕೆ' ಬಿಟ್ಟರೆ) ೬೫ ಕವನಗಳಿವೆ. ಶ್ರೀ ಅವರೇ ಹೇಳಿರುವಂತೆ ಇಲ್ಲಿರುವ ಕವನಗಳೆಲ್ಲಾ "ಇಂಗ್ಲಿಷ್ ಕಾವ್ಯಮಾಲೆಯ ನಾಯಕರತ್ನ"ಗಳಲ್ಲ. ಉತ್ತಮರಾದ ಕವಿಗಳೂ ಇಲ್ಲಿ ಎಲ್ಲರೂ ಇಲ್ಲ. ಆದರೆ ಆಂಗ್ಲ ಕಾವ್ಯವನ್ನು ಓದುತ್ತಿರುವಾಗ ಶ್ರೀ ಅವರ "ಮನಸ್ಸಿಗೊಪ್ಪಿ" ಅವರ "ಕೈಮೀರದುವಾಗಿ" ಕಂಡು ಬಂದ ಗೀತಗಳಿವು. "ಇಂಗ್ಲಿಷ್ ಕವಿಗಳು ಶೃಂಗಾರರಸವನ್ನು ಹೇಗೆ ಗಂಭೀರವಾಗಿಯೂ ಸೂಕ್ಷ್ಮವಾಗಿಯೂ ಸ್ವಾಭಾವಿಕವಾಗಿಯೂ ತೋರಿಸುವರೆಂಬುದನ್ನು ತಿಳಿಸುವುದಕ್ಕಾಗಿ ಆ ಬಗೆಯ ಗೀತಗಳು ಕೊಂಚ ಹೆಚ್ಚಾಗಿ ಬಂದಿವೆ" ಎಂದಿದ್ದಾರೆ ಕವಿ. ಅದುವರೆಗೂ ಕನ್ನಡ ಕವಿಗಳ ಮೇಲೆ ಹಿಡಿತವನ್ನಿಟ್ಟಿದ್ದ ಸಂಸ್ಕೃತ ಕವಿಗಳ ಶೃಂಗಾರ ಕಾವ್ಯದ (ಬಹುಮಟ್ಟಿನ) ಭಾವಾತಿರೇಕಕ್ಕೆ ಒಂದು ರೀತಿಯ antidote ಮಾದರಿಯಲ್ಲಿ ಈ ಶೃಂಗಾರ ಗೀತೆಗಳು ಕವಿಯನ್ನು ಆಕರ್ಷಿಸಿದವೇನೋ ಎನಿಸುತ್ತದೆ.

ಇಂಗ್ಲಿಷ್ ಗೀತೆಗಳಲ್ಲಿನ ಕವನಗಳು ಸಹಜವಾಗಿಯೇ ಷೇಕ್ಸ್‌ಪಿಯರಿನಿಂದ ಆರಂಭವಾಗುತ್ತವೆ.

ಆದರೆ ಷೇಕ್ಸ್‌ಪಿಯರನ ಎರಡು ಕವನ, ನ್ಯಾಷ್(೧೫೬೭-೧೬೦೧)ನ ಒಂದು ಕವನ ಬಿಟ್ಟರೆ ಕವಿಗೆ ಒಮ್ಮೆಗೇ ಮೆಚ್ಚುಗೆಯಾಗುವುದು ಹತ್ತೊಂಬತ್ತನೆಯ ಶತಮಾನದ ರೊಮ್ಯಾಂಟಿಕ್ ಕವಿಗಳೇ. ನ್ಯಾಷ್ ಆದಮೇಲೆ ಮುಂದಿನ ಕವಿ ವರ್ಡ್ಸ್‌ವರ್ತ್. ಮಿಲ್ಟನ್ ಆಗಲಿ, ಅವನ ಕಾಲದವರಾಗಲಿ, ಡ್ರೈಡನ್, ಪೋಪ್ ಇವರಾಗಲಿ ಇಲ್ಲಿಲ್ಲ. ಕವಿ ತಮ್ಮ ಕವನ ಸಂಕಲನವನ್ನು 'ಇಂಗ್ಲಿಷ್ ಗೀತೆಗಳು' ಎಂದು ಕರೆದಿದ್ದರೂ ಇದು ಆಂಗ್ಲ ಕಾವ್ಯದ ಪ್ರಾತಿನಿಧಿಕ ಸಂಕಲನವೆಂದು ಯಾರೂ ಭಾವಿಸಬಾರದು. ಇಲ್ಲಿರುವ ೬೫ ಕವನಗಳಲ್ಲಿ ಸಿಂಹಪಾಲು ಹತ್ತೊಂಬತ್ತನೆಯ ಶತಮಾನಕ್ಕೆ ಸೇರಿದವು. ಹತ್ತೊಂಬತ್ತನೆಯ ಶತಮಾನ ಆಂಗ್ಲ ಸಾಹಿತ್ಯದ ಮಹತ್ತರ ಯುಗಗಳಲ್ಲಿ ಒಂದು. ಶತಮಾನದ ಮೊದಲನೆಯ ಭಾಗ ಕಂಡ ಫ್ರಾನ್ಸಿನ ಮಹಾಕ್ರಾಂತಿ, ಶತಮಾನದ ಎರಡನೆಯ ಭಾಗ ಕಂಡ ಔದ್ಯೋಗಿಕ ಕ್ರಾಂತಿ ಇವೆರಡೂ ಬದುಕಿನ ಧ್ಯೇಯ ಧೋರಣೆಗಳನ್ನು ದಿಕ್ಕುದಿಸೆಯನ್ನೂ ಬದಲಾಯಿಸಿದವು. ಈ ಶತಮಾನದ ಆದಿಯಲ್ಲಿ ಭಾರತೀಯ ಸಾಹಿತ್ಯ ಹಾಗೂ ಸಾಂಸ್ಕೃತಿಕ ಪರಿಸರದ ಮೇಲೆ ಹತ್ತೊಂಬತ್ತನೆಯ ಶತಮಾನದ ಪ್ರಭಾವ ಅಪಾರ. ಕನ್ನಡ ಸಾಹಿತ್ಯದಲ್ಲಿನ ನವೋದಯಕ್ಕೆ ಆಂಗ್ಲ ಸಾಹಿತ್ಯದ ರೊಮ್ಯಾಂಟಿಕ್ ಯುಗ ನಾಂದಿಯಾಯಿತು. ಅದೇ 'ಶ್ರೀ' ಕಾವ್ಯದ ನಾಂದಿಯೂ ಹೌದು.

ಇಂಗ್ಲಿಷ್ ಗೀತೆಗಳಲ್ಲಿ ವರ್ಡ್ಸ್‌ವರ್ತ್, ಷೆಲ್ಲಿ, ಸ್ಕಾಟ್, ಟೆನಿಸನ್, ಕೂಪರ್, ಕ್ಯಾಂಪ್‌ಬೆಲ್, ಥಾಮ್ಸನ್, ಸದೆ, ಬ್ರೌನಿಂಗ್, ಬರ್ನ್ಸ್, ಕೋಲ್‌ರಿಜ್, ಬೈರನ್ ಇವರ ಕವನಗಳನ್ನು ಪ್ರಮುಖವಾಗಿ ನೋಡುತ್ತೇವೆ. ಇವರಲ್ಲೂ ವರ್ಡ್ಸ್‌ವರ್ತ್,

ಷೆಲ್ಲಿ, ಬರ್ನ್ಸ್ ಇವರ ಬಗ್ಗೆ ಕವಿಗೆ ಹೆಚ್ಚಿನ ಒಲವು. ಆದರೆ ಇಡೀ ಸಂಕಲನದ ವೈವಿಧ್ಯವೆಂದರೆ, ಇಂಗ್ಲೆಂಡನ್ನು ಕುರಿತ ಕೆಲವೊಂದು ನಿರ್ದಿಷ್ಟ ಕವನಗಳನ್ನು ಬಿಟ್ಟರೆ ಬೇರೆ ಯಾವ ಕವನವೂ ಅನುವಾದದಂತೆ ಕಾಣುವುದಿಲ್ಲ. ಭಾಷೆ, ಭಾವ, ಬಂಧ ಮೂರರಲ್ಲೂ ಶ್ರೀ ಅವರು ಸ್ವಂತಿಕೆಯನ್ನು ಸಾಧಿಸಿದ್ದಾರೆ. ಬಜಾರಿನಲ್ಲಿ ಕೊಂಡುತಂದ ತಿಂಡಿ ತೀರ್ಥ ಹಣ್ಣು ಹಂಪಲು ಉಂಡವನ ಮೈಯಲ್ಲಿ ರಕ್ತವಾಗುವಂತೆ ತಾವು ಓದಿ ಅನುಭವಿಸಿ ಆನಂದಿಸಿದ ಇಂಗ್ಲಿಷ್ ಕಾವ್ಯ ಶ್ರೀ ಅವರ ಮನಸ್ಸು ಹೃದಯ ತುಂಬಿ ಕನ್ನಡದ ಸತ್ವ ತುಂಬಿಕೊಂಡು ಕನ್ನಡ ಕಾವ್ಯವಾಗಿದೆ. ಉದಾಹರಣೆಗೆ ನೋಡಿ, **'ಮಾದ–ಮಾದಿ'**. ರಾಬರ್ಟ್ ಬರ್ನ್ಸನ Duncan Gray ಇಲ್ಲಿ ಮಾದ. ಮಾದನ ಜೊತೆಗೆ ಇಲ್ಲಿ ಮಾದಿಯೂ ಇದ್ದಾಳೆ.

ಬೇಟಕಾರ ಬಂದ ಮಾದ
ಹಹ್ಹ ಏನು ಬೇಟವೊ !
ಬೇಡಿ ಸತ್ತು ಸುಣ್ಣವಾದ
ಹಹ್ಹ ಏನು ಬೇಟವೋ !
ಮಾದ ಕತ್ತನೊಲೆದುದೇನು !
ಅತ್ತ ಇತ್ತ, ಸಿಡಿದುದೇನು !
ಹಹ್ಹ ಏನು ಬೇಟವೊ !
ಕಯ್ಯ ಮುಗಿದ, ಕಾಲ ಹಿಡಿದ
ಹಹ್ಹ ಏನು ಬೇಟವೊ !
ರೊಯ್ಯನೊದೆಯೆ, ಹಲ್ಲ ಕಡಿದ,
ಹಹ್ಹ ! ಏನು ಬೇಟವೊ !
ಬೆಚ್ಚಗುಸಿರ ಬಿಟ್ಟ ಮಾದ,
ಅತ್ತ, ಕಂಗೆಡುತ್ತ ಸೀದ,
ಹೊಳೆಯ ಬೀಳಲೆಂದು ಹೋದ !
ಹಹ್ಹ ಏನು ಬೇಟವೊ !

ಬರ್ನ್ಸ್ ಕಾವ್ಯದ ಎಲ್ಲ ಗುಣಗಳೂ ಇಲ್ಲಿವೆ. ಪ್ರೇಮದ ಕಥೆ. ಹಿಗ್ಗಿನ ನಡೆ, ಕವಿಯ ಖುಷಿ, ಹೆಣ್ಣಿನ ಸೊಕ್ಕು, ಗಂಡಿನ ಪೇಚು – ಆದರೆ ಎಲ್ಲೂ ಮಾದ ಮಾದಿ Duncan Grayಯ ಅನುವಾದವಾಗಿ ಮಾತ್ರ ಉಳಿದಿಲ್ಲ. ಕನ್ನಡಿಗರ ಆಡುಭಾಷೆ ಸರಾಗವಾಗಿ ಸುಲಲಿತವಾಗಿ ಕಾವ್ಯವಾಗಿದೆ. 'ಸತ್ತು ಸುಣ್ಣವಾದ' 'ಜರ್ಬು ನನಗೆ ಹೆಣ್ಣಿಗೇಕೆ ?' 'ಚಿನ್ನದಂಥ ಹುಡುಗ ಮಾದ' ಈ ಬಗೆಯ ಆಡುನುಡಿ 'ಶ್ರೀ' ಕಾವ್ಯಕ್ಕೆ ವಿಶಿಷ್ಟವಾದ ಸತ್ವ ತಂದೊದಗಿಸಿದೆ. ಇದು ಹೊಸ ಕನ್ನಡ ಕಾವ್ಯಕ್ಕೆ 'ಶ್ರೀ' ಅವರು ಹಾಕಿಕೊಟ್ಟ ಮಾರ್ಗ. ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯದಲ್ಲಿ ಶ್ರೀ ಅವರು ಹೇಳಿರುವ ಮಾತಗಳು ಗಮನಾರ್ಹ. "ಭಾಷೆಯ ವಿಚಾರದಲ್ಲಿ ಹೊಸಗನ್ನಡವನ್ನೇ ಬರೆಯಬೇಕು. ಹಳಗನ್ನಡದಲ್ಲಿ ನನಗೂ ಅಕ್ಕರೆಯುಂಟು. ಆದರೆ ಸದ್ಯಕ್ಕೆ ಜನರಿಗೆ

ತಿಳಿಯದ ಭಾಷೆಯಲ್ಲಿ ಬರೆಯುವುದರಲ್ಲಿ ಯಾವ ಬುದ್ಧಿವಂತಿಕೆಯೂ ಇಲ್ಲ. ಹೊಸಗನ್ನಡವನ್ನೇ ಎಲ್ಲರೂ ಹಿಡಿಯಬೇಕು ... ಬರೆಯುವವರು ಕಠಿಣ ಪದಗಳಲ್ಲಿ ಕೈವಲ್ಯ ಉಂಟೆಂದು ಮೋಸ ಹೋಗದೆ, ಅರ್ಥದಲ್ಲಿ ಬುದ್ಧಿಯನ್ನು ಓಡಿಸಿ ಪ್ರೌಢತನವನ್ನು ತೋರಿದರೆ ಎಲ್ಲರೂ ಬದುಕಿಕೊಂಡಾರು ... ಇದರಿಂದ ಇನ್ನು ಕೆಲವು ಗುಣಗಳು ತಾವಾಗಿಯೇ ಬರುತ್ತವೆ. ಸುಲಭವಾಗಿ ಬರೆಯುವುದು, ಎಲ್ಲರಿಗೂ ಇಷ್ಟವಾದ ಸಂಗತಿಗಳನ್ನು ತೆಗೆಯುವುದು, ವಿಪರೀತವಾಗಿ ಲಕ್ಷಣದ ಮೇಲೇ ದೃಷ್ಟಿಯಿಡದೆ ಇರುವುದು, ವಿವೇಕವಾಗಿ ಉಪಯೋಗವಾದ ವಿಚಾರಗಳನ್ನೇ ಹರಡುವುದು." ಹೀಗೆ ಶ್ರೀ ಅವರು ಹೊಸಗನ್ನಡ ಕವಿತೆಯ ಹಾದಿಯನ್ನು ತೋರಿಸಿದರು. ತೋರಿಸಿದ್ದಷ್ಟೇ ಅಲ್ಲ, ತೋರಿಸಿದ ಮಾರ್ಗದಲ್ಲಿ ತಾವೇ ನಡೆದರು. ಶ್ರೀ ಅವರ ಕಾವ್ಯದ ಮೇಲೂ ವಿಚಾರಗಳ ಮೇಲೂ ವಿಶೇಷ ಪ್ರಭಾವ ಬೀರಿದ ಕವಿ ವರ್ಡ್ಸ್‌ವರ್ತ್. ತನ್ನ 'Lyrical Ballads' ಕವನ ಸಂಚಯಕ್ಕೆ ಬರೆದ ಪ್ರಖ್ಯಾತ ಮುನ್ನುಡಿಯಲ್ಲಿ ವರ್ಡ್ಸ್‌ವರ್ತ್ ಕಾವ್ಯದ ಭಾಷೆಯ ಬಗ್ಗೆ ಬರೆಯುತ್ತ, "The language of poetry is as far as possible, a selection of the language really spoken by men, this selection, whenever it is made with true taste and feeling will of itself form a distinction – and will entirely separate the composition from the vulgarity and meanness of ordinary life" ಎಂದಿದ್ದಾನೆ. ಶ್ರೀ ಅವರ ಅಭಿಪ್ರಾಯವೂ ಇದೇ ಆಗಿತ್ತು. 'ಮುದ್ದಿನ ಕುರಿಮರಿ' ಕವಿಯ ಕಾವ್ಯೋದ್ದೇಶಕ್ಕೆ ಉತ್ತಮ ನಿದರ್ಶನ. ಹಳ್ಳಿಯ ಬಾಳೇ ಸರಳತೆಯ ಪ್ರತೀಕವೆಂದಮೇಲೆ ಇಲ್ಲಿಯ ಪಾತ್ರಗಳಾದರೋ ಒಂದು ಮುಗ್ಧಬಾಲೆ, ಇನ್ನೊಂದು ಏನೂ ಅರಿಯದ ಕುರಿಮರಿ. ಆ ಮುಗ್ಧಬಾಲೆಗೆ ಕುರಿಮರಿ ಎಂದರೆ ಬರಿ ಒಂದು ಪ್ರಾಣಿಯಲ್ಲ, ಆಟದ ವಸ್ತುವಲ್ಲ, ಬೇಜಾರು ಕಳೆಯುವ ಸಾಧನವಲ್ಲ. ತನ್ನ ಸಂಪೂರ್ಣ ಪ್ರೇಮವನ್ನು ಧಾರೆಯೆರೆಸಿಕೊಂಡಿರುವ ಒಡನಾಡಿ ಜೀವ. ಈ ಎರಡು ಜೀವಿಗಳಿಗೆ ಹಿನ್ನೆಲೆಯಾಗಿ ನಿಂತಿರುವ ಪ್ರಕೃತಿಯಲ್ಲೋ ಆರ್ಭಟವಿಲ್ಲ, ಗುಡುಗು ಮಿಂಚುಗಳ ಭಯವಿಲ್ಲ, ಕಪ್ಪುಮೋಡದ ಛಾಯೆಯಿಲ್ಲ. ಈ ಕವನದಲ್ಲಿ ಮೊದಲಿನಿಂದ ಕಡೆಯವರೆಗೂ ನಿರ್ಮಿತವಾಗಿರುವುದು ಸಹಜ, ಸುಂದರ, ಸರಳ ಸೌಮ್ಯ ಸಾಮರಸ್ಯ ವಾತಾವರಣ.

"ಪುಟ್ಟ ಹುಡುಗಿ ದಟ್ಟವಾದ ಹುಲ್ಲ ಮೇಲೆ ಮಂಡಿಯೂರಿ,
ಬೆಟ್ಟದಿಂದ ಬಂದ ಮರಿಗೆ ತಿಂಡಿಯಿಡುತಲಿದ್ದಳು."

ಕವನ ಪ್ರಾರಂಭವಾಗುವುದು ಹೀಗೆ

ಹಿಡಿದು ಮಂಜು ಬೀಳುತ್ತಿತ್ತು, ಚುಕ್ಕಿ ಕಣ್ಣು ಮಿಟುಕುತಿತ್ತು
"ಕುಡಿಯೊ ಕಂದ ಕುಡಿಯೊ" ಎಂದು ನುಡಿದ ಮಾತು ಕಿವಿಗೆ ಬಿತ್ತು ;

ತಿರುಗಿನೋಡಲೊಪ್ಪೆಯಾಚೆ, ಒಬ್ಬಳಲ್ಲಿ ಹೆಣ್ಣುಮಗಳು
ನೊರೆಯು ಬಿಳುಪು ಕುರಿಯ ಮರಿಯ ತಲೆಯ ತಡಹುತಿದ್ದಳು.

........................ ..... ...
.. ... ........ ........ ....

ಕಿವಿಯ ನಲುಗಿ, ತಲೆಯನೊಲೆದು, ಬಾಲವನ್ನು ಕುಣಿಸಿ, ನಲಿದು,
ಅವಳ ಕಯ್ಯ ತಿಂಡಿಯನ್ನು ಮುದ್ದಿನಿಂದ ಸವಿದ ಮರಿಗೆ
"ಕುಡಿಯೊ ಕಂದ, ಕುಡಿಯೊ" ಎಂದು ನುಡಿವ ದನಿಯ ಕೇಳಿದೊಡನೆ,
ಅವಳ ಹೃದಯವೆನ್ನ ಹೃದಯದಲ್ಲಿ ಕಲೆತು ಹೋಯಿತು."

ಕೆಲವು ವಿಮರ್ಶಕರು ಹೇಳಿರುವಂತೆ ಕೆಲವು ಕವನಗಳಲ್ಲಿ ಮೂಲ ಕೃತಿಯ ಸತ್ವ ಸೊಗಸು ಎರಡೂ ಸ್ವಲ್ಪ ಕಡಿಮೆಯಾಗಿದೆ ನಿಜ. ಹಾಗೆ 'ಕಡಿಮೆ'ಯಾಗಿರುವ ಕವನಗಳ ಸಂಖ್ಯೆ ಕಡಿಮೆ. ಉದಾಹರಣೆಗೆ ಈ ಕವನವನ್ನು ನೋಡಬಹುದು. ಕೂಪರನ 'ನನ್ನ ಮೇರಿ' – ಕೊನೆಯ ಸಾಲುಗಳ ಅನುವಾದ ;

ನನ್ನ ಪಾಲಿಗೆ ಮುಂದೆ ನಡಗೆ
ಹಿಂದಿನಂತೆಯೆ ಬರೆದು ಮಡಗೆ,
ಬರಿಯದೇ ಎದೆ ನಿನಗೆ ಕಡೆಗೆ
 ನನ್ನ ಮೇರಿ.

ಈ ಸಾಲುಗಳಲ್ಲಿ ಮಾತ್ರವಲ್ಲದೆ ಇಡೀ ಕವನದಲ್ಲೇ ಕೂಪರನ ಮೇರಿ ಶ್ರೀ ಅವರಿಗೆ ದಕ್ಕದೆ ಹೋಗಿದ್ದಾಳೆ ಎನ್ನಿಸುತ್ತದೆ.

ಬರ್ನ್ಸನ ಪ್ರಖ್ಯಾತ ಕವನ 'O My love's like a red, red rose' ಕೂಡ 'ನನ್ನ ಪ್ರೇಮದ ಹುಡುಗಿ'ಯಾಗಿ ಮೂಲದ ಸೊಗಸನ್ನು ಕಳೆದುಕೊಂಡಿದೆ. red red rose – ತಾವರೆಯ ಹೊಸ ಕೆಂಪಾಗಿ ಓದುಗರನ್ನು ಒಲಿಯುವುದಿಲ್ಲ. ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ ಗ್ರಂಥದಲ್ಲಿ ಶ್ರೀಮಾನ್ ಎಸ್. ಅನಂತನಾರಾಯಣ ಅವರು ಅಭಿಪ್ರಾಯಪಟ್ಟಿರುವಂತೆ 'As fair thou art' ಎನ್ನುವುದು 'ಬೆಳೆಬೆಳೆಯುತೆಷ್ಟೆಷ್ಟು ಬಿನ್ನಾಣ' ಎಂದಾಗಿರುವುದೂ ಓದುಗನ ಮನ ಮುಟ್ಟುವುದಿಲ್ಲ.

ಆದರೆ ಇಂಗ್ಲಿಷ್ ಗೀತೆಗಳಲ್ಲಿ ಹೀಗೆ ಮೂಲದ ಸೊಗಡು ಕಾಣದ ಕವನಗಳು ವಿರಳ. ಅಲ್ಲದೆ ಒಂದು ಕವನವನ್ನೋದುತ್ತ ಉದ್ದಕ್ಕೂ ಇನ್ನೊಂದು ಕವನವನ್ನೂ ಮನಸ್ಸಿನಲ್ಲಿಟ್ಟುಕೊಳ್ಳುವುದೂ ತಪ್ಪೇನೊ. ಬರ್ನ್ಸನನ್ನು ಮರೆತರೆ ಪ್ರೇಮದ ಹುಡುಗಿಯ ತಾವರೆಯ ಹೊಸ ಕೆಂಪು, ತಾವರೆಯ ಹೊಸ ಅರಳ ಹೊಳೆವ ಕೆಂಪು ಅಸಹಜವಾಗೇನೂ ಕಾಣುವುದಿಲ್ಲ.

ಇಂಗ್ಲಿಷ್ ಗೀತೆಗಳಲ್ಲಿ ತುಂಬ ಯಶಸ್ವಿಯಾಗಿರುವ ಕವನಗಳು ಹಲವಾರಿವೆ. ಅವುಗಳಲ್ಲಿ ಷೆಲ್ಲಿಯ 'Skylark' ಕವನದ ಅನುವಾದ 'ಬಾನಾಡಿ', ಕಾರ್ಡಿನಲ್

ನ್ಯೂಮನ್ ಕವಿಯ 'Lead Kindly Light' 'ಕರುಣಾಳು ಬಾ ಬೆಳಕೆ' ಹಾಗೂ ಹುಡ್‌ನ 'Bridge of sighs'ನ ಅನುವಾದ 'ದುಃಖಸೇತು', ವಾಲ್ಟರ್ ಸ್ಕಾಟ್‌ನ ಕವನ 'Gathering song'ನ ಅನುವಾದ 'ಕಾಳಗದ ಪದ' ಇವು ಯಶಸ್ವಿಯಾಗಿರುವಷ್ಟೇ ಜನಪ್ರಿಯವೂ ಆಗಿವೆ. ಈ ಕವನಗಳು ಎಷ್ಟು ಯಶಸ್ವಿಯಾಗಿವೆಯೆಂದರೆ ಇವನ್ನು ಬರೆದ ಆಂಗ್ಲ ಕವಿಗಳ ಮೂಲ ಕವನಗಳನ್ನು ಆಂಗ್ಲ ಸಾಹಿತ್ಯಾಭ್ಯಾಸಿಗಳು ಸಂಪೂರ್ಣ ಮರೆತು ಶ್ರೀ ಅವರ ಕವನಗಳಲ್ಲಿ ಮೈ ಮರೆಯುತ್ತಾರೆ. 'ಪ್ರೇಮದ ಹುಡುಗಿ'ಯಲ್ಲಿ ಮೂಲವನ್ನು ಮರೆಯಲು ಪ್ರಯತ್ನಿಸಿ ಯಶಸ್ವಿಯಾಗದ ಓದುಗ ಇಲ್ಲಿ ಮೂಲವೊಂದಿದೆ ಎಂಬುದನ್ನು ಮರೆತು ಬಿಡುತ್ತಾನೆ. ದುಃಖಸೇತುವಿನ ಬಗ್ಗೆ ಶ್ರೀ ಸಂಪುಟಕ್ಕೆ ಪರಿಚಯ ಬರೆಯುತ್ತ ವಿ. ಸೀ. ಅವರು "ಪದ್ಯದ ಧಾಟಿ ಕರುಳನ್ನು ನುಲಿಯುತ್ತದೆ : ಎದೆಯನ್ನು ಇರಿಯುತ್ತದೆ" ಎಂದಿರುವುದು ಅಕ್ಷರಶಃ ಸತ್ಯ.

ಈ ಕವನದ ಮೂಲಕವೇ ನನಗೆ ಶ್ರೀ ಸಾಹಿತ್ಯ ಪರಿಚಯವಾದದ್ದು. ಕವನದಷ್ಟೇ ಮನ ತಟ್ಟುತ್ತಿದ್ದುದು ವಿ. ಸೀ. ಅವರು ಕವನವನ್ನು ಓದುತ್ತಿದ್ದ, ಅರ್ಥೈಯಿಸುತ್ತಿದ್ದ ರೀತಿ. ಅವರು ಕವನವನ್ನೂ ಕವನದ ಪಾತ್ರವನ್ನೂ ಅನುಕಂಪದಿಂದ ನೋಡುತ್ತಿದ್ದ ರೀತಿ. "ಎಮ್ಮ ಮನೆಯಂಗಳದಿ ಬೆಳದೊಂದು ಹೂವನ್ನು" ಬರೆದ ಕವಿ ಈ ಕವನದ ಕರುಣೆಯ ಸಂದರ್ಭಕ್ಕೆ ಮಣಿದಿದ್ದು ಸಹಜ.

ಮೆಲ್ಲಗಿವಳನು ಮುಟ್ಟು
ಮರುಗಿ ಹಿಡಿದೆತ್ತು,
........................
ದುಡುಕಿ, ಕಟ್ಟನು ಮೀರಿ
ಕೆಟ್ಟವಳು ಇವಳು,
ತಾನು ಮಾಡಿದ ಕರ್ಮ
ತನ್ನ ಬೆನ್ನಲಿ ಬಂದು
ಸುಟ್ಟವಳು ಇವಳು ;
ಎನಿತ ದೋಷವ ಬೆದಕಿ
ಗದರದಿರು ನೀನು.
ಅವಳ ಪಾಪಗಳೇನೋ,
ಹೊಲ್ಲ ನಡೆಯೇನೋ
ಆದರೆಣಿಕೆಗಿದೆ ಹೊತ್ತು ?
ನಾವೆ ಜರೆವವರಂ ?
ಜವರಾಯ ನುಂಗಿದೀ
ಹೆಣ್ಣು ಮಗುವಿನಲೀ
ಹೊರೆದ ಕಲ್ಮಶ ತೊಳೆದು,
ಈಗ ತಾನುಳಿದಿಹುದು,

ಚೆಲುವಾದ ನಿರ್ಮಲದ
ಹೆಣ್ಣುತನವೊಂದು.

ವಿ. ಸೀ. ಅವರು ಹೇಳುತ್ತಾರೆ, "ದುರ್ಭರವಾದ ಪ್ರಸಂಗ, ಬಹುಮಟ್ಟಿಗೆ ನಮ್ಮಲ್ಲಿ ಕಾಣದ ಕರುಣೆಯ ಸಂದರ್ಭ". ಈ ಸಂದರ್ಭ "ನಮ್ಮಲ್ಲಿ ಕಾಣದ ಕರುಣೆಯ ಸಂದರ್ಭ" ಎನ್ನುವುದು ತುಂಬ ಔಚಿತ್ಯಪೂರ್ಣವಾದ ಮಾತು. ಹೆಣ್ಣಿನ ಬಗ್ಗೆ ಈ ಉದಾತ್ತ ಮನೋಭಾವವನ್ನು ತಳೆದ ಸಾಹಿತ್ಯ ನಮ್ಮಲ್ಲಿ ವಿರಳ. ಈ ಕವನದ ಬಗ್ಗೆ ಬರೆಯುತ್ತ ಶ್ರೀಮಾನ್ ಎಸ್. ಅನಂತನಾರಾಯಣ ಅವರು "ಮೂಲದಲ್ಲಿ ಆಧಾರವೇ ಇಲ್ಲದ

ನಿರಿ ಹಿಡಿದು ನಡುವೇರಿ
ತೊದಲು ಮಾತನು ಬೀರಿ
ಕೊರಗ ನಗಿಸಲು ಬಲ್ಲ
ಮಗುವಿಲ್ಲವೇನೋ ?

ಎಂಬ ಪಂಕ್ತಿಗಳನ್ನು ಶ್ರೀ ಅವರು ಸ್ವಂತವಾಗಿ ರಚಿಸಿ ಸೇರಿಸಿದ್ದಾರೆ. ಇವು ಸುಂದರವಾದ ಸಾಲುಗಳು. ಕರುಣರಸದ ಮಿಂಚುಗನ್ನು ಹೆಚ್ಚಿಸಿವೆ ಎಂದು ಒಪ್ಪಿದರೂ ಮೂಲದ ಧ್ವನಿಗೆ ಕೊಂಚ ಕುಂದನ್ನು ತರುವವು ಎಂಬ ಭಾವನೆ ಬರುತ್ತದೆ" ಎಂದಿದ್ದಾರೆ. ಮೂಲದಲ್ಲಿಲ್ಲದೆ ಇರುವುದು ಇಲ್ಲಿದೆ ಎನ್ನುವುದನ್ನು ನಾನು ಒಪ್ಪಿದರೂ ಇದನ್ನು ಕವನದಲ್ಲಿನ ಒಂದು ಕುಂದು ಎಂದು ಒಪ್ಪಲಾರೆ. ಶ್ರೀ ಅವರ ಕವನಗಳನ್ನು ಓದುವಾಗ ಉದ್ದಕ್ಕೂ ಸಾಲುಸಾಲಿಗೂ ಮೂಲ ಕವಿಗಳ ಕವನವನ್ನು ಮನಸ್ಸಿನಲ್ಲಿಟ್ಟುಕೊಳ್ಳುವುದು ಸರಿಯಲ್ಲ. ಸ್ವಂತವಾಗಿ ರಚಿಸಿದ ಸಾಲುಗಳು ಭಾವದ ಸತ್ವಕ್ಕೆ ಧಕ್ಕೆ ತಂದಿದ್ದರೆ ಆಗ ಅದು ಅನುಚಿತವಾಗುತ್ತಿತ್ತು. ಕಾಳಿದಾಸನ ಶಕುಂತಲೆ ದುಷ್ಯಂತರು ಮೂಲ ಭಾರತದ ಕಥೆಗಿಂತ ಭಿನ್ನ. ಆದರೆ ಅದನ್ನು ಕುಂದು ಎನ್ನಲಾಗುವುದಿಲ್ಲ. ಶ್ರೀ ಅವರ ಇಂಗ್ಲಿಷ್ ಗೀತೆಗಳು ಮಕ್ಕೀಕಾಮಕ್ಕಿ ಅನುವಾದಗಳಲ್ಲ. Duncan Gray 'ಮಾದ' ನಾಗಬಹುದಾದರೆ, ಈ ರೂಪಾಂತರವನ್ನು ನಾವು ಒಪ್ಪುವುದಾದರೆ, ಸ್ಕಾಟ್‌ನ Gathering song 'ಕಾಳಗದ ಪದ'ವಾಗಿ ಅಲ್ಲಿ 'ಹಸೆಮಣೆಯ ಹೆಣ್ಣು' ಬರಬಹುದಾದರೆ, ದುಃಖಸೇತುವಿನ ಕರುಣೆಯ ಕಥೆಯಲ್ಲಿ ಮಗು ನುಸುಳಿದ್ದು ಆಶ್ಚರ್ಯವೇನಲ್ಲ. ಕವಿ ವಹಿಸಿರುವ ಈ ಸ್ವಾತಂತ್ರ್ಯ ಮೂಲಕ್ಕೂ ಕುಂದುತಂದು ಅನುವಾದವನ್ನೂ ಆಭಾಸವಾಗಿಸಿದ್ದರೆ ಕಾವ್ಯ ಅಯಶಸ್ವಿಯಾಗುತ್ತಿತ್ತು. ತುಂಬ ಯಶಸ್ವಿ ಎಂದು ಪ್ರಶಂಸೆಗೆ ಪಾತ್ರವಾದ 'ಪ್ರಾರ್ಥನೆ' ಕವನದಲ್ಲೂ ಮೂಲದಲ್ಲಿಲ್ಲದ ಶಬ್ದಗಳು ಶ್ರೀ ಕಾವ್ಯದಲ್ಲಿ ಬಂದಿವೆ. ಉದಾಹರಣೆಗೆ,

ಇರುಳು ಕತ್ತಲೆಯ ಗವಿ ; ಮನೆದೂರ ; ಕನಿಕರಿಸಿ
ಕೈ ಹಿಡಿದು ನಡೆಸೆನ್ನನು

ಎನ್ನುವಲ್ಲಿ ಮೂಲ

The night is dark, and I am far from home,
Lead thou me on.

night is dark ಸಹಜ ಸುಂದರ ಆಡುನುಡಿಯಾಗಿ ಕತ್ತಲೆಯ ಗವಿಯಾಗಿದೆ. I am far from home ಎರಡೇ ಪದಗಳಲ್ಲಿ ಮೂಲದ ಭಾವ ತುಂಬಿ ನಿಂತಿದೆ. ಆದರೆ 'ಕನಿಕರಿಸಿ' ಪದಕ್ಕೆ ಮೂಲದಲ್ಲಿ ಯಾವ ಮಾತೂ ಇಲ್ಲ. ಆದರೆ ಮೂಲದ ಭಾವಕ್ಕೆ ಪೂರಕವಾಗಿ ಈ ಪದ ಅನುವಾದದಲ್ಲಿ ಬಂದಿದೆ. ಇಂಗ್ಲಿಷ್ ಗೀತೆಗಳಲ್ಲಿನ ಅನೇಕ ಕವನಗಳಲ್ಲಿ ಭಾವಕ್ಕೆ ಭಾವ ಹೊಸೆದು ನಿಂತಿದೆ.

ಷೆಲ್ಲಿಯ ಕವನದ ಅನುವಾದ 'ಬಾನಾಡಿ' ಇಂಗ್ಲಿಷ್ ಗೀತೆಗಳಲ್ಲಿನ ಅತ್ಯಂತ ಯಶಸ್ವೀ ಕವನ.

ಆರು ನೀನೆಲೆ ಹರುಷಮೂರುತಿ ?
ಹಕ್ಕಿಯೆಂಬರೆ ನಿನ್ನನು !
ತೋರಿ ದಿವಿಜರು ಸುಳಿವ ಬಳಿ, ಸುಖ
ವುಕ್ಕಿ ಬಹ ನಿನ್ನೆದೆಯನು
ಹಾರಿ ನೆನೆಯದ ಕಲೆಯ ಕುಲಶದ ಭೂರಿಗಾನದೊಳರೆಯುವೆ.

ನೆಲವನೊಲ್ಲದೆ ಚಿಗಿದು ಚಿಮ್ಮುತ
ಮೇಲು ಮೇಲಕ್ಕೋಡುವೆ;
ಒಲೆದು ದಳ್ಳುರಿ ನೆಗೆದು, ಗಗನದ
ನೀಲಿಯಾಳದೊಳಾಡುವೆ
ನಲಿದು ಹಾಡುತ ಹಾಡುತೇರುವೆ, ಏರುತೇರುತ ಹಾಡುವೆ.

ಷೆಲ್ಲಿಯ Skylark ಹಾಡುತ್ತ ಹಾಡುತ್ತ ಮೇಲಕ್ಕೆ ಏರುತ್ತ ನೀಲಿಯಾಳದೊಳಾಡುವ ದೃಶ್ಯ ಶ್ರೀ ಅವರ ಬಾನಾಡಿಯಲ್ಲಿ ಕಣ್ಣಿಗೆ ಕಟ್ಟುವಂತೆ ವರ್ಣಿತವಾಗಿದೆ. ಇದರಲ್ಲಿನ ಪದ ಪ್ರಯೋಗ ಹಾರುವ ಹಕ್ಕಿಯ ಹಾಡುತ ಏರುವ ಹಕ್ಕಿಯ ಏರುತಾಡುವ ಹಕ್ಕಿಯ ಒಂದೊಂದು ಚಲನೆಯನ್ನೂ ಕಾವ್ಯವಾಗಿಸಿದೆ. ವಾಗರ್ಥಪ್ರತಿಪತ್ತಿಯ ಸಾರ್ಥಕ್ಯವನ್ನು ಈ ಕವನದ ಸಾಲು ಸಾಲಿನಲ್ಲೂ ಕಾಣಬಹುದು.

ದೇವನಾಗಿರು ಹಕ್ಕಿಯಾಗಿರು,
ಕಲಿಸು ನಮಗೀ ಹರುಷವ,
ಪ್ರೇಮಗಾನವೊ, ಸೋಮಪಾನವೊ,
ಅಲೆವುದಾವುದು ಹೃದಯವ ?
ಆವ ಸವಿ ಬಗೆ ತುಂಬಿತುಳುಕುವುದಿನಿತು ದಿವ್ಯಾನಂದವ ?

ಶ್ರೀ ಅವರ ಇಂಗ್ಲಿಷ್ ಗೀತೆಗಳು ಕನ್ನಡ ಸಾಹಿತ್ಯಕ್ಕೆ ಸಾಗರದಾಚೆಯಿಂದ ಹೊಸತನವನ್ನು ತಂದುಕೊಟ್ಟ ಗ್ರಂಥ. ಜಿಡ್ಡು ಹಿಡಿದು ಜಡ್ಡು ಕಟ್ಟಿಹೋಗಿದ್ದ

ಕನ್ನಡ ಭಾಷೆಗೆ ಹೊಸಗನ್ನಡದ ರೂಪ ತಂದುಕೊಟ್ಟ ಗ್ರಂಥ. ಕನ್ನಡದಲ್ಲಿ ಭಾವಗೀತೆಗಳ ಅಂಕವನ್ನು ಆರಂಭಿಸಿದ ಗ್ರಂಥ. ಕನ್ನಡದ ಬರಹಗಾರರಲ್ಲೂ ಓದುಗರಲ್ಲೂ ಹೊಸ ಚಿಂತನಶೀಲತೆಯನ್ನು ಹುರಿದುಂಬಿಸಿದ ಗ್ರಂಥ. ಕನ್ನಡ ಕಾವ್ಯದಲ್ಲಿ ಹೊಸಗನ್ನಡದ ಮೊದಲ ಅಧ್ಯಾಯವನ್ನು ತೆರೆದಿಟ್ಟ ಗ್ರಂಥ.

# ಸ್ವತಂತ್ರ ಕವಿತೆಗಳು

— ಎಚ್. ಎಸ್. ವೆಂಕಟೇಶಮೂರ್ತಿ

೧

೧೯೧೧ರಲ್ಲಿ ಬಿ. ಎಂ. ಶ್ರೀಕಂಠಯ್ಯನವರು ಧಾರವಾಡದ ವಿದ್ಯಾವರ್ಧಕ ಸಂಘದಲ್ಲಿ, 'ಕನ್ನಡ ಮಾತು ತಲೆಯೆತ್ತುವ ಬಗೆ'ಯನ್ನು ಕುರಿತು ಮಾಡಿದ ಉಪನ್ಯಾಸದಲ್ಲಿ ಕನ್ನಡ ಕಾವ್ಯಮಾಲೆಯನ್ನು ಬೆಳೆಸುವ ಬಗ್ಗೆ ತಮ್ಮ ಕೆಲವು ವಿಚಾರಗಳನ್ನು ಮಂಡಿಸಿದ್ದಾರೆ. ಆ ವಿಚಾರಗಳನ್ನು ಸ್ಥೂಲವಾಗಿ ಹೀಗೆ ಸಂಗ್ರಹಿಸ ಬಹುದು.

೧. ಜೈನರ ಮತ್ತು ಬ್ರಾಹ್ಮಣರ ಬಹುಪಾಲು ಕೃತಿಗಳು ಜನಮಂಡಲಿಯನ್ನು ಗುರಿಯಾಗಿ ಹೊಂದಿರಲಿಲ್ಲ. ಅವುಗಳ ದೃಷ್ಟಿ ರಾಜಸಭೆಯ ಕಡೆ ಇದ್ದುದರಿಂದ, ಪಾಂಡಿತ್ಯ ಪ್ರದರ್ಶನಕ್ಕೇ ಹೆಚ್ಚು ಒತ್ತು ಬಿತ್ತು. ಅದರಿಂದಾಗಿ 'ಆ ಕಾವ್ಯಗಳು ನರೆತುಕೊಂಡವು.' ವೀರಶೈವರ ಕಾವ್ಯದ ಬಹುಪಾಲು ಜನಮಂಡಲಿಯನ್ನು ಗುರಿಯಾಗಿ ಹೊಂದಿತ್ತಾದರೂ ಪಾಂಡಿತ್ಯ ಸಾಲದೆ ಬಂದು 'ಅವು ಕಣ್ಣಿಗೆ ಒಣ ಬರಲಾಗಿ ನಿಂತವು'. 'ಈಚೀಚೆಗಂತೂ ಯಕ್ಷಗಾನ, ದೊಂಬಿದಾಸರ ಪದ, ಶುಕಸಪ್ತತಿ, ಹಲ್ಲಿಯ ಶಕುನ ಇವೇ ಜನಗಳಿಗೆ ಮಹಾಕಾವ್ಯಗಳು !' ... 'ಹಿಂದಿನ ಸಂಸ್ಕೃತ ಪ್ರಾಬಲ್ಯವೂ ಅದರ ಕಾವ್ಯಮಾರ್ಗವೂ ಕುಗ್ಗಿಹೋದುವು : ಮುಂದೆ ಇಂಗ್ಲಿಷ್ ಪ್ರಾಬಲ್ಯವೂ ಅದರ ಕಾವ್ಯಮಾರ್ಗವೂ ಹೆಚ್ಚುವಂತೆ ತೋರುತ್ತದೆ. ...'

೨. ವಸ್ತು, ರೀತಿ, ಭಾವ, ವರ್ಣನೆ, ಶೈಲಿ, ರೂಪ – ಈ ಆರು ಬಗೆಯಾಗಿ ಸಂಸ್ಕೃತ ಸಾಹಿತ್ಯದಿಂದ ನಮ್ಮ ಕಾವ್ಯಮಾಲೆಗೆ ದೋಷಗಳು ಪ್ರಾಪ್ತವಾಗಿವೆ. ಈ ದೋಷಗಳ ಪರಿಹಾರಕ್ಕೆ ಇಂಗ್ಲಿಷ್ ಸಾಹಿತ್ಯದ ಪ್ರಭಾವ ಅಗತ್ಯ.

೩. ವಸ್ತು ರೀತಿ ಮೊದಲಾದುವುಗಳಲ್ಲಿ ಹೊಸತನ ಸಾಧಿಸಿ, ಹೊಸಗನ್ನಡ ದಲ್ಲಿ ಬರೆಯುವ ಮೂಲಕ ಕಾವ್ಯ ಜನಕ್ಕೆ ತಲಪುವಂತೆ ಮಾಡಬೇಕು.

'ಹಳಗನ್ನಡದಲ್ಲಿ ನನಗೂ ಅಕ್ಕರೆ ಉಂಟು : ತಿಳಿಯಾದ ಬಿಗಿಯಾದ, ತಿರುಳಾದ, ಇಂಪಾದ ಆ ನುಡಿಯನ್ನು ಕೈ ಬಿಡುವುದೆಂದರೆ ನನಗೂ ವ್ಯಸನವೇ. ಮುಂದೆ ಜನರಲ್ಲಿ ಅದರ ತಿಳಿವಳಿಕೆ ಹೆಚ್ಚಿದ ಮೇಲೋ, ಇಲ್ಲ, ಕೇವಲ ವಿದ್ಯಾವಂತರೇ ತಿಳಿಯ ಬೇಕಾದ ತತ್ವಗಳಿಗಾಗಿಯೋ, ಇಲ್ಲ ಪರಮೋತ್ಕೃಷ್ಟವಾದ ಕಾವ್ಯ ನಾಟಕಗೀತೆ ಗಳಿಗಾಗಿಯೇ ಅದನ್ನು ಉಪಯೋಗಿಸಿದರೂ ಉಪಯೋಗಿಸಬಹುದು.'

೪. 'ರಾಜರಿಗೇ ಆಗಲಿ, ಪಂಡಿತರಿಗೇ ಆಗಲಿ, ಬರೆಯುತಕ್ಕ ಕಾಲ ಹೋಯಿತು. ಈಗ ಹೆಂಗಸರು, ಗಂಡಸರು, ಚಿಕ್ಕವರು, ದೊಡ್ಡವರು, ಒಕ್ಕಲಿಗರು, ಬ್ರಾಹ್ಮಣರೂ ಅಷ್ಟರೂ ಓದುವಂತೆ ಬರೆಯಬೇಕು.'

೫. 'ಗ್ರಂಥವಿಷಯ ಪ್ರಯೋಜನವಾದ ಅಂಶವಾಗಿರಬೇಕು. ಸಮಾಜದ ಏಳಿಗೆಗೆ ನೆರವಾಗುವಂತೆ ಇರಬೇಕು.' ಒಗ್ಗಟ್ಟು, ರಾಜಭಕ್ತಿ ಹುಟ್ಟಿಸುವಂಥ ನೀತಿ ತತ್ವಗಳ ಪ್ರಚಾರದ ಅಗತ್ಯವನ್ನು ಬಿ. ಎಂ. ಶ್ರೀ. ಪ್ರಸ್ತಾಪಿಸಿದ್ದಾರೆ.

೬. 'ಸದ್ಯಕ್ಕೆ ದೊಡ್ಡ ಕವನಗಳನ್ನಾಗಲೀ, ಸ್ವಂತ ನಾಟಕಗಳನ್ನಾಗಲೀ ಬರೆಯುತಕ್ಕದ್ದಲ್ಲ.'

೭. 'ಹೇಗೆ ಆದಿಯಿಂದಲೂ ಸಂಸ್ಕೃತದ ಶಿಕ್ಷೆಯಿಂದಲೂ, ಸಂಸ್ಕೃತದ ಪೋಷಣೆಯಿಂದಲೂ ಕಾವ್ಯಮಾಲೆಯನ್ನು ಬೆಳೆಸಿದೆವೋ ಹಾಗೇ ಈಗ ದೈವಯತ್ನ ದಿಂದ ಲಭಿಸಿರುವ ಇಂಗ್ಲಿಷಿನ ಶಿಕ್ಷೆಯಲ್ಲೂ, ಇಂಗ್ಲಿಷಿನ ಪೋಷಣೆಯಲ್ಲೂ ಅದನ್ನು ಬೆಳೆಸಬೇಕು.' ಇಂಗ್ಲಿಷ್‌ನಿಂದ ಭಾಷಾಂತರಿಸಿ ಕನ್ನಡ ಬೊಕ್ಕಸವನ್ನು ತುಂಬಿಸಬೇಕು. 'ಮುಂದೆ ಸ್ವದೇಶ ಮಾರ್ಗವೂ ವಿದೇಶ ಮಾರ್ಗವೂ ಕಲೆತು ಒಂದಾಗಿ, ಎರಡರಲ್ಲೂ ಒಗ್ಗದವು ವಕ್ರವಾದುವು ಬಿಟ್ಟು ಹೋಗಿ, ಅತ್ಯುತ್ತಮವಾದ ಕಾವ್ಯಮಾಲೆ ನಮ್ಮಲ್ಲೂ ನಿಲ್ಲುವುದಕ್ಕೆ ಸಂದೇಹ ತೋರುವುದಿಲ್ಲ.'

'ಶ್ರೀ' ಅವರ ಕನ್ನಡ ಕಾವ್ಯಮಾಲೆ ಕುರಿತ ಈ ವಿಚಾರಗಳನ್ನು ಇಷ್ಟು ದೀರ್ಘ ವಾಗಿ ಪ್ರಸ್ತಾಪಿಸಿದ್ದಕ್ಕೆ ಕಾರಣವಿದೆ. ಶ್ರೀ ಅವರ. ಇಂಗ್ಲಿಷ್ ಕವಿತೆಗಳ ಅನುವಾದ ಗಳಾಗಲಿ, ಸ್ವತಂತ್ರ ಕವಿತೆಗಳಾಗಲೀ, ಒಟ್ಟಾರೆ ಅವರ ಕಾವ್ಯ ಕುರಿತ ವಿಚಾರಗಳಿಂದ ಹೇಗೆ ರೂಪಿತವಾಗಿವೆ ಎಂಬುದನ್ನು ನೋಡುವುದಕ್ಕೆ ಇದು ಸಹಾಯಕವಾಗುತ್ತದೆ ಮಾತ್ರವಲ್ಲ, ಶ್ರೀ ಅವರ ಕಾವ್ಯದ ರೂಪ-ಶೈಲಿಯ ಅನೇಕ ವಿರೋಧಗಳನ್ನು ವಿವರಿಸಲೂ ಇದರಿಂದ ಅನುಕೂಲವಾಗುತ್ತದೆ.

೨

ಶ್ರೀ ಅವರ ಸ್ವತಂತ್ರ ಕವಿತೆಗಳ ಸಂಗ್ರಹ 'ಹೊಂಗನಸು'ಗಳು ೧೯೪೩ರಲ್ಲಿ ಪ್ರಕಟವಾಯಿತು. ಅದರಲ್ಲಿ ೩೦ ವರ್ಷಗಳ ಬೆಳೆ ಇದೆ. ೧೯೧೪ರಲ್ಲಿ ಬರೆದ ಭರತ

ಮಾತೆಯ ನುಡಿ ಅತ್ಯಂತ ಹಳೆಯ ಕವನ. (೧೯೨೧ರಲ್ಲಿ ಇಂಗ್ಲಿಷ್ ಗೀತೆಗಳ ಪ್ರಕಟನೆ) ಇಂಗ್ಲಿಷ್‌ನಿಂದ ಅನುವಾದಗಳನ್ನು ಮಾಡುತ್ತಿದ್ದ ಕಾಲಕ್ಕೆ ಶ್ರೀ ಅವರು ಆಗಾಗಲಾದರೂ ಸ್ವಂತ ರಚನೆಗಳನ್ನು ಮಾಡುತ್ತಿದ್ದರೆಂದು ತಿಳಿಯಬಹುದು. ಸ್ವಂತ ರಚನೆ ಮಾಡುವ ಬಗ್ಗೆ ಅವರಿಗೆ ಅಂಥ ಉತ್ಸಾಹ ಇದ್ದಂತಿಲ್ಲ. ಇದಿನ್ನೂ ವ್ಯವಸಾಯದ ಕಾಲ, ಫಲಬಿಡುವ ಕಾಲವಲ್ಲ ಎಂಬ ಅವರ ವಿಚಾರ ಅದಕ್ಕೆ ಕಾರಣವಿರಬಹುದು. ಸ್ವತಂತ್ರ ರಚನೆ ಮಾಡುತ್ತಿದ್ದ ಸಮಕಾಲೀನ ಬರಹಗಾರರ ಬಗ್ಗೆಯೂ ಅವರಿಗೆ ಅಂಥ ಉತ್ಸಾಹವಿದ್ದಂತಿಲ್ಲ. ('ಕೆಲವರು ಹೊಸ ಮಾರ್ಗ ಆಗಲೇ ದೇಶದಲ್ಲಿ ಬೇರೂರಿತೆಂದೂ, ಬೇಕಾದಷ್ಟು ಜನ ಕವಿಗಳು ಆಗಲೇ ಹುಟ್ಟಿರುವರೆಂದೂ ತಿಳಿಯುತ್ತಾರೆ. ಇದರಲ್ಲಿ ನನಗೆ ನಂಬಿಕೆ ಸಾಲದು' – ಶ್ರೀ. ಕನ್ನಡ ಮಾತು ತಲೆಯೆತ್ತುವ ಬಗೆ, ೧೯೧೧.) ಮುಂದೆ ಕುವೆಂಪು ಅವರು ಬರೆದ 'ಕಿಂದರ ಜೋಗಿ ಮತ್ತು ಇತರ ಕಥನ ಕವನಗಳು' ಕೃತಿಗೆ ಶ್ರೀ ಅವರು ಮುನ್ನುಡಿ ಬರೆಯುವಾಗ ಕನ್ನಡ ಸೃಜನಶೀಲತೆ ಬಗ್ಗೆ ಅವರಿಗೆ ಮೊದಲಿಗಿಂತ ಹೆಚ್ಚು ವಿಶ್ವಾಸ; ಅಭಿಮಾನ. (ಅದು ೧೯೩೭). ೧೯೪೧ ರಲ್ಲಿ ಅವರು ಮಾಡಿದ ಭಾಷಣ ಒಂದರಲ್ಲಿ – "ನಮ್ಮ ಸಂಸಾರ ಅನೇಕ ರೀತಿ ಟ್ರಾಜೆಡಿ; ನಮ್ಮ ಜನಾಂಗಜೀವನ ಅನೇಕ ರೀತಿಯಲ್ಲಿ ಟ್ರಾಜೆಡಿ; ಟ್ರಾಜೆಡಿಯನ್ನು ಲೋಕದಲ್ಲಿ ಅನುಭವಿಸಿದವರು ಸಾಹಿತ್ಯದಲ್ಲಿ ಆಳವಾದ ದೂರ ದೃಷ್ಟಿಯುಳ್ಳ ಕವಿಗಳ ಕಣ್ಣಿನಿಂದ ನೋಡೋಣ; ಅನುಭವಿಸೋಣ. ಹೊರಗಿನಿಂದ ಭಾಷಾಂತರ ಮಾಡಿ ನಮ್ಮ ಕೊರತೆಯನ್ನು ತುಂಬಿಕೊಳ್ಳೋಣ. ದೈವೀಪ್ರಸಾದವುಳ್ಳವರು ತಮ್ಮ ಸ್ವಪ್ರತಿಭೆಯಿಂದಲೇ ತುಂಬಲಿ, 'ದುರಂತ'ವನ್ನು ಕೊಡಲಿ" – ಎಂದು ಆಶಿಸಿದವರು, ಈಗ ಕನ್ನಡದಲ್ಲಿ ರುದ್ರನಾಟಕ ಓದಬೇಕೆನ್ನುವವರು ಗದಾಯುದ್ಧ ನಾಟಕ, ಅಶ್ವತ್ಥಾಮನ್, ಪಾರಸಿಕರು. ಅಂತಿಗೊನೆ, ಸೂತ್ರದ ಗೊಂಬೆ, ಮಂಡೋದರಿ, ಸೊಹ್ರಾಬ್ ಮತ್ತು ರುಸ್ತುಂ ಮುಂತಾದ ಗ್ರಂಥಗಳನ್ನು ನೋಡಬೇಕೆಂದು ಹೇಳಿ ಭಾಷಣ ಮುಗಿಸಿದರಂತೆ (ಶ್ರೀ ಸಾಹಿತ್ಯ – ಪುಟ ೩೨೭). ಇಲ್ಲಿ ಅನುವಾದ ಕೃತಿಗಳ ಜೊತೆ ಸ್ವತಂತ್ರ ನಾಟಕಗಳ ಉಲ್ಲೇಖವೂ ಆಗಿರುವುದು ಗಮನಿಸಬೇಕು. ಆದರೂ ಶ್ರೀ ಅವರ ಒಟ್ಟಾರೆ ದೃಷ್ಟಿಯಲ್ಲಿ – ಆರಂಭಿಕ ಕಾಲದಲ್ಲಿ ಅನುವಾದದ ಅಗತ್ಯದ ಬಗ್ಗೇ ಹೆಚ್ಚು ಒತ್ತು. "ಸ್ವತಂತ್ರ ಕಾವ್ಯವನ್ನು ಬರೆಯಬಲ್ಲ ಮಹನೀಯರು ಎಲ್ಲಿಯೋ ಕೆಲವರು: ಮಿಕ್ಕವರಿಗೆ ಭಾಷಾಂತರವನ್ನು ಮಾಡಿ ಉತ್ತಮ ಸಾಹಿತ್ಯವನ್ನು ತಮ್ಮ ದೇಶದಲ್ಲಿ ನಾಟಿ ಹಾಕುವುದಕ್ಕಿಂತ ಬೇರೆ ಘನವಾದ ಕಾರ್ಯ ಯಾವುದು?"[೨] ಎಂಬ ಕಾರ್ಲೈಲ್ ಹೇಳಿಕೆಯನ್ನು ಇಬ್ಸನ್ ನಾಟಕದ ಅನುವಾದದ ಮುನ್ನುಡಿಯಲ್ಲಿ (ಸೂತ್ರದ ಗೊಂಬೆ – ಎಸ್. ಜಿ. ಶಾಸ್ತ್ರಿ -- ೧೯೩೭) ಅವರು ಎತ್ತಿ ಹೇಳಿದ್ದನ್ನು ಇಲ್ಲಿ ನೆನೆಯಬಹುದು.

ಈ ಹಿನ್ನೆಲೆಯಲ್ಲಿ ಶ್ರೀ ಅವರ ಸ್ವತಂತ್ರ ರಚನೆಗಳು ಅವರ ಅನುವಾದ ಕೃತಿಗಳಿಗಿಂತ ಕಡಿಮೆ ಪ್ರಮಾಣದಲ್ಲಿರುವುದನ್ನು ಅರ್ಥಮಾಡಿಕೊಳ್ಳಬಹುದು. ಶ್ರೀ

ಅವರು ತಮ್ಮ ಸ್ವಂತ ಕವಿತೆಗಳನ್ನು ಬರೆಯುವಾಗ, ಅನುವಾದ ಕೃತಿಗಳಿಗೆ (ಅಂದರೆ ಇಂಗ್ಲಿಷ್ ಗೀತೆಗಳಿಗೆ) ಅವು ಪೂರಕಗಳಾಗಬೇಕೆಂದು ಯೋಚಿಸಿದರೇನೋ ಅನ್ನಿಸುತ್ತದೆ. ಇಂಗ್ಲಿಷ್ ಗೀತೆಗಳಲ್ಲಿ ಓಡ್‌ಗಳನ್ನಾಗಲೀ, ಎಲಿಜಿಗಳನ್ನಾಗಲೀ ಅವರು ಮಾಡಲಿಲ್ಲವಷ್ಟೇ ? ಕನ್ನಡಕ್ಕೆ ಆ ಮಾದರಿಗಳನ್ನು ಶ್ರೀ ತಮ್ಮ ಸ್ವತಂತ್ರ ಕವಿತೆಗಳಿಂದ ನೀಡಿದಂತಾಯಿತು. ಪ್ರಗಾಥಗಳ ಅನುವಾದದ ಪ್ರಯತ್ನಕ್ಕಿಂತ, ಸ್ವಂತ ರಚನೆಗಳು ಹೆಚ್ಚು ಸಮರ್ಥವಾಗಬಹುದೆಂದು ಅವರು ಭಾವಿಸಿದರೋ ಹೇಗೋ ತಿಳಿಯದು.

ಸ್ವತಂತ್ರ ಕವಿತೆಗಳಿಗೆ ಅವರು ಮುಖ್ಯವಾಗಿ ಆರಿಸಿಕೊಂಡ ವಸ್ತುಗಳು ರಾಜಭಕ್ತಿ, ದೇಶಭಕ್ತಿ, ಭಾಷಾಭಿಮಾನಕ್ಕೆ ಸಂಬಂಧಿಸಿದವು. ಕನ್ನಡ ಕಾವ್ಯಮಾಲೆಗೆ ಯಾವ ವಸ್ತುವೈವಿಧ್ಯ ಪ್ರಾಪ್ತವಾಗಬೇಕೆಂದು ಅವರು ಇಂಗ್ಲಿಷ್ ಗೀತೆಗಳ ಅರಿಕೆಯಲ್ಲಿ ಆಶಿಸಿದ್ದರೋ (ವಿಶ್ವಕವಿತಾ ವಿಷಯಗಳಾದ ಯುದ್ಧ, ಪ್ರೇಮ, ಮರಣ, ದೇಶಭಕ್ತಿ. ದೈವಭಕ್ತಿ, ಪ್ರಕೃತಿಸೌಂದರ್ಯ, ಮಾನವಜನ್ಮದ ಸುಖದುಃಖಗಳು, ರಾಗದ್ವೇಷಗಳು. ಪುರುಷಾರ್ಥಗಳು. ಜನ್ಮಾಂತರ ದರ್ಶನಗಳು ಮುಂತಾದ ಕಾವ್ಯವಸ್ತುಗಳನ್ನು ಇತರ ದೇಶದ ಕವಿಗಳು ಯಾವ ರೀತಿಯಲ್ಲಿ ಪುಷ್ಟಿಗೊಳಿಸಿ ಸಹಜ ಭಾಷೆಯಲ್ಲಿ ಸೌಂದರ್ಯ ರಚನೆಯನ್ನು ಮಾಡಿರುವರೋ ಅದನ್ನೆಲ್ಲ ಶ್ರದ್ಧೆಯಿಂದ ಪರಾಮರ್ಶಿಸಿ, ಧೈರ್ಯವನ್ನೂ ಶಿಕ್ಷಣಬದ್ಧವಾದ ಸ್ವಾತಂತ್ರ್ಯವನ್ನೂ ವಹಿಸಿ ಕನ್ನಡ ಕವಿಗಳು ಹಿಂದಕ್ಕಿಂತಲೂ ಮುಂದೆ ಇನ್ನೂ ಶ್ರೇಯಸ್ಸನ್ನು ತಾಳಲಿ ಎನ್ನುವುದೇ ನಮ್ಮೆಲ್ಲರ ಹಾರೈಕೆಯಾಗಿರತಕ್ಕದ್ದಾಗಿದೆ.) ಆ ವಸ್ತುವೈವಿಧ್ಯ ತಮ್ಮ ಸ್ವಂತ ಕವಿತೆಗಳಲ್ಲಿ ಅವರಿಗೇ ಸಾಧಿತವಾಗಿಲ್ಲ. ಇದರಿಂದಾಗಿ ಲಕ್ಷ್ಯವನ್ನು ತೋರಿಸುವುದೇ ಅವರ ಉದ್ದೇಶವಾಗಿತ್ತೇ ವಿನಾ ಲಕ್ಷಣಗಳನ್ನು ಸಾಧಿಸುವುದಲ್ಲ ಎಂದು ತಿಳಿಯಬೇಕಾಗುತ್ತದೆ.

ಹೀಗೆ ಉದ್ದೇಶ ಆರೋಪಿತವಾದ್ದರಿಂದ, ಅದರ ಕಾವ್ಯ ಪ್ರೇರಣೆಯ ವಸ್ತುಗಳೂ ಆರೋಪಿತವಾಗುವುದು ಅನಿವಾರ್ಯವಾಯಿತೆಂದು ತೋರುತ್ತದೆ. ಅವರ ಎಲ್ಲ ಸ್ವತಂತ್ರ ಕವಿತೆಗಳೂ ಸಾಂದರ್ಭಿಕ ರಚನೆಗಳಾಗಿರುವುದನ್ನು ಇಲ್ಲಿ ನೆನೆಯಬಹುದು. ಉದಾಹರಣೆಗೆ 'ಶ್ರೀ ಕೃಷ್ಣರಾಜ ರಜತಮಹೋತ್ಸವ ಪ್ರಗಾಥ' ನಾಲ್ವಡಿ ಕೃಷ್ಣರಾಜ ಒಡೆಯರ ರಜತಮಹೋತ್ಸವ ಸಂದರ್ಭದಲ್ಲಿ ಬರೆದುದಾದರೆ, 'ಬಾನ್‌ಕೊಂಡ ಕೃಷ್ಣ' ಎಂಬ ಶೋಕಗೀತೆ, ಕೃಷ್ಣರಾಜ ಒಡೆಯರು ಮೃತರಾದಾಗ ಬರೆದುದು. ಹಾಗೇ ಜಯಚಾಮರಾಜರ ಪಟ್ಟಾಭಿಷೇಕ ಸಂದರ್ಭದಲ್ಲಿ 'ಶ್ರೀಜಯನ ಬೆಳಕು' ಮತ್ತು 'ಅರಮನೆಯ ಒಸಗೆ' ಎಂಬ ಪದ್ಯಗಳು ಬಂದಿವೆ. ವಿಜಯನಗರ ಸಾಮ್ರಾಜ್ಯದ ೬೦೦ ವರ್ಷದ ಹಬ್ಬದಲ್ಲಿ 'ಕನ್ನಡ ತಾಯ ನೋಟ', ಮೈಸೂರು ವಿಶ್ವವಿದ್ಯಾಲಯದ ಬೆಳ್ಳಿಹಬ್ಬದ ಸಂದರ್ಭದಲ್ಲಿ 'ಶುಕ್ರಗೀತೆ' ಹೊರಬಂದಿವೆ. ಒಂದು ಒಳ್ಳೆಯ ಕವಿತೆ ಹೊರಗಿನ ಒತ್ತಡದಿಂದ ಪ್ರೇರಣೆ ಪಡೆದು ಹುಟ್ಟಬಾರದೆಂದಿಲ್ಲ. ಆದರೆ ಅದು

ನಿಶ್ಚಿತ ಸಾಂದರ್ಭಿಕತೆಯನ್ನು ದಾಟಿಕೊಂಡು, ಮೀರಿ ಬೆಳೆಯುವುದು ಸಾಧ್ಯವಾದಾಗ ಅದಕ್ಕೆ ಕಾವ್ಯತ್ವ ಪ್ರಾಪ್ತವಾಗುತ್ತದೆ. ಶುಕ್ರಗೀತೆಯಲ್ಲಿ ಹೀಗಾಗಿರುವುದನ್ನು ನೋಡಬಹುದು. ಇಲ್ಲಿ ವಿಶ್ವವಿದ್ಯಾಲಯದ ಬೆಳ್ಳಿಹಬ್ಬದ ಸಂದರ್ಭ ಆರಂಭದ ಪ್ರೇರಣೆ ಮಾತ್ರ. ಆ ನೆಪದಲ್ಲಿ, ಬೆಳಕು-ಕತ್ತಲೆಗಳ ನಿರಂತರ ತಿಕ್ಕಾಟವನ್ನೇ ನಾಟ್ಯಮಯವಾಗಿ ಬೆಳೆಸುತ್ತಾ ಹೋಗುವ ಕವಿತೆ, ಸಂದರ್ಭದ ಹಂಗಿನಿಂದ ಪಾರಾಗಿ, ಸ್ವತಂತ್ರವಾಗಿ ನಿಲ್ಲುವುದನ್ನು ನೋಡಬಹುದು (ಪದ್ಯದ ಕೊನೆಯಲ್ಲಿ ಮತ್ತೆ ಶ್ರೀಜಯನ್ ಅನ್ನು ತಂದಿರುವುದು ಮೊಸರಲ್ಲಿ ಕಲ್ಲು). ಶುಕ್ರಗೀತೆಯಲ್ಲಿ ಗ್ರೀಕ್ ಟ್ರಾಜೆಡಿಗಳಲ್ಲಿ ಕಾಣುವ ಮನುಷ್ಯನ ಅಹಂಕಾರ ಮೂಲವಾದ ಅಧಃಪತನ, ದೈವ ಕೋಪಗಳ ಸೂಚನೆ ಇರುವಂತೇ ಶ್ರೀ ಅವರ ಮೆಚ್ಚಿನ ಮ್ಯಾಥ್ಯೂ ಆರ್ನಾಲ್ಡನ ಸಂಸ್ಕೃತಿ ಜಿಜ್ಞಾಸೆಯ ಚಿಂತನೆಯೂ ಇದ್ದು, ಜೀವನಪ್ರವಾಹದ ಏಳುಬೀಳುಗಳನ್ನು ಶುಕ್ರಗೀತೆ (ಅದು ಬೆಳಕಿನ ಹಾಡು ಕೂಡ) ಅಭಿನೀತಗೊಳಿಸುತ್ತಿದೆ. ಶುಕ್ರಗೀತೆಯಂತೆಯೇ ಕಾವ್ಯತ್ವದಿಂದ ತುಂಬಿರುವ ಇನ್ನೊಂದು ಸಾರ್ಥಕ ಕವಿತೆ 'ಕನ್ನಡ ತಾಯ ನೋಟ' ಎಂಬ ನೀಳ್ಗವಿತೆ. ನಿಡಿದಾದ ಪಂಕ್ತಿಗಳ ಈ ದೀರ್ಘಕವಿತೆಯಲ್ಲಿ ಬೇರೆ ಬೇರೆ ಧಾಟಿಗಳು ಛಂದಕ್ಕೆ ತಕ್ಕಂತೆ ಮುರಿದುಕೊಳ್ಳುವ ಸೊಗಸು ಗಮನಿಸಬೇಕಾದ್ದು.

**ಕೆಳಗೆ ಬೆಳೆಹೊಲ ಕಪ್ಪು, ಮೇಲೆ ಬಾಂಬೊಲ**
**ಕಪ್ಪು, ಬೆಟ್ಟಗಳ ಕಪ್ಪು,**
**ಕಾರ್‌ಮೋಡಗಳ ಕಪ್ಪು, ಹೊಳೆಕೆರೆಯ**
**ಮಡು ಕಪ್ಪು, ತಾಯಕಾಲ್‌ತೊಳೆವ**
**ಉಪ್ಪುಕಡಲದು ಕಪ್ಪು, ಜನ ಕಪ್ಪು – ಏನೆಂದೆ ತಪ್ಪು ತಪ್ಪು !**

ಅಭಿಮಾನದ ವಿಜೃಂಭಣೆಯಲ್ಲಿ ಧುಮ್ಮಿಕ್ಕುವ ಪದಗಳ ಭರದಲ್ಲಿ ಜನ ಕಪ್ಪು ಎಂದು, ನಾಲಗೆ ಕಚ್ಚಿ ಅದನ್ನು ತಿದ್ದುವ – ಏನೆಂದೆ ತಪ್ಪು ತಪ್ಪು ಎಂದು ಮುಗುಳ್ನಗುವ ಧಾಟಿ ಕಾವ್ಯಕ್ಕೆ ಕಳೆತರುವಂಥದ್ದು. ಕನ್ನಡ ತಾಯಿ ಮತ್ತು ಕವಿ ಮುಖಾಮುಖಿ ಆಗುವ ಸಂದರ್ಭವಂತೂ ಕಾವ್ಯದ ಶಿಖರ. ನಾಟಕೀಯತೆಯಿಂದ ಮಾತ್ರ ಕಾವ್ಯಕ್ಕೆ ಒದಗುವ ಭಿನ್ನ ಧ್ವನಿಗಳೂ ಮತ್ತು ಆಡುನುಡಿಯ ಕಾಕುಗಳಿಗಾಗಿ ಈ ಭಾಗವನ್ನು ಓದಿದಷ್ಟೂ ಲಾಭ. ಮುಂದೆ ಹೇಗೆ ಇದು ಕನ್ನಡ ಕಾವ್ಯದ ಒಂದು ಒಪ್ಪಿತ 'ವಾಸ್ತುಕ್ರಮ' ಆಯಿತೆಂಬುದನ್ನು ಕನ್ನಡ ಕಾವ್ಯ ಸಂಪ್ರದಾಯ ಬಲ್ಲವರಿಗೆ ವಿವರಿಸಬೇಕಾದ್ದಿಲ್ಲ (ತಾಯಿ ಮಗನ ಮುಖಾಮುಖಿ).

ಹೊಂಗನಸುಗಳು ಸಂಕಲನದ ಶ್ರೀ ಅವರ ಬೇರೆ ಸ್ವತಂತ್ರ ಕವಿತೆಗಳಲ್ಲಿ ಈ ಮಟ್ಟದ ಕಾವ್ಯಗುಣ ಕಾಣುವುದು ಕಷ್ಟ. ಅದಕ್ಕಾಗಿ ಹೃದಯ ತಾಗುವ ಕವಿತೆಗಳ ಸಾಲುಗಳಿಗೆ ನಾವು ಅವರ ಅಶ್ವತ್ಥಾಮನ್ ನಾಟಕದ ಮೇಳಗೀತೆಗಳನ್ನು ನೋಡಬೇಕಾಗುವುದು.

ಚೆಲ್ವಿನ ನೆಲೆ ಕಣ್ಗಳ ಬಲೆ ಸುಖದೊಱತೆಯು ಬನವಾಸೀ
ಬಳಿದಲೆದಾ ಕಾನ್‌ಮಲೆಗಳನ್ ಆನ್ ಮಱೆವೆನೆ ಬನವಾಸೀ
ಭಾರತದೀ ಸುಟಿಗಾಳಿಗೆ ಸಿಲ್ಕುತೆ ನಾನ್ ತಱಗಾದೆನ್
ಪೆಱೆ ತುಂಬುತೆ ಪೆಱೆ ತೇಯುತೆ ಮನೆಗಾಣದೆ ಬಡವಾದೆನ್

– ಈ ಮೊದಲಾದ ಸಾಲುಗಳು ಪಂಪನ ಬನವಾಸಿಯ ಪ್ರೀತಿಯನ್ನು ನೆನೆಸುತ್ತಲೇ, ಶ್ರೀ ಅವರ ವಸ್ತುವೈವಿಧ್ಯದ ಆಶಯವನ್ನೂ ಸಾಧಿಸಿಬಿಡುತ್ತವೆ (ಪ್ರಕೃತಿ ಸೌಂದರ್ಯ – ನಾಡ ಪ್ರೇಮ).

ಕಾವ್ಯದ ಭಾಷೆ ಆಡುಗನ್ನಡವೇ ಆಗಬೇಕು, ಏಕೆಂದರೆ ಇಂದಿನ ಕಾವ್ಯ ಉದ್ದೇಶಿಸಿರುವುದು ರಾಜಸಭೆ ಪಂಡಿತಮಾನ್ಯರನ್ನಲ್ಲ ಎಂಬ ಶ್ರೀ ಅವರ ಆಶಯವನ್ನು ಹಿಂದೆಯೇ ಪ್ರಸ್ತಾಪಿಸಲಾಗಿದೆಯಷ್ಟೆ ? ಇಂಗ್ಲಿಷ್ ಗೀತೆಗಳ ಅನುವಾದದಲ್ಲಿ ಆಡುಗನ್ನಡದ ಸೊಗಸಾದ ಬಳಕೆಯನ್ನು ಶ್ರೀ ಅವರು ಮಾಡಿದ್ದಾರೆ. ಆದರೆ ಸ್ವಂತ ಕವಿತೆಗಳಲ್ಲಿ ಆಡುನುಡಿಯ ಬಳಕೆ ಕೆಲವು ಕಡೆ ಕಂಡುಬಂದರೆ, ಹಳಗನ್ನಡದ ರೂಪಗಳ ಶೈಲಿ ಕೆಲವು ಕವಿತೆಗಳಲ್ಲಿ ಕಂಡುಬರುತ್ತದೆ. ವಸ್ತು ಮತ್ತು ಧಾಟಿಯಲ್ಲಿ ಗಂಭೀರವಾದ ಕೂಡಲೆ ಶ್ರೀ ಹಳಗನ್ನಡಕ್ಕೆ ನುಗ್ಗುವುದನ್ನು ನೋಡಿದರೆ, ಗಹನವಾದ ಬರವಣಿಗೆಗೆ ಈ 'ಭಾರ' ಅಗತ್ಯ ಎಂದು ಅವರು ನಂಬಿದ ಹಾಗೆ ಕಾಣುತ್ತದೆ. (ಪರಮೋತ್ಕೃಷ್ಟವಾದ ಕಾವ್ಯ ನಾಟಕ ಗೀತೆಗಳಿಗೆ ಹಳಗನ್ನಡವನ್ನು ಉಪಯೋಗಿಸಿದರೂ ಉಪಯೋಗಿಸಬಹುದು ಎಂಬ ಅವರ ವಿಚಾರವನ್ನು ಈ ಲೇಖನದ ಪ್ರಾರಂಭದಲ್ಲೇ ಪ್ರಸ್ತಾಪಿಸಲಾಗಿದೆಯಷ್ಟೆ ?). ಪರಮೋತ್ಕೃಷ್ಟ ಬರವಣಿಗೆಗೆ ಈ ಹಳಗನ್ನಡ ಶೈಲಿ ಎಂಬುದೂ ಮುಂದೆ ಕನ್ನಡಕ್ಕೆ ಒಂದು ಮಾದರಿಯಾಗಿ (ಅಷ್ಟೇನು ಶ್ಲಾಘ್ಯವಲ್ಲದ ಮಾದರಿಯಾಗಿ) ಕೂತದ್ದನ್ನು ಇಲ್ಲಿ ನೆನೆಯಬಹುದಾಗಿದೆ. ಅಂತೂ ಹೀಗೆ ಮುದ್ದಣನ ರೂಪಾಂತರಿತ ಪಳಿಯುಳಿಕೆಯೊಂದು ಕನ್ನಡದಲ್ಲಿ ಮುಂದುವರೆಯಲು ಶ್ರೀ ಅವರು ಕಾರಣರಾದರು.

ಶುಕ್ರಗೀತೆಯ

ಬಾನ ಗಡಿಯಲಿ ಗಿಡದ ಕತ್ತಲೆಯ ಗುಹೆಯೊಳಡಗಿರ್ದರಾ ಅಸುರರ್
ಕೇಳ್ದರಾ ಪಾಟಮಂ ಪಲ್ಮೊರೆದು ಕಣ್ಣೆರಿಯೆ ಕಂಡರಾಬಿಡುಗಣ್ಣ ಬೆಳಕನ್
ಪೊಳೆದು ಪೊಳೆಯಿಸುತಿರ್ಪ ಬಿಳಿಯ ಬಾನ್‌ಬೆಳಕನ್

ಮೆಲ್ಲಮೆಲ್ಲನೆ ನುಸುಳಿ ದೇವರಾವರಣದಲಿ ಆಳ ತೋಟದಲಿ
ತೆಕ್ಕೆ ತೆಕ್ಕೆಯೊಳೆದ್ದು ಹೊರಬಿದ್ದು ಕಾರಿರುಳ ಮೊತ್ತಂಗಳಾಗಿ
ಪೊಗೆಯಾಗಿ ನೊಣೆವ ಪಡಿನೆಳಲಾಗಿ ನಂಜಾಗಿ ಕಣ್ಣ ಮಂಜಾಗಿ
ಮುತ್ತಿ ಮರಳ್ಗೊಳಿಸಿದರ್ ಸಂಶಯಗಳನೊತ್ತಿ ಪಾಪಮಂಬಿತ್ತಿ.

– ಮುಂತಾದ ಸಾಲುಗಳನ್ನು ಓದುವಾಗ ಕುವೆಂಪು ಅವರ ಭಾಷಾಶೈಲಿಯ ಮೂಲಪ್ರೇರಣೆಗಳು ಇಲ್ಲಿರುವುದನ್ನು ಯಾರೂ ಗುರುತಿಸಬಹುದು.

ಇದಕ್ಕೆ ತದ್ವಿರುದ್ಧವಾದ ಇನ್ನೊಂದು ಶೈಲಿಗೆ ಇಂಗ್ಲಿಷ್ ಗೀತೆಗಳ ಪದುಮ ಕವಿತೆಯನ್ನು ನೋಡಬೇಕು.

ಅರಸಿನ ಕುಲವೋ, ಏನಿದ್ದೇನು !
ಸುರವಧು ರೂಪೋ, ಏನಿದ್ದೇನು !
ಗುಣವೋ ಸೊಬಗೋ ಏನಿದ್ದೇನು ।
ಪದುಮಾ ಇದ್ದುವು ನಿನಗೆಲ್ಲಾ ;
ಪದುಮಾ ಎಚ್ಚತ್ತಳುವುದೆ ಅಲ್ಲದೆ
ಕಣ್ಣಿವು ನಿನ್ನನು ಕಾಣುವುವೆ ?
ನೆನಸಿಕೊಳುವೆ, ಬಿಸುಸುಯ್ಯುವೆ ಇರಳನು
ನಿನಗೆಯೆ ಮೀಸಲು ತೆಗೆದಿಡುವೆ

[Landor (1775-1864) : Rose Aylmer]

ಈ ಭಾಷಾ ಶೈಲಿಯ ಕವಲು ತೀ. ನಂ. ಶ್ರೀ. ಅವರ 'ಒಲುಮೆ'ಯ ಕವಿತೆಗಳಲ್ಲಿ, ಅದಕ್ಕಿಂತ ಚೆನ್ನಾಗಿ ಕೆ. ಎಸ್. ನ. ಅವರ 'ಮೈಸೂರು ಮಲ್ಲಿಗೆ'ಯಲ್ಲಿ ಫಲಿಸಿರುವುದು ಕನ್ನಡ ಕಾವ್ಯಾಭ್ಯಾಸಿಗಳಿಗೆ ತಿಳಿದಿರುವ ಸಂಗತಿ.

ಒಂದು ಕಡೆ ಕಾವ್ಯ ಜನಸಾಮಾನ್ಯಕ್ಕೆ ತಲಪಬೇಕು, ರಾಜರಿಗೆ ಪಂಡಿತರಿಗೆ ಅಲ್ಲ ಎನ್ನುವುದು – ರಾಜಭಕ್ತಿ ಮತ್ತು ರಾಜವ್ಯವಸ್ಥೆಯನ್ನು ವಿಜೃಂಭಿಸಿ ಬರೆಯುವುದು – ಈ ವಿರೋಧಗಳೇ ಶ್ರೀ ಅವರ ಶೈಲಿಯ ಈ ಕವಲಿಗೂ ಕಾರಣವಾಗಿವೆ ಎಂದು ತಿಳಿಯಬೇಕಾಗಿದೆ.

ಶ್ರೀ ಅವರಲ್ಲಿ ಈ ಕವಲುಗಳು ಹೀಗೇ ಮುಂದುವರೆಯುತ್ತವೆ. ದೇಶಭಕ್ತಿ ಮತ್ತು ಇಂಗ್ಲೆಂಡ್ ಸಾರ್ವಭೌಮತ್ವದ ಬಗ್ಗೆ ಗೌರವ. ಜನಸಾಮಾನ್ಯರಲ್ಲಿ ಪ್ರೀತಿ ಮತ್ತು ಅರಸೊತ್ತಿಗೆಯಲ್ಲಿ ವಿಶ್ವಾಸ. ಆಡುನುಡಿಯ ಪ್ರೇಮ ಮತ್ತು ಪ್ರೌಢ ಹಳಗನ್ನಡ ಭಾಷಾಶೈಲಿಯ ಬಗ್ಗೆ ಮೋಹ. ಇವೆಲ್ಲಾ ಒಂದಕ್ಕೊಂದು ಸಂಬಂಧಿಸಿದವೇ.

ಸುಮಾರು ಮೂವತ್ತು ವರ್ಷಗಳ ದೀರ್ಘಾವಧಿಯಲ್ಲಿ (೧೯೧೪-೧೯೪೩) ಶ್ರೀ ಅವರ ಸೃಜನಶೀಲತೆಯನ್ನು ಕೆರಳಿಸಿದ ಪ್ರೇರಣೆಗಳು ಹೆಚ್ಚಾಗಿ ಅರಸೊತ್ತಿಗೆ ಮತ್ತು ವ್ಯವಸ್ಥೆಗೆ ಸಂಬಂಧಿಸಿಯೇ ಒದಗುವುದು ನೋಡಿದಾಗ, ಒಂದು ನಿರ್ಬಂಧಿತ ಆವರಣದಲ್ಲಿ ಶ್ರೀ ಅವರ ಶಕ್ತಿ ದುಡಿಯಿತೆಂಬುದು ಸ್ಪಷ್ಟ. ಸ್ವಾತಂತ್ರ್ಯಹೋರಾಟದ ಉರುಬಿನ ಆ ಕಾಲದಲ್ಲಿ ಶ್ರೀ ಅವರು ತಮ್ಮ ಸೃಷ್ಟಿಶೀಲ ಬರವಣಿಗೆಯಲ್ಲಿ ಆ ಪ್ರೇರಣೆಗಳಿಗೆ ಪೂರ್ಣವಾಗಿ ವಿಮುಖರಾದದ್ದು ಮೇಲಿನ ತೀರ್ಮಾನವನ್ನು ಸಮರ್ಥಿಸುವಂತಿದೆ. ಈ ಬಗೆಯ ದ್ವಂದ್ವಗಳು ಅಪಾಯಕಾರಿ ಆಗಬಹುದಾದರೆ, ಧ್ವನಿ ಮತ್ತು ಸಂಕೇತಗಳ ಪರಿವೇಷವಾದರೂ ಸೃಜನಶೀಲತೆಗೆ ಉಂಟಲ್ಲ ?

ಅವುಗಳನ್ನಾದರೂ ಶ್ರೀ ಅವರು ತಮ್ಮ ಬರವಣಿಗೆಯಲ್ಲಿ ಸಮಕಾಲೀನ ಸಂದರ್ಭದ ಪ್ರತಿಕ್ರಿಯೆಗೆ ಏಕೆ ಬಳಸದೆ ಹೋದರು ಎಂಬುದಕ್ಕೆ ಸಮಾಧಾನಕಾರಿಯಾದ ಉತ್ತರ ಹೊಳೆಯುವುದಿಲ್ಲ.

ಈ ಸಣ್ಣ ಪುಟ್ಟ ಅರೆಗಳನ್ನು ಸೂಚಿಸಿಯೂ, ಶ್ರೀ ಅವರು ತಮ್ಮ ಅನುವಾದ ಮತ್ತು ಸ್ವಂತ ರಚನೆಗಳ ಮೂಲಕ ಸ್ಥಗಿತವಾಗಿದ್ದ ಕನ್ನಡ ಸಾಹಿತ್ಯ ಪ್ರವಾಹಕ್ಕೆ ಹೊಸ ಚಾಲನೆ ನೀಡಿದ್ದನ್ನೂ, ಅದಕ್ಕೆ ವೈವಿಧ್ಯಮಯವಾದ ಹಲವು ಹಾದಿಗಳನ್ನು ತೆರೆದದ್ದನ್ನೂ, ಆ ಪರಂಪರೆಯ ಯಾವುದೋ ಕವಲಲ್ಲಿ ಕೂತು ಆಲಾಪಿಸುತ್ತಿರುವ ಈವತ್ತಿನ ಯಾವನೇ ಲೇಖಕನೂ ಅತ್ಯಂತ ಕೃತಜ್ಞತೆಯಿಂದ ನೆನೆಯಬೇಕಾಗುತ್ತದೆ.

# ಶ್ರೀಯವರ ಪ್ರಗಾಥಗಳು

– ಎನ್. ಎಸ್. ತಾರಾನಾಥ

೧

ಬಿ. ಎಂ. ಶ್ರೀಕಂಠಯ್ಯನವರು ನವೋದಯ ಕಾವ್ಯದ ಕ್ರಾಂತಿಪುರುಷರೆಂದು ಖ್ಯಾತರಾಗಿರುವುದು ಈಗಾಗಲೇ ಪ್ರಸಿದ್ಧವಾಗಿರುವ ವಿಷಯ. ಅವರು ಕನ್ನಡ ಕಾವ್ಯವಸ್ತುವಿಗೆ ಹೊಸ ಬಣ್ಣಗಳನ್ನು ಹಚ್ಚಿದರು; ಕನ್ನಡ ಕಾವ್ಯಭಾಷೆಯನ್ನು ಸಾಣೆಗೊಡ್ಡಿ ಹೊಸ ಹೊಳಪನ್ನು ಚೆಲ್ಲಿದರು; ಕನ್ನಡ ಕಾವ್ಯ ಪ್ರಕಾರಕ್ಕೆ ಹೊಸ ಛಂದಸ್ಸಿನ ಉಡುಪು ತೊಡಿಸಿದರು. ಅವರ 'ಇಂಗ್ಲಿಷ್ ಗೀತಗಳು' ಮತ್ತು 'ಹೊಂಗನಸುಗಳು' ಈ ಮಾತಿಗೆ ನಿದರ್ಶನವಾಗಿರುವ ಕವನ ಸಂಕಲನಗಳು. ಅವರಿಗೆ ಆಧುನಿಕ ಕನ್ನಡ ಕಾವ್ಯದ ಛಂದಃ ಪ್ರವರ್ತಕರು ಎಂಬ ಹೆಸರು ಬಂದಿರುವುದಾದರೂ ಈ ಕೃತಿಗಳಿಂದಲೇ. ಅವರು ತಮ್ಮ ಇಂಗ್ಲಿಷ್ ಗೀತಗಳಲ್ಲಿ ಕನ್ನಡದಲ್ಲಿ ಹಿಂದಿನಿಂದಲೂ ಪ್ರಚುರವಾಗಿದ್ದ ಮಾತ್ರಾಗಣಗಳ ಅಡಿಗಲ್ಲಿನ ಮೇಲೆ ಚರಣ ವಿನ್ಯಾಸ ಮತ್ತು ಪ್ರಾಸ ವಿಲಾಸಗಳಲ್ಲಿ ವೈವಿಧ್ಯ ತಂದು ಬಗೆಬಗೆಯ ಭಾವಗೀತಾತ್ಮಕ ಬಂಧಗಳನ್ನು ಪ್ರಧಾನವಾಗಿ ಪ್ರಯೋಗಿಸಿದ್ದರೆ, ತಮ್ಮೆರಡೂ ನಾಟಕಗಳಲ್ಲಿ ಸರಳರಗಳೆಯ ಬಂಧವನ್ನು ವೈವಿಧ್ಯ ಮತ್ತು ನಾವೀನ್ಯಗಳ ಸಲುವಾಗಿ ತಂದಿದ್ದಾರೆ. 'ಹೊಂಗನಸುಗಳು' ಸಂಕಲನದಲ್ಲಾದರೋ ಆವರೆಗಿನ ಆಧುನಿಕ ಕನ್ನಡ ಕಾವ್ಯದಲ್ಲಿ ಕಾಣದಿದ್ದ ಪ್ರಗಾಥವೆಂಬ ಹೊಸ ಸಾಹಿತ್ಯ ರೂಪವನ್ನು ಪ್ರಮುಖವಾಗಿ ಪ್ರಯೋಗಿಸಿ, ಅದನ್ನು ದೃಢವಾಗಿ ನೆಲೆಯೂರಿಸುವ ಪ್ರಯತ್ನ ಮಾಡಿದ್ದಾರೆ. ಒಟ್ಟಿನಲ್ಲಿ ಅವರು ಹೊಸ ಕವಿತೆಗೆ ಹೆದ್ದಾರಿಗಳನ್ನು ತೆರೆದರು ಎಂಬ ಮಾತು ನಿಜ.

ಶ್ರೀಕಂಠಯ್ಯನವರು ಆಧುನಿಕ ಕನ್ನಡದ ಮುಖ್ಯವಾದ ಕಾವ್ಯಪ್ರಕಾರಗಳಲ್ಲಿ ಸಾನೆಟ್ಟನ್ನು ಪ್ರಯೋಗಿಸಲಿಲ್ಲ;[1] ಸರಳರಗಳೆಯನ್ನು ಪ್ರಯೋಗಿಸಿದರಾದರೂ ಅದನ್ನು ತುಂಬ ಕ್ವಚಿತ್ತಾಗಿಯೇ ವಿನಾ ಪೂರ್ಣ ಪ್ರಮಾಣವಲ್ಲಿ ಬಳಸಲಿಲ್ಲ;[2]

ಪ್ರಗಾಥವೊಂದನ್ನೇ ವಿಶೇಷವಾಗಿ ವೈವಿಧ್ಯ ಪೂರ್ಣವಾಗಿ ಪ್ರಾಮುಖ್ಯವಿತ್ತು ಪ್ರಯೋಗಿಸಿದ್ದಾರೆ. ಮೊದಲಿನಿಂದಲೂ ಅವರಿಗೆ ಪ್ರಗಾಥದ ಒಗ್ಗೆ ಹೆಚ್ಚಿನ ಒಲವು ಇದ್ದಿತೆನ್ನಲು ಸಾಕ್ಷ್ಯವಿದೆ. ಗ್ರೀಕ್ ಮತ್ತು ಇಂಗ್ಲಿಷ್ ಸಾಹಿತ್ಯಗಳನ್ನು ಗಾಢವಾಗಿ ಅಭ್ಯಾಸ ಮಾಡಿದ್ದ ಅವರು ಅಲ್ಲಿಯ 'ಓಡ್'ಗಳಿಗೆ ತಮ್ಮ ಮನಸೆತ್ತಿದ್ದರು. ಭಾರತೀಯ ವೇದ ಸಾಹಿತ್ಯದ ಪ್ರಗಾಥಗಳ ಪರಿಚಯವೂ ಅವರಿಗೆ ಚೆನ್ನಾಗಿ ಇತ್ತು. ಈ ಹಿನ್ನೆಲೆಯಲ್ಲಿ ಅವರು ಪ್ರಗಾಥವೆಂಬ ರೂಪವನ್ನು ಕನ್ನಡಕ್ಕೆ ತಂದರು. ಸಂಸ್ಕೃತದಲ್ಲಿ ಭಿನ್ನಾಕ್ಷರಗಳ, ಭಿನ್ನ ನುಡಿಗಳ ಭಿನ್ನ ಪಾದಗಳ ಛಂದಸ್ಸುಗಳನ್ನು ಬೆರೆಸಿ ಪ್ರಗಾಥಗಳ ರಚನೆಯಾಗಿರುವುದು ಅವರಿಗೆ ತಿಳಿದಿತ್ತು. ಹಾಗೆಯೇ ಪಾಶ್ಚಾತ್ಯರ ಓಡುಗಳಲ್ಲಿ ಸಣ್ಣ-ದೊಡ್ಡ ಪಾದಗಳು, ಅವುಗಳ ನಿಯತಾನಿಯತ ಬೆರೆತ, ಅಯಾಂಬಸ್ ಮತ್ತು ಡಕ್ಟಿಲ್ ಗಣಗಳ ಸಮ್ಮಿಶ್ರ ಪ್ರಯೋಗಗಳನ್ನು ಅವರು ಗುರುತಿಸಿದ್ದರು. ಇದರೊಂದಿಗೇ ಸಂಸ್ಕೃತದ ಪ್ರಗಾಥ ಮತ್ತು ಪಾಶ್ಚಾತ್ಯ 'ಓಡು'ಗಳ ನಡುವೆ "ದೊಡ್ಡ ನುಡಿಗಳು, ವಿಭಿನ್ನ ಪಾದಪ್ರಮಾಣ, ಗಣವಿನ್ಯಾಸ ವೈಚಿತ್ರ್ಯ, ಗೀತ ಅಥವಾ ಘೋಷಗುಣ ಇತ್ಯಾದಿಯಾದವು ಉಭಯ ಸಾಮಾನ್ಯವಾಗಿದ್ದುದನ್ನೂ" ಅವರು ಕಂಡುಕೊಂಡಿದ್ದರು.[3] ಆದ್ದರಿಂದಲೇ 'ಓಡ್' ಎಂಬ ಶಬ್ದಕ್ಕೆ ಸಂವಾದಿಯಾಗಿ 'ಪ್ರಗಾಥ'ವೆಂಬ ಶಬ್ದವನ್ನು ಶ್ರೀಕಂಠಯ್ಯನವರು ಬಳಸಿದರು. ೧೯೨೭ರಲ್ಲಿ ಪ್ರಕಟಿಸಿದ ತಮ್ಮ 'ಶ್ರೀ ಕೃಷ್ಣರಾಜ ರಜತಮಹೋತ್ಸವ ಪ್ರಗಾಥ' ಎಂಬ ಪದ್ಯದ ಶೀರ್ಷಿಕೆಯಲ್ಲಿ ಅವರೇ ಈ ಶಬ್ದವನ್ನು ಮೊತ್ತಮೊದಲ ಬಾರಿಗೆ ಪ್ರಯೋಗಿಸಿದರು. ಮುಂದೆ 'ಕನ್ನಡ ಛಂದಸ್ಸಿನ ಚರಿತ್ರೆ' ಬರೆಯುವಾಗ ಪ್ರಗಾಥಗಳಿಗೆ ಸಂಬಂಧಿಸಿದಂತೆ "ಇವು ಬಹು ಗಂಭೀರವಾಗಿಯೂ ಉತ್ಸಾಹಪೂರಿತವಾಗಿಯೂ ಇರುತ್ತವೆ" ಎಂದೂ, ಕನ್ನಡ ಕವಿಗಳಿಗೆ ಸೂಚನೆ ಕೊಡುತ್ತ "ಮುಂದೆ ಬರುವ ಕವಿಗಳಾದರೂ ಜೀವಕಳೆಯಿಂದ ನಲಿಯುವ ಈ ವೈದಿಕ ಛಂದಸ್ಸಿನ ಸೌಂದರ್ಯದ ಕಡೆಗೆ ಕಣ್ಣು ತಿರುಗಿಸಬಹುದಲ್ಲವೆ ?"ಎಂದೂ ಶ್ರೀಕಂಠಯ್ಯನವರು ಕೇಳಿದುದನ್ನು[4] ಈ ಸಂದರ್ಭದಲ್ಲಿಯೇ ನೆನೆಯಬಹುದಾಗಿದೆ. ಈ ಸಂಗತಿಗಳು ಪ್ರಗಾಥದ ಬಗ್ಗೆ ಶ್ರೀಯವರಿಗಿದ್ದ ಪ್ರೀತಿ-ವಾತ್ಸಲ್ಯಗಳ ಕುರುಹಾಗಿವೆ ಎಂದರೆ ತಪ್ಪಾಗದೇನೋ.

ಪ್ರಗಾಥ ಎಂಬ ಹೆಸರಿನೊಂದಿಗೆ ಕೃಷ್ಣರಾಜ ಒಡೆಯರನ್ನು ಕುರಿತು ಶ್ರೀಯವರು ರಚಿಸಿದ ಕವನವೇ ಕನ್ನಡ ಪ್ರಗಾಥಗಳಲ್ಲಿ ಮೊದಲನೆಯದು ಎಂಬುದು ದಿಟ. ಆದರೆ ಪ್ರಗಾಥವೆಂಬ ಶಬ್ದದ ಬಳಕೆಯಿಲ್ಲದೆ ಇದಕ್ಕೂ ಹಿಂದೆ ರಚಿತವಾದ ಕೆಲವು ಕವನಗಳು ಪ್ರಗಾಥದ ಲಕ್ಷಣಗಳನ್ನು ತೋರುತ್ತಿರುವುದುಂಟು. ಅವುಗಳಲ್ಲಿ ಮುಖ್ಯವಾದವು, ೧೯೧೨ರಲ್ಲಿ ರಾಜಗೋಪಾಲಕೃಷ್ಣರಾಯರು ಬರೆದ 'ಪಟ್ಟಾಭಿಷೇಕಾಷ್ಟಕಂ', ೧೯೧೮ರಲ್ಲಿ ಶ್ರೀಕಂಠಯ್ಯನವರೇ ರಚಿಸಿದ 'ಭರತಮಾತೆಯ ನುಡಿ', ೧೯೨೩ರಲ್ಲಿ ಡಿ. ವಿ. ಜಿ. ಅವರು ಪ್ರಕಟಿಸಿದ 'ಬೇಲೂರಿನ ಶಿಲಾಬಾಲಿಕೆಯರು'. ಪಟ್ಟಾಭಿ

ಪೇಕಾಷ್ಟಕ'ದಲ್ಲಿ ೭ ವೃತ್ತ, ೨ ಕಂದಗಳಿದ್ದರೂ ಸಂಬೋಧನೆಯ ರೀತಿ, ಸ್ವತಂತ್ರ ಕಲ್ಪನೆ, ಪ್ರೌಢನಿರೂಪಣೆ ಇಲ್ಲದುದರಿಂದ ಅದೊಂದು ಕೇವಲವಾದ ಮಂಗಳಾಶಾಸನ ಪದ್ಯವಾಗಿದೆಯೆಂದು ಅನಂತನಾರಾಯಣ ಅಭಿಪ್ರಾಯಪಡುತ್ತಾರೆ.[5] ಅವರೇ ಪ್ರಗಾಥವೆಂಬ ಸೂಚನೆಯಿರದ 'ಬೇಲೂರಿನ ಶಿಲಾಬಾಲಿಕೆಯರು' ಪದ್ಯವನ್ನು ಮೊತ್ತಮೊದಲ ಪ್ರಗಾಥವೆಂದು ಹೇಳಿದ್ದರೂ[6], ಅದರ ರಚನಾಕಾಲ ೧೯೨೩ ಆಗಿದೆ. ಆದರೆ ೧೯೧೪ರಲ್ಲಿಯೇ ರಚಿತವಾದ ಶ್ರೀಯವರ 'ಭರತಮಾತೆಯ ನುಡಿ'ಯ ಶೀರ್ಷಿಕೆಯಲ್ಲಿ ಪ್ರಗಾಥವೆಂಬ ಸೂಚನೆಯಿಲ್ಲವೆಂಬುದು ನಿಜ. ಆದರೆ ಸಂಬೋಧನ ಪರ ಶೈಲಿ, ಉದಾತ್ತವಾದ ಭಾವನೆ ಮತ್ತು ಆದರ್ಶಗಳನ್ನು ಕುರಿತ ನೆನವರಿಕೆಯ ನಿರೂಪಣೆ, ಹ್ರಸ್ವ-ದೀರ್ಘ ಪಾದಗಳ ಮಿಶ್ರಣದಿಂದುಂಟಾಗಿರುವ ಛಂದೋವೈವಿಧ್ಯ, ದೇಶಾಭಿಮಾನದ ಅಭಿವ್ಯಕ್ತಿ, ಪದ್ಯದ ದೀರ್ಘವ್ಯಾಪ್ತಿ, ಅದನ್ನೊಂದು ಪ್ರಗಾಥವನ್ನಾಗಿಸಿದೆ. ಎಲ್ಲ ನುಡಿಗಳಲ್ಲೂ ನಿಯತವಾದ ಛಂದಸ್ಸೊಂದು ಕಾಣಿಸಿಕೊಂಡಿರುವುದರಿಂದ ಇದೊಂದು ನಿಯತ ಪ್ರಗಾಥವೇ ಆಗಿದೆ. ಈ ಹಿನ್ನೆಲೆಯಲ್ಲಿ ಪ್ರಗಾಥವೆಂದು ಹೆಸರಿಟ್ಟಾಗಲಿ, ಹೆಸರಿಡದೆಯಾಗಲಿ ಕನ್ನಡದಲ್ಲಿ ಸ್ವತಂತ್ರ ಕವನವೊಂದಕ್ಕೆ ಈ ಸಾಹಿತ್ಯ ರೂಪವನ್ನು ಪ್ರಯೋಗಿಸಿದ ಕೀರ್ತಿ ಶ್ರೀಕಂಠಯ್ಯನವರದು ಎನ್ನಬೇಕು. ಈಗಿನ ತಿಳಿವಳಿಕೆಯ ಮಟ್ಟಿಗೆ ಪ್ರಗಾಥದ ಸ್ವರೂಪ, ಕಲ್ಪನೆ, ಹೆಸರು ಮತ್ತು ಪ್ರಯೋಗಗಳಲ್ಲಿ ಕನ್ನಡದಲ್ಲಿ ಶ್ರೀಯವರದೇ ಮೊದಲಮಾತು ಎನ್ನಬಹುದು.

೨

ಶ್ರೀಯವರ ಕಾವ್ಯಸಂಪತ್ತು ಸಂಖ್ಯೆಯ ದೃಷ್ಟಿಯಿಂದ ತುಂಬ ಹಿರಿದಾದುದೇನೂ ಅಲ್ಲ. ಅವರು ರಚಿಸಿದ ಕವನಗಳು ಒಟ್ಟು ೭೬ ಮಾತ್ರ. ಇವುಗಳಲ್ಲಿ ಇಂಗ್ಲಿಷ್ ಮೂಲವನ್ನಾಧರಿಸಿದ ೬೦ ಕವನಗಳು ಅವರ 'ಇಂಗ್ಲಿಷ್ ಗೀತಗಳು' ಸಂಗ್ರಹದಲ್ಲಿ ಸೇರಿವೆ; ೨ ಕವನಗಳು – 'ಹೂ' ಮತ್ತು 'ಮೊಗ್ಗಿನ ಮಾಲೆ' ಎಂಬವು – ತರುಣರ ಬಳಗದ ಕವನ ಸಂಕಲನಗಳ ಮುನ್ನುಡಿಗಳಾಗಿವೆ. ಇತರ ೧೪ ಕವನಗಳು ಅವರ 'ಹೊಂಗನಸುಗಳು' ಕೃತಿಯಲ್ಲಿ ಸೇರಿವೆ. ಈ ಸಂಕಲನದ ಎಲ್ಲ ಪದ್ಯಗಳೂ ಪ್ರಗಾಥಗಳೇನಲ್ಲ. 'ಕನ್ನಡ ಹೆಣ್ಣು' ಒಂದು ಭಾವಗೀತೆ; 'ಅರಮನೆಯ ಒಸಗೆ' ಲಲಿತ ರಗಳೆಯ ಧಾಟಿಯಲ್ಲಿರುವ ೧೪ ಸಾಲುಗಳ ಒಂದು ಮಂಗಳಾಶಾಸನ ಪದ್ಯ; 'ಧರ್ಮಯುದ್ಧ' ಭಾಮಿನಿ ಷಟ್ಪದಿಯಲ್ಲಿರುವ ಒಂದು ಶಾಂತ್ಯಷ್ಟಕ; 'ಶಿಲಪ್ಪದಿಗಾರಂ'ನ ಹದಿನೇಳು ಸಾಲುಗಳು ಮಂದಾನಿಲ ಲಯದ ಅಸುಕರ ಹರಿವುಳ್ಳ ಒಂದು ಮುನ್ನುಡಿಯ ತುಣುಕು; 'ಹಾರೈಕೆ' ಕುರುಳು ಧಾಟಿಯಲ್ಲಿರುವ ೧೦ ದ್ವಿಪದಗಳ ಘಟಕ. ಅವರು ಹೂ ಮತ್ತು ಮೊಗ್ಗಿನ ಮಾಲೆ ಎಂಬೆರಡು ಕವನ ಸಂಕಲನಗಳಿಗೆ ಬರೆದ ಮುನ್ನುಡಿರೂಪದ ಪದ್ಯಗಳು ಮಾತ್ರಾಲಯ ಮಿಶ್ರಣದ

ರಚನೆಗಳು, ಅಷ್ಟೆ. ಆದ್ದರಿಂದ ಈ ಪದ್ಯಗಳನ್ನುಳಿದರೆ ಸ್ವತಂತ್ರವಾಗಿ ಬರೆದ ಅವರ ೧೬ ಪದ್ಯಗಳಲ್ಲಿ ೯ ಪದ್ಯಗಳು ಮಾತ್ರ ಪ್ರಗಾಥ ಪ್ರಕಾರದಲ್ಲಿವೆ ಎನ್ನಬಹುದು.

ಈ ಒಂಬತ್ತು ಪ್ರಗಾಥಗಳಲ್ಲಿಯೂ ಕೆಲವನ್ನುಳಿದರೆ, ಇತರ ಬಹುಪಾಲು ರಚನೆಗಳು ಯಾವುದೋ ಒಂದು ಸಂದರ್ಭವನ್ನು ನಿಮಿತ್ತವಾಗಿರಿಸಿಕೊಂಡೇ ರಚಿತವಾಗಿರುವಂಥವು. ನಾಲ್ವಡಿ ಕೃಷ್ಣರಾಜ ಒಡೆಯರು ಸಿಂಹಾಸನಾರೋಹಣ ಮಾಡಿದ ೨೫ನೆಯ ವರ್ಷದ ನೆನಪಿಗೆಂದು ಹಾಡಿದ್ದು 'ಶ್ರೀ ಕೃಷ್ಣರಾಜ ರಜತ ಮಹೋತ್ಸವ ಪ್ರಗಾಥ'; ವಿಜಯನಗರ ಸಾಮ್ರಾಜ್ಯದ ಆರುನೂರನೆಯ ವರ್ಷದ ಸಂಭ್ರಮೋತ್ಸವದಲ್ಲಿ ಕಂಡದ್ದು 'ಕನ್ನಡ ತಾಯ ನೋಟ'; ಪರಿಷತ್ತಿನ ಐದನೆಯ ವಸಂತ ಸಾಹಿತ್ಯೋತ್ಸವ ಸಂದರ್ಭದಲ್ಲಿ, ಕನ್ನಡನಾಡು ಎಚ್ಚತ್ತು ಕೂಡಿಕೊಳ್ಳುತ್ತಿದ್ದ ಸಡಗರದಲ್ಲಿ ಬರೆದದ್ದು 'ಕನ್ನಡದ ಬಾವುಟ'; ೧೯೪೦ರಲ್ಲಿ ತೀರಿಕೊಂಡ ತಮ್ಮ ಪ್ರಿಯ ದೊರೆಗಳಾದ ನಾಲ್ವಡಿ ಕೃಷ್ಣರಾಜ ಒಡೆಯರ ನೆನಹುಗುದಿತದಲ್ಲಿ ಹೊಮ್ಮಿದ ಶೋಕಗಾಥೆ 'ಬಾನ್‌ಕೊಂಡ ಕೃಷ್ಣನ್'; ಜಯಚಾಮರಾಜೇಂದ್ರ ಒಡೆಯರ ಪಟ್ಟಾಭಿಷೇಕೋತ್ಸವ ಸಂದರ್ಭದಲ್ಲಿ ಚಿಮ್ಮಿದ್ದು 'ಶ್ರೀಜಯನ ಬೆಳಕು'; ಮೈಸೂರು ವಿಶ್ವವಿದ್ಯಾನಿಲಯದ ಬೆಳ್ಳಿಹಬ್ಬದ ಸಲುವಾಗಿ ಏರ್ಪಡಿಸಿದ್ದ ಕವಿ ಸಮ್ಮೇಳನದಲ್ಲಿ ವಾಚಿಸಿದ್ದು 'ಶುಕ್ರಗೀತೆ'; ಆದಿಪುರಾಣದ ಸಹಸ್ರಮಾನೋತ್ಸವ ಸಂದರ್ಭದಲ್ಲಿ ಲೇಖನಿಸಿದ್ದು 'ಪಂಪನ ಒರತೆ'. ಆರಂಭದ ರಚನೆಗಳಾದ 'ಭರತಮಾತೆಯ ನುಡಿ' ಮತ್ತು 'ಮೈಸೂರು ಮಕ್ಕಳು' ಎಂಬುವು ಯಾವ ನಿರ್ದಿಷ್ಟ ಸಂದರ್ಭದಲ್ಲಿ ರಚಿತವಾದವೊ ತಿಳಿದಿಲ್ಲ. ಆದರೆ ಅವಾದರೂ ನಾಡು, ನುಡಿಗಳ ವಿಷಯವನ್ನೇ ಕುರಿತವಾಗಿವೆ.

ಶ್ರೀಯವರ ಈ ಒಂಬತ್ತೂ ಕವನಗಳಲ್ಲಿ ಪ್ರಧಾನವಾಗಿ ಕಂಡುಬರುವುದು ಕನ್ನಡ, ಕರ್ನಾಟಕಗಳ ಮೇಲಣ ಪ್ರೀತಿ ಮತ್ತು ಮೈಸೂರರಸರ ಬಗೆಗೆ ಗೌರವ. ಈ ವಸ್ತುವನ್ನು ಅವರು ನಿರ್ದಿಷ್ಟ ಕಲ್ಪನೆ ಮತ್ತು ವ್ಯಾಪ್ತಿಗಳಲ್ಲೇ ಬಳಸಿಲ್ಲ. ಕನ್ನಡ, ಕರ್ನಾಟಕಗಳ ಮೇಲೆ ಬರೆದ ಪದ್ಯಗಳಲ್ಲಿ ಮೈಸೂರರಸರ ಪ್ರಸ್ತಾಪವೂ, ಮೈಸೂರರಸರನ್ನು ಕುರಿತ ಪದ್ಯಗಳಲ್ಲಿ ಕನ್ನಡ ಸಂಬಂಧವಾದ ಉಲ್ಲೇಖವೂ ಬಂದಿವೆ. ಆದರೂ ಒಂದು ಸ್ಥೂಲ ವಿಭಜನೆಗೊಳಪಡಿಸುವುದಾದರೆ ಈ ೯ ಪ್ರಗಾಥಗಳಲ್ಲಿ ೪ ಮೈಸೂರರಸರ ಮೇಲಣ ಶೀರ್ಷಿಕೆಗಳಾಗಿಯೂ, ೨ ಕನ್ನಡ ಸಂಬಂಧ ಹೆಸರುಗಳನ್ನು ಹೊಂದಿಯೂ, ಉಳಿದ ೩ ಭರತಮಾತೆ, ಪಂಪ ಮತ್ತು ಜೀವನದ ಶುಭ್ರಮೌಲ್ಯಗಳ ವಿಷಯ ಸೂಚಕವಾಗಿಯೂ ಇವೆ. ಸಾಲುಗಳ ಸಂಖ್ಯೆಯನ್ನು ಲೆಕ್ಕದಲ್ಲಿಟ್ಟುಕೊಂಡು ಹೇಳುವುದಾದರೆ ಇವುಗಳಲ್ಲಿ ೧೭೧ ಸಾಲುಗಳ 'ಬಾನ್‌ಕೊಂಡ ಕೃಷ್ಣನ್' ಅತ್ಯಂತ ದೊಡ್ಡದು, ೩೯ ಸಾಲುಗಳ 'ಪಂಪನ ಒರತೆ'

ಅತ್ಯಂತ ಚಿಕ್ಕದು. ಆದರೆ 'ಬಾನ್‌ಕೊಂಡ ಕೃಷ್ಣನ್'ನಲ್ಲಿರುವುವು ಚಿಕ್ಕ ಸಾಲುಗಳು. ಸಾಲುಗಳ ದೀರ್ಘ ವ್ಯಾಪ್ತಿಯನ್ನು ಗಮನದಲ್ಲಿರಿಸಿಕೊಳ್ಳುವುದಾದರೆ ೧೪೯ ಸಾಲುಗಳ 'ಕನ್ನಡ ತಾಯ ನೋಟ'ವೇ ಪ್ರಾಯಃ ದೀರ್ಘವಾದುದೆನಿಸುತ್ತದೆ. 'ಭರತಮಾತೆಯ ನುಡಿ'ಯೊಂದನ್ನುಳಿದರೆ ಶ್ರೀಯವರ ಪ್ರಗಾಥಗಳೆಲ್ಲ ಅನಿಯತ ವಾದುವೇ.

ಶ್ರೀಯವರ ಪ್ರಗಾಥಗಳು ಹೆಚ್ಚುಕಡಿಮೆ ಪಿಂಡಾರನ ಪ್ರಗಾಥಗಳನ್ನು ಹೋಲುವುವಾಗಿವೆ. ಆತನ ಪ್ರಗಾಥಗಳು ಗಾಯನಕ್ಕೆ ಹೆಸರಾಗಿದ್ದಂತೆ, ಶ್ರೀಯವರವೂ ಘೋಷಯುಕ್ತ ವಾಚನಕ್ಕೆ ಅನುಗುಣವಾಗಿರುವಂಥವು. ಆತನಂತೆ ಇವರು ಕೂಡ ಯಾವುದೋ ಒಂದು ಹಬ್ಬದ ಸಂದರ್ಭವನ್ನೇ (ನಾಲ್ವಡಿಯವರ ಮರಣ ಸಂದರ್ಭವನ್ನುಳಿದು) ಆಧರಿಸಿ ಪ್ರಗಾಥ ರಚಿಸಿದ್ದಾರೆ. ಉತ್ಸವಾಚರಣೆಯ ಅಂಗವಾಗಿಯೇ ಶ್ರೀಯವರ ಪ್ರಮುಖ ಪ್ರಗಾಥಗಳೆಲ್ಲ ರಚನೆಯಾಗಿರುವಂಥವು. ಪಿಂಡಾರನ ಪ್ರಗಾಥಗಳಲ್ಲಿ ಛಂದಸ್ಸಿನ ಸಂಕೀರ್ಣತೆ, ಮಿಶ್ರಣಗಳಿರುವಂತೆ ಶ್ರೀಯವರ ರಚನೆಗಳಲ್ಲೂ ಇವೆ. ಸಣ್ಣದೊಡ್ಡ ಪಾದಗಳ ಘಟಕಗಳು, ಬಗೆಬಗೆಯ ಲಯಗಳ ಬಳಕೆ, ಗಣಪರಿವೃತ್ತಿ, ಪದ್ಮಗಣ ಮಂಡಿಗಳ ಯೋಜನೆ, ದೀರ್ಘ ಪದ್ಯವನ್ನು ವಸ್ತುವಿನ ಪರಿಳಿತಕ್ಕನುಗುಣವಾಗಿ ಅನೇಕ ವಿಭಾಗಗಳಾಗಿ ಒಡೆಯುವ ಕೌಶಲ ಶ್ರೀಯವರ ಪ್ರಗಾಥಗಳಲ್ಲಿ ಸಾಮಾನ್ಯ. ಸಂಬೋಧನಪರ ಶೈಲಿಯೊಂದಿಗೆ, ಸಮೂಹವನ್ನುದ್ದೇಶಿಸಿ ವಾಚನ ಮಾಡಲು ಯೋಗ್ಯವಾಗಿರುವ ಗುಣಗಳು ಇಬ್ಬರ ಪ್ರಗಾಥಗಳಲ್ಲೂ ಕಂಡುಬರುವ ಮತ್ತೊಂದು ಸಾಮಾನ್ಯಾಂಶ. ಆದ್ದರಿಂದ ಪಿಂಡಾರನ ಮಾದರಿಯನ್ನು ಶ್ರೀಯವರು ಯಶಸ್ವಿಯಾಗಿ ಕನ್ನಡಕ್ಕೆ ತಂದಿದ್ದಾರೆ ಎನ್ನಬಹುದು.

ಶ್ರೀಯವರ ಪ್ರಗಾಥಗಳಲ್ಲಿ 'ಶ್ರೀ ಕೃಷ್ಣರಾಜ ರಜತಮಹೋತ್ಸವ ಪ್ರಗಾಥ', 'ಕನ್ನಡ ತಾಯ ನೋಟ', 'ಬಾನ್‌ಕೊಂಡ ಕೃಷ್ಣನ್' ಮತ್ತು 'ಶುಕ್ರಗೀತೆ'ಗಳಲ್ಲಿ ಒಳವಿಭಾಗಗಳಿವೆ. ಇವುಗಳಲ್ಲಿ ಮೊದಲ ಮೂರೂ ಪದ್ಯಗಳು ಏಳೇಳು ವಿಭಾಗಗಳಾಗಿಯೇ ವಿಭಜಿತವಾಗಿರುವುದು ಒಂದು ಗಮನಿಸಬೇಕಾದ ಅಂಶ. 'ಶುಕ್ರಗೀತೆ' ಮಾತ್ರ ೪ ಭಾಗಗಳಾಗಿ ಒಡೆಯಲ್ಪಟ್ಟಿದೆ. ಇತರ ಪ್ರಗಾಥಗಳೆಲ್ಲ ಯಾವುದೇ ಒಳವಿಭಾಗಗಳಿಲ್ಲದೆ ನಿರಂತರವಾಗಿ ಹರಿದಿವೆ. ಆದರೆ ಎಲ್ಲ ಪದ್ಯಗಳೂ ಮಾತ್ರಾ ಬಂಧಗಳೇ ಆಗಿವೆ. ಪ್ರಗಾಥದ ವಸ್ತುವಿಗನುಗುಣವಾಗಿ ಎಲ್ಲ ಪದ್ಯಗಳಲ್ಲೂ ಪ್ರಶಂಸಾಪರ ನಿರೂಪಣೆ, ಉತ್ಸಾಹ ಸಡಗರಗಳ ದನಿ, ಏರುಮುಖವಾದ ಅಭಿವ್ಯಕ್ತಿ ಇದೆ. ವಸ್ತು ಗಂಭೀರವಾಗಿರುವಂತೆ ವೈಭವದ್ದಾಗಿದ್ದು ನಿರೂಪಣೆ ಕೂಡ ಅದೇ ಧಾಟಿಯನ್ನನುಸರಿಸಿದೆ. ಎಲ್ಲ ಪದ್ಯಗಳಲ್ಲೂ ಹುರುಪಾದ ಹುರುಳಾದ ಹೊಸಗನ್ನಡವಿರುವಂತೆ, ಹಳಗನ್ನಡದ ಹೊಳಪು ತಿರುಳುಗಳೂ ಅಲ್ಲಲ್ಲಿ ತಲೆಹಾಕಿವೆ.

ಭಾಷೆಯಲ್ಲಿ ಇಂಗ್ಲಿಷ್ ಗೀತಗಳ ಮಾರ್ದವತೆ ಇರದಿದ್ದರೂ, ಮೋಹಕವಾದ ಹೊಸಗನ್ನಡ ಮತ್ತು ಬದಲಾವಣೆ ತೋರುವ ಹುಮ್ಮಸ್ಸು ಎದ್ದು ಕಾಣುತ್ತದೆ. ಈ ಸಂಗತಿಗಳು ಅವರ ಪ್ರಗಾಥಗಳಲ್ಲಿ ಮುಖ್ಯ ರಚನೆಗಳಾದ 'ಶ್ರೀ ಕೃಷ್ಣರಾಜ ರಜತಮಹೋತ್ಸವ ಪ್ರಗಾಥ', 'ಕನ್ನಡ ತಾಯ ನೋಟ' ಮತ್ತು 'ಶುಕ್ರಗೀತೆ' ಗಳಲ್ಲಿ ಸ್ಪಷ್ಟವಾಗಿ ಗೋಚರವಾಗುತ್ತವೆ. ಆದ್ದರಿಂದ ಈ ಮೂರನ್ನು ಮುಂದೆ ಪ್ರತ್ಯೇಕವಾಗಿಯೂ, ಉಳಿದುವನ್ನು ಇಲ್ಲಿ ಒಂದು ವರ್ಗವಾಗಿಯೂ ಮಾಡಿಕೊಂಡು ಕೆಲವು ಮಾತುಗಳನ್ನು ಹೇಳಬಹುದು.

ಶ್ರೀಯವರ ಮೊದಲ ಪ್ರಗಾಥವಾದ 'ಭರತಮಾತೆಯ ನುಡಿ' ಹುತ್ತರಿಹಾಡಿನ ಧಾಟಿಯಲ್ಲಿರುವ ಒಂದು ದೀರ್ಘ ರಚನೆ. ಇದು ಇಪ್ಪತ್ತು ನುಡಿಗಳಷ್ಟು ವ್ಯಾಪಕ ವಾಗಿದೆ. 'ಮೈಸೂರು ಮಕ್ಕಳು' ಮಂದಾನಿಲ ಲಯದ ಎಂಟುಸಾಲಿನ ಮೂರು ನುಡಿಗಳನ್ನೂ, ಲಲಿತಲಯದ ಎಂಟುಸಾಲಿನ ಎರಡು ನುಡಿಗಳನ್ನೂ ಒಂದು ಕ್ರಮದಲ್ಲಿ ಅಳವಡಿಸಿಕೊಂಡಿರುವ ಅಡಕ ಕವನ: 'ಬಾನ್‌ಕೊಂಡ ಕೃಷ್ಣನ್' ಪಂಚ ಮಾತ್ರಾಲಯದಲ್ಲಿರುವ ಒಂದು ನಿಡಿದಾದ ಶೋಕಗೀತೆ ; ಇದರಲ್ಲಿ ನಡುನಡುವೆಯೇ ಗಣಪರಿವೃತ್ತಿ, ಪದ್ಮಗಣ ಹಾಗೂ ಒಳಘಟಕಗಳಿಗನುಗುಣವಾದ ಅಂತ್ಯಪ್ರಾಸ ಗಳಿವೆ ; ಸಮಸಾಲು ಹಿರಿಸಾಲು ಕಿರಿಸಾಲುಗಳ ಜೋಡಣೆಯೂ ಇದೆ. 'ಶ್ರೀಜಯನ ಬೆಳಕು' ಪದ್ಯವಾದರೂ ಇದೇ ಮಾದರಿಯದೇ. ಇಲ್ಲೂ ಲಲಿತಲಯದ್ದೇ ಪ್ರಾಧಾನ್ಯ; ಆದರೆ ಪಾದಮಧ್ಯ ಪದ್ಮಗಣಗಳಿಗಿಂತ ಇಲ್ಲಿ ಪಾದಾಂತ್ಯ ಪದ್ಮಗಣಗಳೇ ಹೆಚ್ಚಾಗಿವೆ. 'ಪಂಪನ ಒರತೆ' ಪದ್ಯದಲ್ಲಿ ಆರಂಭದಲ್ಲಿ ೫-೩ರಂತೆಯೂ ತರುವಾಯ ೩-೪-೩ ರಂತೆಯೂ ಗಣವಿನ್ಯಾಸ ಜೋಡಣೆಯಿದೆ. ಇಲ್ಲೂ ಪಂಚಮಾತ್ರಾಲಯದ್ದೇ ಪ್ರಾಧಾನ್ಯ ; ಪದ್ಮಗಣಗಳ ಬಳಕೆ ಯಥೇಚ್ಛವಾಗಿದೆ. ಈ ಎಲ್ಲ ಪದ್ಯಗಳಲ್ಲೂ ಪಂಚಮಾತ್ರಾಗಣಗಳಿಗೆ ದೊರೆತಿರುವ ಪ್ರಾಧಾನ್ಯವನ್ನು ಗಮನಿಸಬೇಕು. 'ಭರತ ಮಾತೆಯ ನುಡಿ' ಪದ್ಯದಲ್ಲಿ ಆದಿಪ್ರಾಸಪಾಲನೆ ಇರುವುದೂ ಲಕ್ಷಿಸಬೇಕಾದ ಸಂಗತಿಯೇ.

'ಭರತಮಾತೆಯ ನುಡಿ'ಯುಲ್ಲಿ ಭಾರತೀಯರ ರಾಷ್ಟ್ರೈಕ್ಯ ಪ್ರಜ್ಞೆಗೆ, ಭಾರತೀಯತೆಯ ಭಾವನೆಗೆ ಬ್ರಿಟಿಷರು ಕಾರಣವಾದರೆಂಬ ವಿಲಕ್ಷಣವಾದ ತರ್ಕದ ಬೆಳೆವಣಿಗೆಯಿರುವುದನ್ನು ಒಪ್ಪಲಾಗುವುದಿಲ್ಲ. ಆದರೆ ತಾಯಿ-ಮಕ್ಕಳ ಸಂವಾದದ ಕಲ್ಪನೆ ತುಂಬ ಸ್ವೋಪಜ್ಞವಾಗಿದೆ ; ಸಂಭಾಷಣೆಗನುಗುಣವಾಗಿರಬೇಕಾದ ಹಾಗೆ ಮಾತುಗಳೂ ಚಿಕ್ಕಚಿಕ್ಕವೇ ಆಗಿವೆ ; ತಾಯಿಯ ಆಸೆ ಕನಸುಗಳ ಚಿತ್ರವನ್ನು ಲಹರಿ ಗಳಲ್ಲಾದರೂ ಖಚಿತವಾಗಿ ಒಡಮೂಡಿಸಲಾಗಿದೆ. 'ಮೈಸೂರು ಮಕ್ಕಳು', 'ಬಾನ್ ಕೊಂಡ ಕೃಷ್ಣನ್' ಮತ್ತು 'ಶ್ರೀಜಯನ ಬೆಳಕು'ಗಳಲ್ಲಿ ಮೈಸೂರರಸರ ಬಗೆಗಿನ ಶ್ರೀಯವರ ಪ್ರೀತ್ಯಾದರಗಳು ಮೇರೆಮೀರಿ ಹರಿದಿವೆ. ನಾಲ್ವಡಿಯುವರನ್ನು ನೆನೆವಾಗ

ಶ್ರೀಯವರಿಗೆ ಉತ್ಸಾಹ ಹೆಚ್ಚುತ್ತದೆ; ಸಂಯಮ ಮೀರುತ್ತದೆ; ಕಾವ್ಯದ ಬಿಗಿ ತಪ್ಪುತ್ತದೆ. ಅವರನ್ನು ಅನೇಕ ಮುಖಗಳಲ್ಲಿ, ಅನೇಕ ವಿಶೇಷಣಗಳಿಂದ ಅವರು ವರ್ಣಿಸುತ್ತಾರೆ. ಆ ವರ್ಣನೆಗಳು ವಿಸ್ತರವಾಗಿದ್ದು ಹೆಚ್ಚು ಎನಿಸಿದರೂ ಅದರಲ್ಲಿ ಭಾವ ಶ್ರೀಮಂತಿಕೆ, ವಾಕ್ಸಂಪತ್ತು, ಲಯಸಂಚಾರಗಳು ವಿಶಿಷ್ಟವಾಗಿ ಬೆರೆತು ಬಂದಿವೆ. ಅರಸರ ಬಗ್ಗೆ ಬರೆದ ಈ ಕವನಗಳಲ್ಲಿ ನಾವೀನ್ಯ, ಚೆಲುವು, ಕಲ್ಪನಾ ಮಾಟಗಳಿರುವುದನ್ನೂ, ಇವು ಆಸ್ಥಾನಕವಿಯೊಬ್ಬನ ಪ್ರಶಂಸಾಗೀತೆಗಳಿಗಿಂತ ಭಿನ್ನವಾಗಿರುವುದನ್ನೂ ನಾವು ಗುರುತಿಸಬೇಕು. ನಾಲ್ವಡಿಯವರು ನವಕರ್ನಾಟಕದ ನಿರ್ಮಾಪಕರು ; ಶುಭ್ರಶೀಲಚರಿತರಾದ ಮಹಾಪುರುಷರು. ಅಂಥವರ ಬಗ್ಗೆ ಶ್ರೀಕಂಠಯ್ಯನವರು ಮೈಮರೆತು ಘನವಾಗಿ ಬರೆದದ್ದು ಆಶ್ಚರ್ಯವೇನಲ್ಲ. ಆ ಕಾಲದ ಕಾವ್ಯಪರಿಸರದ ಹಿನ್ನೆಲೆಯಲ್ಲಿ ಇದು ಸ್ವಲ್ಪ ಚರ್ಚೆಯ ವಿಷಯವಾಗಬಹುದು ಅಷ್ಟೆ. ಆದರೆ ಪ್ರಗಾಥದಂಥ ಬಂಧಕ್ಕೆ ವಸ್ತು ಆಯುವಾಗ ಇದಕ್ಕಿಂತ ಭಿನ್ನವಾಗಿ ಆಯುವುದು ಶ್ರೀಯವರ ಕಾಲ ಮತ್ತು ಕಾವ್ಯಾಭ್ಯಾಸಗಳ ಹಿನ್ನೆಲೆಯಲ್ಲಿ ಕಷ್ಟಕರವಾಗಿತ್ತು ಎಂಬುದನ್ನು ನೆನಪಿಡಬೇಕು. ಅವರ ಮತ್ತೊಂದು ಪದ್ಯ 'ಪಂಪನ ಬರತೆ' ಮಾತ್ರ ಹಳಗನ್ನಡದ ಕಲ್ಲಲ್ಲಿ ಕೊರೆದ ಹೂವಾಗಿದೆ.

೩

ಶ್ರೀಯವರು ಮೈಸೂರರಸರ ಬಗ್ಗೆ ಬರೆದ ಪ್ರಗಾಥಗಳಲ್ಲಿ ಅತ್ಯುತ್ತಮವಾದುದು 'ಶ್ರೀ ಕೃಷ್ಣರಾಜ ರಜತಮಹೋತ್ಸವ ಪ್ರಗಾಥ'. ಇದರಲ್ಲಿ ಭಾವೋತ್ಕರ್ಷ ಹಾಗೂ ಅದರ ಸಿದ್ಧಿಯಿದೆ. ಸಂದರ್ಭಕ್ಕನುಗುಣವಾದ ಸಡಗರದ ದನಿ, ಕವಿತಾನಾಯಕನ ಮೆಚ್ಚುಗುಣಗಳಿಗನುಗುಣವಾದ ಸಂಭ್ರಮ ಉದ್ದಕ್ಕೂ ವ್ಯಕ್ತವಾಗಿ ಕಾಣಿಸಿಕೊಂಡಿದೆ. ಭಾವಾಭಿವ್ಯಕ್ತಿಗನುಗುಣವಾಗಿ ಲಯದ ಅಳವಡಿಕೆ ಇರುವುದು ಇಲ್ಲಿಯ ಒಂದು ವೈಶಿಷ್ಟ್ಯ. ಆರಂಭದಲ್ಲಿ ಕೃಷ್ಣನನ್ನು ಕಾಯಿ ಎಂದು ಗೌರಿಗೆ ಪ್ರಾರ್ಥನೆ ಸಲ್ಲಿಸುವ ದೃಶ್ಯವಿದೆ, ಎರಡನೆಯ ಭಾಗದಲ್ಲಿ ಓಲಗದಿಂದ ಪೂರ್ಣಕುಂಭ ಹೊತ್ತುತಂದ ಗೌರಿ ಕನ್ನಡ ಮಾತೆಗೆ ಕಲಶವಿತ್ತು ಕೃಷ್ಣರಾಜನನ್ನು ಮತ್ತು ಆತನ ನಾಡನ್ನು ಬೆಳಗಿಸು ಎಂದು ಹರಸುವ ಮೋಹಕ ಚಿತ್ರವಿದೆ; ಮುಂದೆ ಕೃಷ್ಣರಾಜ ಮತ್ತು ಆತನಾಳುವ ನಾಡಿನ ವರ್ಣನೆಯಿದೆ ; ನಾಲ್ಕನೆಯ ನೋಟದಲ್ಲಿ ಯದುರಾಯನ ಪ್ರಾರ್ಥನೆ, ಐದನೆಯದರಲ್ಲಿ, ದೇವಿ ಬಂದ ಮುತ್ತೈದೆಯ ಚಿತ್ರ, ಆರನೆಯದರಲ್ಲಿ ಆಕೆಯಿಂದ ಮೈಸೂರರಸರ ವರ್ಣನೆ. ಕೊನೆಯಲ್ಲಿ ಮತ್ತೆ ಪ್ರಾರ್ಥನೆ ಇದೆ. ಪ್ರಾರ್ಥನೆಯಿಂದಲೇ ಆರಂಭವಾಗಿ, ಪ್ರಾರ್ಥನೆಯಿಂದಲೇ ಕವನವನ್ನು ಅಂತ್ಯವಾಗಿಸುವಲ್ಲಿ ಒಂದೇ ಬಗೆಯ ಸಾಲುಗಳನ್ನು ಶ್ರೀಯವರು ಬಳಸಿ ಕವನಕ್ಕೆ ಒಂದು ಐಕ್ಯ ಮತ್ತು ಸಮಗ್ರತೆ ತರಲು ಯತ್ನಿಸಿದ್ದಾರೆ. ಇಡೀ ಕವನದುದ್ದಕ್ಕೂ ಒಂದು ಬಗೆಯ

ಪ್ರೌಢಿಮೆ ಹರಿದಿದೆ. ಗಂಭೀರವಾದ ಮುನ್ನಡೆ ಇದರ ಜೀವಾಳ. ಕೃಷ್ಣರಾಜರನ್ನು ಹೊಗಳುವಾಗ ಮಾತುಗಳಂತೆ ಚಿತ್ರಗಳೂ ಕಲ್ಪಿತವಾಗಿರುವುದು ಕವನಕ್ಕೆ ಶೋಭೆ ನೀಡಿವೆ. ಓಲಗದಿಂದ ಕಳಶವಿಡಿದು ಬಂದ ಗೌರಿ, ಕನ್ನಡ ಮಾತೆ, ಮುಂದುಕಿಯ ಮೈಮೇಲೆ ಆವಾಹನೆಯ ರೂಪದಲ್ಲಿ ಬಂದ ದೇವಿ, ಮುದ್ದಾದ ಮಹಾರಾಣಿಯೊಂದಿಗೆ ಚಾಮುಂಡಾಂಬೆಯ ಸನ್ನಿಧಿಯಲ್ಲಿ ನಿಂತ ಯದುರಾಯ, ಆತನ ಮಕುಟದಲ್ಲಿ ಅಭಯಹಸ್ತದ ಹೂವು ಸಿಡಿದು ನೆಲಸಿದ್ದು – ಇವೆಲ್ಲ ಸೊಗಸಾದ ಕಲ್ಪನೆಗಳಾಗಿದ್ದು ಕವನವನ್ನು ಭವ್ಯವಾಗಿಸಲು, ಅಮೂರ್ತ ಕಲ್ಪನೆಗಳನ್ನು ಮೂರ್ತವಾಗಿಸಲು ನೆರವಾಗಿ ಬಂದಿವೆ. ಕನ್ನಡನಾಡಿನ ವರ್ಣನೆ ಮೂರು ಮತ್ತು ಆರನೆಯ ವಿಭಾಗಗಳಲ್ಲಿ ಅಂತರದೊಡನೆ ಬೆರೆತಿರುವುದು ಕವನದ ಶಿಲ್ಪವನ್ನು ಬಂಧುರಗೊಳಿಸಿವೆ. ಯುದ್ಧ ಮಾಡದ, ರಾಜ್ಯ ವಿಸ್ತರಿಸದ, ರಚನಾತ್ಮಕ ಕಾರ್ಯಗಳಿಂದ ಮಾತ್ರ ಪ್ರಸಿದ್ಧರಾಗಿದ್ದ ಕೃಷ್ಣರಾಜರನ್ನು ಹೊಸ ಬಗೆಯಲ್ಲಿ ಇಲ್ಲಿ ಹೊಗಳಿದೆ. ವಿಶೇಷಣರಹಿತವಾಗಿ ವಿಶಿಷ್ಟ ಕಲ್ಪನೆಗಳಿಂದ ಅರಸನನ್ನು ಆದಣವೇರಿಸಿರುವ ಚಿತ್ರ ಮನನೀಯವಾಗಿದೆ.

ಈ ಕವನದ ಕನ್ನಡವಂತೂ ಆ ಕಾಲಕ್ಕೆ ಹೊಸದಾದ್ದು ; ಹಸುರಾದ್ದು. ಸಂಸ್ಕೃತ ಬಿಟ್ಟ, ಸಂಸ್ಕೃತ ಬೆರೆಸಿದ, ಅಚ್ಚಗನ್ನಡದ ಅಂದ ಚೆಲ್ಲುವ, ಪ್ರಾಸ, ಅನುಪ್ರಾಸ, ಅಂತಃಪ್ರಾಸ, ಅಂತ್ಯಪ್ರಾಸಗಳಿಗನುಗುಣವಾಗಿ ಬಾಗಿ ಬಳುಕುವ ಕನ್ನಡದ ಬಳಕೆ ಇಲ್ಲಿದೆ. "ಬೆಳ್ಳಿ ಬೆಟ್ಟದೊಡತಿ ಗೌರಿ". "ಬೆಳ್ಳಿಯೊಸಗೆಗೊಸಗೆ ಬೀರಿ". "ಕನ್ನಡಿಗರ ವಯಿರಮುಡಿ", "ಚಿತ್ರದಾಳು", "ಕೆದರಿದಳು ಬಿರಿದಲೆಯ ನರೆನವಿರ", "ಕದಡುಬಗೆ ತಿಳಿಯಾಗಿ", "ಮಳೆಕುಡಿವ ಹಕ್ಕಿವೊಲು ಕುಡಿಯುತಿರೆ", "ಉರಿ ಕೊಳೆ ಸಗ್ಗದೆ" – ಇಂಥ ಮಾತುಗಳಲ್ಲಿ ಹೊಸತನ ತಲೆಯೆತ್ತಿದೆ. ಮಾತು ಮತ್ತು ಬಣ್ಣನೆಗಳು ಮಧುರವಾಗಿ ಬೆರೆತ ಮೋಹಕತೆಗೆ ಇದು ಒಂದು ನಿದರ್ಶನ :

ಪಡುಗಡಲಿನ ತೆರೆ ಮುದ್ದಾಡುವ ಕರೆ, ಹೊಳೆ ಹಾಲಿಳಿಯುವ ಘಟ್ಟದೆಡೆ
ಪಂಪನ ರನ್ನನ ಪುಟವಿಡಿಸಿದ ಕಡೆ, ಹಂಪೆಯು ತಾಂಡವವಾಡಿದೆಡೆ
ಹೊಯ್ಸಳರೆತ್ತಲು ಕಡೆಯಿಸಿ ನಿಲಿಸಿದ ಗುಡಿಗಳ ಸೊಬಗಿನ ಕಣ್ಣಸೆಳೆ
ಜಲಜಲನುಕ್ಕುವ ಕಾಲುವೆ ಬಯಲಲಿ ಪಚ್ಚೆಯ ಪಯಿರಿನ ತುಂಬುಬೆಳೆ
  ಮಂಗಳಮಯ ತಾನೆತ್ತಲು ನಾಡು
  ಸಿಂಗರದಾ ಸಿರಿಗನ್ನಡ ನಾಡು.

ಈ ಇಡೀ ಕವನದ ಯಶಸ್ಸು ಇರುವುದು ಇದರ ಛಂದಃಕೌಶಲದಲ್ಲಿ. ಸಾಮಾನ್ಯವಾಗಿ ಕವನವೊಂದನ್ನು ಒಂದು ಪ್ರಧಾನಲಯದಿಂದ ನಿಯಂತ್ರಿಸುವ ಶ್ರೀಯವರು ಈ ಕವನದಲ್ಲಿ ಪ್ರತಿಯೊಂದು ಭಾಗಕ್ಕೂ ಲಯವನ್ನು ಬದಲಿಸುತ್ತ ಹೋಗಿದ್ದಾರೆ. ಈ ಲಯ ಬದಲಾವಣೆಯಲ್ಲೂ ಒಂದು ಕ್ರಮವಿರುವಂತಿದೆ. ಮೊದಲು ಪ್ರಾರ್ಥನೆಗೆ ಉತ್ಸಾಹ, ಅನಂತರ ಆಶ್ಚರ್ಯ ದೃಶ್ಯಕ್ಕೆ ಭಾಮಿನಿ, ಮುಂದೆ

ಮೈಸೂರ ವರ್ಣನೆಗೆ ಮಂದಾನಿಲ ಹಾಗೂ ನಾಲ್ಕನೆಯದರಲ್ಲಿ ಲಲಿತವಿದೆ. ಐದನೆಯದರಲ್ಲಿ, ಆರನೆಯದರಲ್ಲಿ ಲಲಿತ, ಆರನೆಯದರಲ್ಲೇ ಉತ್ತರ ಭಾಗದಲ್ಲಿ ಮಂದಾನಿಲ, ಕೊನೆಯಲ್ಲಿ ಉತ್ಸಾಹ ಲಯಗಳಿವೆ. ಒಂದು ಬಗೆಯ ಆರೋಹಣ ಅವರೋಹಣ ಕ್ರಮಗಳಲ್ಲಿ ಇಲ್ಲಿ ಲಯ ಜೋಡಣೆಯಾಗಿದ್ದು ಅದು ಕವನ ಬಂಧಕ್ಕೆ ಒಂದು ಬಿಗಿಕಟ್ಟನ್ನು ಒದಗಿಸಿದೆ. ಛಂದೋವಿನ್ಯಾಸದಲ್ಲಿ ಭಿನ್ನ ಲಯ ವಿನ್ಯಾಸಗಳಿರುವ ಕೆಲವು ಭಾಗಗಳನ್ನು ಮುಂದೆ ನೋಡಬಹುದು.

| | |
|---|---|
| ೧) ಕಾಯಿ, ತಾಯಿ, ಕೃಪೆಯ ತೋರಿ | ೩. ೩. ೩. ೩. |
| ನಮ್ಮ ಕೃಷ್ಣನ, | ೩. ೩. ಮು |
| ಬೆಳ್ಳಿ ಬೆಟ್ಟದೊಡತಿ, ಗೌರಿ, | ೩. ೩. ೩. ೩. |
| ಬೆಳ್ಳಿಯೊಸಗೆಗೊಸಗೆ ಬೀರಿ | ೩. ೩. ೩. ೩. |
| ಕಾಯಿ ಕೃಷ್ಣನ | ೩. ೩. ಮು |

೨) ಬಾಳು, ಕನ್ನಡದರಸಿ, ಗೌರಿಯ ಕೃಪೆಯ ಸುಧೆಯನು ಚೆಲ್ಲಿಸು
೩. ೪. ೩. ೪. ೩. ೪. ೩. ಮು
ಕೃಷ್ಣರಾಜನ ಕೀರ್ತಿ ಹಬ್ಬಿದ ಚೆಲುವು ನಾಡನು ಗೆಲ್ಲಿಸು
೩. ೪. ೩. ೪. ೩. ೪. ೩. ಮು
ಕೃಷ್ಣರಾಜನ ಸಿರಿಯ ಮುಡಿಯಲಿ ಸಕಲಸೌಭಾಗ್ಯವ ಸಲ್ಲಿಸು
೩. ೪. ೩. ೪. ೩. ೪. ೩. ಮು
ತನ್ನ ಬಾಳನು ನಾಡ ಮೇಲ್ಮೆಗೆ ಮುಡಿಪು ಕಟ್ಟಿದ ಧೀರನು
೩. ೪. ೩. ೪. ೩. ೪. ೩. ಮು
ತನ್ನ ಗುರಿಯನು ಬಿಡದೆ ಕೊಳುವನು ಆತ್ಮಗುಣದಲಿ ವೀರನು
೩. ೪. ೩. ೪. ೩. ೪. ೩. ಮು

೩) ಕನ್ನಡ ದೇವಿಯ ಬಯಕೆಯ ಕಳಶವ ಸುಧೆ ಸುರಿದೆತ್ತಲು ಚೆನ್ನಾಯ್ತು
೪. ೪. ೪. ೪. ೪. ೪. ೪. ಮು
ಪ್ರೇಮದ ಸ್ವಾಮಿಯ ಕೃಷ್ಣನ ಭಕ್ತಿಯ ರಸ ಹರಿದೆತ್ತಲು ಹೊನ್ನಾಯ್ತು,
೪. ೪. ೪. ೪. ೪. ೪. ೪. ಮು

| | |
|---|---|
| ಮಂಗಳಮಯವಾಯಿತು ನಾಡು | ೪. ೪. ೪. ಮು |
| ಸಿಂಗರದಾ ಕನ್ನಡ ನಾಡು | ೪. ೪. ೪. ಮು |

| | |
|---|---|
| ೪) ಎಂತೆನ್ನ ಬಗೆ ಹಾರುವುದು ನೆಗೆದು ಸಂದು | ೫ ೨ + ೫ + ೩. ಪ. |
| ಮೈಸೂರ ಮೊತ್ತಮೊದಲೊಸಗೆ ಬೆಳೆದಂದು | ೫. ೩ + ೫ + ೨. ಪ. |
| ಸೆರೆಯಿಟ್ಟು ಕಾಡಿದಾ ಖೂಳನನು ಕೊಂದು | ೫. ೫. ೫. ಪ. |
| ಅರಸರರಸಿಯರೆಲ್ಲ ಹರಸುತಿರೆ ಬಂದು | ೫. ೫. ೫. ಪ. |

೫) ಕೂಗಿದಳು ಸೆರವಿಯುಲಿ ಮುತ್ತೈದೆ ಬೆದರಿದಳು ಪೈ ಮೇಲೆ ಬಂದು
೫. ೫. ೫. ೫. ೫. ಪ.

ಕೆದರಿದಳು ಬಿರಿದಲೆಯು ನರೆನವಿರ ಬಿರುಬಿರನೆ ಕಣ್ಣೆರುಜಿ ನಕ್ಕು
೫. ೫. ೫. ೫. ೫. ಪ.

ಕವಡುಬಗೆ ತಿಳಿಯಾಗಿ ದೂರದೆಸೆ ಬಳಿಯಾಗಿ ಮುಂದಪುದ ಪೊಕ್ಕು
೫. ೫. ೫. ೫. ೫. ಪ.

ಉತ್ಸಾಹದಿಂದಲೇ ಆರಂಭವಾಗಿ, ಉತ್ಸಾಹದಿಂದಲೇ ಕೊನೆಯಾಗುವ ಈ ಪದ್ಯದ ದೀರ್ಘಸಾಲುಗಳಲ್ಲಿ ೨೮ ಮಾತ್ರೆಗಳೂ, ಕಿರಿಸಾಲುಗಳಲ್ಲಿ ೭ ಮಾತ್ರೆಗಳೂ ಇವೆ. ಪ್ರತಿಯೊಂದು ಘಟಕದಲ್ಲಿ ಅನುಪ್ರಾಸ, ಅಂತಃಪ್ರಾಸ ಮತ್ತು ಅಂತ್ಯಪ್ರಾಸಗಳು ಒಳರಚನೆಗಳಿಗನುಗುಣವಾಗಿ ರೂಪಿತವಾಗಿದ್ದು ಕವನದ ಲಯಸಂಚಾರಕ್ಕೆ ಇನ್ನಷ್ಟು ನಾದ ಮತ್ತು ಉಲಿತಗಳನ್ನು ಒದಗಿಸಿವೆ.

'ಕನ್ನಡ ತಾಯ ನೋಟ' ಕನ್ನಡ ಮಾತೆಯ ಬಗ್ಗೆ ಕನ್ನಡ ಕವಿಗಳು ರಚಿಸಿರುವ ಪ್ರಗಾಥಗಳಲ್ಲೇ ಗಣ್ಯವಾದದ್ದು. ಇದರಲ್ಲೂ ೭ ವಿಭಾಗಗಳಿವೆ, ಓಂದೆಯೇ ಹೇಳಿದಂತೆ. ಮೊದಲ ಮತ್ತು ಕೊನೆಯ ಎರಡು ವಿಭಾಗಗಳನ್ನುಳಿದರೆ ನಡುವಣ ನಾಲ್ಕು ಭಾಗಗಳು ಒಂದೆರಡು ಸಾಲಿನ ಅಪವಾದವನ್ನುಳಿದರೆ ಹೆಚ್ಚು ಕಮ್ಮಿ ೩೦ ಸಾಲುಗಳ ಪರಿಧಿಯಲ್ಲೇ ಇವೆ. ಶ್ರೀಯವರ ಕನ್ನಡನಾಡಿನ ಪ್ರೇಮದ ಕಾವು ನೋವುಗಳು ಇಲ್ಲಿ ವ್ಯಕ್ತಗೊಂಡಿವೆ. ಮಾತಿನಷ್ಟೇ ಮುಖ್ಯವಾಗಿ ಇಲ್ಲಿಯೂ ಕಲ್ಪನೆಯ ಚಿತ್ರಕ್ಕೇ ಪ್ರಾಧಾನ್ಯ. ಮೊದಲಭಾಗ ಮುನ್ನುಡಿ; ಎರಡನೆಯ ಭಾಗ ಕನ್ನಡನಾಡಿನ, ಕನ್ನಡ ಜನರ ವರ್ಣನೆ; ಮೂರನೆಯದರಲ್ಲಿ ಮುಂದುವರಿದ ಈ ವರ್ಣನೆಯೊಂದಿಗೆ ಕನ್ನಡಮ್ಮನ ಭೇಟಿ, ನಾಲ್ಕನೆಯದರಲ್ಲಿ ಕನ್ನಡತಾಯಿಯ ಹೃದಯ ವಿದ್ರಾವಕ ಗಾಥೆ; ಐದು, ಆರು, ಏಳರಲ್ಲಿ ಕವಿ ಆಕೆಗೆ ತನ್ನ ಮಕ್ಕಳ ಬಗ್ಗೆ ಕೊಡುವ ಭರವಸೆ, ನಂಬಿಕೆ, ಸಮಾರಂಭ ಸಡಗರಗಳ ಚಿತ್ರವಿದೆ. ಒಂದು ಮತ್ತು ಏಳನೆಯ ಭಾಗಗಳನ್ನು ಒಂದೇ ಭಾವದಿಂದ, ಕೆಲವು ಸಮಾನ ಪದಪುಂಜಗಳಿಂದ ನಿರೂಪಿಸಿ ಕವಿ ಕವನವನ್ನು ಬಂಧಕ್ಕನುಗುಣವಾಗಿ ಸೂತ್ರಿಸುವ ಪ್ರಯತ್ನ ಮಾಡಿದ್ದಾರೆ. ಶ್ರೀಯವರು ಕೊಡುವ ತುಂಗಭದ್ರೆಯ ತಡಿಯ ಚೆದರಿರುವ ಮೊರಡಿಗಳ ಮೇಲೆ ಕೈಮೇಲೆ ತಲೆಯೂರಿ ಕುಳಿತ ಕನ್ನಡತಾಯಿಯ ಚಿತ್ರವಂತೂ ಅನ್ಯಾದೃಶವಾದುದು; ಕನ್ನಡದ ಬಗ್ಗೆ ಹೀನಾಯಮಾಡುತ್ತಿದ್ದ ಕಾಲದಲ್ಲಿ ಕಳವಳಿಸಿ ತಳಮಳಿಸಿ ಆ ಭಾಷೆಯ ನೈಜಸ್ಥಾನವೇನೆಂಬುದನ್ನು ತುಂಬ ಸಾಂಕೇತಿಕವಾಗಿ ಶ್ರೀಯವರು ಇಲ್ಲಿ ಚಿತ್ರಿಸಿದ್ದಾರೆ. ಅವರಿಬ್ಬರ ನಡುವಣ ಸಂವಾದ ಅವರ ಇತರ ಪ್ರಗಾಥಗಳ ನಡುವಣ ಸಂವಾದ ನೋಟಕ್ಕನುಗುಣವಾಗಿಯೇ ಇದೆ. ಸುದೀರ್ಘ ಪ್ರಾಚೀನತೆಯಿರುವ ನಮ್ಮ ಭಾಷೆಯ ತಾಯಿಯನ್ನು ಅವರು ಹಣ್ಣು ಮುದುಕಿ ಎಂದು ಕಲ್ಪಿಸಿಕೊಂಡಿರುವುದರಲ್ಲಿ ಯಥಾರ್ಥತೆ ಇದೆ. ವಯಸ್ಸಾದ ಮುದುಕಿಯ

ಮಾತಿಗನುಗುಣವಾಗಿ ಈ ಸಂಭಾಷಣೆಯಲ್ಲಿ ಮುದುಕಿಯ ಮಾತುಗಳು ಚಿಕ್ಕಚಿಕ್ಕವೇ ಆಗಿರುವುದೂ ಹೊಂದಿಕೆ ತೋರುವುದಾಗಿದೆ. ನಾಡು, ಕಪ್ಪು, ನೊರೆ, ಬೆಳ್ಪು ಎಂಬುವುಗಳ ಮೇಲೆ ಅವರಾಡಿರುವ ಚಿನ್ನಾಟ ಪದಭಂಡಾರದ ಮೇಲೆ ಅವರಿಗಿರುವ ಶಕ್ತಿ ತೋರುವುವಾಗಿವೆ. "ಕಾರ್ಮಿಂಚು ಪೆಣ್ಮಣಿಗಳಾ ಕಣ್ಣ ನುಣ್ಪೊಂಪು", "ಒಳ್ಗನ್ನಡದ ಕಲೆಯೊ ಕುಸುರಿಗೆಲಸದ ಸಿಲೆಯೊ", "ಎಷೆಹೊತ್ತಿನಾ ನೋಟ ಸವಿನೋಟ", "ಕಪ್ಪು ಹೆಪ್ಪಿನ ಕುರುಳ ಕರ್ಮುಗಿಲ ಬಸಿರಿಂದ ತೊಟ್ಟನೊಡೆ ಹೊಮ್ಮಿ". "ನಿದ್ದೆಗಳೆದೆದ ಸಿಂಪದಂತೇಳುತ್ತ" – ಎಂಬ ಮಾತುಗಳಲ್ಲಿರುವ ಸತ್ವ ಸಾಮರ್ಥ್ಯಗಳು ಅಭಿವ್ಯಕ್ತಿಯನ್ನು ಆಕರ್ಷಕವಾಗಿಸಿವೆ. ಕವನದಲ್ಲಿ ಬರುವ ಕನ್ನಡಮ್ಮನ ಮೂರು ಚಿತ್ರಗಳಿವು :

ಓ ತಾಯೆ, ಕನ್ನಡದ ಪೆರ್ತಾಯೆ, ನಮ್ಮಮ್ಮ – ದೇವಿ, ಸಮ್ರಾಜ್ಞಿ
ಸುಳಿಗುರುಳು, ನಗೆಗಣ್ಣು, ಏನು ಕಪ್ಪೇ ನಿನಗೆ, ಮುತ್ತಿಡುವ ಕಪ್ಪು !

ತುಂಗಭದ್ರೆಯ ತಡಿಯ ಚಿದರಿರುವ ಮೊರಡಿಗಳ ಕೊರಕಲಿನ ಬಿಸಿಲ
ಬೇಗುದಿಯ ಬಿರುಕಿನಲಿ ಮುಳ್ಪೆಡೆಯ ಕಲ್ಲುಹೂವಿಡಿದರೆಯ ಮೇಲೆ
ಕುಳಿತಿದ್ದಳಾ ತಾಯಿ, ಕೈಮೇಲೆ ತಲೆಯೂರಿ ಅಳಲಿನಾಳದಲಿ !

**ನಕ್ಕಳಾ ತಾಯಿ**
ಮುದುಕಿ ಎಳೆಯವಳಾಗಿ, ಮಾಸು ಮಿಂಚೆಳೆಯಾಗಿ, ಸವೆದ ಮೈ ತುಂಬಿ
ಕಡಲ ತೆರೆಗಳನುಟ್ಟು, ಬೆಟ್ಟಬಯಲನು ತೊಟ್ಟು, ಅರಿಲ ಮುಡಿಗಿಟ್ಟು
ಮುಗುಳ್ ನಗೆಯ ನಸುನಕ್ಕಳಾ ತಾಯಿ, ನನ್ನ ತಲೆಯಲಿ ಕಯ್ಯ
ತಾವರೆಯನಿಟ್ಟು

ಮೊದಲನೆಯದರಲ್ಲಿ ಹೊಳಪಿನ, ಎರಡನೆಯದರಲ್ಲಿ ವ್ಯಥೆಯ, ಮೂರನೆಯದರಲ್ಲಿ ಆತಂಕ ಕಳೆದು ಕಳೆಯೇರಿದ ಕನ್ನಡತಾಯಿಯ ಚಿತ್ರವನ್ನು ಶ್ರೀಯವರು ಸಮರ್ಥವಾಗಿ ರೇಖಿಸಿದ್ದಾರೆ. ಆಡುಮಾತಿನ ಶಕ್ತಿಯನ್ನು ಪೂರ್ಣವಾಗಿ ಬಸಿದಿರುವುದು ಇಲ್ಲಿ ಕಾಣುತ್ತದೆ.

ಈ ಇಡೀ ಕವನದಲ್ಲಿ ಪಂಚಮಾತ್ರಾಲಯ ಹರಿದಿದೆ. ವಸ್ತು, ಭಾವ, ಮತ್ತು ಅಭಿವ್ಯಕ್ತಿಗಳಲ್ಲಿ ಉತ್ಸಾಹಕ್ಕಿಂತ ಗಾಂಭೀರ್ಯವಿರುವುದರಿಂದ ಶ್ರೀಯವರು ಇದನ್ನು ಬಳಸಿದ್ದಾರೆ ಎನ್ನಬಹುದು. ಗಣಪರಿವೃತ್ತಿ, ಪದ್ಮಗಣ, ಮುಡಿಗಳ ಯಥೋಚಿತ ಬಳಕೆ ಕೂಡ ಕವನಕ್ಕೆ ಲಯವೈವಿಧ್ಯ ಒದಗಿಸಿದೆ. ಅಂತ್ಯಪ್ರಾಸ ಕಡಿಮೆಯಾದರೂ, ಅಂತಃಪ್ರಾಸ ಮಾತ್ರ ಸಿರಿಸಿರಿಯಾಗಿ ಹಬ್ಬಿ ಹರಿದಿದೆ.

ಕಡೆದ ನೊರೆ ಚಿಗಿವ ನೊರೆ ತೂರು ನೊರೆ ಕುದಿವ ನೊರೆ ಬೆಳ್ಪಿನೊಳ್ ಬೆಳ್ಪು
೫. ೫. ೫. ೫. ೫. ಪ.

ಆ ಬೆಳ್ಪು ಆ ತೆಳ್ಪು ಆ ಮೆಲ್ಪು – ನಿನ್ನ ಮಕ್ಕಳ ಬಾಳಿನೊಳ್ಪು
೫. ೫. ೫. ೩ + ೪ + ೩. ಪ.

— ನೀರ್‌ಬೀಳ ಬೆಳ್ನೊರೆಯು ಬಿಸಿಲ ಬೆಳ್ದಿಂಗಳಾ ಮಳೆಬಿಲ್ಲ ತಳು

ಶ. ಶ. ಶ. ಶ. ಶ. ವ.

ಸಂಬೋಧನ ಪರ ದನಿಯಿಲ್ಲದ ರಚನೆಯಾದರೂ 'ಶುಕ್ರಗೀತೆ' ಕೂಡ ಒಂದು ಪ್ರಗಾಥವೇ. ವ್ಯಾಪ್ತಿಯಿಂದ ಚಿಕ್ಕದಾದರೂ, ಸತ್ತ್ವದಿಂದ ಇದು ದೊಡ್ಡದು. ರಚನೆ ಮತ್ತು ವಸ್ತು – ಈ ಎರಡೂ ದೃಷ್ಟಿಗಳಿಂದ ಇದು ಶ್ರೀಯವರ ಪ್ರಗಾಥಗಳಲ್ಲಿ ವಿಶಿಷ್ಟರೂಪದ್ದಾಗಿ ನಿಲ್ಲುತ್ತದೆ. ಇತರ ಪ್ರಗಾಥಗಳಲ್ಲಿ ಕಾಣದ ಉಪನಿಷತ್ ಮಂತ್ರಗಳ ಬಳಕೆ, ಇದರ ಆರಂಭ ಮತ್ತು ಮೊದಲ ಭಾಗಗಳಲ್ಲಿದೆ. ಇವು ಛಂದಸ್ಸು, ಭಾಷೆ, ವಸ್ತು ಮತ್ತು ಅಭಿವ್ಯಕ್ತಿಗಳಲ್ಲಿ ತಿರುವು ತರಲು ನೆರವಾಗಿವೆ. ನಾಡು, ನುಡಿ, ನಾಡೊಡೆಯರ ಸೋಂಕು ಇಲ್ಲದ ಈ ಕವನ ಸಹಜವಾಗಿಯೇ ಸ್ವತಂತ್ರವಾಗಿದ್ದು ಮೇಲ್ಮಟ್ಟಕ್ಕೇರಿದೆ. 'ಶುಕ್ರ' ಎಂಬ ಮಾತನ್ನು ಕಾಂತಿಯುಕ್ತ, ಶುಭ್ರ, ಸಾರಸರ್ವಸ್ವ ಎಂಬರ್ಥಗಳಲ್ಲಿ ಬಳಸಿ ಈ ಗೀತೆಯನ್ನು ರಚಿಸಲಾಗಿದೆ. ಪರಸ್ಪರ ವಿದ್ವೇಷವಿಲ್ಲದೆ ಜ್ಞಾನಾರ್ಜನೆಯಿಂದ, ಸತ್ಯವಾಕ್ಕಿನಿಂದ, ಅಮೃತತ್ವ ಪಡೆಯುವ ಹಂಬಲವನ್ನು ಇಲ್ಲಿ ಬಣ್ಣಿಸಲಾಗಿದೆ.

ಈ ಕವನದ ಮುನ್ನುಡಿ ಮತ್ತು ಮೊದಲ ಭಾಗಗಳು ಋಷಿದರ್ಶನವನ್ನೂ, ಎರಡನೆಯದರಲ್ಲಿ ಸುರಾಸುರರ ಹೋರಾಟದ ಫಲವಾಗಿ ಸಚ್ಛಕ್ತಿ ಮತ್ತು ದುಃಶಕ್ತಿಗಳ ಕಲ್ಪನೆಯುಂಟಾದುದನ್ನೂ, ಮೂರನೆಯದು ಶಾಂತಿ, ದಮೆ ಕರ್ತವ್ಯಕ್ರಿಯೆಗಳಿಂದ ಅಸುರತ್ವವನ್ನು ನಶಿಸಿ, ಅವರನ್ನೂ ಸಜ್ಜನರಾಗಿಸುವ ಮಾರ್ಗವನ್ನೂ, ಅಂತ್ಯದಲ್ಲಿ ಋತವಿಜಯ ಮತ್ತು ಐಕ್ಯಭಾವಗಳ ಪ್ರತಿಪಾದನೆಯನ್ನೂ ಮಾಡಲಾಗಿದೆ. ಈ ಕವನದಲ್ಲಿ ಶ್ರೀಯವರ ವೇದೋಪನಿಷತ್ತುಗಳ, ಭಿನ್ನಧರ್ಮಗಳ ಪರಿಚಯ ಸುಳಿದಾಡಿದೆ. ಇವನ್ನು, ಅವರು ಉದ್ದನೆಯ ಸಾಲುಗಳಲ್ಲಿ ಸೂಕ್ತಿಸದೆ, ಕೇವಲವಾದ ಒಂದೆರಡು ಮಾತುಗಳಲ್ಲೇ ಉಲ್ಲೇಖಿಸಿ ಕವನದಲ್ಲಿ ತಂದಿರುವ ಪರಿಣಾಮ ತುಂಬ ಪ್ರಭಾವಕಾರಿಯಾಗಿದೆ. ಮಾನವನ ಹೃದಯಮಂಥನವನ್ನು ದೇವಾಸುರರ ಅಮೃತಮಂಥನದೊಂದಿಗೆ ಬೆಸೆದು ಮೂರನೆಯ ಭಾಗದಲ್ಲಿ ತಂದಿರುವ ವರ್ಣನೆ ನೂತನವೂ, ಅರ್ಥಪೂರ್ಣವೂ ಆಗಿದೆ. ಪ್ರೇಮದಿಂದ ಇರುಳು ಹೊಳಪಾಗುವ, ವಿಷ ಅಮೃತವಾಗುವ, ವಕ್ರತೆ ಋಜುವಾಗುವ, ಹಾವು ತೊಡವಾಗುವ ಇಲ್ಲಿಯ ಕಲ್ಪನೆ ತುಂಬ ಉದಾತ್ತವಾದುದಾಗಿದೆ. ಕವನದಲ್ಲಿ ಕನ್ನಡ-ಸಂಸ್ಕೃತಗಳೆರಡೂ ಹದವಾಗಿ ಬೆರೆತು ಬಂದಿದ್ದು ಗೀತೆಯನ್ನು ಉದ್ದಾಗ್ರಥವಾಗಿಸಿವೆ. ಈ ಕವನದಲ್ಲಾದರೂ ಮತ್ತೆ ಪಂಚಮಾತ್ರಾಲಯಗಳದ್ದೇ ಮೇಲಾಟ, ಹಿಡಿತ. ಈ ಕವನದ ಕೆಲವು ಭಾಗಗಳು :

ಮೊತ್ತಮೊದಲ್, ಬೆಳಕಾಗಲೆಂದಾಗ ಬೆಳಕಾಯ್ತು; ಬೆಳಕು ಚೆಲುವಾಯ್ತು,
ಕಿಡಿಸಿಡಿದು ಮಿನುಗಿದುವು ಜ್ಯೋತಿಗಳ್, ಮೂಡಿದರು ಸೂರ್ಯಚಂದಿರರು

ಲೋಕಚಕ್ಷುಗಳೆನಿಸಿ, ಸತ್ಯಧರ್ಮಗಳಂತೆ, ಕ್ಷಮೆ ದಯೆಗಳಂತೆ.

ಋತವೆಂದೆ ಗೆಲ್ಲುವುದು, ಅನೃತವಲ್ತು;
ಅಮೃತವಃನೆ ವಿದ್ಯೆಯೆ, ಅವಿದ್ಯೆಯಲ್ತು.
ವಿಶ್ವಭಾರತಿ ಶರಣು, ಕಿರುತೀರ್ಥವಲ್ತು.

ಕವನದ ಎರಡನೆಯ ಭಾಗದಲ್ಲಿ ಬರುವ ವಿರುದ್ಧಶಕ್ತಿ ಪ್ರತೀಕ ಪದಗಳನ್ನು ಬಿಡಿಬಿಡಿಯಾಗಿ ಬಳಸಿಯೇ ಶ್ರೀಯವರು ಅರ್ಥಪ್ರಪಂಚವನ್ನು ವಿಸ್ತರಿಸಿರುವುದನ್ನು ಗಮನಿಸಬೇಕು. "ಬಿಡುಗಣ್ಣ ಬೆಳಕು", "ಬಿಳಿಯ ಬಾನ್ ಬೆಳಕು", "ಕಾರಿರುಳ ಮೊತ್ತ", "ವಿಶ್ವಭಾರತಿ ಶರಣು, ಕಿರುತೀರ್ಥವಲ್ತು", "ಸಾವುದೆಲ್ಲಾ ಸತ್ತು ಬಾನಾಳ್ಕೆ ಪೂಣ್ಗೆ" – ಈ ಪದಪುಂಜ ಮತ್ತು ವಾಕ್ಯಗಳಲ್ಲಿ ನಿಹಿತವಾಗಿರುವ ಭಾವನಿಧಿ ದೊಡ್ಡದು. ಸಾಮಾನ್ಯ ಮಾತುಗಳನ್ನೇ ಚತುರವಾಗಿ ಸರಣಿಗೊಳಿಸಿ ಅಸಾಮಾನ್ಯ ಅರ್ಥ ಹೊಮ್ಮಿಸಬಲ್ಲ ಶಕ್ತಿ ಶ್ರೀಯವರ ಕಾವ್ಯಭಾಷೆಗಿದೆ. ಈ ಕವನದಲ್ಲಿ ಪಂಚಮಾತ್ರಾಲಯದ ವಿನ್ಯಾಸವಿದ್ದರೂ, ನಡುವೆ ಸೇರಿಸಿರುವ ವೇದಮಂತ್ರಗಳು ವಾಚನದಲ್ಲಿ ಅನಿರೀಕ್ಷಿತತೆಯನ್ನು ತರುತ್ತವೆ. ಇದರಿಂದ ಭಾವಸೌಂದರ್ಯ ಹೆಚ್ಚಿರಬಹುದಾದರೂ, ರಚನಾಸೌಂದರ್ಯವೇನೂ ಹೆಚ್ಚಿಲ್ಲ. ಇಲ್ಲಿನ ಪಂಚಮಾತ್ರಾಲಯ ವಿನ್ಯಾಸದ ಒಂದು ಮಾದರಿ :

| | |
|---|---|
| ಅಲ್ಲದುದನಹುದೆಂದು, ಅಹುದನಲ್ಲೆಂದು | ೫. ೫. ೫. ಪ. |
| ಇಲ್ಲದುದನಿಹುದೆಂದು, ಇಹುದನಿಲ್ಲೆಂದು | ೫. ೫. ೫. ಪ. |
| ನಲ್ಲದಂ ಪೊಲೆಯೆಂದು, ಪೊಲೆನಲ್ಲದೆಂದು | ೫. ೫. ೫. ಪ. |

೪

'ಹೊಂಗನಸುಗಳು' ಶ್ರೀಯವರ ಸೃಜನಶೀಲ ರಚನೆಗಳಲ್ಲೆ ಅತ್ಯಂತ ಸ್ವತಂತ್ರವೂ ಸ್ವೋಪಜ್ಞವೂ ಆದುದು. ಇದರಲ್ಲಿ ನಾಡು, ನುಡಿ ಮತ್ತು ನಾಡೊಡೆಯರಿಗೆ ಸಂಬಂಧಿಸಿದ ಕವನಗಳೇ ಹೆಚ್ಚು ಎಂದು ಈ ಹಿಂದೆಯೇ ಹೇಳಿದೆ. ಆದರೆ ಇಲ್ಲಿಯ ಅನೇಕ ಕವನಗಳಲ್ಲಿ ಕಂಡುಬಂದಿರುವ ರಾಜಾಭಿಮಾನ, ದೇಶಾಭಿಮಾನ ಭಾಷಾಭಿಮಾನ ಕೆಲವರ ಟೀಕೆಗಳಿಗೆ ಗುರಿಯಾಗಿವೆ. ಈ ಗುಣಗಳು ಈ ಕವನಗಳಲ್ಲಿ ಅತಿಯಾಗಿದೆಯೆಂದೂ, ಸಾಂದರ್ಭಿಕ ರಚನೆಗಳಾದ ಇವು ಸಹಜ ಸ್ಫೂರ್ತವಲ್ಲವೆಂದೂ, ಸಾರ್ವತ್ರಿಕತೆ ಮತ್ತು ಸಾರ್ವಕಾಲಿಕತೆಯ ಗುಣಗಳು ಇವಕ್ಕಿಲ್ಲವೆಂದೂ, ಹಳಗನ್ನಡ-ನಡುಗನ್ನಡಗಳ ಮಿಶ್ರರೂಪವಿರುವ ಇವು ಲಲಿತವಾಗಿಲ್ಲವೆಂದೂ ದೇಶ ಕುಲಕರ್ಣಿಯವರು ಅಭಿಪ್ರಾಯಪಟ್ಟಿದ್ದಾರೆ.[7] ಶ್ರೀಯವರ ರಾಜಾಭಿಮಾನ ಮತ್ತು ಬ್ರಿಟಿಷ್ ವ್ಯಾಮೋಹಗಳನ್ನು ಮೂರ್ತಿರಾಯರೂ ಟೀಕಿಸಿರುವುದುಂಟು.[8] ಇವುಗಳಲ್ಲಿ ಕೆಲವು ಪರಿಶೀಲನೆಯ ವಿಚಾರಗಳಿವೆ.

ಶ್ರೀಯವರ ಕವನಗಳಲ್ಲಿ ರಾಜಾಭಿಮಾನ ಹೆಚ್ಚು ಎಂಬುದು ದಿಟ; ಬ್ರಿಟಿಷರ ಬಗ್ಗೆ ಅವರಿಗೆ ಪಕ್ಷಪಾತ ಪ್ರೀತಿಯಿತ್ತು, ಎಂಬುದೂ ನಿಜ. ಭರತಮಾತೆಯ ಮತ್ತು ಕೃಷ್ಣರಾಜರ ಸಿಂಹಾಸನಾರೋಹಣದ ಪ್ರಗಾಥಗಳಲ್ಲಿ ಅವರು ಕಡಲರಾಣಿಯ ಚಿತ್ರ ತಂದಿದ್ದಾರೆ. 'ಶುಕ್ರಗೀತೆ' ಮತ್ತು 'ಕನ್ನಡದ ಬಾವುಟ'ಗಳಲ್ಲಿ ಅವರು ಮೈಸೂರು ಮಹಾರಾಜರನ್ನು ನೆನೆದಿದ್ದಾರೆ; ಪ್ರಯತ್ನಪೂರ್ವಕವಾಗಿ ಉಲ್ಲೇಖಿಸಿದ್ದಾರೆ. ಇವು ಅನಗತ್ಯವಾದ ಸೇರಿಕೆಗಳು. ಇದರಿಂದ ಅವರ ಈ ಕೆಲವು ಕವನಗಳ ಶಿಲ್ಪ ಸಡಿಲ ವಾಗಿದೆ, ಕಾವ್ಯಕಲ್ಪನಾಚಿತ್ರದಲ್ಲಿ ಕಪ್ಪುಚುಕ್ಕೆಗಳು ಉಳಿದುಹೋಗಿವೆ. ಇಷ್ಟರ ಮಟ್ಟಿನ ಟೀಕೆಗೆ ಅವರು ಪಾತ್ರರು. ಆದರೆ ದೇಶಕುಲಕರ್ಣಿಯವರು ಹೇಳುವಂತೆ ಇಷ್ಟರಿಂದಲೇ ಅವರ ಕಾವ್ಯ ಮಡಿ ಮತ್ತು ಖಾಸಗಿ ಹೇಗಾಗಿಬಿಡುತ್ತದೆ. ನಾಡು, ನುಡಿಯನ್ನು ಕುರಿತ ಅವರ ಭಾವಗಳು ಖಾಸಗಿಯಲ್ಲ, ಸಾರ್ವತ್ರಿಕ ಸ್ವರೂಪದವು. ಎಲ್ಲರನ್ನು ಎಚ್ಚರಿಸುವ ಒಂದು ಕಾವ್ಯಕರೆ ಹೇಗೆ ಮಡಿಯಾದೀತು? ಒಂದು ನಾಡಿನ ಒಂದು ಕಾಲದ ಅಭಿಮಾನಮೂರ್ತಿಯನ್ನು ಕುರಿತ ಅಭಿವ್ಯಕ್ತಿ ಸಾರ್ವತ್ರಿಕ ವಾದದ್ದೇ. ಅವರು ತಮ್ಮ ಸ್ವತಂತ್ರ ಕವನಗಳಲ್ಲಿ ನವೋದಯ ಕಾವ್ಯದ ಪ್ರಕೃತಿಪರ ಸಂವೇದನೆ ತೋರದಿದ್ದರೂ, ಪ್ರೀತಿವಶತೆ ಭಾವಪರವಶತೆ ಮತ್ತು ಆದರ್ಶ ಜೀವನ ಮೌಲ್ಯಗಳ ಪ್ರಶಂಸೆಯನ್ನು ತೋರಿಯೇ ಇದ್ದಾರೆ. ಇದು ನವೋದಯ ಕಾಲದ ಪ್ರಧಾನ ಕಾವ್ಯಾಶಯಗಳಲ್ಲಿ ಒಂದಾಗಿತ್ತು. ವಸ್ತುಭಿನ್ನತೆ ಇರಬಹುದೇ ವಿನಾ ನವೋದಯ ಕಾಲದ ಸಂವೇದನೆಗಳಿಂದ ಹಾಗೂ ಸಹಜ ಕವಿ ಸಂವೇದನಗಳಿಂದ ಈ ಕವನಗಳು ವಂಚಿತವಾಗಿವೆ ಎಂಬುದನ್ನು ಒಪ್ಪಲಾಗುವುದಿಲ್ಲ. ಇದರೊಂದಿಗೆ ಶ್ರೀಯವರು ತಮ್ಮನ್ನು ತೊಡಗಿಸಿಕೊಂಡಿದ್ದ ಕಾರ್ಯಕ್ಷೇತ್ರ ಮತ್ತು ಆ ಕಾಲದ ರಾಜವಿಶ್ವಾಸ ಪ್ರಭಾವಕ್ಕೆ ಅನುಗುಣವಾದ ಚಿಂತನೆಗಳೇ ಅವರ ಸ್ವತಂತ್ರಕವನಗಳಲ್ಲೂ ಮೂಡಿದ್ದು ಅವು ಸಹಜವಾಗಿಯೇ ಇವೆ. ಒಂದು ಕವನದ ಪರಿಶೀಲನೆಯಲ್ಲಿ ಅದರ ವಸ್ತು ಕಾವ್ಯವಾಗಿ ಹೇಗೆ ಪರಿಣಮಿಸಿದೆ ಎಂಬುದನ್ನು ನೋಡುವುದು ಉಚಿತ. ತಮ್ಮ ಸ್ವತಂತ್ರಕವನಗಳಲ್ಲಿ ಪ್ರಕೃತಿ ಪರವೇ ಮುಂತಾದ ಕಾವ್ಯ ಸಂವೇದನೆ ತೋರದಿದ್ದುದು ಶ್ರೀಯವರ ಕಾವ್ಯದ ದೊಡ್ಡ ದೋಷವೇನಲ್ಲ. ನಾಡು ನುಡಿಗಳ ಅಭಿಮಾನ ಕುರಿತ ಕಾವ್ಯರಚನೆಯಲ್ಲಿ ಹೊಸ ಮಗ್ಗುಲು ತೋರಿ, ಪ್ರಗಾಥವೆಂಬ ಹೊಸ ಸಾಹಿತ್ಯರೂಪ ಹುಟ್ಟುಹಾಕಿದ್ದು ಅವರ ದೊಡ್ಡ ಕೊಡುಗೆಯಾಗಿದೆ. ದೇಶಕುಲಕರ್ಣಿಯವರು ಬಯಸುವ ಅತಿ ಕೋಮಲತೆ, ಲಾಲಿತ್ಯ ಶ್ರೀಯವರ ಪ್ರಗಾಥಗಳಲ್ಲಿಲ್ಲದಿರಬಹುದು. ಆದರೆ ಆ ಕವನಗಳಲ್ಲಿ ಸುಕರವಾದ ಹರಿವು, ಪ್ರಸನ್ನತೆ, ನಿರಾಡಂಬರತೆಗಳಿಗೆ ಕೊರತೆಯೇನಿಲ್ಲ. ಯಾರೊಬ್ಬರೂ ಈ ಕವನಗಳ ಭಾಷೆ ಕಠಿಣ ಎನ್ನಲಾರರು. ಪ್ರಗಾಥ ಬಂಧಕ್ಕನುಗುಣವಾಗಿ ಭಾಷಾಬಿಗಿಗೋಸುಗ ಕೆಲವೆಡೆ ಆರ್ಷರೂಪಗಳನ್ನು ಸುಲಭೀಕರಿಸಿ ಹೊಳಪುಗೊಳಿಸಿ ಬಳಸಿದ್ದಾರೆ. ಶ್ರೀಯವರ ಈ ಅಕ್ಲಿಷ್ಟ ಭಾಷಾ ಪ್ರಯೋಗ ಅನಿವಾರ್ಯವಾದುದೂ ಹೌದು. ಸ್ವತಂತ್ರ ಕವನ

ರಚನೆಗೆ ಅವರು ಆಯ್ದುಕೊಂಡ ಉದ್ಧ ಪ್ರಗಾಥದಂಥ ಸಾಹಿತ್ಯಬಂಧ ಕೂಡ ಅವರ ಕಾವ್ಯವಸ್ತು ಮತ್ತು ಭಾಷಾ ಆಯ್ಕೆಯ ಮೇಲೆ ಕೆಲವು ಒತ್ತಡಗಳನ್ನು, ನಿರ್ಬಂಧಗಳನ್ನು ತಂದಿದೆ ಎಂಬುದನ್ನು ನೆನಪಿಡಬೇಕು. ಭಾವ, ಭಾಷೆ ಮತ್ತು ರೂಪಗಳ ದೃಷ್ಟಿಯಿಂದ ಶ್ರೀಯವರ ಪ್ರಗಾಥಗಳಲ್ಲಿ ನಾವೀನ್ಯದ ಲೇಪವಿದ್ದೇ ಇದೆ.

೫

ಕಡೆಯದಾಗಿ ಶ್ರೀಯವರ ಪ್ರಗಾಥಗಳ ಬಗ್ಗೆ ಒಟ್ಟು ನೋಟದಲ್ಲಿ ಸಾರಾಂಶ ರೂಪದಲ್ಲಿ ಈ ಕೆಲವು ಸಂಗತಿಗಳನ್ನು ಪಟ್ಟಿ ಹಾಕಬಹುದು : (೧) ಕನ್ನಡದಲ್ಲಿ ಪ್ರಗಾಥವೆಂಬ ಪ್ರಕಾರವನ್ನು ಹೆಸರುಸಹಿತ ಪ್ರಯೋಗಿಸಿ ದೃಢಗೊಳಿಸಿ ನಿಲ್ಲಿಸಿದವರು ಶ್ರೀಯವರು. (೨) ಒಂದನ್ನುಳಿದು, ಅವರ ಇತರೆಲ್ಲ ಪ್ರಗಾಥಗಳೂ ಅನಿಯತ ವಾದವು. (೩) ನಾಡು, ನುಡಿ ಮತ್ತು ನಾಡೊಡೆಯರಿಗೆ ಸಂಬಂಧಿಸಿದಂತೆಯೇ ಅವರ ಪ್ರಗಾಥಗಳ ವಸ್ತು ಕೇಂದ್ರೀಕೃತವಾಗಿವೆ. (೪) ಅವರ ಬಹುಪಾಲು ಪ್ರಗಾಥಗಳು ಯಾವುದೋ ಒಂದು ಸಂದರ್ಭವನ್ನೇ ನಿಮಿತ್ತವಾಗಿರಿಸಿಕೊಂಡು ರಚಿತವಾಗಿವೆ. (೫) ಲಯ ವೈವಿಧ್ಯ, ಛಂದೋ ವೈವಿಧ್ಯವಿದ್ದರೂ ಅವರ ಪ್ರಗಾಥಗಳು ಮುಖ್ಯವಾಗಿ ಪಂಚಮಾತ್ರಾಲಯವನ್ನಾಧರಿಸಿವೆ. (೬) ಪಿಂಡಾರನ ರಚನೆಗಳನ್ನು ಹೋಲುವ ಅವರ ಎಲ್ಲ ಸ್ವತಂತ್ರ ಪ್ರಗಾಥಗಳೂ 'ಹೊಂಗನಸುಗಳು' ಸಂಕಲನದಲ್ಲಿ ಸೇರಿವೆ.

**ಅಡಿ ಟಿಪ್ಪಣಿಗಳು**

೧. ಅವರ 'ಅರಮನೆಯ ಒಸಗೆ' ಪದ್ಯದಲ್ಲಿ ೧೪ ಸಾಲುಗಳಿದ್ದರೂ ಅದೊಂದು ಸಾನೆಟ್ಟಲ್ಲ. ಮಂಗಳಾಶಾಸನ ಪದ್ಯ.

೨. ಇದು 'ಅಶ್ವತ್ಥಾಮನ್' ಮತ್ತು 'ಪಾರಸಿಕರು' ಕೃತಿಗಳ ಸಂವಾದ ಭಾಗದಲ್ಲಿ ಕ್ವಚಿತ್ತಾಗಿ ಬಳಕೆಯಾಗಿದೆ. ದೀರ್ಘತೆ ಕಾಣದ ರಚನೆಗಳಿವು.

೩. ಟಿ. ವಿ. ವೆಂಕಟಾಚಲಶಾಸ್ತ್ರೀ, 'ಕನ್ನಡ ಛಂದಃಸ್ವರೂಪ', ಮೈಸೂರು ೧೯೭೮, ಪು. ೬೭೦.

೪. ಕನ್ನಡ ಛಂದಸ್ಸಿನ ಚರಿತ್ರೆ, 'ಶ್ರೀ ಸಾಹಿತ್ಯ', ಮೈಸೂರು ೧೯೮೩, ಪು. ೫೩೮.

೫-೬ ಎಸ್. ಅನಂತನಾರಾಯಣ, 'ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ', ಮೈಸೂರು ೧೯೬೨, ಪು. ೨೨೬, ಪು. ೨೨೬.

೭. ದೇಶಕುಲಕರ್ಣಿ, ಶ್ರೀಯವರ ಸ್ವತಂತ್ರ ಕವನಗಳು: 'ಬಿ.ಎಂ.ಶ್ರೀ. ಬದುಕು-ಬರಹ', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು. ೫೯-೬೭.

೮. 'ಬಿ. ಎಂ. ಶ್ರೀಕಂಠಯ್ಯ', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೮೨, ಪು. ೯೭-೯೯.

# ಅನುವಾದಕರಾಗಿ : ಬಿ.ಎಂ.ಶ್ರೀ.

– ಪ್ರಧಾನ್ ಗುರುದತ್ತ

ಕನ್ನಡ ಸಾಹಿತ್ಯದಲ್ಲಿ ನವೋದಯಕ್ಕೆ ನಾಂದಿಯನ್ನು ಹಾಡಿದ ಹಿರಿಯರಲ್ಲಿ ಒಬ್ಬರಾದ ಬಿ. ಎಂ. ಶ್ರೀಕಂಠಯ್ಯನವರು ಕನ್ನಡ ಅನುವಾದಗಳ ಇತಿಹಾಸದಲ್ಲಿಯೂ ಅಜರಾಮರವಾದ ಕೀರ್ತಿಯನ್ನು ಗಳಿಸಿದ್ದಾರೆ. ಸಾಹಿತ್ಯೇತಿಹಾಸದಲ್ಲಿ ಕ್ರಾಂತಿಯನ್ನೆಸಗುವಂಥ ಅನುವಾದಗಳನ್ನು ಕಾಣಿಕೆಯಾಗಿ ಕೊಡುವ ಅಪೂರ್ವ ಅದೃಷ್ಟವೂ ಅವರದಾಯಿತು. ಅನುವಾದಗಳೇ ಅವರ ಸಾಹಿತ್ಯಕ ಜೀವನದ ಮಹತ್ವದ ಪ್ರಕಟಣೆಗಳೂ ಆಗಿರುವುದು ಸಂತೋಷಕರವಾದ ಆಕಸ್ಮಿಕ. ಸೀಮಿತ ಸಂಖ್ಯೆಯ ಅನುವಾದಗಳಿಂದ ಅಸೀಮಿತ ಪ್ರಭಾವವನ್ನು ಬೀರಿದ ವಿರಳ ವಿದ್ಯಮಾನಕ್ಕೂ ಅವರು ನಿದರ್ಶನವಾಗಿ ಉಳಿದಿದ್ದಾರೆ.

'ಇಂಗ್ಲಿಷ್ ಗೀತಗಳು' (೧೯೨೧) 'ಅಶ್ವತ್ಥಾಮನ್' (೧೯೨೯) ಮತ್ತು 'ಪಾರಸಿಕರು' (೧೯೩೫) ಇವು ಸಾಹಿತಕ್ಯವಾಗಿ ಗಣನೀಯವಾಗಿರುವ ಅವರ ಅನುವಾದಗಳು. ಮೊಹಮ್ಮದ್ ಅಬ್ಬಾಸ್ ಶುಸ್ತ್ರಿಯವರ 'ಇಸ್ಲಾಂ ಸಂಸ್ಕೃತಿ' (೧೯೪೪) ಅವರ ಏಕೈಕ ಸಾಹಿತ್ಯೇತರ ಅನುವಾದ. ಈ ಅನುವಾದವನ್ನು ಕೈಗೊಳ್ಳದೆಯೇ ಇದ್ದರೂ ಶ್ರೀಯವರ ಕೀರ್ತಿಗೆ ಯಾವುದೇ ಕುಂದು ಉಂಟಾಗುತ್ತಿರಲಿಲ್ಲ. 'ಇಂಗ್ಲಿಷ್ ಗೀತಗಳು' ಮತ್ತು 'ಅಶ್ವತ್ಥಾಮನ್' – ಈ ಎರಡು ಕೃತಿಗಳಂತೂ ಅವರ ಕೀರ್ತಿಯ ಕಿರೀಟದ ಉಜ್ವಲ ರತ್ನಗಳು. 'ಪಾರಸಿಕರು' ಅಷ್ಟಾಗಿ ಪ್ರಸಿದ್ಧವಾಗಲಿಲ್ಲವಾದರೂ, ಉತ್ತಮ ಸೃಜನಾತ್ಮಕ ಅನುವಾದದ ಉದಾಹರಣೆಯಾಗಿ ಉಳಿದಿರುವ ಕೃತಿ.

**ಇಂಗ್ಲಿಷ್ ಗೀತಗಳು**

ಬೆಂಗಳೂರಿನ ಸೆಂಟ್ರಲ್ ಕಾಲೇಜಿನ 'ಕರ್ನಾಟಕ ಸಂಘ'ದ ಮೂಲಕ ೧೯೨೬ರಲ್ಲಿ ಸಮಗ್ರರೂಪದಲ್ಲಿ 'ಇಂಗ್ಲಿಷ್ ಗೀತಗಳು' ಹೊರಬಂದಿತಾದರೂ, ಇದಕ್ಕೂ ಮುಂಚೆ

ಎರಡು ಒಬ್ಬೆಗಳಲ್ಲಿ ಸ್ವಲ್ಪ ಸ್ವಲ್ಪ ಪ್ರಕಟವಾಗಿದ್ದುವು ಎಂದು ವಿ. ಸೀತಾರಾಮಯ್ಯ ನವರು ಅಭಿಪ್ರಾಯಪಟ್ಟಿದ್ದಾರೆ. "ಬಾಪೂ ಸುಬ್ಬರಾಯರು ಮೂರು ಕವನಗಳನ್ನು ತೆಗೆದುಕೊಂಡು ತಮ್ಮ 'ವಿದ್ಯಾದಾಯಿನಿ'ಯಲ್ಲಿ ೧೯೧೯ನೆಯ ಇಸವಿಯಲ್ಲಿ ಹೊರ ಪಡಿಸಿದರು; ೧೯೨೧ರಲ್ಲಿ ತಮ್ಮ 'ಗ್ರಂಥಮಾಲೆ'ಯಲ್ಲಿ ಇನ್ನು ಹನ್ನೆರಡು ಗೀತಗಳನ್ನು ಅಚ್ಚುಹಾಕಿಸಿದರು ... ಡಿ. ವಿ. ಗುಂಡಪ್ಪನವರು ... ಮತ್ತೆ ಇಪ್ಪತ್ತುನಾಲ್ಕು ಕವನ ಗಳನ್ನು ೧೯೨೪ರಲ್ಲಿ ತಮ್ಮ 'ಕರ್ಣಾಟಕ ಜನಜೀವನ' ಪತ್ರಿಕೆಯಲ್ಲಿ ಮುದ್ರಿಸಿ ಕೊಟ್ಟರು" ಎಂದು ಶ್ರೀಯವರೇ ಇದರ ಪ್ರಕಟಣೆಯ ಇತಿಹಾಸವನ್ನು ನಮೂದಿಸಿ ದ್ದಾರೆ. ಪತ್ರಿಕೆಗಳಲ್ಲಿನ ಪ್ರಕಟಣೆಗಳನ್ನು ಹೊರತುಪಡಿಸಿ, 'ಗ್ರಂಥಮಾಲೆ'ಯಲ್ಲಿ ಸಾಕಷ್ಟು ಸಂಖ್ಯೆಯ ಇಂಗ್ಲಿಷ್ ಗೀತಗಳು ಪ್ರಕಟವಾದ ವರ್ಷವನ್ನೇ 'ಇಂಗ್ಲಿಷ್ ಗೀತಗಳು' ಸಂಕಲನದ ಪ್ರಕಟಣೆಯ ವರ್ಷವೆಂದು ಗ್ರಹಿಸಲಾಗಿದೆ (೧೯೨೧). ಕರ್ಣಾಟಕ ಸಂಘ ಹೊರತಂದ ೧೯೨೬ರ ಆವೃತ್ತಿಯಲ್ಲಿ 'ಕಾಣಿಕೆ', 'ಭರತಮಾತೆಯ ವಾಕ್ಯ' ಮತ್ತು 'ಮೈಸೂರು ಮಕ್ಕಳು' ಎಂಬ ಶ್ರೀಯವರ ಮೂರು ಸ್ವತಂತ್ರ ಕವನಗಳೂ ಸೇರಿವೆ. ಇವುಗಳಲ್ಲಿ ಇಂಗ್ಲಿಷ್ ಗೀತಗಳ 'ಕಾಣಿಕೆ' ಎಂಬ ಪದ್ಯ 'ಹೊಂಗನಸುಗಳ'ಲ್ಲಿ 'ಕನ್ನಡದ ಹೆಣ್ಣು' ಎಂದು ಸೇರಿದೆ; 'ಭರತಮಾತೆಯ ವಾಕ್ಯ' ಎಂಬುದು 'ಭರತಮಾತೆಯ ನುಡಿ' ಎಂದು ಸೇರಿದೆ. 'ಮೈಸೂರು ಮಕ್ಕಳು' ಎರಡರಲ್ಲಿಯೂ ಸಮಾನವಾಗಿದೆ. ಹೀಗಾಗಿ, ಇವನು ಹೊರತುಪಡಿಸಿಯೇ ಇಂಗ್ಲಿಷ್ ಗೀತಗಳನ್ನು ಪರಿಶೀಲನೆಗೆ ತೆಗೆದುಕೊಂಡರೆ, ಅದರಲ್ಲಿ ೬೦ ಇಂಗ್ಲಿಷ್ ಗೀತಗಳ ಅನುವಾದಗಳು ಕಾಣದೊರೆಯುತ್ತವೆ: ಜ್ಞಾತರಾಗಿರುವ ೩೦ ಮಂದಿ ಕವಿಗಳ ೫೮ ಕವನಗಳು ಮತ್ತು ಅನಾಮಿಕ ೨ ಕವನಗಳು. ಜ್ಞಾತರಾಗಿರುವ ೩೦ ಕವಿಗಳ ೫೮ ಕವನಗಳಲ್ಲಿ ಷೆಲ್ಲಿಯವು ೯ ; ಬರ್ನ್ಸ್‌ನವು ೭ ; ವರ್ಡ್ಸ್‌ವರ್ತ್‌ನವು ೫ ; ಬ್ರೌನಿಂಗ್, ಟೆನಿಸನ್ ಮತ್ತು ಸ್ಕಾಟ್‌ರವು ತಲಾ ೩; ಕ್ಯಾಂಪ್‌ಬೆಲ್, ಕೌಪರ್, ಬೈರನ್, ಕೋಲ್‌ರಿಜ್, ಷೇಕ್ಸ್‌ಪಿಯರ್ ಮತ್ತು ಸದೆ ಅವರವು ತಲಾ ೨; ಉಳಿದ ೧೬ ಕವಿಗಳವು ತಲಾ ೧.

ತಮ್ಮ ಈ ಆಯ್ಕೆಯ ಉದ್ದೇಶವೇನೆಂಬುದನ್ನು ಶ್ರೀಯುವರು ಹೀಗೆ ಸ್ಪಷ್ಟ ಪಡಿಸಿದ್ದಾರೆ: (i) "ಇಂಗ್ಲಿಷ್ ಕಾವ್ಯಮಾರ್ಗವನ್ನು ಕನ್ನಡಿಗರು ಈ ಸಣ್ಣ ಗ್ರಂಥದಿಂದ ಸ್ವಲ್ಪಮಟ್ಟಿಗೆ ತಿಳಿಯಬಹುದಾಗಿದೆ." ಮತ್ತು (ii) "ವಿಶ್ವಕವಿತಾ ವಿಷಯಗಳಾದ ಯುದ್ಧ, ಪ್ರೇಮ, ಮರಣ, ದೇಶಭಕ್ತಿ, ದೈವಭಕ್ತಿ, ಪ್ರಕೃತಿ ಸೌಂದರ್ಯ, ಮಾನವಜನ್ಮದ ಸುಖದುಃಖಗಳು, ರಾಗದ್ವೇಷಗಳು, ಪುರುಷಾರ್ಥ ಗಳು, ಜನ್ಮಾಂತರ ದರ್ಶನಗಳು ಮುಂತಾದ ಕಾವ್ಯ ವಸ್ತುಗಳನ್ನು ಇತರ ದೇಶದ ಕವಿಗಳು ಯಾವ ರೀತಿಯಲ್ಲಿ ಪುಷ್ಟಿಗೊಳಿಸಿ ಸಹಜಭಾಷೆಯಲ್ಲಿ ಸೌಂದರ್ಯರಚನೆ ಯನ್ನು ಮಾಡಿರುವರೋ ಅದನ್ನೆಲ್ಲ ಶ್ರದ್ಧೆಯಿಂದ ಪರಾಮರ್ಶಿಸಿ, ಧೈರ್ಯವನ್ನೂ

ಶಿಕ್ಷಣ-ಬದ್ಧವಾದ ಸ್ವಾತಂತ್ರ್ಯವನ್ನೂ ವಹಿಸಿ ಕನ್ನಡದ ಕವಿಗಳು ಒಂದಕ್ಕಿಂತಲೂ ಮುಂದೆ ಇನ್ನೂ ಶ್ರೇಯಸ್ಸನ್ನು ತಾಳಲಿ."

ತಾವು ಆಯ್ದುಕೊಂಡ ಎಲ್ಲ ಕವಿಗಳೂ ಉತ್ಕೃಷ್ಟರಾದವರು ಹಾಗೂ ಆಯ್ದುಕೊಂಡ ಅವರ ಕವನಗಳೆಲ್ಲ ಶ್ರೇಷ್ಠವಾದುವು ಎಂಬ ಭ್ರಮೆ ಅವರಿಗಂತೂ ಇರಲಿಲ್ಲ. ಇತರರೂ ಈ ಬಗೆಯ ಭ್ರಮೆಗೊಳಗಾಗಬಾರದು. ಅವರೇ ಈ ಮಾತನ್ನು ಸ್ಪಷ್ಟಪಡಿಸಿಯೂ ಇದ್ದಾರೆ: "ಇಲ್ಲಿ ಕೊಟ್ಟಿರುವ ಕವನಗಳೆಲ್ಲಾ ಇಂಗ್ಲಿಷ್ ಕಾವ್ಯಮಾಲೆಯ ನಾಯಕರತ್ನಗಳೆಂದು ಆದುಕೊಂಡವಲ್ಲ. ಉತ್ತಮರಾದ ಕವಿಗಳೂ ಇಲ್ಲಿ ಎಲ್ಲರೂ ಇಲ್ಲ. ಆಗಾಗ್ಗೆ ಓದುತ್ತಿರುವಾಗ ನನ್ನ ಮನಸ್ಸಿಗೊಪ್ಪಿ ನನ್ನ ಕೈಮೀರದುವಾಗಿ ಕಂಡುಬಂದ ಗೀತಗಳಿವು."

ಹೀಗೆ ಗೀತಗಳನ್ನು ಆಯ್ದುಕೊಳ್ಳುವಲ್ಲಿಯೂ ತಮ್ಮ ಒಲವು ಏಕೆ ಮತ್ತು ಯಾವುದರತ್ತ ಹರಿದಿದೆ ಎಂಬುದನ್ನೂ ಅವರು ಸ್ಪಷ್ಟಪಡಿಸಿದ್ದಾರೆ: "ಇಂಗ್ಲಿಷ್ ಕವಿಗಳು ಶೃಂಗಾರ ರಸವನ್ನು ಹೇಗೆ ಗಂಭೀರವಾಗಿಯೂ, ಸೂಕ್ಷ್ಮವಾಗಿಯೂ, ಸ್ವಾಭಾವಿಕವಾಗಿಯೂ ತೋರಿಸುವರೆಂಬುದನ್ನು ತಿಳಿಸುವುದಕ್ಕಾಗಿ ಈ ಬಗೆಯ ಗೀತಗಳು ಕೊಂಚ ಹೆಚ್ಚಾಗಿ ಬಂದಿವೆ. ಇಂಗ್ಲಿಷ್ ಸಾಹಿತ್ಯ ಸಮುದ್ರದ ಕರೆಯಲ್ಲಿ ತೆರೆಯಿಸೆದ ಈ ಕೆಲವು ಸಣ್ಣ ಚಿಪ್ಪುಗಳಿಂದ, ಆ ದಿವ್ಯ ರತ್ನಾಕರದ ಲಾವಣ್ಯವೂ, ವಾಸನೆಯೂ, ಘೋಷವೂ, ರುಚಿಯೂ ಸಹೃದಯರ ಅನುಭವಕ್ಕೆ ಬಾರದೆ ಇರಲಾರವು."

ಇವೆಲ್ಲಕ್ಕಿಂತ ಹೆಚ್ಚಾಗಿ ಶ್ರೀಯವರನ್ನು ಇಂಥ ಸಾಹಸದಲ್ಲಿ ತೊಡಗಿಸಿದ ಒಂದು ಆಂತರಿಕ ಅಭೀಪ್ಸೆಯೂ ಉಂಟು. ನಮ್ಮ ಹೆಣ್ಣಾದ ಕನ್ನಡ ನುಡಿ ಹಾಗೂ ಪಡುವ ಕಡಲ ಪೊನ್ನ ಹೆಣ್ಣಾದ ಇಂಗ್ಲಿಷ್ ಭಾಷೆ, ತಮ್ಮನ್ನು ಒಲಿಸಿ, ನಲಿಸಿ, ಕಲಿಸಿ ಕುಣಿಸುತ್ತಿದ್ದಾಗ –

"ಇವಳ ಸೊಬಗನವಳು ತೊಟ್ಟು,
ನೋಡ ಬಯಸಿದೆ ;
ಅವಳ ತೊಡಿಗೆ ಇವಳಿಗಿಟ್ಟು
ಹಾಡ ಬಯಸಿದೆ."

– ಎಂದು ಅವರೇ 'ಕಾಣಿಕೆ'ಯಲ್ಲಿ ಹೇಳಿಕೊಂಡಿದ್ದಾರೆ. ಅವರ ಈ ಪ್ರೀತಿಯನ್ನು "ಲೇವಡಿ ಮಾಡಿದವರೂ" ಇದ್ದರೆಂದು ವಿ. ಸೀತಾರಾಮಯ್ಯನವರು ದಾಖಲಿಸಿದ್ದಾರೆ. ಅಷ್ಟೇ ಅಲ್ಲ, ಇಂಥ ಕುಹಕದ ಹಿಂದಿನ ಮನೋಧರ್ಮ ಹೇಗೆ ಗ್ರಹಿಸಬೇಕಾದ್ದನ್ನು ಗ್ರಹಿಸದೆ, ಗ್ರಹಿಸಬಾರದ್ದನ್ನು ಗ್ರಹಿಸಿ, ಇಲ್ಲದ್ದನ್ನು ಊಹಿಸಿಕೊಂಡು ತಾವೇ ಅವಹೇಳನಕ್ಕೆ ಗುರಿಯಾಗುವ ಅವಿವೇಕವನ್ನೂ ತೋರುತ್ತದೆ ಎಂಬುದನ್ನೂ ಅವರು ಸ್ಪಷ್ಟಪಡಿಸಿದ್ದಾರೆ: " 'ಸೊಬಗನುಟ್ಟು' ಎಂದಿದೆಯೇ ಹೊರತು

ಉಡೆಯನುಟ್ಟು' ಎಂದಿಲ್ಲ; 'ತೊಟ್ಟು', 'ತೊಡಿಗೆ ಇಟ್ಟು' ಎಂಬವು ಇಲ್ಲಿಯ ಮಾತುಗಳು. ಉಡುಪಿಗೆ ಸಂಬಂಧಪಟ್ಟ ಮಾತುಗಳಲ್ಲ ; ಒಡವೆ ತೊಟ್ಟದ್ದು : ಇಂಗ್ಲಿಷ್ ಫ್ರಾಕ್,ಗೌನ್,ಹಾಕಿ ಇವು ಭಾರತದ ಮಹಿಳೆಯನ್ನು ದೊರೆಸಾನಿ ಮಾಡಬೇಕೆನ್ನಲಿಲ್ಲ."

ತಮ್ಮ ಈ ಅಭಿಪ್ರಾಯ ಮತ್ತು ಆಯ್ಕೆಯ ಗೀತಗಳನ್ನು ಅನುವಾದಿಸುವಲ್ಲಿ ತಾವು ಅನುಸರಿಸಿದ ವಿಧಾನ ಯಾವುದೆಂಬುದನ್ನು ಶ್ರೀಯವರು ತಿಳಿಸಿದ್ದಾರೆ : "ನನ್ನ ಬುದ್ಧಿಬಲವಿರುವ ಮಟ್ಟಿಗೂ ಮೂಲವನ್ನು ಪ್ರತಿಬಿಂಬಿಸುವ ಕರ್ತವ್ಯವನ್ನೇ ಮುಂದಿಟ್ಟುಕೊಂಡು ಕೆಲಸಮಾಡಿದ್ದೇನೆ. ಕೆಲವು ಕಡೆ ಹೆಸರು, ಭಾವ ಮುಂತಾದುವು ಕನ್ನಡ ಜನಕ್ಕೆ ಹೊಂದಿಕೆಯಾಗುವಂತೆ ಮಾರ್ಪಾಡಾಗಿದ್ದರೂ, ಸಾಮಾನ್ಯವಾಗಿ ಪದಪ್ರಯೋಗ, ಶೈಲಿ, ಛಂದಸ್ಸು, ಭಾವ, ರಸ – ಇವೆಲ್ಲವೂ ಮೂಲಕವಿಯ ವ್ಯಕ್ತಿತ್ವವನ್ನೇ ಅನುಸರಿಸಿವೆ. ಕನ್ನಡದ ಜಾಯಮಾನವನ್ನು ಮೀರದೆ ಎಷ್ಟು ಮಟ್ಟಿಗೆ ಛಂದಸ್ಸು ಇಂಗ್ಲಿಷ್ ಛಂದಸ್ಸುಗಳನ್ನು ಹೋಲಬಹುದೋ ಅಷ್ಟು ಮಟ್ಟಿಗೂ ಆ ಪದ್ಯಗಳನ್ನು ಕನ್ನಡಕ್ಕೆ ಇಳಿಸುವುದಕ್ಕೆ ಪ್ರಯತ್ನಪಟ್ಟಿರುತ್ತೇನೆ. ಇಂಗ್ಲಿಷ್ ಬಲ್ಲವರು ಇದನ್ನು ತಿಳಿಯಬಲ್ಲರು. ಅಚ್ಚಗನ್ನಡಿಗರು ಈ ಭಾಗದಲ್ಲಿ ಅಸಮಾಧಾನ ಪಡಬಾರದೆಂದು ನನ್ನ ಪ್ರಾರ್ಥನೆ."

ಇಂಗ್ಲಿಷ್ ಗೀತಗಳನ್ನು ವಿಮರ್ಶಿಸಲು ಹೊರಡುವಾಗ ನಾವು ಗಮನಿಸಬೇಕಾದ ಅಂಶಗಳು ಯಾವುವೆಂಬುದನ್ನು, ಈ ದಿಕ್ಕಿನಲ್ಲಿ ಶ್ರೀಯವರು ವಹಿಸಿರುವ ಎಚ್ಚರ ಎಂಥ ಬಗೆಯದು ಎಂಬುದನ್ನೂ ತೀ. ನಂ. ಶ್ರೀಕಂಠಯ್ಯನವರು ಹೀಗೆ ಸ್ಪಷ್ಟಪಡಿಸಿದ್ದಾರೆ : "ಇಂಗ್ಲಿಷ್‌ನಿಂದ ಅನುವಾದ ಮಾಡುವುದರಲ್ಲಿ 'ಶ್ರೀ'ಯವರು ಬಲುಮಟ್ಟಿಗೆ ಕಟ್ಟುನಿಟ್ಟಿನ ಮಾರ್ಗವನ್ನೇ ಅನುಸರಿಸಿದರು. ಅಕ್ಷರಶಃ ಭಾಷಾಂತರ ಮಾಡದೆ ಮೂಲದ ಭಾವ ವೈಖರಿಯನ್ನು ಸಜೀವವಾಗಿ, ಆದರೆ ಯಥಾವತ್ತಾಗಿ ಕನ್ನಡದಲ್ಲಿ ತರಲು ಸರ್ವಪ್ರಯತ್ನವನ್ನೂ ಮಾಡಿದರು ; ಈ ಕಾರ್ಯದಲ್ಲಿ ಹೆಚ್ಚಿನ ಯಶಸ್ಸನ್ನೂ ಪಡೆದರು. ಮೂಲದ ಹೆಸರುಗಳನ್ನೂ, ಸಂದರ್ಭಗಳನ್ನೂ, ಉಕ್ತಿಗಳನ್ನೂ ನಮ್ಮ ಆವರಣಕ್ಕೆ ಹೊಂದಿಕೊಳ್ಳುವಂತೆ ಅಲ್ಲಲ್ಲಿ ಮಾರ್ಪಡಿಸಿರುವುದುಂಟು; ಆದರೂ ಮೂಲದ ತಿರುಳಿಗೆ ದ್ರೋಹವಾಗದಂತೆ ಎಚ್ಚರಿಕೆ ವಹಿಸಿದ್ದಾರೆ."

ಜೊತೆಗೆ, ಇದು ಶ್ರೀಯವರು ನಡೆಸಿದ ಬಗೆಬಗೆಯಾದ ಪ್ರಯೋಗಗಳ ಪ್ರಯೋಗಶಾಲೆ, ಹೊಸಹೊಸ ಹಾದಿಗಳನ್ನು ತೆರೆದು ತೋರುವ ಅವರ ಮೊದಲ ಸಾಹಸ ಎಂಬುದನ್ನೂ ನಾವು ಮರೆಯುವಂತಿಲ್ಲ. ಹೀಗಾಗಿ, ಒಂದು ಪ್ರಯೋಗ ಚಿತ್ತಾಕರ್ಷಕವಾಗಿರಬಹುದು ; ಒಂದು ಪ್ರಯೋಗ ಅದ್ಭುತ ಪರಿಣಾಮಗಳನ್ನು ಸಾಧಿಸಿರಬಹುದು ; ಇನ್ನೊಂದು ಪ್ರಯೋಗ ಬೇಸರವನ್ನು ತರಬಹುದು ; ಮತ್ತೊಂದು ಪ್ರಯೋಗ ನಿಷ್ಫಲವಾಗಿರಬಹುದು. ಆದರೆ ಮುಖ್ಯವಾಗುವುದು ಒಟ್ಟಾರೆ ಸಾಧನೆ ಏನು ಎಂಬುದು. ಈ ವಿಷಯದಲ್ಲಿ ಭಿನ್ನಾಭಿಪ್ರಾಯಕ್ಕೆ ಎಡೆಯೇ

ಇಲ್ಲ. ಇದೊಂದು ಅಪೂರ್ವ, ಅನುಪಮ ಸಾಧನೆ. ಇದನ್ನು ಈಚಿನ ಇಂಥ ಇನ್ನೊಂದು ಪ್ರಯತ್ನವೂ ದೃಢಪಡಿಸುತ್ತದೆ.

ಹೇಳಿಕೇಳಿ ಶ್ರೀಯವರು ಕೈಹಾಕಿದ್ದು ಕಾವ್ಯದ ಅನುವಾದಕ್ಕೆ – ಅದರಲ್ಲಿಯೂ ಸೋದರಭಾಷೆಯೊಂದರಿಂದಲ್ಲ, ಮಿತ್ರಭಾಷೆಯೊಂದರಿಂದ. ಹೀಗಾಗಿ, ಇಲ್ಲಿ ಎದುರಾಗುವ ಸಮಸ್ಯೆಗಳು ಹಲವು ಬಗೆಯವು. ಶ್ರೀಯವರ ಇಂಗ್ಲಿಷ್ ಪ್ರಾಧ್ಯಾಪಕತ್ವ ಭಾವದ ಹಾದಿಯನ್ನು ತಪ್ಪದಂತೆ ಅವರನ್ನು ರಕ್ಷಿಸಬಹುದೇ ಹೊರತು, ಪ್ರತಿಯೊಂದು ಕವನದ ಅನುವಾದಕ್ಕೆ ಅದು ಯಶಸ್ಸಿನ ಭರವಸೆಯನ್ನೇನೂ ಕೊಡಲಾರದು. ಜೊತೆಗೆ, ಡಾ॥ ಪ್ರಭುಶಂಕರ ಅವರೆಂದಿರುವಂತೆ "ಕವಿಯ ಎಲ್ಲ ಕವನಗಳೂ ಹೇಗೆ ಸಿದ್ಧಿಯ ಶಿಖರವನ್ನು ಮುಟ್ಟಲಾರವೋ ಹಾಗೆಯೇ ಅನುವಾದಕರ ಎಲ್ಲ ಅನುವಾದಗಳೂ ಸಂಪೂರ್ಣವಾಗಿ ಸಮರ್ಪಕವಾಗಲಾರವು" ಎಂಬುದನ್ನೂ ನಾವು ನೆನಪಿನಲ್ಲಿಟ್ಟುಕೊಳ್ಳಬೇಕು. ಡರೋತಿ ಎಲ್. ಸೇಯರ್ಸ್ ಅಂತೂ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಘೋಷಿಸಿಬಿಟ್ಟಿರುವುದುಂಟು : "No translation is final; no translation is perfect." ಕಾವ್ಯದ ಅನುವಾದದ ವಿಷಯದಲ್ಲಿ, ಜಾನ್ಸನ್ "Poetry, Sir, cannot simply be translated" ಎಂದು ಸ್ಪಷ್ಟವಾಗಿ ಘೋಷಿಸಿಯೇ ಬಿಟ್ಟಿದ್ದಾನೆ ; "Poetry is what gets lost in translation" ಎಂದು ಫ್ರಾಸ್ಟ್ ಅಪಾಯದ ಗಂಟೆಯನ್ನೇ ಮೊಳಗಿಸಿ, ಅನುವಾದದ ಯತ್ನದಲ್ಲಿ ಹೇಗೆ ಕಾವ್ಯತ್ವ ಮೊದಲ ಬಲಿಯಾಗಿಬಿಡುತ್ತದೆಂಬುದನ್ನು ಸಾರಿ ಹೇಳಿದ್ದಾನೆ. ಮತ್ತೊಬ್ಬ ಹೀಬ್ರೂ ಕವಿ "Translation of poetry is like kissing one's sweet heart through a veil" ಎಂದು ಹೇಳಿ, ಈ ಬಗೆಯ ಪ್ರಯತ್ನದಲ್ಲಿ ನಮಗೆ ಎದುರಾಗುವ ಮಹಾ ನಿರಾಶೆ ಯಾವ ಸ್ವರೂಪದ್ದು ಎಂಬುದನ್ನು ಮನವರಿಕೆ ಮಾಡಿಕೊಟ್ಟಿದ್ದಾನೆ. ಇಂಥ ಕಷ್ಟಸಾಧ್ಯವಾದ ಸಾಹಸದಲ್ಲಿ ತಮ್ಮನ್ನು ತೊಡಗಿಸಿಕೊಂಡ ಶ್ರೀಯವರಿಗೆ, ಬೇರೆ ಯಾರಿಗಿಂತಲೂ ಹೆಚ್ಚಾಗಿ ಹಾಗೂ ಚೆನ್ನಾಗಿ ತಮ್ಮ ಪ್ರಯತ್ನಗಳ ಇತಿಮಿತಿಗಳು ಗೊತ್ತಿದ್ದುವು.

ತೀ. ನಂ. ಶ್ರೀಕಂಠಯ್ಯನವರು ಇಂಗ್ಲಿಷ್ ಗೀತಗಳ ವಾಚನಕೂಟದ ಸ್ವಾರಸ್ಯವನ್ನು ಬಣ್ಣಿಸಿ ಪು. ತಿ. ನರಸಿಂಹಾಚಾರ್ ಅವರಿಗೆ ಬರೆದಿದ್ದ ಪತ್ರದ ಒಂದು ಭಾಗ ಈ ದೃಷ್ಟಿಯಿಂದ ಉಲ್ಲೇಖಾರ್ಹವಾಗಿದೆ : " 'ನಿನ್ನೊಳೆನಗೊಲವಿಲ್ಲ'– ಈ ಕವನವು ಬಲು ಚಲುವಾಗಿದೆಯೆಂದು ನನ್ನೊಡನೆ ನೀವು ಹೇಳಿದ್ದಿರಿ. ಮೂಲವು ಚೆನ್ನಾಗಿದೆ ; ಆದರೆ ಪರಿವರ್ತನವು ನನಗೊಪ್ಪಲಿಲ್ಲ. ನೀರಸವಾಗಿ (prosaic) ಕಂಡಿತು. ಇದೇ ನನ್ನ ಮನಸ್ಸಿನಲ್ಲಿ ಕೊರೆಯುತ್ತಿತ್ತು. ಶ್ರೀಕಂಠಯ್ಯನವರೇ 'This may sound prosaic in some places' ಎಂದು ಹೇಳಿದ ಮೇಲೆ ಧೈರ್ಯವಾಯಿತು, ಆದರೆ 'But we are experimenting' ಎಂದು ಹೇಳಿ

ತಮ್ಮ ಮಾರ್ಗವನ್ನು ಸಮರ್ಥನೆ ಮಾಡಿಬಿಟ್ಟರು." ಇದೇ ರೀತಿ, ಶ್ರೀಯವರು ತಮ್ಮ ಇನ್ನೊಂದು ಅನುವಾದದ ಬಗೆಗೆ ಟೀಕಿಸಿಕೊಂಡಿದ್ದುದನ್ನೂ ತೀ. ನಂ. ಶ್ರೀಯವರು ದಾಖಲಿಸಿದ್ದಾರೆ : "ವರ್ಡ್ಸ್‌ವರ್ತ್ ಕವಿಯ 'Written in March' ಎಂಬ ಕವನದ –

'The catlle are grazing,
Their heads never raising,
There are forty feeding like one !'

– ಎಂಬ ಚರಣಗಳು ಕನ್ನಡ ಅನುವಾದದಲ್ಲಿ :

'ಕೊರಳೆತ್ತಿ ಮೈಮರೆತು
ಹರಡಿದೆಳಹಸುರಾದ
ಗರಿಕೆಯನು ಮೇಯುದೆಯೆ ಮಂದೆ ಇಹುದು.'

– ಎಂದು ಭಾಷಾಂತರ ಹೊಂದಿದೆ. ಈ ಚರಣಗಳು ಅಂದವಾಗಿದ್ದರೂ ಇವು 'false to Wordsworth' ಎಂದು ಶ್ರೀಯವರೇ ಟೀಕಿಸಿದ್ದುಂಟು."

ಶ್ರೀಯವರ ಈ ಅರವತ್ತು ಕವನಗಳ ಅನುವಾದಗಳನ್ನು ಮೂರು ಬಗೆಗಳಾಗಿ ವಿಂಗಡಿಸಿಕೊಳ್ಳಬಹುದು : (i) ಪ್ರಯೋಗಗಳು, (ii) ರೂಪಾಂತರಗಳು, ಮತ್ತು (iii) ಸೃಜನಾತ್ಮಕ ಅನುವಾದಗಳು ಅಥವಾ ಪುನಸ್ಸೃಷ್ಟಿಗಳು. ಇವುಗಳನ್ನು ಸ್ವಲ್ಪ ವಿವರವಾಗಿ ಪರಿಶೀಲಿಸಬಹುದು.

## ಪ್ರಯೋಗಗಳು

ಈ ಬಗೆಯಾದ ಅನುವಾದಕ್ಕೆ ನಿದರ್ಶನವಾಗಿ ಷೇಕ್ಸ್‌ಪಿಯರನ 'Under the Green-wood tree, ವರ್ಡ್ಸ್‌ವರ್ತನ 'Rainbow', ನ್ಯಾಷ್ ಕವಿಯ 'Spring' ಮತ್ತು ಷೆಲ್ಲಿಯ 'Skylark' ಕವನದ ಅನುವಾದಗಳನ್ನು ಪರಿಶೀಲಿಸಬಹುದಾಗಿದೆ.

ಶ್ರೀಯವರು ಕನ್ನಡದ ಜಾಯಮಾನಕ್ಕೆ ವಿಶೇಷ ಗಮನವಿತ್ತು ಅನುವಾದ ಕಾರ್ಯವನ್ನು ನಡೆಸಿದರು ಎಂಬುದಕ್ಕೆ ಸಾಕ್ಷಿಯಾಗಿ ಷೇಕ್ಸ್‌ಪಿಯರನ 'Under the Green-wood tree'ಯ ಅನುವಾದವನ್ನು ಹೆಸರಿಸಬಹುದು. ಶ್ರೀಯವರು ಮೂಲದ ತಿರುಳನ್ನು ಗ್ರಹಿಸಲು ಹೇಗೆ ಶ್ರಮಿಸುತ್ತಾರೆ ಎಂಬುದಕ್ಕೆ ಅವರು ಆಯುವ ಪರ್ಯಾಯಗಳೇ ಸಾಕು. ಇದರಲ್ಲಿ Green wood 'ಅಡವಿಮರ'ವಾಗಿ, winter 'ಕೊರೆವ ಚಳಿ'ಯಾಗಿ, rough-weather 'ಬಿರುಗಾಳಿ'ಯಾಗಿ, ambition 'ಆಸೆ ಬಲೆ'ಯಾಗಿ, to live in the sun 'ಬಿಸಿಲ ಕಾಯುತ ಮಲಗು'ವುದಾಗಿ ಕಾಣಿಸಿಕೊಳ್ಳುತ್ತವೆ. ಬಿಡಿಬಿಡಿಯಾದ ಈ ಬಗೆಯ ಮಾತುಗಳ ವಿಷಯದಲ್ಲಿ ಮಾತ್ರವಲ್ಲದೆ, ಇಡಿಯಾದ ಭಾವಗಳ ವಿಷಯದಲ್ಲಿಯೂ ಭಾವದ ಬೆಸುಗೆ ಕನ್ನಡದಲ್ಲಿ ಅತ್ಯಂತ

ಸಹಜವಾಗಿ ಹಾಗೂ ದೃಢವಾಗಿ ಉಳಿಯುವಂತೆ ಅವರು ನೋಡಿಕೊಂಡಿದ್ದಾರೆ. ಉದಾಹರಣೆಗೆ,

"And turn his merry note
unto the sweet bird's throat"

– ಎಂಬುದು

"ಇನಿಯ ಹಕ್ಕಿಯ ಕೊರಲ
ತನ್ನ ಕೊರಲಲಿ ತಂದು ನಲಿವನಾರೈ"

– ಎಂದೂ,

"Seeking the food he eats
And pleased with what he gets"

– ಎಂಬುದು

"ಉಣ್ಣುವೂಟವ ಕಂಡು
ತಣ್ಣನೆಯೆ ತಣಿದುಂಡು ನಲಿವನಾರೈ"

– ಎಂದೂ,

"Here shall he see
No enemy
But winter and rough weather"

– ಎಂಬುದು

"ಎತ್ತ ನೋಡಿಲ್ಲೆಲ್ಲ,
ಮತ್ತೆ ಹಗೆಯೊಂದಿಲ್ಲ,
ಕೊರೆವ ಚಳಿ ಬಿರುಗಾಳಿಯಲ್ಲದಿಲ್ಲೆಲ್ಲ"

– ಎಂದೂ ಕನ್ನಡದಲ್ಲಿ ಅವತರಿಸಿರುವುದನ್ನು ಕಂಡಾಗ, ಈ ಭಾವಗಳು ಸಹಜವಾಗಿ ಮೂಡಿಬಂದಿವೆ ಎಂಬ ಅನುಭವ ನಮಗುಂಟಾಗುತ್ತದೆ. ಕನ್ನಡ ಪದಗಳನ್ನು ಎಷ್ಟು ಜೀವಂತರೂಪದಲ್ಲಿ ಅಳವಡಿಸಿಕೊಳ್ಳಬಹುದು ಎಂಬುದಕ್ಕೂ ಅವರ ಈ ಪ್ರಯೋಗ ಸಾಕ್ಷಿಯಾಗಿದೆ. ಅನುವಾದಕರು ತುಂಬ ಸುಲಭವಾಗಿ ಬಲಿಬೀಳುವ ಒಂದು ವ್ಯಾಮೋಹವೆಂದರೆ ಅಗತ್ಯವಿಲ್ಲದಿರುವಾಗಲೂ ಸಂಸ್ಕೃತ ಶಬ್ದಗಳನ್ನು ತಂದು ತುಂಬುವುದು. ಇದು ಆರೋಗ್ಯಕರವಾದ ಪ್ರವೃತ್ತಿಯಲ್ಲವೆಂಬುದನ್ನು, ಅವರು ಸ್ಥಾಪಿಸಿದ್ದಾರೆ. Sky, rainbow, old, child – ಇಂಥ ಶಬ್ದಗಳು ಬಂದಾಗ 'ಆಕಾಶ'/'ಗಗನ', 'ಕಾಮನಬಿಲ್ಲು'/'ಇಂದ್ರಚಾಪ', 'ವೃದ್ಧಾಪ್ಯ, 'ಶಿಶು' – ಇವೇ ಮೊದಲಾದ ಪರಿಚಿತವೂ, ಅನುವಾದಕರು ಸುಲಭವಾಗಿ ಶರಣಾಗಬಹುದಾದವೂ ಆದ ಶಬ್ದಗಳನ್ನು ಬದಿಗಿರಿಸಿ, 'ಮುಗಿಲು', 'ಮಳೆಬಿಲ್ಲು', 'ಮುಪ್ಪು', 'ಮಗು'

ಇಂಥ ಶಬ್ದಗಳನ್ನು ಬಳಸಿ, ಅನುವಾದದಲ್ಲಿ ಜೀವಂತಿಕೆಯನ್ನೂ, ಲವಲವಿಕೆಯನ್ನೂ ಹೇಗೆ ಮೈಗೂಡಿಸಿ ಕೊಳ್ಳಬಹುದೆಂಬುದನ್ನು ಅವರು ತೋರಿಸಿಕೊಟ್ಟಿದ್ದಾರೆ. ಈ ಮಾತು ಶಬ್ದಗಳಿಗೆ ಮಾತ್ರ ಸೀಮಿತವಾಗಬೇಕಾಗಿಲ್ಲ. 'When my life began', 'now I am a man' ಹಾಗೂ 'When I shall grow old'ನಂಥ ಪದಪುಂಜಗಳನ್ನು 'ನನ್ನ ಜೀವನ ಆರಂಭಗೊಂಡಾಗ', 'ನಾನು ಪುರುಷನಾಗಿರುವಾಗ' ಹಾಗೂ 'ನಾನು ಮುದುಕನಾದಾಗ' ಎಂದು ಮೊದಲಾಗಿ ಅನುವಾದಿಸಿಕೊಳ್ಳದೆ 'ಚಿಕ್ಕಂದಿನಂದು', 'ಯೌವನದಲಿಂದು' ಹಾಗೂ 'ಮುಪ್ಪಿನಲಿ ಮುಂದೆ' ಎಂದು ಸಾರ್ಥಕ ರೂಪದಲ್ಲಿ ಅಳವಡಿಸಿಕೊಂಡು ಭಾಷೆಯ ಸಾಧ್ಯತೆಗಳನ್ನು ಹೇಗೆ ಅರ್ಥಪೂರ್ಣರೀತಿಯಲ್ಲಿ ಬಳಸಿಕೊಳ್ಳಬಹುದೆಂಬುದನ್ನೂ ತೋರಿಸಿಕೊಟ್ಟಿದ್ದಾರೆ. ಇದರಿಂದ ಅನುವಾದಕ್ಕೆ ಹೇಗೆ ಬಿಗಿ ಮತ್ತು ಸಹಜತೆ ಸಮನಿಸುತ್ತದೆಂಬುದನ್ನು ಓದುಗರೇ ಸ್ವತಃ ಅನುಭವಿಸುವಂತಾಗುತ್ತದೆ. ಹೀಗಾಗಿ, ವರ್ಡ್ಸ್‌ವರ್ತ್‌ನ 'Rainbow' ಕವನದ

"My heart leaps up when I behold
A rainbow in the sky :"

ಎಂಬ ಪಂಕ್ತಿಗಳನ್ನು ಓದಿದಾಗ ಮೂಲದಲ್ಲಿ ನಮಗೆ ದೊರೆಯುವ ಅನುಭವವೇ

"ಮುಗಿಲಿನಲಿ ಮಳೆಬಿಲ್ಲ ಕಾಣುತಲೆ ನಾನು
ನೆಗೆದು ಕುಣಿದಾಡುವುದು ಹೃದಯ ತಾನು !"

ಎಂಬ ಪಂಕ್ತಿಗಳನ್ನು ಓದಿದಾಗ ಮರುಕೊಳಿಸಿದಂತಾಗುತ್ತದೆ.

"ಇಡೀ ಕವನವೇ ಅನುವಾದ ಕಲೆಯ ಪರಿಣತಿಯ ಫಲ" ಎಂದು ಡಾ॥ ಪ್ರಭುಶಂಕರ ಅವರು ಮೆಚ್ಚಿಕೊಂಡಿರುವ 'ವಸಂತ' ಎಂಬ ಗೀತ, ಶ್ರೀಯವರ ಅನುವಾದ ವಿಧಾನದ ಇನ್ನೊಂದು ಮುಖವನ್ನು ನಮಗೆ ತೆರೆದು ತೋರುತ್ತದೆ. ಯಾವುದನ್ನು ಹೇಗೆ ಅನುವಾದಿಸಬೇಕು, ಯಾವುದನ್ನು ಅನುವಾದಿಸಬಾರದು ಎಂಬುದನ್ನು ಅವರು ಸೂಕ್ಷ್ಮವಾಗಿ ಇಲ್ಲಿ ಸೂಚಿಸಿದ್ದಾರೆ. ನ್ಯಾಷ್ ಕವಿಯ 'Spring' ಎಂಬ ಆ ಕವನ ಹೀಗಿದೆ :

"Spring, the sweet spring, is the year's pleasant king;
Then blooms each thing, then maids dance in a ring,
Cold doth not sting, the pretty birds do sing,
Cuckoo, jug-jug, pu-we, to-witta-woo !

"The palm and may make country houses gay,
Lambs frisk and play, the shepherds pipe all day.
And we hear aye birds tune this merry lay,
Cuckoo, jug-jug, pu-we, to-witta-woo.

"The fields breathe sweet, the daisies kiss our feet,
young lovers meet, old wives a-sunning sit,
In every street these tunes our ears do greet,
Cuckoo, jug-jug, pu-we, to-witta-woo !
Spring ! the sweet spring !"

ಇದರ ಕನ್ನಡ ಅನುವಾದ ಹೀಗೆ ಮೂಡಿಬಂದಿದೆ :

"ವಸಂತ ಬಂದ, ಋತುಗಳ ರಾಜ ತಾ ಬಂದ,
ಚಿಗುರನು ತಂದ, ಹೆಣ್ಗಳ ಕುಣಿಸುತ ನಿಂದ,
ಚಳಿಯನು ಕೊಂದ, ಹಕ್ಕಿಗಳುಲಿಗಳೆ ಚೆಂದ,
ಕೂವೂ, ಜಗ್‌ಜಗ್, ಪುವ್ವೀ, ಟೂವಿಟ್ಟವೂ !

"ಕುರಿ ನೆಗೆದಾಟ, ಕುರುಬರ ಕೊಳಲಿನೂದಾಟ,
ಇನಿಯರ ಬೇಟ, ಬನದಲಿ ಬೆಳದಿಂಗಳೂಟ,
ಹೊಸಹೊಸ ನೋಟ, ಹಕ್ಕಿಗೆ ನಲಿವಿನ ಪಾಟ,
ಕೂವೂ, ಜಗ್‌ಜಗ್, ಪುವ್ವೀ, ಟೂವಿಟ್ಟವೂ !

ಮಾವಿನ ಸೊಂಪು, ಮಲ್ಲಿಗೆ ಬಯಲೆಲ್ಲ ಕಂಪು
ಗಾಳಿಯು ತಂಪು, ಜನಗಳ ಜಾತ್ರೆಯು ಗುಂಪು.
ಕಿವಿಗಳಿಗಿಂಪು ಹಕ್ಕಿಗಳುಲುಹಿನ ಪೆಂಪು,
ಕೂವೂ, ಜಗ್‌ಜಗ್, ಪುವ್ವೀ, ಟೂವಿಟ್ಟವೂ !

ಬಂದ ವಸಂತ – ನವ್ಮಾ
ರಾಜ ವಸಂತ !"

ವಸಂತಋತುವಿನ ಆಗಮನದೊಂದಿಗೆ ಮೊದಲಿಡುವ ಬದಲಾವಣೆಯ ಚಿತ್ರಕ್ಕೆ ಬದಲಾಗಿ, ಪ್ರಕೃತಿಯಲ್ಲಿ ವಸಂತ ಎಸಗುವ ಪವಾಡಗಳ ಚಿತ್ರ ಅನುವಾದದಲ್ಲಿ ನಮಗೆ ಎದುರಾಗುತ್ತದೆ. ಅಲ್ಲಿ ಹಿನ್ನೆಲೆಯಲ್ಲಿ ನಿಲ್ಲುವ ಪ್ರಕೃತಿಯ ಶಕ್ತಿ, ಇಲ್ಲಿ ಚೇತನಾರೋಪಿತವಾದ ವ್ಯಕ್ತಿಯಾಗಿ, ಮಾಂತ್ರಿಕನಾಗಿ ಮೂಡಿ ನಿಲ್ಲುತ್ತದೆ. ಹೀಗಾಗಿ, ಆ ಋತುವಿನಲ್ಲಿ ಕಾಣುವ ಒಂದೊಂದು ಬದಲಾವಣೆಯೂ ಇಲ್ಲಿ ವಸಂತ ಎಸಗುವ 'ಪವಾಡ'ವಾಗಿ ಕಾಣಿಸಿಕೊಳ್ಳುತ್ತದೆ. ಜೊತೆಗೆ ಅನುವಾದದಲ್ಲಿನ ಉತ್ಸಾಹಪೂರ್ಣವಾದ ನಡೆ ಪ್ರಭಾವದಲ್ಲಿ ಮೂಲವನ್ನೂ ಮೀರಿ ನಿಲ್ಲುತ್ತದೆ. ಅಷ್ಟೇ ಅಲ್ಲ, ಭಾರತೀಕರಣಕ್ಕೂ ಇಲ್ಲಿ ಎಡೆ ಮಾಡಿಕೊಂಡಿದ್ದಾರೆ – ಮೂಲದ 'fields' ಮತ್ತು

'daisies'ಗೆ ಬದಲಾಗಿ 'ಮಾವಿನ ಸೋಪ'ನ್ನೂ, 'ಮಲ್ಲಿಗೆ ಬಯಲ' ಕಂಪನ್ನೂ ತರುವುದರ ಮೂಲಕ.

ಪ್ರತಿ ಪದ್ಯದ ಕೊನೆಯಲ್ಲಿ ಬರುವ Cuckoo jug-jug, pu-we, to-witta-woo ! ಎಂಬ ಮಾತಿನಲ್ಲಿ 'Cuckoo' ಎಂಬುದನ್ನು ಮಾತ್ರ 'ಕೂವೂ' ಎಂದು ಬದಲಾಯಿಸಿ, ಉಳಿದುದನ್ನು ಹಾಗೆಯೇ ಉಳಿಸಿಕೊಂಡು ಔಚಿತ್ಯಪ್ರಜ್ಞೆಯನ್ನು ಮೆರೆದಿದ್ದಾರೆ. ಈ ಅನುಕರಣಾತ್ಮಕ ಶಬ್ದಗಳಿಗೆ ಬದಲಾಗಿ ಬೇರೆ ಶಬ್ದಗಳನ್ನು ತಂದು ಹಿಡಿಯುವ ಪ್ರಯತ್ನವನ್ನೇನಾದರೂ ಮಾಡಿದ್ದರೆ, ಇಡೀ ಗೀತದ ಸೊಗಸೇ ಹಾಳಾಗಿ ಬಿಡುತ್ತಿತ್ತು. 'Cuckoo'ಗೆ ಬದಲಾಗಿ ಯಾಂತ್ರಿಕವಾಗಿ 'ಕೋಗಿಲೆ' ಎಂದು ಹಾಕಿಲ್ಲ ವೆಂಬುದನ್ನೂ ಗಮನಿಸಬೇಕು. ಆದರೆ, 'ಕೂವೂ' ಎಂಬ ಅದರ ಇನಿದನಿಯ ಪರ್ಯಾಯವನ್ನು ಹಾಕುವ ಮೂಲಕ ಅದನ್ನು ಇಲ್ಲಿ ಜೀವಂತವಾಗಿಸಿದ್ದಾರೆ.

ಎರಡನೆಯ ಪದ್ಯದಲ್ಲಿ "The palm and may make country, houses gay" ಎಂಬುದನ್ನು ಕೈಬಿಟ್ಟು, ಮೂಲದ ಮೂರನೆಯ ಪದ್ಯದ ಎರಡನೆಯ ಪಂಕ್ತಿಯ "young lovers meet" ಎಂಬ ತುಣುಕನ್ನು ಇಲ್ಲಿಗೆ ವರ್ಗಾಯಿಸಿ ಕೊಂಡಿದ್ದಾರೆ. ಇಂಥ ಪ್ರಭಾವಶಾಲಿಯೂ, ಔಚಿತ್ಯಪೂರ್ಣವೂ ಆದ ಪಾದಗಳ ಸ್ಥಳಾಂತರಣದ ಸೊಗಸು-ಸ್ವಾರಸ್ಯಗಳನ್ನು ನಾವು ಮತ್ತೆ ಕಾಣುವುದು ಕಾಳಿದಾಸನ 'ಮೇಘದೂತ'ದ ಬೇಂದ್ರೆಯವರ ಅನುವಾದದಲ್ಲಿಯೇ."old-wives a sunning sit" ಎಂಬುದು ಬಿಸಿಲನ್ನು ಅಪೂರ್ವವಾಗಿ ಕಾಣುವ ದೇಶಕ್ಕೆ ಒಗ್ಗುವ ಚಿತ್ರವಾದ್ದರಿಂದ, ಬಿಸಿಲಿನ ಸಮೃದ್ಧಿಯಿಂದ ಬಹುಶಃ ಬೇಸತ್ತ ಭಾರತೀಯರಿಗೆ ಹಿತವಾಗುವಂಥ "ಬನದಲಿ ಬೆಳದಿಂಗಳೂಟ"ದ ಕಲ್ಪನೆಯನ್ನು ಅದರ ಜಾಗದಲ್ಲಿ ಹಾಕುವ ಜಾಣ್ಮೆಯನ್ನು ತೋರಿದ್ದಾರೆ. "ಮಲ್ಲಿಗೆ ಬಯಲೆಲ್ಲ ಕಂಪು" ಎಂಬುದು ಡಾ॥ ಪ್ರಭುಶಂಕರ ಅವರೆಂದಿರುವಂತೆ, "ಮೂಲದ ಒಂದು ಸೂಚನೆಯನ್ನು ಗ್ರಹಿಸಿ ವಿಸ್ತೃತವಾದದ್ದು." ಅಂತೆಯೇ, ಆಂತರಿಕ ಲಯ ಹಾಗೂ ಅಂತ್ಯಪ್ರಾಸದ ಕಾರಣಗಳಿಗಾಗಿ "In every street these tunes our ears do greet" ಎಂಬ ಪಂಕ್ತಿಗೆ ಬದಲಾಗಿ "ಜನಗಳ ಜಾತ್ರೆಯ ಗುಂಪು" ಹಾಗೂ "ಕಿವಿಗಳಿಗಿಂಪು ಹಕ್ಕಿಗಳುಲುಹಿನ ಪೆಂಪು" ಎಂಬ ಹೆಚ್ಚಿನ ಮಾತುಗಳು ಹಾಗೂ ಸೂಕ್ಷ್ಮವಾದ ಬದಲಾವಣೆಗಳು ಎಡೆದೊರಕಿಸಿ ಕೊಳ್ಳುತ್ತವೆ. ಇಷ್ಟಾಗಿಯೂ, ಮೂಲದ ಭಾವದ ಧಾಟಿಗೆ ಇದು ವಿರುದ್ಧವಾಗಿ ಯೇನೂ ನಿಲ್ಲುವುದಿಲ್ಲ.

ಆದರೆ ಈ ಬಗೆಯ ಬದಲಾವಣೆಗಳು ಮತ್ತಷ್ಟು ತೀವ್ರವಾಗಿ ಪರಿಣಮಿಸಿದಾಗ ಪ್ರಶ್ನಾರ್ಹವೂ ಆಗಬಹುದು. ಉದಾಹರಣೆಗೆ, 'ಬಾನಾಡಿ'ಯನ್ನು ತೆಗೆದುಕೊಳ್ಳ ಬಹುದು. "ಭಾವಗೀತಾ ಸಾಹಿತ್ಯದಲ್ಲಿ ಅತ್ಯುನ್ನತ ಶ್ರೇಣಿಯ ಕವನ"ವೆಂದು ಹೆಸರಿಸ ಬಹುದಾಗಿರುವ ಷೆಲ್ಲಿಯ ರಚನೆಯೆಂದು ವಿಮರ್ಶಕರು ಭಾವಿಸಿರುವ 'To Skylark' ಕವನದ ಮೊದಲ ಪದ್ಯದ ಸಾಲುಗಳು ಹೀಗಿವೆ :

"Hail to thee, blithe Spirit !
Bird thou never wert,
That from heaven or near it
Pourest thy full heart
In profuse strains of unpremeditated art."

ಇದನ್ನು ಶ್ರೀಯುವರು ಹೀಗೆ ಅನುವಾದಿಸಿದ್ದಾರೆ :

"ಆರು ನೀನೆಲೆ ಹರುಷ ಮೂರುತಿ ?
ಹಕ್ಕಿಯೆಂಬರೆ ನಿನ್ನನು !
ತೋರಿ ದಿವಿಜರು ಸುಳಿವ ಬಳಿ, ಸುಖ
ವುಕ್ಕಿಬಹ ನಿನ್ನೆದೆಯನು
ಹಾರಿ ನೆನೆಯದ ಕಲೆಯ ಕುಶಲದ ಭೂರಿಗಾನದೊಳೆರೆಯುವೆ !"

ಇಲ್ಲಿ "blithe spirit" ಎಂಬುದು "ಹರುಷ ಮೂರುತಿ"ಯಾಗಿರುವುದಕ್ಕಾಗಲೀ "heaven or near it" ಎಂಬುದು ಕೇವಲ "ದಿವಿಜರು ಸುಳಿವ ಬಳಿ" ಆಗಿರುವುದಕ್ಕಾಗಲೀ ನಾವು ಅಷ್ಟಾಗಿ ಆಕ್ಷೇಪಿಸದೇ ಇದ್ದರೂ, "Hail to thee blithe Spirit !" ಎಂಬಲ್ಲಿನ ಆಶ್ಚರ್ಯಸೂಚಕ ಚಿಹ್ನೆ, "ಆರು ನೀನೆಲೆ ಹರುಷ ಮೂರುತಿ ?" ಎಂದು ಪ್ರಶ್ನಾರ್ಥಕ ಚಿಹ್ನೆಯಾಗಿ ಮಾರ್ಪಟ್ಟಿರುವುದು ತುಂಬ ಅತೃಪ್ತಿಯನ್ನುಂಟುಮಾಡುತ್ತದೆ. ಬಾಗಿಲು ತಟ್ಟಿದ ಬಂಧುವನ್ನೋ ಗೆಳೆಯನನ್ನೋ "ಹಾ ! ನೀವಾ ! ಬನ್ನಿ, ಬನ್ನಿ !" ಎಂದು ಆಶ್ಚರ್ಯ-ಸಂಭ್ರಮ-ಸಂತೋಷಗಳೊಂದಿಗೆ ಸ್ವಾಗತಿಸುವುದಕ್ಕೆ ಬದಲಾಗಿ "ಯಾರು ನೀವು ? ಯಾರು ಬೇಕಾಗಿತ್ತು ?" ಎಂದು ಕೇಳಿದಾಗ, ಬಂದ ಆಗಂತುಕನ ಮನಸ್ಸಿನಲ್ಲಾಗಲೀ, ಮನೆಯೊಡೆಯನಲ್ಲಾಗಲೀ ಮೂಡುವಂಥ ಅಸಂತೃಪ್ತ ಹಾಗೂ ಅಸಂಪ್ರಕ್ತ ಭಾವನೆಯೇ ಇಲ್ಲಿಯೂ ಉಂಟಾಗುತ್ತದೆ. ಎರಡನೆಯ ಪಂಕ್ತಿಯಂತೂ ಇನ್ನೂ ಅಸಮಾಧಾನವನ್ನು ಉಂಟುಮಾಡುತ್ತದೆ. "Bird thou never wert" ಎಂಬುದರಲ್ಲಿನ ಖಚಿತ ನಿಷೇಧಾತ್ಮಕ ಭಾವ ಅನುವಾದದಲ್ಲಿ ಮರೆಯಾಗಿ, "ಹಕ್ಕಿಯೆಂಬರೆ ನಿನ್ನನು !" ಎಂಬಲ್ಲಿನ ಆಶ್ಚರ್ಯಸೂಚಕಭಾವವೂ ಅಸಮರ್ಥಿತವಾಗಿ ಬಿಡುವಂಥ ಸನ್ನಿವೇಶ ಒದಗುತ್ತದೆ.

"ಸೊಗಯಿಸೈ ಸುಖಜೀವಿ !
ನೆಗೆವಕ್ಕಿ ನೀನಲ್ಲ ;
ಗಗನದಿಂದಲೊ ಗಗನದರುಗಿಂದಲೊ
ಮೊಗೆವೆ ತುಂಬೆದೆಯ ಮುಂ
ಬಗೆದಿಲ್ಲದಿಹ ಬಿನ್ನಣಗೆಯುಗುವುದಾರ ಗಾಯನದ ಝರಿಯಿಂ"

ಎಂಬ ಗೋವಿಂದ ಪೈಗಳ ಇವೇ ಪಂಕ್ತಿಗಳ ಅನುವಾದವನ್ನು ನೋಡಿದಾಗ, ಮೂಲದ ಮೊದಲ ಮೂರು ಪಂಕ್ತಿಗಳು ಅನುವಾದದಲ್ಲಿ ಕಾಣಿಸಿಕೊಳ್ಳಬೇಕಾಗಿದ್ದ

ರೀತಿ ಯಾವುದೆಂಬುದೂ ಸ್ಪಷ್ಟವಾಗುತ್ತದೆ. "Pourest thy full heart in profuse strains of unpremeditated art" ಎಂಬ ಕೊನೆಯ ಎರಡು ಪಂಕ್ತಿಗಳೇನೋ ಶ್ರೀಯವರಲ್ಲಿ ಸುಂದರವಾಗಿಯೇ ಕಾಣಿಸಿಕೊಂಡಿವೆ.

ಮುಂದಿನ ಪಂಕ್ತಿಗಳ ಅನುವಾದದಲ್ಲಿಯೂ "Cloud of fire", "unbodied joy", "golden lighting of the sunken sun" ಇವೇ ಮೊದಲಾದುವನ್ನು "ದಳ್ಳುರಿ", "ಕಳಚಿ ದೇಹವ ದಿವಕೆ ಹರಿಯುವ ಭೋಗಿಯೋಲಾಟ", "ಬಿಳಿಯ ಮುಗಿಲನು ಬಣ್ಣವೇರಿಸಿ ಕೆಳಗೆ ಹೂಳುವ ಹೊತ್ತಿನ" ಎಂದು ಮುಂತಾಗಿ ಮೂಲಕ್ಕಿಂತ ಭಿನ್ನವಾದ ಪರಿಪ್ರೇಕ್ಷ್ಯದಲ್ಲಿ ಹಿಡಿದಿರುವುದು, ಭಿನ್ನವಾದ ಭಾವನೆಗಳನ್ನು ಅಳವಡಿಸಿಕೊಂಡಿರುವುದು ಯಾರಿಗೇ ಆದರೂ ಮೆಚ್ಚಿಗೆಯಾಗುವ ಸಂಭವವಿಲ್ಲ. ಈ ಸಂದರ್ಭಗಳಲ್ಲಿ ಗೋವಿಂದ ಪೈಗಳು ಬಳಸಿರುವ "ಕೆಂಡದುರಿ ಮೋಡದಂತೆ", "ನೇಸರು ಮುಳುಗಿದಾ ಕಾಂಚನದ ಮಿಂಚಿನಲ್ಲಿ", "ಅಂಗವಡೆಯದ ಸೊಗ" ಮೊದಲಾದ ಮಾತುಗಳು ಮೂಲ ಕವಿಯ ಆಶಯಕ್ಕೆ ಎಷ್ಟು ಹತ್ತಿರವಾಗಿವೆ ಎಂಬುದನ್ನು ಗಮನಿಸಿದಾಗಲಂತೂ ಶ್ರೀಯವರ ಅನುವಾದದ ಅಸಮರ್ಪಕತೆ ಎದ್ದು ಕಾಣುತ್ತದೆ.

ಇಷ್ಟಾಗಿಯೂ, ಮುಂದೆ ಸಾಗುತ್ತ ಬಂದಂತೆ, ಡಾ॥ ಪ್ರಭುಶಂಕರ "ಶ್ರೀಯವರ ಅನುವಾದ ಹೆಚ್ಚು ಹೆಚ್ಚು ಮೋಹಕವಾಗುತ್ತ ಹೋಗುತ್ತದೆ." ಹಾಗೂ "ಒಟ್ಟಿನಲ್ಲಿ ಶ್ರೇಷ್ಠ ಕವನವೊಂದನ್ನು ಬಹುಮಟ್ಟಿಗೆ ಸಮರ್ಪಕವಾಗಿ ಅನುವಾದ ಮಾಡಿದ ಯಶಸ್ಸಿಗೆ ಭಾಜನರಾಗಿದ್ದಾರೆ" ಎಂಬ ಅನಿಸಿಕೆಯೂ ನಮ್ಮದಾಗುತ್ತದೆ.

**ರೂಪಾಂತರ**

ಈ ಬಗೆಯ ಅನುವಾದಕ್ಕೆ ಉದಾಹರಣೆಯಾಗಿ 'ಮಾದ, ಮಾದಿ', 'ಮುದಿಯ ರಾಮಗೌಡ', 'ಕನಕಾಂಗಿ' ಮೊದಲಾದ ಪದ್ಯಗಳನ್ನು ಹೆಸರಿಸಬಹುದಾಗಿದೆ. ಇಲ್ಲೆಲ್ಲ ಭಾರತೀಯ ಪರಿಸರಕ್ಕೆ ಅನುಗುಣವಾಗಿ ಇಂಗ್ಲಿಷ್ ಗೀತಗಳನ್ನು ಅಳವಡಿಸುವ ಅಥವಾ ರೂಪಾಂತರಿಸುವ ಪ್ರಯತ್ನವನ್ನು ಶ್ರೀಯವರು ಕೈಗೊಂಡಿದ್ದಾರೆ.

ಈ ಪ್ರಯತ್ನಗಳಲ್ಲಿ ಶ್ರೀಯವರು ಎಣೆಯಿಲ್ಲದ ಸಾಧನೆಯನ್ನು ತಮ್ಮದಾಗಿಸಿಕೊಂಡಿದ್ದಾರೆ. ಪೂರ್ವ-ಪಶ್ಚಿಮಗಳನ್ನು ಅವರ ಹೃದಯ ಎಷ್ಟು ಸುಂದರವಾಗಿ ಬೆಸೆಯಬಲ್ಲದು ಎಂಬುದಕ್ಕೆ ಈ ಅಳವಡಿಕೆಗಳು ಸಾಕ್ಷಿಯಾಗಿವೆ. ಹೆಸರುಗಳನ್ನು ಬದಲಾಯಿಸುವುದಷ್ಟರಿಂದಲೇ ಇದನ್ನು ಅವರು ಸಾಧಿಸಿರುವುದುಂಟು. ಉದಾಹರಣೆಗೆ 'ಅಳಿನಿ', 'ಪದುಮ' ಇತ್ಯಾದಿ. ಇವು ಕ್ರಮಶಃ ಅಜ್ಞಾತಕವಿಯೊಬ್ಬನ 'Fair Helen' ಹಾಗೂ ಲ್ಯಾಂಡರ್‌ನ 'Rose Aylmer' ಎಂಬ ಕವನಗಳ ಅನುವಾದಗಳು. ಮೊದಲಿಗೆ 'Fair Helen'ನ ಕೆಲವು ಪಂಕ್ತಿಗಳನ್ನು ನೋಡಬಹುದು :

"I wish I were where *Helen* lies ;
Night and day on me she cries ;
O that I were where Helen lies
On fair *Kirconnell* lea !"

ಇಲ್ಲಿ ಮೂಲದ 'ಹೆಲೆನ್' ಒಲವಿನ ಅರಗಿಣಿಯಾದ 'ಅಳಿನಿ'ಯಾಗಿ 'ಕಿರ್‌ಕೋನೆಲ್' ಎಂಬ ಊರು 'ಹುಲಿಯ ಕೋಟೆ'ಯಾಗಿ ಹೀಗೆ ಕಾಣಿಸಿಕೊಳ್ಳುತ್ತದೆ :

"ಅಳಿನಿಯತ್ತಲೆ ಹೋಗೆನಲ್ಲ,
ಇರುಳು ಹಗಲು ಕರೆವಳಲ್ಲ.
ಅಯ್ಯೊ, ಅತ್ತಲೆ ಹೋಗೆನಲ್ಲ,
ಹುಲಿಯ ಕೋಟೆಯ ಬಯಲಲಿ !"

ಅಂತೆಯೇ 'Rose Aylmer'ನಲ್ಲಿಯೂ –

"Ah, what avails the *sceptred race* !
Ah, what the *form divine* !
What every virtue, every grace !
*Rose Aylmer* all were thine."

– ಮೂಲದ ಕಲ್ಪನೆಗಳು ಸರಳ, ಸುಂದರ ಭಾರತೀಕರಣಕ್ಕೊಳಗಾಗುವುದನ್ನು ಕಾಣುತ್ತೇವೆ :

"ಅರಸಿನ ಕುಲವೋ, ಏನಿದ್ದೇನು !
ಸುರವಧು ರೂಪೋ, ಏನಿದ್ದೇನು !
ಗುಣವೋ, ಸೊಬಗೋ, ಏನಿದ್ದೇನು !
ಪದುಮಾ, ಇದ್ದುವು ನಿನಗೆಲ್ಲಾ."

ಎರಡನೆಯದಾಗಿ, ಆಲೋಚನೆಗಳನ್ನೂ ಭಾವನೆಗಳನ್ನೂ ಅಲ್ಲಿ ಇಲ್ಲಿ ಕೊಂಚ ಮಾರ್ಪಡಿಸಿ, ಅವು ಸ್ವತಃ ಕನ್ನಡದಲ್ಲಿಯೇ ಮೂಡಿ ಬಂದ ರಚನೆಗಳೇನೋ ಎಂಬಂತೆ ಮಾಡಿರುವುದೂ ಉಂಟು. ಉದಾಹರಣೆಗೆ, ರಾಬರ್ಟ್ ಬರ್ನ್ಸ್‌ನ 'Duncan Gray'ಯ ಈ ಪಂಕ್ತಿಗಳನ್ನು ನೋಡಬಹುದು :

"Duncan was a lad o' grace ;
Maggie was a piteous case ;
Duncan couldna be her death ;
Swelling pity smoor'd his wrath ;
Now they're crouse and canty baith :
Ha, ha, the wooing o't !"

ಇದನ್ನು ಶ್ರೀಯವರು ಹೀಗೆ ರೂಪಾಂತರಿಸಿದ್ದಾರೆ :

"ಚಿನ್ನದಂಥ ಹುಡುಗ ಮಾದ,
ಹಹ್ಹ ! ಏನು ಬೇಟವೋ !
ಸಾಯಲಾದ ಹುಡುಗಿ ಮಾದಿ,
ಹಹ್ಹ ! ಏನು ಬೇಟವೋ !
ಕೊಲ್ಲಲಾರನವಳ ಮಾದ,
ಮುನಿಸು ಕರಗಿ ಮರುಗಿಹೋದ,
ಈಗ ಹಿಡಿಯುದವರ ಮೋದ !
ಹಹ್ಹ ! ಏನು ಬೇಟವೊ !"

ಇಂಥ ಸಂದರ್ಭಗಳಲ್ಲಿ ಶ್ರೀಯವರು ಹೀಗೆ ಸ್ವಲ್ಪ ಸ್ವಾತಂತ್ರ್ಯವಹಿಸಿ, ವಿದೇಶೀಯತೆಯ ಅಪರಿಚಿತತ್ವದ ಕವಚವನ್ನು ಕಳಚಿಹಾಕುತ್ತಾರೆ ; ಮುಸುಕನ್ನು ತೆಗೆದು ಹಾಕುತ್ತಾರೆ. Duncan ಮತ್ತು Maggie ಇಲ್ಲಿ ಮಾದ, ಮಾದಿಯರು ಮಾತ್ರವಾಗಿಲ್ಲ : ಇಡೀ ಸಂದರ್ಭದಲ್ಲಿ ಎಲ್ಲಿಯೂ ಅಸಹಜತೆಯ ಅನುಭವವೇ ಆಗದಂತೆ 'lad o' grace', 'piteous case', 'couldna be her death', 'crouse and canty baith' ಇವೇ ಮೊದಲಾದ ಶಬ್ದಪುಂಜಗಳನ್ನು ಕನ್ನಡದ ನುಡಿಗಟ್ಟಿನಲ್ಲಿ 'ಚಿನ್ನದಂಥ ಹುಡುಗ', 'ಸಾಯಲಾದ ಹುಡುಗಿ', 'ಕೊಲ್ಲಲಾರನವಳ', 'ಹಿಡಿಯುದವರ ಮೋದ' ಎಂದು ಮುಂತಾಗಿ ಅತ್ಯಂತ ಸಹಜ ರೂಪದಲ್ಲಿ ರೂಪಾಂತರಿಸಿ, ತಮ್ಮ ಅನುವಾದ ಕಲೆಯ ಮಾಂತ್ರಿಕಸ್ಪರ್ಶದ ಮೋಡಿಯನ್ನು ಮೆರೆಯುತ್ತಾರೆ.

ಹೀಗೆ ಸ್ವಾತಂತ್ರ್ಯ ವಹಿಸದೆಯೂ ಅವರು ಈ ಬಗೆಯ ಪವಾಡವನ್ನು ಸಾಧಿಸಬಲ್ಲರು ಎಂಬುದಕ್ಕೆ 'ಮುದಿಯ ರಾಮಗೌಡ' ಒಂದು ನಿದರ್ಶನ. ಲೇಡಿ ಲಿಂಡ್ಸೆಯ 'Auld Robin Gray' ಎಂಬ ಈ ಮೂಲಕವನ ತುಂಬ ಪ್ರಸಿದ್ಧವಾದುದು. ಇದರ ಬಗ್ಗೆ ಪಾಲ್‌ಗ್ರೇವ್ ಹೇಳಿರುವ ಮಾತುಗಳು ತುಂಬ ಗಮನಾರ್ಹವಾಗಿವೆ : "There can hardly exist a poem more truly tragic in the highest sense than this ; nor perhaps, sappho excepted, has any poetess equalled it." ತಾನೊಲಿದಿದ್ದ ಜೇಮಿಯನ್ನು ಮರೆತು ಮುದಿಯ ರಾಬಿನ್‌ನನ್ನು ಜೆನ್ನಿ ಮದುವೆಯಾಗಬೇಕಾಗಿ ಬಂದ ದುರಂತಕ್ಕೆ ಕಾರಣವಾದ ಸನ್ನಿವೇಶವನ್ನು ಮೂಲದಲ್ಲಿ ಹೀಗೆ ವರ್ಣಿಸಲಾಗಿದೆ :

"My father couldna work, and my mother couldna spin ;
I toil'd day and night, but thier bread I couldna win !

Auld Rob maintain'd them baith, and wi' tears in his e'e
Said, Jennie, for thier sakes, o, marry me!

* * *

"My father urgit sair : my mother didna speak ;
But she looked in my face till my heart was like to break :
They gi'ed him my hand, but my heart was at the sea;
Sae auld Robin Gray he was gudeman to me."

ಶ್ರೀಯವರ ಅನುವಾದದಲ್ಲಿ ಇದು ಹೀಗೆ ಮೂಡಿದೆ :

"ಅಪ್ಪ ಹೊರಗೆ ಗೆಯ್ಯಲಾರ, ಅವ್ವ ಒಳಗೆ ನೆಯ್ಯಲಾರಳು :
ಹಗಲು ಇರುಳು ನಾನು ದುಡಿದೂ ನಮಗೆ ಹಿಟ್ಟು ಹುಟ್ಟದು
ರಾಮಗೌಡ ಕಷ್ಟಕಾದ ; ಕೈಯ ಹಿಡಿದು ಕಣ್ಣನೆನಸಿ,
ಅವರ ಸಲುವಾಗೆನ್ನ, ಚೆನ್ನಿ, ಮದುವೆಯಾಗು, ಎಂದನು.

* * *

"ಅಪ್ಪ ಹೇಳಿದ, ಗದರಿಕೊಂಡ ಅವ್ವ ಬಾಯಲಿ ಆಡಲಿಲ್ಲಳು ;
ಅವಳು ನೋಡಿದ ನೋಟವೇ ನನ್ನೆದೆಯನಿರಿಯಿತು, ಮುರಿಯಿತು.
ಅವನ ಕೈಯಲಿ ಕೈಯನಿಟ್ಟರು ; ಮನಸು ಕಡಲಲಿ ನಿಂತು ಹೋಯಿತು.
ಅಂತು ಮುದಿಯ ರಾಮಗೌಡ ನನಗೆ ಗಂಡನಾದನು."

ಅನುವಾದದ ಅಚ್ಚಕನ್ನಡತನ ನಮ್ಮ ಎದೆಯನ್ನು ಸೆಳೆಯದೆ ಇರದು. ಚೆನ್ನಿಯ ಮನಸ್ಸು ಕಡಲಲ್ಲಿ ನಿಂತು ಹೋದಂತೆ ಓದುಗರ ಮನಸ್ಸು ಅನುವಾದದಲ್ಲಿ ಸೆರೆಯಾಗಿ ಬಿಡುತ್ತದೆ. ಭಾಷಾಂತರದ ಯಶಸ್ಸಿಗೆ ಬೇರಾವ ಪ್ರಮಾಣವೂ ಅಗತ್ಯವಾಗುವುದಿಲ್ಲ.

'ಕನಕಾಂಗಿ'ಯಂತೂ ಭಾರತೀಯತ್ವವನ್ನು ಪರಿಪೂರ್ಣವಾಗಿ ಮೈಗೂಡಿಸಿಕೊಂಡ ಅದ್ಭುತ ಅನುವಾದ. ಇಲ್ಲಿ ಶ್ರೀಯವರ ಅನುಪಮ ರೂಪಾಂತರಶಕ್ತಿ ನಮ್ಮನ್ನು ಬೆರಗುಗೊಳಿಸುತ್ತದೆ. ಪ್ರಭಾವ ಪರಿಣಾಮಗಳಲ್ಲಿ ಮೂಲವನ್ನು ಮೀರಿ ನಿಂತು ವಿಜೃಂಭಿಸುತ್ತದೆ. ಕೋಲ್‌ರಿಜ್‌ನ 'Love' ಎಂಬ ಇದರ ಮೂಲ ಗೀತದ ಕೆಲವು ಪಂಕ್ತಿಗಳು ಹೀಗಿವೆ :

"All thoughts, all passions, all delights
Whatever stirs this mortal frame,
All are but ministers of Love,
And feed his sacred flame."

ಈ ಪಂಕ್ತಿಗಳು ಶ್ರೀಯವರಲ್ಲಿ ಸ್ಪಂದಿಸುವುದು ಹೀಗೆ :

> "ಭಾವಗಳು, ರಾಗಗಳು, ಬಗೆಬಗೆಯ ಭೋಗಗಳು,
> ಅವಾವುವಲೆಯುವುವು ಮನುಜನೆದೆಯ,
> ಕಾಮರಾಯಂಗೆಲ್ಲ ಕುಲಪುರೋಹಿತರಾಗಿ
> ಹೋಮಾಗ್ನಿಯನು ಬೀಸಿ ಕೆರಳಸುವುವು."

ಹೀಗೆ ಮೂಲದ ಭಾವಗಳು ಮೈದಳೆಯುವುದನ್ನು ಕಂಡಾಗ, ಎಂಥ ಸೊಗಸಾದ ಅನುವಾದ ಮೂಡಿದೆ ಎಂದು ತಲೆದೂಗಬೇಕಾಗುತ್ತದೆ. ಅನುವಾದ ಮುಂದುವರಿದಂತೆ, ಎಲ್ಲೋ ಒಂದೆರಡು ಕಡೆ ಮೂಲದ ಕಲ್ಪನೆಗಿಂತ ಕೊಂಚ ಭಿನ್ನವಾದ ಕಲ್ಪನೆ ಕಾಣಿಸಿಕೊಳ್ಳುತ್ತದೆ. ಉದಾಹರಣೆಗೆ, ಕನಸಿನಾಳದಿಂದ ಮೂಡಿಬಂದ ಮೆಲ್ಲುಲಿಯಂತೆ ತನ್ನ ಹೆಸರನ್ನು ಆ ಪ್ರೇಯಸಿ ಉಲಿದಳೆಂಬುದನ್ನು ಕೋಲ್‌ರಿಜ್ ಹೀಗೆ ವರ್ಣಿಸಿದ್ದಾನೆ :

> "And like the murmur of a dream,
> I heard her breathe my name."

ಇದನ್ನು ಶ್ರೀಯವರು ಹೀಗೆ ರೂಪಾಂತರಿಸಿದ್ದಾರೆ :

> "ಮಲ್ಲಿಗೆಯ ಬಿರಿಮುಗುಳ ಮೇಲೆ ಬರುವೆಲರಂತೆ
> ಮೆಲ್ಲನುಲಿದಳು ಕಡೆಗೆ ನನ್ನ ಹೆಸರ."

ಮೂಲವನ್ನು ಎದುರಿಗಿಟ್ಟುಕೊಂಡು ನೋಡಿದಾಗ ಮಾತ್ರ, ಈ ವ್ಯತ್ಯಾಸ ನಮಗೆ ಗೋಚರಿಸುತ್ತದೆ. ಆ ಸನ್ನಿವೇಶದಲ್ಲಿ ಅದೆಷ್ಟರಮಟ್ಟಿನ ಸಹಜತೆ ಇದೆಯೆಂದರೆ, ಇಂಥ ಒಂದು ಸೂಕ್ಷ್ಮ ಬದಲಾವಣೆಯಾಗಿರಬಹುದೆಂಬ ಕಲ್ಪನೆಯೂ ಮೂಡುವುದಿಲ್ಲ. ಶ್ರೀಯವರಲ್ಲಿ ಅಡಗಿರುವ ಕವಿ ತನ್ನ ಚಮತ್ಕಾರವನ್ನು ತೋರಿಬಿಡುವ ಸುಂದರ ಸನ್ನಿವೇಶ ಇದು. ಒಟ್ಟಿನಲ್ಲಿ, ಇದು ಅನುವಾದದ ಒಂದು ಅಪೂರ್ವಸಾಧನೆ ಎಂಬುದರಲ್ಲಿ ಎರಡು ಮಾತಿಲ್ಲ.

## ಸೃಜನಾತ್ಮಕ ಅನುವಾದಗಳು

ಶ್ರೀಯವರ ಸೃಜನಶೀಲ ಪ್ರತಿಭೆ ಮೂಲಕ್ಕೆ ಎಲ್ಲ ರೀತಿಯಿಂದಲೂ ಸಂವಾದಿಯಾಗಿರುವಂಥ, ಮೂಲವೇ ಮರುಹುಟ್ಟು ಪಡೆದಿದೆಯೋ ಎನ್ನುವಂಥ ಉತ್ಕೃಷ್ಟ, ಸೃಜನಾತ್ಮಕ ಅನುವಾದಗಳನ್ನು ಕೊಟ್ಟಿದೆ. ರೂಪಾಂತರ ವಿಧಾನಕ್ಕಿಂತ ಭಿನ್ನವಾಗಿರುವ ಹಾಗೂ ಅನುವಾದಕರ ಸೃಜನಶೀಲ ಪ್ರತಿಭೆ ವಿಜೃಂಭಿಸಿರುವಂಥ ಸಂದರ್ಭಗಳು ಇವು. ಇದಕ್ಕೆ ಅತ್ಯುತ್ತಮ ನಿದರ್ಶನವೆಂದರೆ 'ಪ್ರಾರ್ಥನೆ'. ಇದು ನ್ಯೂಮನ್ನನ 'Lead, kindly light' ಎಂಬ ಗೀತೆಯ ಅನುವಾದ. "ಈ ಕವಿತೆಯಲ್ಲಿ ಅನುವಾದದ ಸಿದ್ಧಿಯನ್ನು ಕಾಣಬಹುದು" ಎಂದೂ, "ಛಂದಸ್ಸಿನಲ್ಲಿ ಮೂಲದ

ಸಾಮೀಪ್ಯ ಎಷ್ಟು ಬರಬಹುದೋ ಅಷ್ಟೂ ಬಂದಿದೆ" ಎಂದೂ, "ಇಲ್ಲಿಯ ನಡೆಯೂ ಇಂಗ್ಲಿಷಿನ ಮೂಲದ ಗಂಭೀರ ನಡೆಯಷ್ಟೇ ಗಂಭೀರವಾಗಿದೆ" ಎಂದೂ, "ಈ ಉತ್ಕೃಷ್ಟ ಗೀತೆಯು ಮೂಲದ ಗಾಂಭೀರ್ಯ, ಆಳವಾದ ಭಕ್ತಿಭಾವ ಇವುಗಳನ್ನೂ, ಧ್ವನಿಯನ್ನೂ ಚೆನ್ನಾಗಿ ಹಿಡಿದಿದೆ" ಎಂದೂ ವಿಮರ್ಶಕರು ಇದನ್ನು ಬಗೆಬಗೆಯಾಗಿ ಕೊಂಡಾಡಿದ್ದಾರೆ. ಅಂಥ 'ಅಪರಾ ಸೃಷ್ಟಿ'ಯಾಗಿ ಮೂಡಿ ಬಂದಿದೆ ಈ ಅನುವಾದ. ಮೂಲದ ಭಾವ, ಭಾಷೆ, ಲಯ, ಮಾಧುರ್ಯಗಳನ್ನು ಇದು ಹೇಗೆ ಆತ್ಮೀಕರಿಸಿಕೊಂಡಿದೆ ಎಂಬುದಕ್ಕೆ ನಿದರ್ಶನವಾಗಿ ಕೆಲವು ಪಂಕ್ತಿಗಳ ಅನುವಾದವನ್ನು ನೋಡಬಹುದು:

"Lead, Kindly Light, amid the encircling gloom
Lead thou me on!
The night is dark, and I am far from home –
Lead thou me on!
Keep thou my feet; I do not ask to see
The distant scene, – one step enough for me."

ಇದು ಕನ್ನಡದಲ್ಲಿ ಪುನಸ್ಸೃಷ್ಟಿಗೊಂಡಿರುವುದು ಹೀಗೆ:

"ಕರುಣಾಳು ಬಾ ಬೆಳಕೆ, ಮುಸುಕಿದೀ ಮಬ್ಬಿನಲಿ,
ಕೈಹಿಡಿದು ನಡೆಸೆನ್ನನು.
ಇರುಳು ಕತ್ತಲೆಯ ಗವಿ; ಮನೆದೂರ; ಕನಿಕರಿಸಿ,
ಕೈಹಿಡಿದು ನಡೆಸೆನ್ನನು.
ಹೇಳಿ ನನ್ನಡಿಯಿಡಿಸು; ಬಲುದೂರ ನೋಟವನು
ಕೇಳೆನೊಡನೆಯೆ – ಸಾಕು ನನಗೊಂದು ಹೆಜ್ಜೆ."

ಉತ್ತಮ ಕವಿತೆಯಲ್ಲಿ ಹೇಗೆ ಒಂದೇ ಒಂದು ಶಬ್ದವನ್ನು ಕಿತ್ತು ಹಾಕುವುದೂ ಸಾಧ್ಯವಾಗುವುದಿಲ್ಲವೋ ಹಾಗೆಯೇ ಉತ್ತಮ ಅನುವಾದದಲ್ಲಿಯೂ. ಇಲ್ಲಿ ಒಂದು ಮಾತನ್ನು ಕಿತ್ತು ಹಾಕುವುದಿರಲಿ, ಬದಲಾಯಿಸಲೂ ಸಾಧ್ಯವಿಲ್ಲ. ಅಷ್ಟು ಭಾವ ಸಾಂದ್ರವಾಗಿ, ಧ್ವನಿಪೂರ್ಣವಾಗಿ ಇಡೀ ಗೀತವೇ ಇಲ್ಲಿ ಮರುಹುಟ್ಟು ಪಡೆದಿದೆ ಎಂಬ ಭಾವನೆ ಮೂಡುತ್ತದೆ.

ಶ್ರೀಯವರು 'ದುಃಖಸೇತು' ಕವಿತೆಯಲ್ಲಿ ಹೊಸದಾಗಿ ಸೇರಿಸಿರುವ,

"ನಿರಿಹಿಡಿದು, ನಡುವೇರಿ,
ತೊದಳುಮಾತನು ಬೀರಿ,
ಕೊರಗ ನಗಿಸಲು ಬಲ್ಲ
ಮಗುವಿಲ್ಲವೇನೋ?"

– ಎಂಬ ನಾಲ್ಕು ಪಂಕ್ತಿಗಳನ್ನು ಹೊರತು ಪಡಿಸಿದರೆ, ಥಾಮಸ್ ಹುಡ್‌ನ 'Bridge of Sighs'ನ ಕನ್ನಡ ರೂಪವಾಗಿರುವ 'ದುಃಖಸೇತು'ವೂ ಸೃಜನಾತ್ಮಕ ಅನುವಾದದ ಉದಾಹರಣೆಯೇ ಆಗುತ್ತದೆ.

"Alas for the rarity
of Christian charity
under the sun."

– ಎಂಬ ಮೂಲದ ಸಾಲುಗಳು

"ಅಹ ಎಲ್ಲಡಗಿತೋ/ಆರ್ಯ ಧರ್ಮದ ಕರುಣ
ಆರ್ಯ ಜನಗಳ ಮರುಕ,/ಉರಿಯುಂವನೆ ಬಲ್ಲ !"

– ಎಂದು ಕನ್ನಡದಲ್ಲಿ ಮೈದಳೆದಿರುವುದರಲ್ಲಿ, ತೀ. ನಂ. ಶ್ರೀಕಂಠಯ್ಯನವರು 'sun'ಗೆ ಸಂವಾದಿಯಾಗಿ 'ಉರಿಯುವನು' ಎಂದು ಬಳಸಿರುವುದನ್ನು ಮೆಚ್ಚಿಕೊಂಡಿದ್ದರೆ, ಎಸ್. ಅನಂತನಾರಾಯಣ ಅವರು 'ಆರ್ಯ' ಶಬ್ದದ ಧ್ವನಿಪೂರ್ಣತೆಯನ್ನು ಎತ್ತಿ ತೋರಿಸಿದ್ದಾರೆ. "ಈ ಕವನ ಕನ್ನಡ ಸಾಹಿತ್ಯದ ಅತ್ಯುತ್ತಮ ಕವಿತೆಗಳಲ್ಲಿ ಒಂದೆಂದು ಧಾರಾಳವಾಗಿ ಹೇಳಬಹುದು" ಎಂದು ಡಾ॥ ಪ್ರಭುಶಂಕರ ಅವರು ಮೆಚ್ಚಿಕೊಂಡಿದ್ದರೆ, ಈ ಅನುವಾದ "ದುರ್ಭರ ದುರಂತವನ್ನು, ಕರುಣೆಯನ್ನು ಇಳಿಯಷ್ಟೂ ಕೊಂಕದಂತೆ ತಂದಿದೆ" ಎಂದು ಅನಂತನಾರಾಯಣ ಅವರು ಹಾಡಿ ಹೊಗಳಿದ್ದಾರೆ. ಇಂಥ ವಿಕ್ರಮವನ್ನು ಶ್ರೀಯವರು ಇಂಗ್ಲಿಷ್ ಗೀತಗಳಲ್ಲಿ ಅನೇಕ ಕಡೆಗಳಲ್ಲಿ ಮೆರೆದಿದ್ದಾರೆ.

**ಅರೆ-ಕೊರೆಗಳು**

ಅನೇಕ ಕವನಗಳನ್ನು ಶ್ರೀಯವರು ಅನುಪಮವೆಂಬಷ್ಟು ಸುಂದರವಾದ ರೂಪದಲ್ಲಿ ಯಶಸ್ವಿಯಾಗಿ ಅನುವಾದಿಸಿದ್ದಾರಾದರೂ, ಅವರ ಕೆಲವೊಂದು ಅನುವಾದಗಳು ಅರೆ-ಕೊರೆಗಳಿಂದ ದೂರವಾಗಿಯೇನೂ ಉಳಿದಿಲ್ಲವೆಂಬ ಮಾತನ್ನೂ ಹೇಳಬೇಕಾಗುತ್ತದೆ. ಲೋಪ, ವಿಸ್ತಾರ ಹಾಗೂ ಪರಿವರ್ತನಗಳಿಗೂ ಶ್ರೀಯವರ ಅನುವಾದದಲ್ಲಿ ಎಡೆದೊರೆತಿದೆ. ಭಾರತೀಕರಣವನ್ನೆಸಗಿರುವುದು ಅಪೇಕ್ಷಣೀಯವಾಗಿದೆ ಎಂದೆನಿಸಿದ ಸಂದರ್ಭಗಳಲ್ಲಿಯೂ, ಈ ಕೆಲವು ಲೋಪ, ವಿಸ್ತಾರ ಮತ್ತು ಪರಿವರ್ತನಗಳು ನಮ್ಮ ಮನಸ್ಸಿಗೆ ಒಪ್ಪಿಗೆಯಾಗದೆ ಇರುವುದುಂಟು. ಇಂಥ ಕೆಲವು ಪ್ರಸಂಗಗಳನ್ನು ಇಲ್ಲಿ ನೋಡಬಹುದು.

**ಲೋಪ :** ಕೆಲವೊಮ್ಮೆ ಶ್ರೀಯವರು ಮೂಲದ ಕೆಲವು ಮಾತುಗಳನ್ನು ಬಿಟ್ಟುಬಿಡುವುದೂ ಉಂಟು ; ಅತಿಯಾಗಿ ಸಂಕ್ಷೇಪಿಸುವುದೂ ಉಂಟು. ಅನೇಕ ವೇಳೆ ಛಂದಸ್ಸಿನ ಕಾರಣದಿಂದಾಗಿ ಹೀಗೆ ಮಾಡಿರುವಂತೆಯೂ ತೋರುತ್ತದೆ. ಅಷ್ಟು

ಮುಖ್ಯವಾದ ಭಾವ ಅಥವಾ ಆಲೋಚನೆ ಅಲ್ಲದಿದ್ದಾಗ ಇಂಥ ಲೋಪ ಕುಟುಕದೆ ಹೋಗಬಹುದು. ಆದರೆ, ಹಾಗಿಲ್ಲದೆ ಇದ್ದಾಗ ಇಂಥ ಲೋಪ ಅಥವಾ ಸಂಕ್ಷೇಪಣ ಪ್ರಶ್ನಾರ್ಹವೂ ಆಗಬಹುದು, ಆಕ್ಷೇಪಾರ್ಹವೂ ಆಗಬಹುದು. ಉದಾಹರಣೆಗೆ, ಸ್ಕಾಟ್‌ನ 'Gathering Song' ನಲ್ಲಿ –

"Come away, Come away,
Hark to the summons !
*Come in your war-array,*
Gentles and Commons,

*    *    *

"Leave the deer, leave the steer,
Leave nets and barges :
*Come with your fighting gear*
Broad swords and targes."

– "Come in your war-array" ಹಾಗೂ "Come with your fighting gear" ಎಂಬ ಬಹು ಮುಖ್ಯವಾದ ಪಂಕ್ತಿಗಳೇ (ಪುನರುಕ್ತಿ ಅರ್ಥ ರಹಿತವಾದುದೇನೂ ಅಲ್ಲವೆಂಬುದನ್ನು ಗಮನಿಸಬೇಕು) ಅನುವಾದದಲ್ಲಿ – 'ಕಾಳಗದ ಪದ'ದಲ್ಲಿ – ಕಾಣೆಯಾಗಿ ಬಿಟ್ಟಿವೆ :

"ಬನ್ನಿರಣ್ಣ, ಬನ್ನಿರಣ್ಣ
ಅದೊ ಕೂಗು, ಕೇಳಿ.
ಮನ್ನೆಯರ, ಬಂಟರಿರ
ಒದಗಿ ಏಳಿ, ಏಳಿ"

*    *    *

"ಬಿಡಿ ಹುಲ್ಲೆ, ಬಿಡಿ ಹಂದಿ
ಬಲೆ ದೋಣಿಗಳನು.
ಹಿಡಿದು ಕೊಳಿ ಮುಟ್ಟುಗಳ,
ಹಲಗೆ ಕತ್ತಿಯನು."

ಹೀಗಾಗಿ, ಕಾಳಗದ ಸಂದರ್ಭ ಇದೆಂಬ ಕಲ್ಪನೆಯೇ ಮೊದಲಿಗೆ ಮೂಡದೆ, ಅದಕ್ಕೆ ಬದಲಾಗಿ ಯಾವುದೋ ಉತ್ಸವದ, ಉತ್ಸಾಹದ, ಆನಂದದ ಸನ್ನಿವೇಶ ವೇನೋ ಎಂಬ ಭ್ರಮೆ ಮೂಡುತ್ತದೆ – ತಾತ್ಕಾಲಿಕವಾಗಿಯಾದರೂ.

ಅಂತೆಯೇ, ಷೆಲ್ಲಿಯ 'To the Night' ಎಂಬ ಕವನದ ಅನುವಾದ ದಲ್ಲಿಯೂ, ಭಾವವೊಂದು ಜಾರಿ ಹೋಗುತ್ತದೆ. ಮೂಲ ಹೀಗಿದೆ :

*"When I arose and saw the dawn,*
I sigh'd for thee :
When light rode high, and the dew was gone,
And noon lay heavy on flower and tree,
* * * I sigh'd for thee."

ಇದರ ಅನುವಾದವನ್ನು ನೋಡಿ :

"ಕರಗಿ ಮಂಜು, ಬೆಳಕು ಬರಲು
ನಿನಗೆ ಸುಯ್ದೆನು.
ಅರಳ ತಳಿರ ಮೇಲೆ ಬಿಸಿಲ
ಹೊರೆಯ ಹೇರಿ, ಏರಿ ಹಗಲು
* * * ಕಾಡಿ ತಂಗುತಿರಲು, ಬಾಡಿ
ನಿನಗೆ ಸುಯ್ದೆನು."

ಇಲ್ಲಿ ಸ್ಪಷ್ಟವಾಗಿಯೇ ಮೊದಲ ಪಂಕ್ತಿ (ಆಂಶಿಕವಾಗಿಯಾದರೂ) ಅನುವಾದದಲ್ಲಿ ಕಾಣೆಯಾಗಿದೆ.

ಕೆಲವೊಮ್ಮೆ ಶ್ರೀಯವರು ಅಗತ್ಯಕ್ಕಿಂತ ಹೆಚ್ಚಾಗಿಯೂ ಮೂಲವನ್ನೇ ಸಂಕ್ಷೇಪಿಸಿಬಿಡುತ್ತಾರೆಂಬ ಭಾವನೆಯೂ ನಮ್ಮಲ್ಲಿ ಮೂಡುತ್ತದೆ. ಇದಕ್ಕೆ ನಿದರ್ಶನವಾಗಿ ಸ್ಕಾಟ್‌ನ 'Coronach' ಕವನದ ಕೆಲವು ಪಂಕ್ತಿಗಳನ್ನು ಪರಿಶೀಲಿಸಬಹುದು. ಮೂಲದ ಮೊದಲ ಪದ್ಯಾರ್ಧ ಹೀಗಿದೆ :

*"He is gone on the mountain*
He is lost to the forest,
like a summer-dried fountain,
*When our need was the sorest."*

ಇದು ಅನುವಾದದಲ್ಲಿ ಹೀಗೆ ಕಾಣಿಸಿಕೊಂಡಿದೆ :

"ಕಾಡಿನೊಳು ನೀನಿಲ್ಲ
ಬೀಡಿನೊಳಗಿಲ್ಲ.
ಬಯಸುವೊಡೆ ಬೇಸಗೆಯ
ತೊರೆಯಾದೆಯಲ್ಲ !" ('ವೀರಗಲ್ಲು')

ಕಾಡು-ಬೀಡಿನ ಪ್ರಾಸದ ಮೋಹದಲ್ಲಿ, ಮೊದಲ ಪಂಕ್ತಿ ಸಂಪೂರ್ಣವಾಗಿ ಕೈಬಿಟ್ಟು ಹೋಗಿದೆ! 'When our need was the sorest' ಎಂಬ ಪಂಕ್ತಿಯಲ್ಲಿನ ಒತ್ತು ಮಾಯವಾಗಿ ಅದು ಕೇವಲ 'ಬಯಸುವ ಸಂದರ್ಭ'ವಾಗಿ ಪರಿಣಮಿಸಿದೆ (ಉಪಮೆಯೂ ಸ್ವಲ್ಪಮಟ್ಟಿಗೆ ಬದಲಾಗಿದೆ ಎಂಬುದು ಬೇರೆಯ ವಿಚಾರ); ಪರಿಣಾಮ ಕುಗ್ಗಿದೆ.

**ಭಾವ ಪರಿವರ್ತನೆ :** ಶ್ರೀಯವರ ಅನುವಾದದಲ್ಲಿ ಕೆಲವೆಡೆಗಳಲ್ಲಿ ಮೂಲದ ಭಾವಗಳು ಸ್ವಲ್ಪಮಟ್ಟಿಗೆ ಬದಲಾಗಿರುವುದೂ ಕಂಡುಬರುತ್ತದೆ. ಹೀಗಾಗಿರುವುದಕ್ಕೆ ಅನುವಾದದ ಅಗತ್ಯಗಳಿಗಿಂತಲೂ ಭಿನ್ನವಾದ ಕಾವ್ಯದ ಪರಿಗಣನೆಗಳು ಕಾರಣವಾಗಿರುವಂತೆ ತೋರುತ್ತದೆ. ಆದರೆ, ಈ ಕಾರಣಗಳಿಗಾಗಿ ಭಾವಪರಿವರ್ತನೆ ಸಮರ್ಥನೀಯವಾಗುವುದಿಲ್ಲವೆಂಬುದು ಗಮನಿಸಬೇಕಾದ ಸಂಗತಿ. ಮೂಲದ ಧ್ವನಿಗೆ, ಆಶಯಕ್ಕೆ ಸಂಗತವಾಗದಂಥ ರೂಪದಲ್ಲಿ ಈ ಬಗೆಯ ಭಾವಪರಿವರ್ತನೆಗಳು ಕಾಣಿಸಿಕೊಂಡಾಗ ಆಕ್ಷೇಪಾರ್ಹವೂ ಆಗುತ್ತವೆ.

ಉದಾಹರಣೆಗೆ, 'ವೀರಗಲ್ಲು' ಗೀತದಲ್ಲಿನ ಈ ಪಂಕ್ತಿಗಳನ್ನು ನೋಡಬಹುದು :

**"ಮತ್ತೆ ಮಳೆ ಕೊಳ್ಳುತಲೆ/ಏನದರ ಮೊಳಗು !**
**ಇನ್ನು ಜಯ ನಮಗೆಲ್ಲಿ ?/ನಿನಗೆಲ್ಲಿ ಬೆಳಗು ?"**

ಇಲ್ಲಿ ಪ್ರಮುಖವಾಗಿ ಮೊಳಗಬೇಕಾಗಿರುವ ಧ್ವನಿ ವಿಷಾದದ್ದು : ಮತ್ತೆ ಮಳೆ ಬಂದಾಗ ಚಿಲುಮೆಯಲ್ಲಿ ನೀರುಕ್ಕಬಹುದು ; ಆದರೆ ನಮಗೆ ಗೆಲುವಿನ ಉತ್ಸಾಹದ ಧ್ವನಿ ಮತ್ತೆ ಕಿವಿಗೆ ಬೀಳುವುದಿಲ್ಲ. ಗತಿಸಿದ ಆ ವೀರನಿಗೆ ನಾಳೆ ಎಂಬುದೇ ಇಲ್ಲ. ಅನುವಾದದಲ್ಲಿ ಮೂಲದ ಈ ವಿಷಾದಭಾವ ಮರೆಯಾಗಿ ಬಿಡುತ್ತದೆ. "ಇನ್ನು ಜಯ ನಮಗೆಲ್ಲಿ ? ನಿನಗೆಲ್ಲಿ ಬೆಳಗು ?" ಎಂಬ ಪ್ರಶ್ನಾರ್ಥಕ ವಾಕ್ಯಗಳ ಮೂಲಕ ವೈದೃಶ್ಯಾತ್ಮಕ ಪರಿಣಾಮವನ್ನುಂಟುಮಾಡುವ ಪ್ರಯತ್ನ ಅಷ್ಟಾಗಿ ಯಶಸ್ವಿಯಾಗುವುದಿಲ್ಲ. ಮೂಲದಲ್ಲಿಯಾದರೋ ವಿಷಾದದ ಈ ಒತ್ತು ಎದ್ದುಕಾಣುತ್ತದೆ :

"The font reappearing
From the raindrops shall borrow
But to us comes no cheering,
To Duncan no morrow !"

ಅಂತೆಯೇ, ಅವನು ಅಗಲಿದುದನ್ನು ವರ್ಣಿಸುವ ಕೊನೆಯ ಪದ್ಯದಲ್ಲಿ ಶ್ರೀಯವರು ಉಪಮೆಗಳನ್ನು ಬದಲಾಯಿಸಿರುವುದು, ಹೊಸದನ್ನು ತಂದು ಸೇರಿಸಿರುವುದು ಕಂಡುಬರುತ್ತದೆ. ಕನ್ನಡಿಗರು ಬೆಟ್ಟದ ಮೇಲೆ ಮಂಜು ಕರಗುವುದನ್ನು, ಚಿಲುಮೆಯಲ್ಲಿ ನೀರುಗುಳ್ಳೆ ಒಡೆದು ಹೋಗುವುದನ್ನು ಅರ್ಥಮಾಡಿಕೊಳ್ಳಲಾರರೆಂದು ಕನಿಕರಿಸಿದರೇ ಎಂದು ಪ್ರಶ್ನಿಸಬೇಕಾಗುತ್ತದೆ (ಚಿಲುಮೆಯ ಚಿತ್ರ ಉದ್ದಕ್ಕೂ ಕಾಣಿಸಿಕೊಳ್ಳುವುದು ಆ ಉಪಮೆಯನ್ನು ಬದಲಾಯಿಸುವುದು ಉಚಿತವಲ್ಲವೆಂಬುದನ್ನು ಪರ್ಯಾಯವಾಗಿ ಸೂಚಿಸುತ್ತದೆ). ಮೂಲದಲ್ಲಿ ಆ ಪ್ರಸಂಗ ಹೀಗಿದೆ :

"Like the *dew on the mountain,*
Like the foam on the river,
Like the *buble on the fountain,*
Thou art gone ; *and for ever."*

ಇದು ಕನ್ನಡಕ್ಕೆ ಬರುವಾಗ ಹೀಗೆ ಆಗಿದೆ :

"ಹಗಲೆದಿರ ಮಂಜೆಂತು/ತೊರೆಯ ನೊರೆಯೆಂತು
ಮುಗಿಲ ಕುಡಿ ಮಿಂಚೆಂತು/ಮರೆಯಾದೆಯಂತು !"

ಇಲ್ಲಿ "dew on the mountain" ಎಂಬುದು "ಹಗೆಲೆದಿರ ಮಂಜು" ಎಂದಾಗಿದೆ ; "buble on the fountain" ಎಂಬುದಕ್ಕೆ ಬದಲಾಗಿ "ಮುಗಿಲ ಕುಡಿ ಮಿಂಚು" ಬಂದಿದೆ ; ಈ ಅಗಲಿಕೆ ಶಾಶ್ವತವಾದುದೆಂಬುದನ್ನು ಸೂಚಿಸುವ 'and for ever" ಎಂಬುದು ಕಾಣೆಯಾಗಿದೆ.

ಅಷ್ಟೇ ಅಲ್ಲ, ಈ ವೀರನ ಅಂದಿನ ಸಾಹಸಾತಿಶಯವನ್ನು ಹಾಗೂ ಇಂದಿನ ನಿಶ್ಚಿಂತತೆ ನಿರ್ಲಿಪ್ತತೆಯನ್ನು ವೈದೃಶ್ಯಾತ್ಮಕವಾಗಿ ವರ್ಣಿಸಿರುವ –

"Red hand in the foray,
*How sound is thy slumber !"*

– ಎಂಬ ಮಾತುಗಳು,

"ಬೇಟೆಯಲಿ ಬರಸಿಡಿಲು, ಆಟದಲಿ ನವಿಲು."

– ಎಂದು ಅನುವಾದಗೊಂಡಿರುವುದನ್ನು ಕಂಡಾಗ ಆಶ್ಚರ್ಯವಾಗುತ್ತದೆ ; ವಿಷಾದವೂ ಉಂಟಾಗುತ್ತದೆ. ಪ್ರಾಸ-ಪ್ರೀತಿಗೆ ಮೂಲ ಭಾವವೇ ಬಲಿಯಾಗಬೇಕೆ ?

ಅಂತೆಯೇ, 'ಸರ್‌ಜಾನ್ ಮೂರನ್ನು ಹೂಳಿದ್ದು' ಎಂಬ ಗೀತದ ಮೂಲದಲ್ಲಿ ('Burial of Sir John Moor') "No useless coffin enclosed his breast" ಎಂಬ ಪಂಕ್ತಿಯಲ್ಲಿ ಶವದ ಪೆಟ್ಟಿಗೆಯ ನಿರರ್ಥಕತೆ ನಮ್ಮ ಮನಸ್ಸನ್ನು ತಟ್ಟುತ್ತದೆ. ಆದರೆ "ಒಡಲ ಪೇಳಿಗೆಯಲ್ಲಿ ಒಪ್ಪಮಾಡಲು ಇಲ್ಲ" ಎಂಬ ಅನುವಾದವನ್ನು ನೋಡಿದಾಗ, ಆ ವೀರನ ಅಂತಿಮ ಸಂಸ್ಕಾರದಲ್ಲಿ ಈ ಒಂದು ಕೊರತೆ ಉಳಿಯಿತೇನೋ ಎಂಬ ಭಾವನೆ ಮೂಡುತ್ತದೆ. ಉಳಿದಂತೆ ಈ ಗೀತದ ಅನುವಾದ ಯಶಸ್ವಿಯಾಗಿದೆ ಎಂದೆನಿಸಿದರೂ, ಈ ಒಂದು ಕೊರತೆ ಕಾಡುತ್ತದೆ.

'ರಾಯಲ್ ಜಾರ್ಜ್ ಮುಳುಗಿ ಹೋದದ್ದು' ('Loss of the Royal George') ಇನ್ನೊಂದು ಸುಪ್ರಸಿದ್ಧ ಕವನ. ಇದರ ಬಗ್ಗೆ ಬರೆಯುತ್ತ, ಪಾಲ್‌ಗ್ರೇವ್ ಹೀಗೆ ಹೇಳಿದ್ದಾನೆ : "This little poem might be called

one of our trial pieces, in regard to taste!"; ಇದರ ಅನುವಾದ ದಲ್ಲಿಯೂ, ಮೂಲದ ಪ್ರಭಾವಶಾಲಿ ಆರಂಭ ಕಾಣೆಯಾಗಿ, ಅದರ ವಿಷಾದಭಾವ ಮಾತ್ರ ಉಳಿಯುವಂತಾಗಿದೆ. ಮೂಲ ಹೀಗಿದೆ :

"Toll for the Brave!
*The brave that are no more!*
All sunk beneath the wave
Fast by their native shore!"

ಇದು ಅನುವಾದದಲ್ಲಿ,

"ಅಳಿದರೇ ಹಾ ಧೀರರು!/ಕಳೆದುಹೋದರೆ ಧೀರರು!
ತಮ್ಮ ನಾಡಿನ ಕರೆಯೊಳಿಲ್ಲರು/ಮುಳುಗಿಹೋದರು ತೆರೆಯೊಳು."

ಎಂದು ಮಾತ್ರವಾಗಿ ಕಾಣಿಸಿಕೊಂಡಿರುವುದು ಇದಕ್ಕೆ ಕಾರಣ. ಅಂತೆಯೇ, *Brave* Kempenfelt is gone" ಮತ್ತು "But Kempenfelt is gone" – ಇವೆರಡೂ "ಹೋದ ಕೆಂಪೆನ್‌ಫೆಲ್ಟನು !" ಎಂದು ಮಾತ್ರವಾಗಿ ಅನುವಾದ ಗೊಂಡಿವೆ. ಅರ್ಥಪೂರ್ಣ ವಿಶೇಷಣ ಇಲ್ಲದಾಗುವುದು ಅಥವಾ ಛಂದಸ್ಸಿನ ಅಗತ್ಯ ಗಳಿಗೆ ಬಲಿಯಾಗುವುದು ಅಷ್ಟಾಗಿ ಹಿಡಿಸದ ಸಂಗತಿ. ಇನ್ನೊಂದು ವಿಶೇಷಣದ ಸಂದರ್ಭದಲ್ಲಿಯೂ ಹೀಗೆಯೇ ಆಗಿದೆ: 'work of glory' ಎಂಬುದಕ್ಕೆ 'ಸಾಹಸ' ಎಂದಷ್ಟೇ ಹೇಳುವುದು ಉಚಿತವಲ್ಲ ಎಂದೆನಿಸುತ್ತದೆ.

ಇಂಥ ವೀರನಿಗೆ ಒದಗಿದ ದುರ್ಮರಣದ ಬಗ್ಗೆ ವಿಷಾದವನ್ನು ವ್ಯಕ್ತಪಡಿಸುವ ಪಂಕ್ತಿಗಳಲ್ಲಿ ಬರುವ 'tempest', 'shock', 'fatal leak' ಮೊದಲಾದ ಶಬ್ದಗಳಿಗೆ 'ಗಾಳಿ' 'ಒದರು' ಮತ್ತು 'ಒಡಕು' ಎಂಬಂಥ ಶಬ್ದಗಳು ಪರ್ಯಾಯ ವಾಗಿ ಕಾಣಿಸಿಕೊಂಡಿರುವುದರಿಂದ, ಅನುವಾದದ ಆ ಭಾಗ ದುರ್ಬಲವಾಯಿತೇನೋ ಎಂದೆನ್ನಿಸುತ್ತದೆ. ಮೂಲ ಹೀಗಿದೆ :

"It was not in the battle;
No *tempest* gave the *shock*;
She sprang no *fatal leak*,
She ran upon no rock."

ಇದು ಕನ್ನಡದಲ್ಲಿ ಹೀಗೆ ಕಾಣಿಸಿಕೊಂಡಿದೆ :

"ಕಾಳಗದೊಳದು ಆಗಲಿಲ್ಲ;
ಗಾಳಿ ಎರಗಿ ಒದರಲಿಲ್ಲ;
ಒಡಕು ಕಿತ್ತದು ಮುಳುಗಲಿಲ್ಲ;
ಅಡಗಿದರೆಯನು ಹಾಯಲಿಲ್ಲ."

ಇನ್ನೂ ಕೆಲವು ಬಗೆಯ ಸೂಕ್ಷ್ಮತೆಗಳು ಶ್ರೀಯವರ ಅನುವಾದದಲ್ಲಿ ಅಳವಡದೆ ಹೋಗಿವೆ. ಉದಾಹರಣೆಗೆ, ಕ್ಯಾಂಪ್‌ಬೆಲ್‌ನ 'ಇಂಗ್ಲೆಂಡ ನಾವಿಕರು' '(Ye Mariners of England') ಗೀತದ ಮೂಲದಲ್ಲಿ ಕಾಣದೊರೆಯುವ ಸಂಬೋಧನೆ ಮತ್ತು ವಿಶೇಷಣಗಳ ಸಾವಯುವ ಸಂಬಂಧ ಅನುವಾದದಲ್ಲಿ ಕಾಣೆಯಾಗಿ, ವಿಶೇಷಣ ಬರಿಯ ಹೇಳಿಕೆಯಾಗಿ ಉಳಿದುಬಿಡುತ್ತದೆ. ಏಕೆಂದರೆ,

"Ye Mariners of England
*That* guard our native seas !
Whose flag has braved, a thousand years,
The battle and the breeze !

– ಎಂಬುದು

"ಇಂಗ್ಲೆಂಡ ನಾವಿಕರಿರಾ – ಕಾಯುವಿರಿ
ನೀವೆಮ್ಮ ಕಡಲುಗಳನು
ನಿಮ್ಮ ಬಾವುಟ ತಡೆಯಿತೊಂದು ಸಾವಿರ ವರುಷ
ಗಾಳಿಯನು ಕಾಳಗವನು."

– ಎಂಬುದಾಗಿ ಅನುವಾದಗೊಂಡಾಗ, ಮೂಲದಲ್ಲಿ 'that' ಎಂಬುದರಿಂದ ಸೂಚಿತವಾಗಿರುವ ಸಂಬಂಧವನ್ನು ಅಡ್ಡಗೀಟೊಂದು ಉಳಿಸಿಕೊಳ್ಳಲಾರದೆ ಹೋಗುತ್ತದೆ.

ಇದೇ ರೀತಿ, ಲ್ಯಾಂಡರನ 'Rose Aylmer' ಗೀತದ ಅನುವಾದದಲ್ಲಿಯೂ ಇದೇ ಬಗೆಯ ಅನುಭವ ನಮಗೆ ಎದುರಾಗುತ್ತದೆ. ಮೂಲದ,

"A night *of* memories and sighs
I consecrate to thee.

– ಎಂಬುದನ್ನು

"ನೆನೆಸಿಕೊಳುವೆ, ಬಿಸುಸುಯ್ಯುವೆ ಇರುಳನು
ನಿನಗೆಯೆ ಮೀಸಲು ತೆಗೆದಿಡುವೆ."

– ಎಂದು ಕನ್ನಡಿಸಿದಾಗ, ನೆನೆಯುವ ಮತ್ತು ಬಿಸುಸುಯ್ಯುವ ಕ್ರಿಯೆಗಳಿಗೂ ಇರುಳಿಗೂ ಇರುವ ಅವಿನಾಭಾವ ಕಣ್ಮರೆಯಾಗುತ್ತದೆ. ಹೀಗಾಗಿ. ಮೂಲದ ಭಾವವೇ ವ್ಯತ್ಯಾಸಗೊಳ್ಳುತ್ತದೆ.

ಮೂಲದ ವಿವರಣಕ ಅಥವಾ ಅವಾಂತರ ರಚನೆ – paranthetic structure – ಅನುವಾದದಲ್ಲಿ ಸ್ಪಷ್ಟವಾಗಿ ಗೋಚರಿಸದೆ ಹೋಗಿ, ಭಾವ ಅಸ್ಪಷ್ಟವಾಗಿ ಬಿಡುವಂಥ ಸಂದರ್ಭಗಳೂ ನಮಗೆ ಅಲ್ಲಲ್ಲಿ ಎದುರಾಗುತ್ತವೆ. ಉದಾಹರಣೆಗೆ, ಷೆಲ್ಲಿಯ 'Music when soft voices die' ಎಂಬ ಗೀತದ ಅನುವಾದವಾಗಿರುವ 'ಗಾನ ಮೆಲುಪಿನ ಕೊರಲು ಕುಗ್ಗಲು' ಗೀತದಲ್ಲಿ,

"ಕಳಚಿದೆಸಳು, ಗುಲಾಬಿ ಕುಂದಲು,
ತಳಿವುದಿನಿಯಳ ಶಯನವ."

ಸಂದಿಗ್ಧಕ್ಕೆ ಎಡೆಮಾಡಿಕೊಡುವ ಪಂಕ್ತಿಯಾಗಿದೆ – ಇಲ್ಲಿ ಕಳಚಿದ ಎಸಳಿಗೂ, ಕುಂದಿದ ಗುಲಾಬಿಗೂ ಇರುವ ಸಂಬಂಧ ಸ್ಪಷ್ಟವಾಗುವುದಿಲ್ಲ. ಮೂಲದಲ್ಲಿಯಾವರೊ ಅರ್ಥ, ಭಾವ ಮತ್ತು ಸಂಬಂಧಗಳ ಸಂದಿಗ್ಧತೆಯೇನೂ ಇಲ್ಲ. 'Rose' ಎಂಬ ಶಬ್ದದ ಪುನರಾವರ್ತನೆ ಅರ್ಥರಹಿತವಾದುದೇನೂ ಅಲ್ಲ ಎಂಬುದನ್ನು ಗಮನಿಸ ಬೇಕು. ಮೂಲ ಹೀಗಿದೆ :

"*Rose* leaves, when the *rose* is dead,
Are heap'd for the beloved's bed."

ಮೂಲವನ್ನು ಆಂಶಿಕವಾಗಿ ಬದಲಾಯಿಸುವಂತೆಯೇ, ಸಂಪೂರ್ಣವಾಗಿಯೂ ಬದಲಾಯಿಸಿ ಬಿಡುವುದು 'ಇಂಗ್ಲಿಷ್ ಗೀತ'ಗಳಲ್ಲಿ ನಾವು ಕಾಣುವ ಇನ್ನೊಂದು ಲಕ್ಷಣ. ಹೀಗಾಗಿ, ಶ್ರೀಯವರ ಕೆಲವು ಅನುವಾದ ಭಾಗಗಳು, ವರ್ಡ್ಸ್‌ವರ್ತ್‌ನ ವಿಷಯದಲ್ಲಿ 'false to Wordsworth' ಎಂದು ಅವರೇ ಒಪ್ಪಿಕೊಂಡಿರುವಂತೆ, ಇತರ ಕೆಲವು ಕವಿಗಳ ವಿಷಯದಲ್ಲಿ 'false to other poets' ಕೂಡ ಆಗಿಬಿಡುವುದುಂಟು. ಉದಾಹರಣೆಗೆ, ವೂಲ್ಫ್‌ನ 'Burial of Sir John Moore'ನ ಗೀತದ

"Not a soldier discharged his farewell shot"

– ಎಂಬಲ್ಲಿನ "ಯಾವೊಬ್ಬ ಸೈನಿಕನೂ ಅಂತಿಮ ಬೀಳ್ಕೊಡುಗೆಯ ಗುಂಡನ್ನು ಹಾರಿಸಲಿಲ್ಲ" ಎಂಬ ಭಾವವನ್ನು 'ಸರ್‌ಜಾನ್ ಮೂರನ್ನು ಹೂಳಿದ್ದು' ಎಂಬ ಆ ಗೀತದ ಅನುವಾದದಲ್ಲಿನ

"ಒಬ್ಬ ಸಿಪಾಯಿಯು ಕಳುಹುವ ಸುರಟಿಲ್ಲ"

– ಎಂಬ ಅನುವಾದದಲ್ಲಿ ಕಷ್ಟದಿಂದ ಕಾಣಬೇಕಾಗುತ್ತದೆ.

ಅಂತೆಯೇ, ಬರ್ನ್ಸ್ ಕವಿಯ 'Fair Lesley'ಯಲ್ಲಿನ

"Thou art divine, Fair lesley,
*The hearts of men adore thee.*"

– ಎಂಬ ಪಂಕ್ತಿಯಲ್ಲಿ ಸೂಚಿತವಾಗಿರುವ ಆರಾಧನಾ ಭಾವ

"ಕಮಲೇ, ನೀನು ದೇವಿ ಕಣಾ,
ದಾಸರು, ಸೇವಿಸಿ ಬೇಡುವೆವು"

ಎಂಬ ಅನುವಾದದಲ್ಲಿ ತನ್ನ ಸ್ವರವನ್ನೇ ಆರಾಧನೆಯಿಂದ ವಾಸ್ಯಕ್ಕೆ ಬದಲಾಯಿಸಿತೇನೋ ಎಂಬ ಅನುಮಾನವನ್ನೂ ಮೂಡಿಸುತ್ತದೆ. ಜೊತೆಗೆ,

ಮೂಲದಲ್ಲಿ ನಮ್ಮ ಅನುಭವಕ್ಕೆ ಬರುವ ಭಾವದ ಸಾರ್ವತ್ರಿಕತೆ ಅನುವಾದದಲ್ಲಿ ಸೀಮಿತತೆಗೆ ಒಳಗಾಗಿ ಬಿಡುತ್ತದೆ ಎಂಬುದನ್ನು ಅಲ್ಲಗಳೆಯಲಾಗುವುದಿಲ್ಲ.

ಇದೇ ರೀತಿ, **"ಅಡವಿಯ ಮುಳ್ಳಲಿ ಮಿಂಚಿನ ಹುಳುಗಳು ಪಂಜನು ಹಿಡಿಯುವ"** ದೃಶ್ಯ ಎಷ್ಟೇ ಚೇತೋಹಾರಿಯಾಗಿದ್ದರೂ, ಅನುವಾದಕರು ಕಂಡುಂಡ ಅನುಭವವೇ ಆಗಿದ್ದರೂ, 'ಬಿಂಕದ ಸಿಂಗಾರಿ'ಯು ಹಮ್ಮನ್ನು ಗಾಳಿಗೆ ತೂರುವ ಸನ್ನಿವೇಶದಲ್ಲಿ ಉಚಿತವಾಗಲಾರದು. ಅವಳ ಸಮಾಧಿಗಾಗಿ ಮಣ್ಣಿನಲ್ಲಿ ಆಳವಾದ ಕುಳಿಯನ್ನು ತೋಡುವ ಚಿತ್ರದ ಅನಂತರ ಬರಬೇಕಾದ ಚಿತ್ರ ಸಹಜವಾಗಿಯೇ ಸ್ಮಶಾನದ್ದು. ಆದ್ದರಿಂದಲೇ ಸ್ಕಾಟ್ ಹೀಗೆನ್ನುತ್ತಾನೆ :

"The glow worm *o'er grave and stone*
*Shall light thee steady ;"*

ತುಂಬ ಪ್ರಸಿದ್ಧವಾದ ಈ ಪದ್ಯದಲ್ಲಿ, "Scott has given us nothing more complete and lovely than this little song which unites simplicity and dramatic power to a wild-wood music of the rarest quality. No moral is drawn, far less any conscious analysis of feeling attempted : – the pathetic meaning is left to be suggested by the more presentment of the situation." ... first rate excellence in it is in truth one of the least common triumphs of Poetry." ಎಂದು ಪಾಲ್‌ಗ್ರೇವ್ ನಮ್ಮನ್ನು ಎಚ್ಚರಿಸಿರುವಾಗಲಂತೂ, ಮೂಲದ ಕಲ್ಪನೆಗಳನ್ನು ಬದಲಾಯಿಸುವುದು ಅಪೇಕ್ಷಣೀಯವಲ್ಲ ಎಂದೆನಿಸುತ್ತದೆ. ಹೀಗಾಗಿ, ಅನುವಾದದಲ್ಲಿನ ಬದಲಿಸಿದ ಪ್ರತಿಮೆ ಪ್ರಶ್ನಾರ್ಹವಾಗುತ್ತದೆ.

ಹೀಗೆ ಉಪಮೆಗಳನ್ನು ಬದಲಾಯಿಸುವ ಅಗತ್ಯವೇ ಉಂಟಾಗುವುದಿಲ್ಲ ಎಂದಲ್ಲ. ಕೆಲವೊಮ್ಮೆ ಬದಲಾಯಿಸುವುದು ಅಗತ್ಯವೂ, ಅಪೇಕ್ಷಣೀಯವೂ ಆಗಬಹುದು. ಹಾಗೆ ಮಾಡದೆ ಇದ್ದಲ್ಲಿ ಅರ್ಥಪ್ರತೀತಿಯಾಗಲೀ, ಭಾವದ ಸಮ್ಯಕ್ ಸಂವಹನವಾಗಲೀ ಸಾಧ್ಯವಾಗದೇ ಹೋಗಬಹುದು. ಉದಾಹರಣೆಗೆ, ಷೆಲ್ಲಿಯ 'Music, when soft voices die' ಗೀತದ ಅನುವಾದದಲ್ಲಿ, "When sweet violets sicken" ಎಂಬುದನ್ನು "ಮೊಲ್ಲೆಯ ಸೊಂಪು ಸೊರಗಲು" ಎಂದು ಬದಲಾಯಿಸಿಕೊಂಡಿರುವುದು ಸಹ್ಯವೇ ಆಗಿದೆ.

ಆದರೆ, ಲ್ಯಾಂಬ್‌ನ 'The old Familiar Faces' ಎಂಬ ಗೀತದ ಅನುವಾದದಲ್ಲಿ ('ಹಳೆಯ ಪಳಕೆಯ ಮುಖಗಳು') ಮೂಲದ

> "*I have had playmates,* I have had companions,
> *In my days of childhood,* in my joyful school days."

ಎಂಬುದನ್ನು

> "ಕಂದ ಬಿದ್ದೆಯು ಎಂದು ಮುದ್ದಿಸಿ ನನಗೆ ಮರುಗುವರಿದ್ದರು ;
> ಅಂದಿನೋದಿನ ಸುಖದ ದಿನದಲಿ ಜತೆಗೆ ಕುಣಿಯುವರಿದ್ದರು."

ಎಂಬುದಾಗಿ ಬದಲಾಯಿಸುವುದಾಗಲೀ, ಇದೇ ಗೀತದ

> *"I loved a Love once, fairest among women ;*
> *Closed are her doors on me, I must not see her."*

ಎಂಬುದನ್ನು

> "ಹರಸಿಪಡೆದೆನು ಪೆಣ್ಣನೊಂದನು – ಹೇಳಲರಿಯೆನು ಹಿತುವನು,
> ಉರಿದು ಹೋದಳು, ಬೂದಿಯಾದಳು, ಹಿಡಿವುದಿನ್ನೆಲ್ಲವಳನು ;"

ಹೀಗೆ ಸಂಪೂರ್ಣವಾಗಿ ಬದಲಾಯಿಸಿ, ತಮ್ಮದೇ ಆದ ಕಲ್ಪನೆಯ ಚಿತ್ರವನ್ನು ಕೊಡುವುದರಿಂದ ಇದು ಮೂಲಕ್ಕೆ ತೀರಾ ದೂರವೆ ಆಗಿದೆ.

ಕೆಲವೆಡೆಗಳಲ್ಲಿ ಪ್ರಾಸ-ಸೌಕರ್ಯಕ್ಕಾಗಿಯೂ ಶ್ರೀಯವರು ಮೂಲದ ಮಾತುಗಳನ್ನು ಬದಲಾಯಿಸಿಬಿಡುವುದುಂಟು. ಉದಾಹರಣೆಗೆ, ಕ್ಲೋನ 'Say not the struggle naught availeth' ಗೀತದ ಕೊನೆಯ ಎರಡು ಪಂಕ್ತಿಗಳನ್ನು ಶ್ರೀಯವರು ಹೀಗೆ ಅನುವಾದಿಸಿದ್ದಾರೆ :

> "ಮುಂದೆ ಮೆಲ್ಲಗೆ ಮೆಲ್ಲಗೇರುವುದು ಹೊತ್ತು –
> ಹಿಂದೆ ಪಡುವಲು ನೋಡು – ನೆಲದ ಸಂಪತ್ತು."

ಆದರೆ, ಮೂಲದಲ್ಲಿ ಸಂಪತ್ತಿನ ಪ್ರಶ್ನೆಯೇ ಇಲ್ಲ :

> "In front, the sun climbs slow, how slowly,
> But westward, look, *the land is bright !"*

**ವಿಸ್ತಾರ :** ಭಾಷೆಯ ಅಗತ್ಯಗಳಿಂದಾಗಿ ಅನಿವಾರ್ಯವಾಗುವ ವಿಸ್ತಾರವಾಗಲೀ, ಭಾವವಿಶದೀಕರಣದ ದೃಷ್ಟಿಯಿಂದ ಅಗತ್ಯವಾಗುವ ವಿಸ್ತಾರವಾಗಲೀ ಆಕ್ಷೇಪಾರ್ಹವಾಗುವುದಿಲ್ಲ. ಆದರೆ, ಇಂಥ ಅಗತ್ಯವಿಲ್ಲದಿರುವಾಗ, ಇತರ ಪರಿಗಣನೆಗಳಿಂದಾಗಿ ಮಾಡಿದಂಥ ವಿಸ್ತಾರ ಪ್ರಶ್ನಾರ್ಹವೇ ಆಗುತ್ತದೆ.

ಮೂಲದ ಭಾವವನ್ನು ವಿಸ್ತರಿಸಿಕೊಂಡು ಹೋಗುವುದು ಶ್ರೀಯವರ ಇನ್ನೊಂದು ಸ್ವಭಾವವೇ ಆಗಿರುವಂತೆ ತೋರುತ್ತದೆ. ಈ ವಿಸ್ತಾರ ಒಂದೆರಡು ಮಾತುಗಳಿಂದ ಹಿಡಿದು ಹಲವು ಪಂಕ್ತಿಗಳವರೆಗೆ ವಿಸ್ತರಿಸಿಕೊಳ್ಳುವುದೂ ಉಂಟು. ಉದಾಹರಣೆಗೆ ಸ್ಕಾಟ್‌ನ 'Gathering Song'ನ ಈ ಪಂಕ್ತಿಗಳನ್ನು ನೋಡಬಹುದು :

"Leave untended the herd,
*The flock without shelter;*
Leave the corpse un-interred,
The bride at the altar."

ಇವನ್ನು ಶ್ರೀಯವರು ಹೀಗೆ ಅನುವಾದಿಸಿದ್ದಾರೆ:

"ಬಿಡಿ ಇರಲಿ ಮಂದೆಗಳು,/ಹೊಸ ಉತ್ತ ಮಣ್ಣು
ಬಿಡಿ ಇರಲಿ ಸತ್ತ ಹೆಣ,/ಹಸೆಮಣೆಯ ಹೆಣ್ಣು."

ಮೊದಲ ಎರಡು ಪಂಕ್ತಿಗಳಲ್ಲಿರುವ ಪ್ರಾಣಿಗಳನ್ನೆಲ್ಲ ಒಂದೇ ಒಂದು 'ಮಂದೆ' ಯಲ್ಲಿ ಸೇರಿಸಿದ ಶ್ರೀಯವರು, ಹೆಣ್ಣಿಗೆ ಪ್ರಾಸವನ್ನೇ ಕಲ್ಪಿಸುವ ಸಲುವಾಗಿ "ಹೊಸ ಉತ್ತ ಮಣ್ಣು" ಬರುವಂತೆ ಮಾಡಿದ್ದಾರೆ. ಮೂಲದ ಆಲೋಚನಾಸರಣಿಗೆ ಇದರಿಂದ ಭಂಗವೇನೂ ಬಂದಿಲ್ಲ, ಆದರೂ ಈ ಬಗೆಯ ಸೇರ್ಪಡೆಗೆ ಪ್ರಬಲ ಸಮರ್ಥನೆಯೂ ದೊರೆಯುವುದಿಲ್ಲ.

ಸದೆಯ 'After Blenheim' ಕವನದ ಅನುವಾದವಾದ 'ಬ್ಲೆನ್‌ಹೀಮ್ ಕದನ'ದಲ್ಲಿಯೂ ಹೀಗೆಯೇ ಆಗಿದೆ. ಅದರ ಈ ಪಂಕ್ತಿಗಳನ್ನು–

"And many a Childing mother then
And new-born baby died;
But things like that, you know, must be
At every famous victory."

. ಶ್ರೀಯವರು ಹೀಗೆ ಅನುವಾದಿಸಿಕೊಂಡಿದ್ದಾರೆ;

"ತುಂಬು ಬಸಿರಿಯರು, ಹಾಲು ಮಕ್ಕಳು ಸತ್ತ
ಲೆಕ್ಕವ ದೇವರೆ ಬಲ್ಲ.
ಅವರಂತಹುದೆಷ್ಟೋ ಆಗಲೆಬೇಕಲ್ಲ
ಲೋಕಪ್ರಸಿದ್ಧಿಯ ಜಯದಲಿ ಎಂದ."

ಇಲ್ಲಿಯ "ಲೆಕ್ಕವ ದೇವರೆ ಬಲ್ಲ" ಎಂಬ ಪಂಕ್ತಿಗೆ ಮೂಲದಲ್ಲಿ ಇರುವ ಆಧಾರವೆಲ್ಲ 'many' ಎಂಬ ಮಾತು. ಆದರೆ, ಈ ಪಂಕ್ತಿ ಆಧಿಕ್ಯದ ಭಾವವನ್ನು ಮೂಲಕ್ಕಿಂತ ಚೆನ್ನಾಗಿ ಅಭಿವ್ಯಂಜಿಸುತ್ತದೆ.

ಅಂತೆಯೇ, ಷೆಲ್ಲಿಯ 'Love's philosophy' ಗೀತದ ಈ ಪಂಕ್ತಿಗಳನ್ನು ನೋಡಿ :

"See the mountains kiss high heaven,
And the waves clasp one another;"

ಈ ಭಾಗವನ್ನು ಶ್ರೀಯವರು –

"ಮಳೆ ಮುಗಿಲ ಮುಟ್ಟುವುದು ಬೆಟ್ಟಗಳು ನೆಗೆದು ;
ಬೆಳುದಿಂಗಳಿಳಿತಂದು ಸೋಕುತಲೆ ಹೊಮ್ಮಿ
ಸೆಳೆದಲೆಗಳಪ್ಪುವುವು ಹಿಗ್ಗಿ ಚಿಮ್ಮಿ."

ಇಲ್ಲಿಯ "ಬೆಳುದಿಂಗಳಿಳಿತಂದು ಸೋಕುತಲೆ ಹೊಮ್ಮಿ" ಎಂಬ ಮಾತುಗಳಿಗೆ ಮೂಲದಲ್ಲಿ ಆಧಾರವೇನೂ ಇಲ್ಲ. ಆಲೋಚನೆಯ ತಾರ್ಕಿಕ ಹಿನ್ನೆಲೆಯುನ್ನು ಸ್ಪಷ್ಟಪಡಿಸಿದಂತಾಗಿದೆಯಾದರೂ, ಹೀಗೆ ಮಾಡುವುದು ಅನುವಾದಕನ ಕರ್ತವ್ಯ ವೇನೂ ಅಲ್ಲ. ಅನುಕ್ತವಾಗಿರುವುದನ್ನು ಅನುಕ್ತವಾಗಿಯೇ ಬಿಡಬೇಕೆಂಬುದು ಅನುವಾದಕ ಪಾಲಿಸಬೇಕಾಗಿರುವ ನಿಯಮ.

ಇಂಥ ಪ್ರಸಂಗಗಳಲ್ಲಿ ಶ್ರೀಯವರ ಸೇರ್ಪಡೆಗಳು ನಮಗೆ ಹಿತವಾಗಿಯೂ ತೋರಬಹುದು, ಕನಿಷ್ಠ ಪಕ್ಷ ಅಸಂಗತವಾಗಿಯಂತೂ ಇಲ್ಲ ಎನ್ನಿಸಬಹುದು. ಆದರೆ ಇಂಥ ವಿಸ್ತರಣೆಗಳು ಅಥವಾ ಸೇರ್ಪಡೆಗಳು ಪ್ರಶ್ನಾರ್ಹವಾಗುವಂಥ ಅಥವಾ ವಿವಾದಾಸ್ಪದವಾಗುವಂಥ ಸಂದರ್ಭಗಳೂ ಒದಗುತ್ತವೆ. ಉದಾಹರಣೆಗೆ, 'ದುಃಖಸೇತು'ವಿನಲ್ಲಿ ಸೇರ್ಪಡೆಯಾಗಿರುವ –

"ನಿರಿಹಿಡಿದು, ನಡುವೇರಿ/ತೊದಳುಮಾತನು ಬೀರಿ.
ಕೊರಗ ನಗಿಸಲು ಬಲ್ಲ/ಮಗುವಿಲ್ಲವೇನೋ ?"

– ಎಂಬ ಪಂಕ್ತಿಗಳು "ಕರುಣರಸದ ಮಿನುಗನ್ನು ಹೆಚ್ಚಿಸಿವೆ" ಎಂದು ತೀ. ನಂ. ಶ್ರೀಕಂಠಯ್ಯನವರು ಭಾವಿಸಿದರೆ, "ಮೂಲದ ಧ್ವನಿಗೆ ಕೊಂಚ ಕುಂದನ್ನೇ ತರುವುವು ಎಂಬ ಭಾವನೆ ಬರುತ್ತದೆ" ಎನ್ನುತ್ತಾರೆ ಎಸ್. ಅನಂತನಾರಾಯಣ ಅವರು.

ಶ್ರೀಯವರ ಅನುವಾದ ವಿಧಾನದಲ್ಲಿ ಹೀಗೆ ಅಲ್ಲಲ್ಲಿ ಕೆಲವು ಅರೆ-ಕೊರೆಗಳನ್ನು ಲೋಪದೋಷಗಳನ್ನು ಕಾಣುವ ಯತ್ನದಲ್ಲಿ ನಾವು ಸಫಲರಾಗಬಹುದಾದರೂ, ಈ ಸಂಗ್ರಹದ ಬಹುಪಾಲು ಕವನಗಳು ಅವರ ಸಿದ್ಧಹಸ್ತದ ಅನುವಾದ ಕೌಶಲಕ್ಕೆ ನಿದರ್ಶನವಾಗಿವೆ. ಈ ಎಲ್ಲ ಅರೆ-ಕೊರೆಗಳನ್ನು ಮೀರಿ ನಿಲ್ಲುವಂಥ ಅನುಪಮ ಸತ್ವ ಅದರಲ್ಲಿದೆ. ಯಥಾವತ್ತಾದ ಅನುವಾದಕ್ಕೆ ರೂಪಾಂತರಕ್ಕೆ, ಸೃಜನಾತ್ಮಕ ಅನುವಾದಕ್ಕೆ ಎಲ್ಲ ಕಾಲಕ್ಕೂ ಆದರ್ಶವಾಗಿ ನಿಲ್ಲುವಂಥ ಉದಾಹರಣೆಗಳನ್ನೊಳ ಗೊಂಡ ಒಂದು ಸಂಕಲನ ಬೇಕೆಂದರೆ ನಾವು ಇಂಗ್ಲಿಷ್ ಗೀತಗಳತ್ತಲೇ ಕಣ್ಣಾಗ ಬೇಕಾಗುತ್ತದೆ. ಅಷ್ಟೇ ಅಲ್ಲ, ಶ್ರೀಯವರ ಮಾಂತ್ರಿಕ ಸ್ಪರ್ಶದಿಂದ ಆಂಗ್ಲ ಸಾಹಿತ್ಯದಲ್ಲಿ 'ಸಾಮಾನ್ಯ'ವೆನಿಸಿಕೊಂಡಿರುವಂಥ ರಚನೆಯೂ ಕನ್ನಡವಲ್ಲಿ ಅಸಾಮಾನ್ಯವಾಗಿ ಬಿಡುತ್ತದೆ. ಉದಾಹರಣೆಗೆ 'ದುಃಖಸೇತು'ವನ್ನು ನೋಡ ಬಹುದು. ಇದರ ಬಗ್ಗೆ ಡಾ॥ ಪ್ರಭುಶಂಕರ ಅವರು ಹೀಗೆನ್ನುತ್ತಾರೆ : "ಇಂಗ್ಲಿಷಿನಲ್ಲಿ

ಅಷ್ಟೇನೂ ಪ್ರಸಿದ್ಧವಲ್ಲದ ಕವನ ಇದು. ಕನ್ನಡದಲ್ಲಾದರೋ ಮೂಲವನ್ನು ಮೀರಿದ ಪ್ರಖ್ಯಾತಿಯನ್ನು ಪಡೆದಿದೆ." ಇಂಥ ಕ್ರಾಂತಿಕಾರಿ ಪರಿಣಾಮಗಳನ್ನು ಉಂಟುಮಾಡಿದ ಇನ್ನೊಂದು ಸಂಕಲನ ಬಹುಶಃ ಬೇರಾವುದೇ ಭಾಷೆಯಲ್ಲೂ ಕಾಣಿಸಿಕೊಂಡಿಲ್ಲ. ಈ ದೃಷ್ಟಿಯಿಂದಲೂ ಇಂಗ್ಲಿಷ್ ಗೀತಗಳು ಕನ್ನಡದ ಅಪೂರ್ವ ಸಾಧನೆ. ಹೋಮರನ ಕಾವ್ಯದ ಅನುವಾದದ ಸಂದರ್ಭದಲ್ಲಿ ಅನುವಾದಕನೊಬ್ಬ ಹೊಸದಾಗಿ ಬಳಸಿದ ಛಂದಸ್ಸು "ಇಂಗ್ಲಿಷ್ ಕಾವ್ಯದ 'ಪಾತ್ರ'ವನ್ನೇ ಬದಲಾಯಿಸಿಬಿಟ್ಟಿತು" ಎಂದು ಹೇಳಲಾಗಿದೆ. ಕನ್ನಡದಲ್ಲಿ ಇಂಥ ಇತಿಹಾಸವನ್ನು ಸೃಷ್ಟಿಸಿದ ಕೃತಿ 'ಇಂಗ್ಲಿಷ್ ಗೀತಗಳು'.

ಹೀಗಾಗಿ ಇಂಗ್ಲಿಷ್ ಗೀತಗಳು "ಪ್ರಕಟವಾದ ಗಳಿಗೆ ಅಮೃತ ಗಳಿಗೆ ; ಅದನ್ನು ರಚಿಸಿದ ಹಸ್ತ ಅಮೃತ ಹಸ್ತ" ಎಂದು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರೂ : "ಹೊಸ ಕವನಗಳಿಗೆ ಮಾರ್ಗದರ್ಶಕವಾಗಿ, ... ಭಾವಗೀತೆಗಳ ಭಾಷಾಂತರಕ್ಕೊಂದು ಕೈಪಿಡಿಯಾಗಿ, ಅಕ್ಲಿಷ್ಟ ಪ್ರಸನ್ನ ಕಾವ್ಯಶೈಲಿಗೆ ಮಾದರಿಯಾಗಿ ನಿಲ್ಲುವುದು" ಎಂದು ದ. ರಾ. ಬೇಂದ್ರೆಯವರೂ ; "ಅವರು ತೆರೆದ ಮಾರ್ಗದಲ್ಲಿ ಕನ್ನಡ ಕವಿತೆ... ಸೆರೆಗೊಂಡು ಹರಿಯಿತು" ಎಂದು ತೀ. ನಂ. ಶ್ರೀಯವರೂ; "ಹುಟ್ಟಿದೊಡನೇ ಮಕುಟರತ್ನದಂತೆ ಕನ್ನಡದಲ್ಲಿ ಹೊಳೆಯತೊಡಗಿದ ಕೆಲವೇ ಕೃತಿಗಳಲ್ಲಿ 'ಇಂಗ್ಲಿಷ್ ಗೀತ'ಗಳೂ ಒಂದು" ಎಂದು ವಿ. ಕೃ. ಗೋಕಾಕ್ ಅವರೂ ಬಗೆಬಗೆಯಾಗಿ ಹಾಡಿ ಹೊಗಳಿರುವುದರಲ್ಲಿ ಅತಿಶಯೋಕ್ತಿಯೇನೂ ಇಲ್ಲವೆಂದೇ ಅನ್ನಿಸುತ್ತದೆ. ಇಂಥ ಮಾತನ್ನು ಹಲವು ಕೃತಿಗಳ ವಿಷಯದಲ್ಲಿ ಹೇಳಲಾಗುವುದಿಲ್ಲ. 'ಇಂಗ್ಲಿಷ್ ಗೀತ'ಗಳು ಅಂಥ ವಿರಳ ಐತಿಹಾಸಿಕ ಕೃತಿ – ಈ ಮಾತಿನ ಎಲ್ಲ ಅರ್ಥಗಳಲ್ಲಿಯೂ.

## ಅಶ್ವತ್ಥಾಮನ್

ಇಂಗ್ಲಿಷ್ ಗೀತಗಳು ಕನ್ನಡ ಕಾವ್ಯಕ್ಷೇತ್ರದಲ್ಲಿ ಕ್ರಾಂತಿಯನ್ನೆಸಗಿದ ಕೃತಿಯಾದರೆ, ಅದಕ್ಕಿಂತಲೂ ಒಂದು ಕೈಮಿಗಿಲಾಗಿ ಕನ್ನಡ ನಾಟಕಗಳ ಕ್ಷೇತ್ರದಲ್ಲಿ ಕ್ರಾಂತಿಯನ್ನು – ಅಷ್ಟೇ ಏಕೆ ಕೋಲಾಹಲವನ್ನು – ಉಂಟುಮಾಡಿದ ಕೃತಿ 'ಅಶ್ವತ್ಥಾಮನ್'. ಇದು ರೂಪಾಂತರ ವಿಧಾನದ ಅತ್ಯುತ್ತಮ ನಿದರ್ಶನವಾಗಿ ಉಳಿದುಕೊಂಡಿದೆ. ಇದರ ಬಗ್ಗೆ ಎ. ಎನ್. ಮೂರ್ತಿರಾಯರು ಒಂದೆಡೆ ಹೀಗೆ ಹೇಳಿದ್ದಾರೆ : "ಅಶ್ವತ್ಥಾಮನ್ ಕನ್ನಡ ರಂಗಭೂಮಿಯ ಮೇಲೆ ಆಳವಾದ ಪ್ರಭಾವ ಬೀರಿದೆ. ಶ್ರೀಕಂಠಯ್ಯನವರು ಇದನ್ನು ವಿಧೇಯ ಭಾಷಾಂತರವಾಗಿಸಿದ್ದರೆ – ಹೀಗೆ ಮಾಡುವುದು ಅವರಿಗೆ ಸುಲಭವಾಗಿತ್ತು – ಇದು ಸಾಧ್ಯವಾಗುತ್ತಿರಲಿಲ್ಲ."

ಇದಕ್ಕೆ ಮೂಲ ಪ್ರೇರಣೆ ದೊರೆತಿರುವುದು ಸೋಫೋಕ್ಲೀಸನ 'ಏಜಾಕ್ಸ್' ಅಥವಾ 'ಅಯಾಸ್' ನಾಟಕದಿಂದ. ಶ್ರೀಯವರು ಗ್ರೀಕ್ ಸಾಹಿತ್ಯದತ್ತ ಆಕರ್ಷಿತ

ರಾಗಿ, ಕ. ವೆಂ. ರಾಘವಾಚಾರ್ ಅವರೊಡನೆ ಗ್ರೀಕ್ ಭಾಷೆಯ ಅಭ್ಯಾಸದಲ್ಲಿ ತೊಡಗಿದ್ದರೆಂದು ವಿ. ಸೀತಾರಾಮಯ್ಯನವರು ಹೇಳಿದ್ದಾರೆ. ರಂಗಣ್ಣನವರಂತೂ ಗ್ರೀಕ್ ಸಾಹಿತ್ಯ ಅವರ ಮೇಲೆ ಬೀರಿದ ಅದ್ಭುತ ಪ್ರಭಾವವನ್ನು ಕುರಿತು ಹೀಗೆಂದಿದ್ದಾರೆ: "No part of literature, Western or Eastern, exercised such a magic pull over Professor Srikantia as ancient Greek Tragedy. Perhaps he regarded it as the acme of poetry. He very much longed to pay it an appropriate tribute which would be consummate and matchless. After sufficient brooding meditation he contrived to hatch a strange, extra-ordinary and astonishing winged verse-drama. He christened it *As'vatthaman.*" ಇದಕ್ಕೆ ಸಿದ್ಧತೆಯಾಗಿ ಶ್ರೀಯವರು 'ಮಹಾಭಾರತ'ವನ್ನು ಆಳವಾಗಿ ಅಧ್ಯಯನ ಮಾಡಿದರು. ದ್ರೋಣಪರ್ವ, ಕರ್ಣಪರ್ವ, ಶಲ್ಯಪರ್ವ ಮತ್ತು ಸೌಪ್ತಿಕ ಪರ್ವಗಳನ್ನು ಶ್ರೀಕಂಠಯ್ಯನವರಿಗೆ ತಾವು ಓದಿ ಹೇಳಿದುದಾಗಿಯೂ, ಆಗ ಅವರು ವ್ಯಾಪಕವಾಗಿ ಟಿಪ್ಪಣಿಗಳನ್ನು ಸಿದ್ಧಪಡಿಸಿಕೊಂಡರೆಂದೂ ಡಿ. ವಿ. ಜಿ. ಯವರು ಉಲ್ಲೇಖಿಸಿದ್ದಾರೆ.

ಈ ಎಲ್ಲ ಅಧ್ಯಯನ ಮತ್ತು ಚಿಂತನಗಳ ಫಲವಾಗಿ 'ಅಯಾಸ್'ನ ರೂಪಾಂತರವೆಂಬಂತೆ 'ಅಶ್ವತ್ಥಾಮನ್' ನಾಟಕವನ್ನು ಅವರು ಸೃಜಿಸಿದರು. ಅಲ್ಲಿಯ ಪಾತ್ರಗಳಿಗೆ ಸಂವಾದಿಯಾಗಿ ಅವರು ಕಲ್ಪಿಸಿಕೊಂಡ ಪಾತ್ರಗಳು: (೧) ಅಯಾಸ್ – ಅಶ್ವತ್ಥಾಮನ್; (೨) ಟ್ಯೂಸರ್ – ಏಕಲವ್ಯ; (೩) ಯೂರಿಸೇಕ್ಸ್ – ರುದ್ರಶಕ್ತಿ; (೪) ಟೆಕ್‌ಮೆಸ್ಸ – ಭಾರ್ಗವಿ; (೫) ಮೆನೆಲಾಸ್ ಮತ್ತು ಅಗಮೆಮ್ನನ್ – ಭೀಮ; (೬) ಒಡ್ಯೆಸ್ಯೂಸ್ – ಕೃಷ್ಣ; ಮತ್ತು (೭) ಅಥೀನೆ – ರುದ್ರ.

ತನ್ನನ್ನು ಮೀರಿ ಒಡ್ಯೆಸ್ಯೂಸ್‌ಗೆ ಗೌರವವನ್ನು ಸಲ್ಲಿಸಿದ್ದಕ್ಕಾಗಿ ಅಯಾಸ್ ತನ್ನ ಪಕ್ಷದವರ ವಿರುದ್ಧ ತಿರುಗಿಬಿದ್ದ; ಹಾಗೂ ತಮ್ಮ ಸೈನ್ಯ ಶತ್ರುಗಳ ನಾಡಿನಲ್ಲಿ ಬೀಡುಬಿಟ್ಟಿದ್ದ ಅವಧಿಯಲ್ಲಿಯೇ ತನ್ನ ಪ್ರತೀಕಾರ ಕ್ರಮಗಳನ್ನು ಕೈಗೊಂಡ – ಈ ಎರಡು ಅಂಶಗಳಲ್ಲಿ 'ಅಯಾಸ್' ನಾಟಕದ ಕಥಾನಕಕ್ಕಿಂತ 'ಅಶ್ವತ್ಥಾಮನ್' ನಾಟಕದ ಕಥಾನಕವೇ ಭಿನ್ನವಾಗಿದೆ. ಇವನ್ನು ಬಿಟ್ಟರೆ, ಉಳಿದಂತೆ ಶ್ರೀಯವರು ಅಂಕದಿಂದ ಅಂಕಕ್ಕೆ 'ಅಯಾಸ್' ನಾಟಕವನ್ನೇ ಯಥಾವತ್ತಾಗಿ ಅನುಸರಿಸಿದ್ದಾರೆ. ದೈವವನ್ನು ನಿರ್ಲಕ್ಷಿಸಿ ಅಶ್ವತ್ಥಾಮನ್ ಸೆಟೆದು ನಿಲ್ಲುವುದು, ಉನ್ಮಾದವಶನಾಗಿ ಹತ್ಯೆಯಲ್ಲಿ ತೊಡಗುವುದು, ಅರಿವು ಮೂಡಿದಾಗ ಅವನಲ್ಲಿ ಜುಗುಪ್ಸೆ ಮೂಡುವುದು, ಆತ್ಮಹತ್ಯೆ, ಶವಕ್ಕೆ ಅಂತಿಮ ಸಂಸ್ಕಾರಗಳನ್ನೆಸಗುವ ವಿಷಯದಲ್ಲಿನ ವಿವಾದ, ಅಶ್ವತ್ಥಾಮನ ಹಿರಿಮೆಯನ್ನು ಗುರುತಿಸಿ ಸಂಸ್ಕಾರಗಳನ್ನೆಸಗುವುದು – ಹೀಗೆ ಘಟನೆಗಳ ಕ್ರಮ 'ಅಯಾಸ್' ನಾಟಕದ ಹಾದಿಯಲ್ಲೇ ಸಾಗುತ್ತದೆ.

ರೂಪಾಂತರ ವಿಧಾನವನ್ನು ಆಶ್ರಯಿಸಿದ್ದರಿಂದ ಶ್ರೀಯವರು ಮೂಲಕ್ಕೆ ಸಂಪೂರ್ಣವಾಗಿ ಜೋತುಬೀಳಬೇಕಾದ ನಿರ್ಬಂಧವಿರಲಿಲ್ಲ. ಮೂಲದ ಧಾಟಿಯಲ್ಲಿ, ಮೂಲದ ಆಶಯವನ್ನು ಗ್ರಹಿಸಿ. ಮೂಲದ ಮಾತುಗಳನ್ನೂ ಬಳಸಿಕೊಂಡು ಮುಂದೆ ಸಾಗುವ ಸೌಲಭ್ಯ-ಸ್ವಾತಂತ್ರ್ಯ ಅವರಿಗಿತ್ತು. ಇದನ್ನು ಅವರು ಅನುಪಮವಾದ ರೀತಿಯಲ್ಲಿ ನಿರ್ವಹಿಸಿದ್ದಾರೆ. ಉದಾಹರಣೆಗೆ, ಇಂಗ್ಲಿಷ್ ಮೂಲದ ಮೊದಲ ಅಂಕದಲ್ಲಿನ ಹಲವು ಮಾತುಗಳು ಶ್ರೀಯವರ ರೂಪಾಂತರದಲ್ಲಿ ಹೇಗೆ ನುಸುಳಿಕೊಳ್ಳುತ್ತವೆ ಎಂಬುದನ್ನು ನೋಡಬಹುದು :

i) ಒಡ್ಯೈಸ್ಯೂಸ್ :

“Voice of Athena, *dearest to me of the immortals* ... I hear thy call and seize it in my soul.”

ಕೃಷ್ಣನ್ :

“ಎನ್ನೊಡೆಯ ಅಮರರೊಳ್ ಎನಗೆ ಪರಮಪ್ರೇಮಿ, ಓ ರುದ್ರ, ನಿನ್ನಾತ್ಮವ್ ಎನ್ನುಸಿರ್ ; ...”

ii) ಒಡ್ಯೈಸ್ಯೂಸ್ ;

“*Some-times I recognise the foot-prints* as his ; but *some-times I* am bewildered and *cannot* read whose they are.”

ಕೃಷ್ಣನ್ :

“... ಒರ್ಮೆ ಕಾಣ್ಬುದು ಪಜ್ಜೆ, ಒರ್ಮೆ ಕಾಣದು.”

iii) ಒಡ್ಯೈಸ್ಯೂಸ್ :

“*And why was his insensate hand put forth so fiercely ?*”

ಕೃಷ್ಣನ್ :

“ಏಕೆ ಕೈಯಿಟ್ಟನೋ ಇಂತಪ್ಪ ಘೋರದೊಳ್ !”

iv) ಅಥೀನೆ :

“ ‘*twas in your blood, as he deemed, that he was dyeing his hand.*”

ರುದ್ರ :

“ನಿಮ್ಮೆಲ್ಲರನ್ ಕೊಂದೆನ್ ಎಂಬುದೇ ಅವನೆಣಿಕೆ.”

v) ಒಡ್ಯೆಸ್ಸ್ಯೂಸ್ :

*"What cause, then, stayed his eager hand from murder ?"*

ಕೃಷ್ಣನ್ :

"ಆರ್ ತಡೆದರ್ ಆ ಕೊಲೆಯು ಕಯ್ಯ್ಯನ್ ?"

vi) ಅಥೀನೆ :

"[... Then he fell on, and dealt death among the horny throng, as he hewed them to the earth around him; ... And while the man raved in the throes of frenzy, I still urged him, hurled him into the toils of doom. ... he bound together the living oxen, with all the sheep, and brought them home, as though his captives were men, not goodly kine. And now he torments them, bound together, in the house ...] *But to thee also will I show this madness openly...*"

ರುದ್ರನ್ :

"[ಮೇಲ್ಬಿಟ್ಟು ತುಱುಗಳನ್ ತಱಿದನ್, ಕುದುರೆಯುಮನ್ ಕೊರಲೊಂಕಿ ಕೊಱೆದನ್, ಆನೆಯೊಂದನ್ ತಟ್ಟಿ ... ಅದರ ಕಾಲ್ಮುಱಿದು, ಬಲ್ಪಿಣನನ್ ಒದೆದೊದೆದು ಬಿಸುಟನ್ ... ಕೊಂಕುಳೊಳ್ ಕುಱಿಯೊಂದನ್ ಇಱುಕಿ ... ಬೀಡಿಂಗುಯ್ದು ಹಿಂಸಿಸುತ್ತಿರ್ಪನ್. ಸುತ್ತಲುಂ ಬೀರರೇದಟ್ಟಿ ತಂದವು ಪಶುಗಳ್ ಇಱಿಂದು ಕೆಡೆದಿರ್ಕುಂ ...] ತೋರುವೆನ್ ಪೆರ್ಚಿದಾ ಪರ್ಚನ್."

vii) ಒಡ್ಯೆಸ್ಸ್ಯೂಸ್ :

*"What dost thou Athena ? Never call him forth ?"*

ಕೃಷ್ಣನ್ :

"ಏನ್ ಮಾಟ್ಪೆ, ಓ ರುದ್ರ, ಕರೆಯದಿರ್, ಕರೆಯುದಿರ್."

viii) ಅಥೀನೆ :

*"What is danger ? Was he not a man before ?"*

ರುದ್ರನ್ :

"ಏನ್ ಭಯಂ ? ಮರ್ತ್ಯನ್ ಅವನ್ ಈಗಳುಂ !"

xi) ಒಡ್ಯೆಸ್ಸ್ಯೂಸ್ :

"*Yea, a foeman* to thy servant, and *still is.*"

ಕೃಷ್ಣನ್ :

"ಮರ್ತ್ಯನೇ – ಆದೊಡೆನಗರಿಯು ಪಗೆ."

x) ಅಥೀನೆ :

"And *to mock at foes – is not that the sweetest mockery.*"

ರುದ್ರನ್ :

"ನಗೆ ಇನಿದು – ಪಗೆಗಳನ್ ನಗುವ ನಗೆ."

ಇದೇ ರೀತಿ, ಅಂತಿಮ ದೃಶ್ಯದಲ್ಲಿಯೂ ಮೂಲದ ಹೆಜ್ಜೆಯನ್ನೇ 'ಅಶ್ವತ್ಥಾಮನ್' ಹೇಗೆ ಅನುಸರಿಸುತ್ತದೆಂಬುದನ್ನು ನೋಡಬಹುದು :

i) ಒಡ್ಯೆಸ್ಸ್ಯೂಸ್ :

*"...hence forth I am ready to be his friend as staunch as I was once a foe. And I would join in the burying of your dead, and part-take your cares, and omit no service which mortals should render to the noblest among men."*

ಕೃಷ್ಣನ್ :

"ಪಿಂದೆ ಪಗೆ, ಮುಂದೆ ಕೆಳೆ. ನಿಮ್ಮೊಡನೆ ಕೂಡುವೆನ್ ಸಂಸ್ಕಾರ ಕರ್ಮದೊಳ್ ?
ವೀರಂಗೆ, ಧೀರಂಗೆ, ರುದ್ರಾವತಾರಂಗೆ ಸೇವೆಯನ್ ಸಲಿಸುವಂ."

ii) ಒಡ್ಯೆಸ್ಸ್ಯೂಸ್ :

*"I accept thy decision, and depart."*

ಕೃಷ್ಣನ್ :

"ನಿನ್ನ ತೀರ್ಪಿಂಗಿದೋ ತಲೆವಾಗಿ ಪೋಗುವೆನ್."

iii) ಟ್ಯೂಸರ್ :

"Enough, *already the delay hath been long drawn out*. Come haste, some of you dig the hollow grave ; place, some, the high set caldron girt with fire in readyness for holy ablution, and let another band bring the body-armour from the tent. And thou,

ಅನು :

"ಸೊರ್ಕು ನುಡಿ ನುಡಿಯುದಿರ್, ಕಾಣದೇ ಈ ಪಾಡು ?"

viii) ಮೂಲ :

*"but if a god send harm, verily e'en the base man can elude the worthier."*

ಅನು :

"ದೈವಂ ತಪ್ಪಾಗಿ ನಡೆಸುವೊಡೆ, ಕಲಿ ಎಡಪುವನ್, ಪೇಡಿ ಬರ್ದುಕುವನ್, ನಗುವನ್."

ix) ಮೂಲ :

*"The gifts of enemies are no gifts, and bring no good."*

ಅನು :

"ಪಗೆಯು ಮೆಚ್ಚೊಂದು ಮೆಚ್ಚಲ್ತು, ಒಳ್ಳಿತಾಗದು."

x) ಮೂಲ :

*"For to most men the haven of friendship is false."*

ಅನು :

"ಮನುಜಂಗೆ ಸ್ನೇಹವೆಂಬುದು ಪುಸಿಯು ನಚ್ಚು."

ಮೂಲದಲ್ಲಿ ಗ್ರೀಕರಿಗೆ ಪ್ರಿಯವಾದ ಸೆಲಾಮಿಸ್‌ನ ಸುಂದರವಾದ ವರ್ಣನೆ "O famous Salamis, thou ... hast thy happy seat among the waves that lash thy shore ..." ಎಂದು ಮೊದಲಾಗಿ ಕಾಣಿಸಿಕೊಳ್ಳುವ ಭಾಗದಲ್ಲಿ ಶ್ರೀಯವರ ಹೃದಯದಲ್ಲಿ ಅಡಗಿರುವ ಕವಿಚೇತನ ಗರಿಗೆದರಿ, ಬನವಾಸಿಯ ಮನಮೋಹಕ ವರ್ಣನೆಯನ್ನೇ ಸೂರೆಗೊಡುತ್ತದೆ ; ಆ ಮೂಲಕ ಕಥಾನಕಕ್ಕೆ ಸ್ಥಳೀಯ ಬಣ್ಣವನ್ನು ಲೇಪಿಸಿ ಕಂಗೊಳಿಸುವಂತೆ ಮಾಡುತ್ತದೆ. ಆ ವರ್ಣನೆ ಹೀಗಿದೆ :

"ಚೆಲ್ವಿನ ನೆಲೆ, ಕಣ್ಗಳ ಬಲೆ, ಸುಖದೋಜತೆಯ ಬನವಾಸೀ,
ಬಳೆದಲೆದಾ ಕಾನ್‌ಮಲೆಗಳನ್ ಆನ್ ಮಱೆತಿವೆನೆ, ಬನವಾಸೀ !
ಭಾರತದೀ ಸುಱಿಗಾಳಿಗೆ ಸಿಲ್ಕುತೆ ನಾನ್ ತರಗಾದೆನ್ ;
ಪೆಱೆ ತುಂಬುತೆ, ಪೆಱೆ ತೇಯುತೆ, ಮನೆಗಾಣದೆ ಬಡವಾದೆನ್ ;

ನಿನ್ನನೆ ನೆನೆನೆನೆದೋ ತಾಯ್, ಪಂಬಲಿಸುವ ನೋವೊಂದೇ !
ಇನ್ನೆನಗೇನ್ ಆಸೆಗಳೋ, ಪಾರ್ವುದು ನಾನ್ ಸಾವೊಂದೇ !"

ಇದೇ ರೀತಿ, ಸಂದರ್ಭಗಳು ಅವಕಾಶವನ್ನೊದಗಿಸಿದಾಗ, ಶ್ರೀಯವರ ಕವಿ ಚೇತನ ತನ್ನ ಕಾಣ್ಕೆಯ ಸುಂದರ ಸೂಕ್ತಿಗಳನ್ನು ಮೂಲದೊಡನೆ ಬೆಸೆದು ನಿಲ್ಲಿಸುತ್ತದೆ ; ಸನ್ನಿವೇಶ ಮತ್ತಷ್ಟು ಪ್ರಭಾವಶಾಲಿಯಾಗುವಂತೆ ಮಾಡುತ್ತದೆ. ಉದಾಹರಣೆಗೆ, ಭೀಮ ಮತ್ತು ಏಕಲವ್ಯರ ಈ ಸಂವಾದವನ್ನು ನೋಡಬಹುದು :

ಮೂಲ : Menelaus :

*"The bowman, me thinks, hath no little pride."*

Teucer :

*"Even so ; 't is no sordid craft that I posses."*

ಅನು : ಭೀಮನ್ :

**"ಏನ್ ಬಿಂಕಂ, ಕಾಡ ಬಿಲ್ಗಾಜನದು !"**

ಏಕಲವ್ಯನ್ :

**"ಗದೆ ಬೀಸುವಂತಲ್ತು, ಭೀಮ, ಬಿಲ್ವೆಸನ್. ನುಡಿಯಿಸಲ್
ಬಲ್ಲಂಗೆ ಬಿಲ್ಲೊಂದು, ಮೇಣ್ ಬೀಣೆಯೊಂದು."**

ಅಂತೆಯೇ, ಮೇಳನಾಯಕನ ಮಾತಿನಲ್ಲಿ ಬರುವ,

"ಕರ್ಮವ್ ಈ ಪರಿ ಮಱಿಗೆ ಮಱಿ ಇಕ್ಕುತಿರ್ಕುಂ.
ಕ್ಷಮೆಯಿಂದೆ ಸಮೆಯದಿರೆ ಮಱುಕೊಳಿಸುತಿರ್ಕುಂ."

– ಎಂಬ ಮಾತುಗಳು ಮೂಲದಲ್ಲಿ ಇಲ್ಲದ, ಶ್ರೀಯವರ ಮೌಲಿಕ ಸುಭಾಷಿತ.

ರೂಪಾಂತರದ ಈ ವಿಧಾನದ ಅಂಗವಾಗಿ ಮೂಲವನ್ನು ಶ್ರೀಯವರು ಅಲ್ಲಲ್ಲಿ ಸಂಕ್ಷೇಪಿಸಿರುವುದುಂಟು; ಅಗತ್ಯಾನುಗುಣವಾಗಿ ವಿಸ್ತರಿಸಿರುವುದೂ ಉಂಟು. ಆದರೆ, ಇಲ್ಲೆಲ್ಲ ಅದರ ಔಚಿತ್ಯಪ್ರಜ್ಞೆ ಜಾಗೃತವಾಗಿ ಉಳಿದುಕೊಂಡಿದ್ದು, ಒಟ್ಟಿನಲ್ಲಿ ಮನಮೋಹಕವಾಗಿರುವಂಥ ಸೃಷ್ಟಿಯೊಂದಕ್ಕೆ ಕಾರಣವಾಗಿ ಪರಿಣಮಿಸಿದೆ.

ಇಲ್ಲಿ ಇನ್ನೊಂದು ಪ್ರಶ್ನೆ ಏಳಬಹುದು. ಶ್ರೀಯವರು ಮೂಲದ ವಿಷಯದಲ್ಲಿ ಇಷ್ಟೊಂದು ಸ್ವತಂತ್ರವಾಗಿ ನಡೆದುಕೊಂಡಿರುವುದು ಸರಿಯೆ ? ಹೀಗೆ ಮಾಡುವುದ ರಿಂದ ಮೂಲಕ್ಕೆ ಅವಿಧೇಯತೆಯನ್ನು ತೋರಿದಂತಾಗಿಲ್ಲವೆ ಎನ್ನಿಸಬಹುದು. ಆದರೆ, ರೂಪಾಂತರ ವಿಧಾನದಲ್ಲಿ ರೂಪಾಂತರಕಾರ ವಿಧೇಯನಾಗಿರಬೇಕಾಗಿರುವುದು ಮೂಲದ ಅಕ್ಷರಕ್ಕಲ್ಲ, ಅದರ ಹಿಂದೆ ಅಡಗಿರುವ ಭಾವಕ್ಕೆ, ಆಶಯಕ್ಕೆ, ಮನೋ

ಧರ್ಮಕ್ಕೆ. ಈ ಹಾದಿಯಲ್ಲಿ ಮುನ್ನಡೆದು ಅವನು ತನ್ನ ಪ್ರತಿಭಾವಿಲಾಸವನ್ನು ಮೆರೆಯಬಹುದು. ಶ್ರೀಯವರು ಇಂಥ ಅನುಪಮ, ಸುಂದರ ಸಾಹಸವನ್ನು ಮೆರೆದಿದ್ದಾರೆ; ಅದರಲ್ಲಿ ಅದ್ವಿತೀಯವಾದ ಯಶಸ್ಸನ್ನೂ ಗಳಿಸಿದ್ದಾರೆ.

ಅನುವಾದದ ಒಂದು ಪ್ರಕಾರವಾಗಿ 'ಅಶ್ವತ್ಥಾಮನ್' ಹೇಗೆ ಒಂದು ಅಭೂತಪೂರ್ವ ಸೃಷ್ಟಿಯಾಗಿದೆ ಎಂಬುದಷ್ಟೇ ಇಲ್ಲಿ ಪ್ರಕೃತವಾಗಿರುವ ಸಂಗತಿ. ಹೀಗಾಗಿ, ಇತರ ಅಂಶಗಳನ್ನು ಉದಾಹರಣೆಗೆ ಅಶ್ವತ್ಥಾಮನ ಪಾತ್ರದಲ್ಲಿ ಮಾಡಿರುವ ಬದಲಾವಣೆಗಳು (ಅವನು ಚಿರಂಜೀವಿಯೆಂಬ ಸಾಂಪ್ರದಾಯಿಕ ಕಲ್ಪನೆಯನ್ನು, ನಂಬಿಕೆಯನ್ನು ನಿರ್ಲಕ್ಷಿಸಿ, ಅವನು ಕೊನೆಯಲ್ಲಿ ಆತ್ಮಹತ್ಯೆಮಾಡಿಕೊಳ್ಳುವುದು, ಇತ್ಯಾದಿ), ಕೃಷ್ಣನನ್ನು ಚಿತ್ರಿಸಿರುವ ಬಗೆ (ಕುತಂತ್ರಿ ಎಂಬಂತೆ), ಆ ಕಾಲದಲ್ಲಿ 'ಅಶ್ವತ್ಥಾಮನ್' ಉಂಟು ಮಾಡಿದ ತೀಕ್ಷ್ಣ ಪ್ರತಿಕ್ರಿಯೆ, ನಡೆದ ವಾದ-ವಿವಾದಗಳು, ಇವೇ ಮೊದಲಾದ ಸಂಗತಿಗಳನ್ನು ಪ್ರಸ್ತಾವಿಸಲು ಹೋಗಿಲ್ಲ. ಇಂಥ ಒಂದು ವಿಶಿಷ್ಟ ಕಾರ್ಯಕ್ಕೆ ಕೈಹಾಕಿದಾಗ, ತೀಕ್ಷ್ಣ ಸಂವೇದನೆಯ ಕವಿ. ಅಧ್ಯಯನಶೀಲ ವಿದ್ವಾಂಸ ಮತ್ತು ಅನನ್ಯ ಪ್ರತಿಭಾವಂತ ಅನುವಾದಕ – ಈ ಮೂರು ಶಕ್ತಿಗಳ ಸಂಗಮದಿಂದ ಹೇಗೆ ಒಂದು ಅಪೂರ್ವ ಕಾಂತಿಯ ಕಲಾಕೃತಿಯೊಂದು ಮೂಡಿತು ಎಂಬುದನ್ನಷ್ಟೆ ಇಲ್ಲಿ ನಿರೂಪಿಸಲಾಗಿದೆ.

ಶ್ರೀಯವರು ಇಚ್ಛಿಸಿದ್ದರೆ ಸೋಫೋಕ್ಲೀಸನ ಈ ನಾಟಕದ ಯಥಾವತ್ತಾದ, ಸೃಜನಾತ್ಮಕವಾದ ಅನುವಾದವನ್ನೇ ಕೊಡಬಹುದಾಗಿತ್ತು; ಹಾಗೆ ಮಾಡುವುದು ಅವರಿಗೆ ಸುಲಭವೂ ಆಗುತ್ತಿತ್ತು. ಆದರೆ, ಹಾಗೆ ಮಾಡದೆ. ರೂಪಾಂತರ ವಿಧಾನದಲ್ಲಿ ಅನುವಾದಕ ವಹಿಸಬಹುದಾದಷ್ಟು ಸ್ವಾತಂತ್ರ್ಯವನ್ನೇ ಔಚಿತ್ಯಪೂರ್ಣವಾಗಿ ಬಳಸಿಕೊಂಡು, ಅನುವಾದಗಳ ಇತಿಹಾಸದಲ್ಲಿ, ಅಷ್ಟೇ ಏಕೆ, ಕನ್ನಡ ನಾಟಕಸಾಹಿತ್ಯದ ಇತಿಹಾಸದಲ್ಲಿ – ಅಜರಾಮರವಾಗಿ ಉಳಿಯುವಂಥ ಅಪೂರ್ವ ಕೃತಿಯೊಂದನ್ನು ಕನ್ನಡಿಗರಿಗೆ ನೀಡಿ ಕೃತಾರ್ಥರಾಗಿದ್ದಾರೆ. ಕಾಲವನ್ನೇ ಮೀರಿ ನಿಂತು ಅದು ತನ್ನ ಸತ್ವವನ್ನು ಸಾರಿದೆ. ಇಂಥ ಕೃತಿ ದೊರೆತದ್ದು ಕನ್ನಡಿಗರ ಪುಣ್ಯ ಎಂದರೂ ಅತಿಶಯೋಕ್ತಿಯಾಗಲಾರದು.

**ಪಾರಸಿಕರು**

ಗ್ರೀಕ್ ನಾಟಕಗಳ ಬಗೆಗಿನ ಶ್ರೀಯವರ ಒಲವು ಅವರನ್ನು ಇನ್ನೊಬ್ಬ ಗ್ರೀಕ್ ಮಹಾಕವಿಯತ್ತ ಎಳೆದು ತಂದಿತು. ಈಸ್ಕಿಲಸ್ ಈ ಬಾರಿ ಅವರನ್ನು ತನ್ನತ್ತ ಸೆಳೆದಿದ್ದ. ಇಂಗ್ಲಿಷ್ ಗೀತಗಳನ್ನು ಅನುವಾದಕ್ಕೆ ಆಯ್ದುಕೊಳ್ಳುವಾಗ, ಅತ್ಯುತ್ತಮವಾದುವನ್ನು ಮಾತ್ರವೇ ಆಯ್ದುಕೊಳ್ಳದೆ, ಯಾದೃಚ್ಛಿಕವಾಗಿ ವರ್ತಿಸಿದಂತೆಯೇ, ಈಸ್ಕಿಲಸ್ ಮಹಾಕವಿಯ ಕೃತಿಯೊಂದನ್ನು ಅನುವಾದಕ್ಕೆ ಆಯ್ದುಕೊಳ್ಳುವಾಗಲೂ

ಉತ್ತಮ ಆಯ್ಕೆಯ ಅಭಿರುಚಿಯನ್ನು ತೋರಲಿಲ್ಲ ಎಂದು ವಿಮರ್ಶಕರು ಆಕ್ಷೇಪಿಸಿರುವುದುಂಟು ; ಆಶ್ಚರ್ಯಪಟ್ಟಿರುವುದೂ ಉಂಟು. ಅಷ್ಟೇ ಅಲ್ಲ, ಸೋಫೋಕ್ಲೀಸನ ಕೃತಿಯ ವಿಷಯದಲ್ಲಿ ಮಾಡಿದಂತೆ, ರೂಪಾಂತರವಾಗಿ ಇದನ್ನೇಕೆ ಕೊಡಲು ಯತ್ನಿಸಲಿಲ್ಲ ಎಂದು ಪ್ರಶ್ನಿಸಿರುವುದೂ ಉಂಟು. ಈ ಪ್ರಾಕ್-ಕಲ್ಪನೆಯ ಪ್ರಶ್ನೆಗಳು ಒಂದು ದೃಷ್ಟಿಯಲ್ಲಿ ಅಪ್ರಕೃತ. ಅವರು ಮಾಡಿರುವ ಕಾರ್ಯ ಎಷ್ಟರ ಮಟ್ಟಿಗೆ ಯಶಸ್ವಿಯಾಗಿದೆ ಅಥವಾ ಆಗಿಲ್ಲ ಎಂಬುದಷ್ಟೇ ಸದ್ಯಕ್ಕೆ ಪ್ರಕೃತವಾಗಿರುವ ವಿಚಾರ. ಈ ದೃಷ್ಟಿಯಿಂದ 'ಪಾರಸಿಕರು' ಕೃತಿಯನ್ನು ಇಲ್ಲಿ ಪರಿಶೀಲಿಸಲಾಗಿದೆ.

'ಪಾರಸಿಕರು' ಈಸ್ಕಿಲಸನ ಉತ್ತಮ ಕೃತಿಯೇ ಅಲ್ಲವೆಂಬುದರಲ್ಲಿ ಅನುಮಾನವೇನೂ ಇಲ್ಲ. ಅದನ್ನು ನೋಡಿದಾಗ, "*Persae* is unredeemed weeping and wailing, breast-beating and lachrymation; it is a long-drawn plaintive dirge rather than an emboldening and inspiring tragic drama" ಎಂಬ ಅನುಭವ ಓದುಗರಿಗೆ ಉಂಟಾಗುವುದು ಸಹಜವೆ. ಶ್ರೀಯವರ ಪ್ರಯೋಗಶೀಲತೆಯ ಒಲವೇ ಇಂಥ ಒಂದು ಕೃತಿಯನ್ನು ಅನುವಾದಕ್ಕೆ ಆಯ್ದುಕೊಳ್ಳುವುದಕ್ಕೆ ಕಾರಣವಾಗಿದ್ದಿರಬೇಕು. 'ಇಂಗ್ಲಿಷ್ ಗೀತಗಳು' ಮೂಲಕ ಹೊಸ ದಿಗಂತಗಳನ್ನು ತೆರೆದುತೋರಿದ ಹಾಗೂ 'ಅಶ್ವತ್ಥಾಮನ್' ಮೂಲಕ ರೂಪಾಂತರ ವಿಧಾನದ ಅತ್ಯುತ್ತಮ ಆದರ್ಶವನ್ನು ಸ್ಥಾಪಿಸಿದ ಶ್ರೀಯವರು ಹೊಸ ಬಗೆಯ ಐತಿಹಾಸಿಕ ಕೃತಿಯೊಂದನ್ನು ಸೃಜನಾತ್ಮಕ ಸ್ವರೂಪದಲ್ಲಿ ಕನ್ನಡಿಸಿಕೊಡುವ ಪ್ರಯತ್ನವನ್ನು ಕೈಗೊಳ್ಳಲು ಇಚ್ಛಿಸಿದಾಗ ಈಸ್ಕಿಲಸನ 'ಪಾರಸಿಕರು' ಅವರ ಗಮನವನ್ನು ಸೆಳೆಯಿತು. ಉತ್ತಮೋತ್ತಮ ಕೃತಿಯನ್ನೇ ಆಯ್ದುಕೊಳ್ಳಬೇಕೆಂಬ ಛಲವೇನೂ ಅವರಲ್ಲಿ ಇದ್ದಂತೆ ತೋರುವುದಿಲ್ಲ. *Persae*(ಅಥವಾ *Persians*)ನಂಥ ಕೃತಿಯೊಂದಿಗೆ ತಮ್ಮ ಪ್ರಯೋಗವನ್ನು ಮುಂದುವರಿಸಬಹುದೆಂದು ಅವರು ಭಾವಿಸಿದರೇನೋ. ಮಾಡಿದ್ದನ್ನೆ ಮಾಡುವ ಜಾಯಮಾನದವರು ಅವರಾಗಿರದೆ ಇದ್ದುದರಿಂದ, ಬಹುಶಃ ಮತ್ತೆ *Persae*ಯನ್ನು ರೂಪಾಂತರವಾಗಿ ಮುಂದಿರಿಸುವ ಯೋಜನೆಯನ್ನು ಅವರು ಇಟ್ಟುಕೊಳ್ಳಲಿಲ್ಲವೇನೋ. ಅಥವಾ ಪೌರಾಣಿಕ ಸ್ವರೂಪದ 'ಅಯಾಸ್'ಅನ್ನು ರೂಪಾಂತರಿಸಿದಂತೆ, *Persae*ಯನ್ನು ರೂಪಾಂತರಿಸುವುದು ಉಚಿತವಲ್ಲವೆಂದೂ ಅವರಿಗೆ ಅನ್ನಿಸಿರಬಹುದು. ಏಕೆಂದರೆ, *Persae* ಹೇಳಿ ಕೇಳಿ ಒಂದು ಐತಿಹಾಸಿಕ ನಾಟಕ. ಹೀಗಾಗಿ, "ಶ್ರೀಯವರು ಇಲ್ಲಿ ಹೆಸರುಗಳನ್ನೂ, ಆವರಣವನ್ನೂ ಬದಲಾಯಿಸುವ ಸ್ವಾತಂತ್ರ್ಯವನ್ನೂ ವಹಿಸಲಿಲ್ಲ." ಅಂತೂ ಕಾರಣಗಳು ಏನಾದರೂ ಆಗಿರಲಿ, ಶ್ರೀಯವರು ಮತ್ತೊಮ್ಮೆ ಅನುವಾದಕರಾಗಿ ಕಾಣಿಸಿಕೊಂಡಿದ್ದಾರೆ. ಅಷ್ಟೇ ಅಲ್ಲ, ಸೃಜನಶೀಲ ಅನುವಾದಕರಾಗಿ ಇದು ಅವರ ಕೊನೆಯ ಹಾಗೂ ಮಹತ್ವದ ಪ್ರಯತ್ನವೂ ಹೌದು.

'ಪಾರಸಿಕರು' ಶ್ರೀಯವರ ಗ್ರೀಕ್ ಭಾಷಾ-ಸಾಹಿತ್ಯಗಳ ಪರಿಚಯವನ್ನು ಸ್ಪಷ್ಟಪಡಿಸುವ ನಾಟಕವೂ ಆಗಿದೆ. ಈ ನಾಟಕದಲ್ಲಿನ ಪಾತ್ರಗಳ ಹೆಸರನ್ನು ಇಂಗ್ಲಿಷ್ ಮೂಲದಿಂದ ತೆಗೆದುಕೊಳ್ಳದೆ ಬಹುಶಃ ಗ್ರೀಕ್ ಮೂಲದಿಂದಲೇ ತೆಗೆದುಕೊಂಡಿರ ಬಹುದೆಂಬುದನ್ನು ಇಂಗ್ಲಿಷ್ ಉಚ್ಚಾರಣೆ ಹಾಗೂ ಶ್ರೀಯವರು ಅಂಗೀಕರಿಸಿರುವ ಉಚ್ಚಾರಣೆಗಳ ನಡುವಣ ವ್ಯತ್ಯಾಸದಿಂದಲೇ ಅರಿಯಬಹುದಾಗಿದೆ :

| ಪಾತ್ರ | ಇಂಗ್ಲಿಷ್ ಉಚ್ಚಾರಣೆ | ಶ್ರೀಯವರು ಅಂಗೀಕರಿಸಿರುವ ರೂಪ |
|---|---|---|
| Atossa | ಅತೋಸ್ಸ | ಹುತೌಶ |
| Darius | ಡೇರಿಯಸ್ | ದರ್‍ಯವುಷ್ |
| Xerxes | ಕ್ಸರ್ಕ್ಸ್‌ಸ್ | ಕ್ಷಯಾರ್ಷ |

ಈ ನಾಟಕವನ್ನು ಕೈಗೆತ್ತಿಕೊಳ್ಳುವ ಹೊತ್ತಿಗೆ ಅನುವಾದಕರಾಗಿ ಶ್ರೀಯವರು ಸಿದ್ಧಹಸ್ತರೆನ್ನಿಸಿಕೊಂಡಿದ್ದುದರಿಂದ, ಈ ನಾಟಕದ ಅನುವಾದ ತುಂಬ ಸುಂದರ ವಾಗಿಯೇ ಮೂಡಿಬಂದಿದೆ. ಆದರೆ, 'ಅಶ್ವತ್ಥಾಮನ್' ಕಡೆಗೆ ವಿಮರ್ಶಕರ ಗಮನ ಹರಿದಷ್ಟು 'ಪಾರಸಿಕರು' ಕಡೆಗೆ ಹರಿದಿಲ್ಲ. ನಾಟಕದ ಗುಣಮಟ್ಟವೂ ಇದಕ್ಕೆ ಕಾರಣ ವಾಗಿರಬೇಕು. ಆದರೂ, ಶ್ರೀಯವರು ತಾವು ಆಯ್ದುಕೊಂಡ ಕೃತಿಗೆ ಅನ್ಯಾಯ ವನ್ನೇನೂ ಎಸಗಿಲ್ಲವೆಂಬುದನ್ನು ತೌಲನಿಕ ಅಧ್ಯಯನ ನಿಸ್ಸಂದೇಹವಾಗಿ ಸ್ಪಷ್ಟ ಪಡಿಸುತ್ತದೆ.

ಮೊದಲಿಗೆ, ಮೇಳದವರ ಸೂಚನೆ ಹಾಗೂ ಅದಕ್ಕೆ ಹುತೌಶ ತೋರುವ ಪ್ರತಿಕ್ರಿಯೆಯ ಭಾಗಗಳನ್ನು ನೋಡಬಹುದು. ಮೂಲ ಹೀಗಿದೆ :

Chorus :

"Words of counsel, reverend mother, neither
to affright thy heart,
Nor to hearten thee unduly, would we speak
Even as thou art.
Go and pray the Gods to extinguish aught
that thou has seen of ill.

* * *

Atossa :

"Surely with a loyal meaning to myself
and house and son,
Thus interpreting my vision, thou the
auspice hast begun,

May fulfillment crown thy pre'sage !
I within my chambers hid,
To the gods and loved ones vanished
will perform what thou dost bid.
Yet one doubt, dear friends, resolve me.
Tell me, Persians, if ye may,
Where about on Earth's wide bosom Athens
lies, as travellers say."

ಕಾವ್ಯದ ಒರತೆಯೇನೂ ಉಕ್ಕದಿರುವಂಥ ಹಾಗೂ ಕೇವಲ ಒಣಮಾಹಿತಿಯನ್ನು ಒಳಗೊಂಡಿರುವಂಥ ಈ ಭಾಗವನ್ನು ಅನುವಾದಿಸುವಲ್ಲಿ ಶ್ರೀಯವರು ಸಂಕ್ಷೇಪಣ ವಿಧಾನವನ್ನು ಅನುಸರಿಸಿದ್ದಾರೆ ; ಆದರೂ ಹೆಚ್ಚಿನ ವಿವರಗಳು ಯಾವುವೂ ತಪ್ಪಿಹೋಗದಂತೆ ನೋಡಿಕೊಂಡಿದ್ದಾರೆ ಎಂಬುದನ್ನು ಈ ಭಾಗದ ಅವರ ಅನುವಾದ ಸ್ಪಷ್ಟಪಡಿಸುತ್ತದೆ :

ಮೇಳ :

"ನಾವು ಪೇಳ್ವುದಿನಿತೆ ತಾಯೆ – ಬೇಡ ಹೆಚ್ಚು ಹೆದರಿಕೆ :
ಹೆಚ್ಚು ನೆಚ್ಚಿಕೆಯೂ ಬೇಡ ; ಪೋಗು, ಬೇಡು ದೇವರನ್ –
ಕೇಡ ಕೆಡಸಿ, ಒಳ್ಪನಿತ್ತು ... ಮಾಡಲೆಂದು ಶ್ರದ್ಧೆಯಿಟ್ಟು ಬೇಡುವ."

ಹುತೌಶ :

"ಒಳ್ ಬಗೆಯೊಳು, ಮಗನ, ನನ್ನ ಮನೆಯ, ಹರಸಿ ನುಡಿದಿರಿ.
ನಿಮ್ಮ ಪುರುಳು ನಡೆಯಲಣ್ಣ. ಹರಕೆ ಇಡಲು ತೆರಳುವೆ.
ತಣಿದು ದೇವತೆಗಳು ಪಿತೃಗಳೆಮ್ಮ ಪೊರೆದು ತಣಿಸಲಿ
ಒಂದುಂ ಮಾತು, ಓ ಕೆಳೆಯರೆ : ಎತ್ತಲಿಹುದುಂ ನೆಲದಲಿ,
ಆ ಪೆಸರಿನ, ಆ ಪೆರ್ಚಿನ ಅಥೆನ ಪುರಿ ತಾನದು."

ಕೆಟ್ಟ ಸುದ್ದಿಯನ್ನು ಕೇಳಿ ತಳಮಳಿಸುವ ಹುತೌಶಳ ಬಗೆಯನ್ನು ಚಿತ್ರಿಸುವ ಈ ಸನ್ನಿವೇಶವನ್ನು ಮೂಲದಲ್ಲಿ ಹೀಗೆ ಚಿತ್ರಿಸಲಾಗಿದೆ :

*"I am stunned to silence ; for such weight of woe*
*Baffles expression, making question dumb."*

ಮೂಲದಷ್ಟೇ ಬಿಗಿಯಾದ ಹಾಗೂ ಪರಿಣಾಮಕಾರಿಯಾದ ರೀತಿಯಲ್ಲಿ ಶ್ರೀಯವರು ಇದನ್ನು ಕನ್ನಡಿಸಿದ್ದಾರೆಂಬುದನ್ನು ಈ ಅನುವಾದ ನಮಗೆ ಖಂಡಿತವಾಗಿಯೂ ಮನಗಾಣಿಸುತ್ತದೆ :

"ಸಾಕು ಸಾಕೀ ಅಳಲು – ಈ ಪರಿಯ ಕೇಡಿಂಗೆ
ಮಾತು ಹೊಮ್ಮದೆ ಬಿಗುತು ಮೂಗಿಯಾದೆನು ನಾನು."

ಅಂತೆಯೇ, ದೈವಬಲ ಇಲ್ಲವಾಗಿದ್ದುದರಿಂದ ಯುದ್ಧದಲ್ಲಿ ಸೋಲು ಅನಿವಾರ್ಯವಾಯಿತು ಎಂಬುದನ್ನು ಚಿತ್ರಿಸುವ –

"*For numbers, be assured, our Asian fleet*
*Lacked not pre-eminence.* The Greeks that day
Had *ten times thirty* ships, where of were ten
Renowned for swiftness. Xerxes, well I wot,
*Led full a thousand,* – and, of noted speed,
Two hundred sail and seven. From such account
Judge if we seemed unequal for that fight.
Some power unearthly swayed the balance there
To countervail advantage for our loss."

– ದೂತನ ಈ ವರದಿಯನ್ನು ಶ್ರೀಯವರು ಎಷ್ಟು ಸುಂದರವಾಗಿ ಕನ್ನಡಿಸಿದ್ದಾರೆ ಎಂಬುದಕ್ಕೆ ಬೇರಾವ ಸಾಕ್ಷಿಯೂ ಬೇಕಿಲ್ಲ. ಭಾವದ ಧಾಟಿಯನ್ನು ಹಿಡಿದು ಅವರ ಅನುವಾದ ಹೇಗೆ ಸಾಗುತ್ತದೆಂಬುದಕ್ಕೆ ಈ ಭಾಗದ ಮೊದಲ ಪಂಕ್ತಿಯ ಅನುವಾದವೇ ಸಾಕು :

"ಸಂಖ್ಯೆಯುಲಿ ಗೆಲ್ಲುವೊಡೆ, ಓ ತಾಯ್, ನಮ್ಮದೇ ಗೆಲ್ಲಂ !
ಹೆಲನರಿಗೆ ಮುನ್ನೂರು ಹಡಗುಗಳು, ಹತ್ತು
ಅದರೊಳಗೆ ಬಲುವೇಗ ಒಂದು ನೂರರ ನೂರು ಶ್ರೀಕ್ಷಯಾರ್ಷಂಗೆ •
ಕಡುವೇಗ ಇನ್ನೂರು ಹಾಯಿಗಳು ಮೇಲೇಳು. ಸಾಲದೇ ನೋಡು
ಕಾಳಗಕೆ ಈ ಮೊತ್ತ ; ಆಳ್ ಮಾಳ್ಪುದೆಲ್ಲವುಂ ಮಾಡಿದೆವು. ದೈವಂ
ಕೆಡಸಿದುದು ಸರಿಯಾಗಿ ತೂಗದೆಯೆ ತೂಲಮನ್. ಪಲ್ಲಸ್ ಅಥೀನೆ
ಕಾಪಾಡಿದಳು ತನ್ನ ಪೊಳಲನ್."

'ನೂರರ ನೂರು' ಎಂಬ ಮಾತಿನಲ್ಲಿ ಸ್ವಲ್ಪ ಅಸ್ಪಷ್ಟತೆ ಇರಬಹುದಾದರೂ, ಉಳಿದಂತೆ ಇಂಗ್ಲಿಷ್ ಮೂಲದ ಯಥಾವತ್ತಾದ ಅನುವಾದ ಇಲ್ಲಿದೆ. "ಆಳ್ ಮಾಳ್ಪುದೆಲ್ಲವೂ ಮಾಡಿದೆವು" ಎಂಬ ವಾಕ್ಯವೊಂದು ಹೊಸದಾಗಿ ಬಂದು ಸೇರಿಕೊಂಡಿದೆ ಎಂಬುದು ನಿಜ. ಆದರೆ, ಇದು ಭಾವದ ಧಾಟಿಗೆ ವಿರುದ್ಧವಾಗಿಯೇನೂ ಇಲ್ಲ. ಬದಲಾಗಿ, ಆ ಭಾವನೆಯನ್ನು ಮತ್ತಷ್ಟು ಬಲಪಡಿಸುವಂಥದೇ ಆಗಿದೆ.

ಇದೇ ರೀತಿ, ದೂತನ

"Never here to fore,
Died in one day so vast a number of men."

ಎಂಬ ಮಾತನ್ನು

"ಅನಿತೊಂದು ಜನಮೊಂದುಮಿದುವರೆಗೆ
ಸತ್ತುದನ್ ಕಾಣನಾ ಸೂರ್ಯನ್"

ಎಂದು ಅನುವಾದಿಸಿಕೊಂಡಿರುವಲ್ಲಿಯೂ ಇದೇ ಅಂಶ ಎದ್ದು ಕಾಣುತ್ತದೆ. ಶ್ರೀಯವರ ಕವಿ ಹೃದಯದ ಸಂಸ್ಪರ್ಶ ಪಡೆದು ನೀರಸ ವರದಿಯೂ ಪರಿಣಾಮಕಾರಿಯಾದ ನುಡಿಯಾಗಿ ಪರಿಣಮಿಸಿದೆ. ಇಂಥಲ್ಲಿ ಚೇತನಾರೋಪಣವೂ ಅಪೇಕ್ಷಣೀಯವೆಂದೇ ಅನ್ನಿಸುತ್ತದೆ.

ಶತ್ರುಗಳ ನಡುವೆ ಸಿಕ್ಕಿಕೊಂಡು ಪಾರಸಿಕರ ಪಡೆ ಹೇಗೆ ನಲುಗಿತು ಎಂಬುದರ ಕರುಳಿರಿಯುವ ಚಿತ್ರಣ ಈ ಮಾತುಗಳಲ್ಲಿ ಅತ್ಯಂತ ಸಹಜವಾಗಿ ಮೂಡಿಬಂದಿದೆ.

"ಅಲ್ಲಿ ಆ ರಾಯಗುವರನ್ ನಿಲಿಸಿದನ್. ಕೈ ಜೇಟಿ – ನಪ್ಪುವರು.
... ಮುಂದಪ್ಪುದನ್ ತಪ್ಪುಗಂಡನ್ .........
ಸಂಜೆ ಕವಿಯದ ಮುನ್ನ, ಮೈ ಜೋಡುಗಳ ತೊಟ್ಟು, ಹಡಗಿಂದ ನೆಗೆದು
ದ್ವೀಪವನ್ ಸುತ್ತಿರಿದು ಮುತ್ತಿದರ್, ಎತ್ತ ತಿರುಗಲು ಇಲ್ಲದವ್ನೋರ್
ಬೀರುಗಲ್ಗಳ್, ಬಿಲ್ಲತಿರುವಿಂದ ಜೀವಮನುಣಲ್ ಬರ್ಪ ಕೋಲ್ಗಳ್
ನೆರನಿರಿಯೆ, ತೊಪ್ಪತೊಪ್ಪನೆ ಕುಪ್ಪೆಯೊಟ್ಟಿದರ್ ..."

ಇಲ್ಲಿ ಮೂಲದ *'helpless prey'* ಮತ್ತು *'badly he saw futurity'* ಮೊದಲಾದ ಮಾತುಗಳೆಲ್ಲ ಎಷ್ಟು ಪ್ರಭಾವ ಪೂರ್ಣವಾಗಿ ಅಳವಟ್ಟಿವೆ ಎಂಬುದನ್ನು ವಿವರಿಸಲೇಬೇಕಾಗಿಲ್ಲ.

ಅನುವಾದ ಒಟ್ಟಿನಲ್ಲಿ ಹೀಗೆ ಸುಂದರವಾಗಿಯೇ ಬಂದಿದೆಯಾದರೂ, ಅಲ್ಲಲ್ಲಿ ಶ್ರೀಯವರು ವಿಸ್ತಾರಾನುವಾದಕ್ಕೂ ಎಡೆಗೊಟ್ಟಿದ್ದಾರೆ. ಭಾವ ಮೈದುಂಬಿ ಬರಬೇಕೆಂಬ ಅವರ ಆಶಯವೇ ಇದಕ್ಕೆ ಕಾರಣವಾಗಿರಬೇಕು. ಉದಾಹರಣೆಗೆ, ಪಡೆ ನಶಿಸಿದುದರ ಬಗೆಗಿನ ದೂತನ –

"Meantime the escaping army suffered loss ..."

– ಈ ವರದಿಯನ್ನು ಶ್ರೀಯವರು

"ದಿನದಿನಕೆ ಸೋರಿದುದು ಸಿರಿಯ ಪಡೆ, ಹಿಂದೆ ಬೆನ್ನಟ್ಟುವರ್
ಪಗೆವರ್ ; ಮೇಲೆರಗಿ ಕುಟ್ಟುವರ್."

– ಎಂದು ವಿಸ್ತರಿಸಿದ್ದಾರೆ.

ಇದಕ್ಕೆ ವಿರುದ್ಧವಾಗಿ, ಕೆಲವೊಮ್ಮೆ ಮೂಲವನ್ನು ಅತಿಯಾಗಿ ಸಂಕ್ಷೇಪಿಸುವುದೂ ಉಂಟು. ಉದಾಹರಣೆಗೆ,

"Know thou, *the grief of griefs is yet to come*
Such dire calamity befell them there,
That more than twice out-weighed what hath been told."

– ಎಂಬುದು

"ಇನ್ನುಮಿರ್ಪುದು ಕೇಳು ; ಕತೆಯೊಳರೆ ಮುಗಿದಿಲ್ಲ –
ಇಮ್ಮಡಿಯ ದುಃಖ."

ಎಂದು ಸಂಕುಚಿತಗೊಂಡಿದೆ ಶ್ರೀಯವರ ಅನುವಾದದಲ್ಲಿ.

ಅಂತೆಯೇ, ಗೋರಿಯಿಂದೆದ್ದು ಬಂದ ದರ್ಯವುಷನ ಪ್ರೇತ ಹೇಳುವ ಮಾತುಗಳು ಕೂಡ ಇದೇ ಬಗೆಯ ಸಂಕ್ಷೇಪಕ್ಕೆ ಒಳಗಾಗಿವೆ. ಮೂಲ ಹೀಗಿದೆ :

"Nay, since *your lament hath drawn me* upward *from my place of rest,*
*Be not awed, but clear and briefly let your trouble be expressed*
Nor prolong the tale unduly, *wherefore are ye sore distressed.*"

ಇದೆಲ್ಲ,

"ಅಂಜಬೇಡ – ಅಳಲ ಪಾಡು ಕರೆಯೆ ಬಂದೆ ಕೆಳಗಣಿನ್
ನಿಡುಹೊತ್ತು ನಿಲ್ಲಲಾರೆ ; ಹೇಳಿ ಬೇಗ – ಏನಳಲ್ ?"

ಎಂದು ಕಾಣಿಸಿಕೊಂಡಿರುವಲ್ಲಿ ಭಾವಸಾಂದ್ರತೆ ಸಾಧಿಸಿದೆಯಾದರೂ, ಸಂಕ್ಷೇಪಣ ಪ್ರಶ್ನಾರ್ಹವಾಗಿಯೇ ಉಳಿಯುತ್ತದೆ. ಏಕೆಂದರೆ ಭಾವವೂ ಸೂಕ್ಷ್ಮವಾಗಿ ಬದಲಾದ ಅನುಭವ ಉಂಟಾಗಬಹುದು. ಹೀಗೆಯೇ, ಇನ್ನೂ ಕೆಲವು ಕಡೆಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳನ್ನು ಗುರುತಿಸಬಹುದಾಗಿದೆ. ಆದರೆ, ಸಂತೋಷದ ಸಂಗತಿಯೆಂದರೆ, ಮೂಲದ ಆಶಯಕ್ಕೆ ಎಲ್ಲಿಯೂ ಭಂಗವುಂಟಾಗಿಲ್ಲ.

ಒಟ್ಟಿನಲ್ಲಿ, 'ಪಾರಸಿಕರು' ಸಾಹಿತ್ಯಕವಾಗಿ ಯಾವ ನೆಲೆ-ಬೆಲೆಗಳನ್ನು ಪಡೆಯಬಹುದೆಂಬುದು ಸಂದೇಹಾಸ್ಪದವಾಗಬಹುದಾದರೂ, ಅದು ಉತ್ತಮ ಅನುವಾದ ಕೃತಿಯೇ ಆಗಿ ಉಳಿಯುತ್ತದೆಂಬುದರಲ್ಲಿ ಸಂದೇಹವಿಲ್ಲ.

ಒಂದು ಮಾತಿನಲ್ಲಿ ಹೇಳಬೇಕೆಂದರೆ, ಅನುವಾದ ಮಾಧ್ಯಮದ ಮೂಲಕ ಸಾಹಿತ್ಯದಲ್ಲಿ ಕ್ರಾಂತಿಯನ್ನುಂಟುಮಾಡಿದ, ಪರಿಮಾಣದಲ್ಲಿ ಕಡಿಮೆಯಾದರೂ ಗುಣದಲ್ಲಿ ಉತ್ತಮವಾಗಿರುವಂಥ ಅನುವಾದಗಳನ್ನು ಸೃಷ್ಟಿಸಿ ಅನುವಾದಗಳಿಗೆ ಹಾಗೂ ಅನುವಾದಕರಿಗೆ ಆದರ್ಶವೊಂದನ್ನು ಮುಂದಿರಿಸಿದ ಅಪೂರ್ವ ಸಾಧಕರೆಂಬುದಾಗಿ ಬಿ. ಎಂ. ಶ್ರೀಕಂಠಯ್ಯನವರ ಹೆಸರು ಅನುವಾದದ ಇತಿಹಾಸದಲ್ಲಿ ಉಲ್ಲೇಖಿತವಾಗುತ್ತದೆ.

# 'ಅಶ್ವತ್ಥಾಮನ್' – ಒಂದು ವಿಮರ್ಶೆ

– ಕಿ. ವೆಂ. ರಾಜಗೋಪಾಲ

೧

ಕನ್ನಡಕ್ಕೆ ಆಚಾರ್ಯ ಬಿ. ಎಂ. ಶ್ರೀಯವರು 'ದುರಂತ'ದ ರೂಪರೇಷೆಯನ್ನು ನೀಡಿದವರು. ಇದರ ಕಲ್ಪನೆಯು ಭಾರತೀಯರಿಗೆ ದೂರವಾಗಿದ್ದ ಕಾರಣ ಸಂಸ್ಕೃತ ನಾಟಕ ಪರಂಪರೆಯಲ್ಲಿ ಕೂಡ ಒಡಮೂಡಲಾರದೆ ಹೋದ ಈ ರೂಪರೇಷೆಯನ್ನು ಆಚಾರ್ಯರು ಇಪ್ಪತ್ತನೆಯ ಶತಮಾನದಲ್ಲಿ ಬೇರೆಯ ಭಾರತೀಯ ಭಾಷೆಗಳಿಗಿಂತ ಮೊದಲು ಬಳಕೆಗೆ ತರಲು ಯತ್ನಿಸಿದರು. ದುರಂತ ವಸ್ತುವಿನ್ಯಾಸಕ್ಕೆ ಅಳವಡುವ ವಸ್ತುವಿದ್ದರೂ ಅದನ್ನು ಮಂಗಳಾಂತ ಮಾಡುವ ಧೋರಣೆ ನಮ್ಮ ಸಂಸ್ಕೃತಿಯ ಜಾಯಮಾನವಾಗಿದ್ದ ಕಾರಣ ಈ ಹಿಂದೆಂದೂ 'ದುರಂತ' ನಾಟಕವು ಒಡಮೂಡಿರಲಿಲ್ಲ. ಆಚಾರ್ಯ ಶ್ರೀಯವರು ಅದನ್ನು ಸಾಧಿಸಿದವರಲ್ಲಿ ಅಗ್ರ ಪಂಕ್ತಿಗೆ ಸೇರುತ್ತಾರೆ.

ಶ್ರೀಯವರಂತೆ ವಿಚಾರಮಾಡುತ್ತಿದ್ದ ಹಲವು ವಿದ್ವಾಂಸರೂ ಅಂದಿನ ದಿನಗಳಲ್ಲಿ ಇದ್ದಿರಲು ಸಾಧ್ಯ. ಉದಾಹರಣೆಗೆ ಬಂಗಾಲದ ಧೀರೇಂದ್ರನಾಥ ಚಟ್ಟೋಪಾಧ್ಯಾಯರು ರಚಿಸಿದ ಷಾಹಜಹಾನ್ ನಾಟಕವು 'ದುರಂತ'ವೆಂಬುದನ್ನು ನೆನೆಯಬಹುದು. ಆದರೆ ಅಲ್ಲಿಯೂ ಷೇಕ್ಸ್‌ಪಿಯರ್‌ನ ಕೃತಿಗಳ ಆಧಾರವು ಕಂಡು ಬರುತ್ತದೆಯೆ ಹೊರತು 'ಗ್ರೀಕ್ ದುರಂತ'ದ ವಿಚಾರವು ಅದರ ವಾಸ್ತವ ರೂಪರೇಷೆಯಿಂದ ಕೂಡಿರುವುದಿಲ್ಲ. ಆಚಾರ್ಯ ಬಿ. ಎಂ. ಶ್ರೀಯರಾದರೆ 'ಗ್ರೀಕ್ ದುರಂತ'ದ ವಸ್ತುವಿನ್ಯಾಸವನ್ನು ಅದರ ಎಲ್ಲಾ ಗುಣಗಳಿಂದಲೂ ಕೂಡಿರುವಂತೆ ಕನ್ನಡದಲ್ಲಿ ಬಳಕೆಗೆ ತರಲು ಸಾಹಸ ಮಾಡಿ ಯಶಸ್ವಿಯಾದರು ಎನ್ನಬಹುದು. ಏಕೆಂದರೆ ಇವರನ್ನು ಅನುಸರಿಸಿದ ಇವರ ಹತ್ತಿರದ ತಲೆಮಾರಿನಲ್ಲಿ ಕುವೆಂಪು ಮೊದಲಾಗಿ, ವಿ. ಸೀ., ಬೇಂದ್ರೆಯಂತಹ ಮೇಧಾವಿಗಳಿಗೆ ಇದರ 'ರುಚಿ' ಹಲ್ಲಿಗಿಳಿದಂತಾಯಿತು. ಇದರ ಫಲವಾಗಿಯೇ, ಕನ್ನಡ ದುರಂತ ನಾಟಕವು ಒಂದು

ಪರಂಪರೆಯನ್ನು ಉಂಟುಮಾಡಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಇತ್ತೀಚಿನ ನಾಟಕಕಾರರಾದ ಗಿರೀಶ್ ಕಾರ್ನಾಡ್, ಲಂಕೇಶ್ ಮತ್ತು ಚಂದ್ರಶೇಖರ ಕಂಬಾರ, ಚಂಪಾ ಮುಂತಾದವರಲ್ಲಿ ಇದರ ಬೆಳವಣಿಗೆಯನ್ನೂ ಕಾಣುತ್ತೇವೆ. ಹೀಗೆ ಶ್ರೀಯವರು ಬಿತ್ತಿದ 'ದುರಂತ'ದ ರೂಪರೇಷೆಯು ವ್ಯಕ್ತಿಯ ದುರಂತದಿಂದ ಹಿಡಿದು ಇಡೀ ಸಮಾಜದ ಸಾಂಸ್ಕೃತಿಕ ವ್ಯಾಪಕತೆಯನ್ನು ಪಡೆದುಕೊಂಡಿರುವುದಂತೂ 'ಕನ್ನಡ ನಾಟಕ'ದ ಹಿರಿಮೆಯನ್ನು ಸಾರಿಹೇಳುತ್ತಿದೆ.

ಆಚಾರ್ಯ ಬಿ. ಎಂ. ಶ್ರೀಯವರು ಸುಮಾರು ೧೯೨೪ರ ವೇಳೆಗೆ ಗದಾಯುದ್ಧವನ್ನು ನಾಟಕರೂಪಕ್ಕೆ ತಂದು ಅದರಲ್ಲಿ 'ದುರಂತ' ವಸ್ತುವಿನ್ಯಾಸದ ಮೊದಲ ಗುರುತನ್ನು ಮಾಡಿ ಅದರ ಪ್ರಯೋಗದ ಕೊರತೆ ಹಾಗೂ ವಸ್ತುವಿನ್ಯಾಸದ ನಿಲುವನ್ನು ಸರಿಪಡಿಸಲು ತೊಡಗಿದಂತೆ, 'ಅಶ್ವತ್ಥಾಮನ್' ರಚನೆಮಾಡಿ ಪ್ರಯೋಗದಲ್ಲಿ ವಿಶೇಷ ಕೀರ್ತಿಯನ್ನು ಪಡೆದುಕೊಂಡರು. ಆದರೆ ಅವರ ಮುಂದಿನ ಕೃತಿಯಾದ ಪಾರಸೀಕರು. ಇವರ ಪಳಗಿದ ಕೈಲಿ ಮೂಡಿದ ಅನುವಾದವಾದರೂ ಸೋತು ಶ್ರೀಯವರ ಕೈ ಕಟ್ಟಿಹಾಕಿದಂತೆ ತೋರುತ್ತದೆ. ಅದು ಹೇಗಾದರೂ 'ಅಶ್ವತ್ಥಾಮನ್' ಮಾತ್ರ ಮುಂದಿನ ತಲೆಮಾರಿಗೆ ಒಂದು 'ಮಾದರಿ' ಕೃತಿಯಾಗಿ ಪರಿಣಮಿಸಿತು.

ಆಚಾರ್ಯರಿಗೆ ಗ್ರೀಕ್ ನಾಟಕದ ರೂಪರೇಷೆಯು ಚೆನ್ನಾಗಿ ಅರ್ಥವಾಗಿದೆ ಎನ್ನುವುದಕ್ಕೆ ಅವರ 'ಅಶ್ವತ್ಥಾಮನ್' ನಾಟಕವೇ ಸಾಕಾದೀತು. ನಮ್ಮ ರಂಗಭೂಮಿಯ ಪ್ರಯೋಗಗಳು ಇನ್ನು ಹಲವಾರು ಕೊರತೆಗಳಿಂದ ಕೂಡಿದ್ದ ಕಾಲದಲ್ಲಿಯೇ ಈ ನಾಟಕದ ಯಶಸ್ಸು ತುಂಬ ಬೆಲೆಯುಳ್ಳದ್ದಾಯಿತು. ಆಗ ಪರದೆಗಳು, ಬೆಳಕಿನ ವ್ಯವಸ್ಥೆ, ರಂಗಪೀಠ(Stage)ದ ಕಲ್ಪನೆ ಕೂಡ ಅಸ್ಪಷ್ಟವಾಗಿದ್ದಾಗ ಇಂತಹ ಪ್ರಯೋಗವೊಂದು ಎಲ್ಲಾ ವಿದ್ವಾಂಸರ (ಸಾಂಪ್ರದಾಯಿಕ ಸುಸಂಸ್ಕೃತರೂ ಸೇರಿ) ಗಮನಕ್ಕೆ ಬಂದು ಹೊಸ ವಿಮರ್ಶಕರನ್ನು ತೊಡಗಿಸುವ ಚೈತನ್ಯವು ಈ ಪ್ರಯೋಗಕ್ಕೆ ಇದ್ದುದು ಮುಖ್ಯ. ಅಲ್ಲದೆ ಹೊಸಗನ್ನಡ ನಾಟಕಕ್ಕೆ ವಿದ್ಯಾವಂತ ಪ್ರೇಕ್ಷಕರನ್ನು ಸಂಗ್ರಹಿಸುವುದರಲ್ಲಿ ಕೂಡ ಈ ಕೃತಿ ಬಹುಮುಖ್ಯ ಪಾತ್ರವನ್ನು ವಹಿಸಿತ್ತೆಂಬುದನ್ನು ಗುರುತಿಸಬೇಕಾಗುತ್ತದೆ. ಅಂದರೆ ಅಂದಿನ ಪರಿಸ್ಥಿತಿಯಲ್ಲಿ (ಸುಮಾರು ೧೯೨೫ರಿಂದ ೩೦ರ ವರೆಗೆ) ಈ ಪ್ರಯೋಗವು ಅದ್ವಿತೀಯವಾಗಿದ್ದಂತೆ ಕಂಡುಬರುತ್ತದೆ.

'ಅಶ್ವತ್ಥಾಮನ್' ನಾಟಕದಲ್ಲಿ ಸಮಕಾಲೀನ ಭಾಷೆಯ ಸಂಭಾಷಣೆಯಿರಲಿಲ್ಲ. ಹಾಡಿನ ಮಟ್ಟುಗಳು ಭಾವಗೀತಾತ್ಮಕವಾಗಿದ್ದರೂ ಪಂಪನನ್ನು ನೆನಪಿಗೆ ತರುವ ಶಾಸ್ತ್ರೀಯತೆಯುಳ್ಳಿತ್ತು. ಅದು ವಾಸ್ತವವಾಗಿ ಸಮಕಾಲಿಕ ನಂಬಿಕೆಗಳಿಂದ ಭಿನ್ನವಾದ ರೀತಿಯಲ್ಲಿ 'ಕ್ಲಾಸಿಕಲ್' ಆಗಿದ್ದು ಅಭಿನಯಿಸುವವರಿಗೂ ಸವಾಲಾಗಿದ್ದಿರಬೇಕು. ಏಕೆಂದರೆ ಇದರ ಪ್ರಯೋಗದಲ್ಲಿ ತೊಡಗಿದವರು ಸಾಮಾನ್ಯರಾಗಿರಲಿಲ್ಲ. ಮುಖ್ಯವಾಗಿ ವಿದ್ವಾಂಸರೇ ಕೈ ಹಚ್ಚಿದ್ದವರು. ಸ್ತ್ರೀ ಪಾತ್ರಗಳಿಗೆ ನಟಿಯರಿರಲಿಲ್ಲ.

ಪಾತ್ರಧಾರಿಗಳಿದ್ದರು. (ಅಶ್ವತ್ಥಾಮನ ಆಜ್ಞೆಯ ಪಾತ್ರವೊಂದೇ ಸ್ತ್ರೀ ಪಾತ್ರವೆಂಬುದನ್ನೂ ಇಲ್ಲಿ ನೆನೆಯಬಹುದು). ಕಥಾನಕವು ಒಂದು ರೀತಿಯಲ್ಲಿ 'ಪಂಪ'ನಿಗೆ ಹತ್ತಿರವಾದ ಚೌಕಟ್ಟನ್ನು ಒಳಗೊಂಡುದಾಗಿದ್ದು, ಆತನು ಕರ್ಣನ ಮತ್ತು ಕೃಷ್ಣನ ಪಾತ್ರಗಳನ್ನು ಗುರುತಿಸಿದ ಧೋರಣೆಯಿಂದ ಕೂಡಿದುದಾಗಿರುವಂತೆ ತೋರುತ್ತದೆ. ಆಚಾರ್ಯರಿಗೆ ಅಶ್ವತ್ಥಾಮನ್ ಬಗ್ಗೆ ಇದ್ದ 'ಮರುಕ' ಅಥವಾ ಆತ್ಮೀಯತೆಯನ್ನು ಕುರಿತು ನಾನು ಹೇಳುತ್ತಿದ್ದೇನೆ. ಆತನು ಕೃಷ್ಣನನ್ನು ಒಂದು ರೀತಿಯ ವಿಮರ್ಶಕನನ್ನಾಗಿ (objective critic) ನೋಡಿರುವುದೂ ಇವರಿಗೆ ಅನುಕೂಲವಾಯಿತೆನ್ನಬಹುದು. ಒಟ್ಟಿನಲ್ಲಿ ಪಂಪನ ಭಾಷೆ, ದೇಶಪ್ರೇಮ, ಭಾಷಾಭಿವ್ಯಕ್ತಿ, ಅಪೂರ್ವ ವಿಶ್ವಾಸದಿಂದ ದುರಂತಪಾತ್ರವನ್ನು (ಕರ್ಣನನ್ನು) ನೋಡುವುದು – ಅಲ್ಲದೆ ಒಂದು ಸಂದರ್ಭವನ್ನು ಒಳಹೊಕ್ಕು ಬಿಡಿಸುವ ಪ್ರತಿಭೆ (ಭಾನುಮತಿಯೊಡನೆ ನೆತ್ತದ ಸರಸ ಮತ್ತು ಭರತ ಬಾಹುಬಲಿಗಳ ಸಂಘರ್ಷಣೆ) – ಜೊತೆಗೆ ಕನ್ನಡವನ್ನು ಅದರ ಛಾಂದಸ್ಸಿಕ ಸಾಮರ್ಥ್ಯಕ್ಕೆ ಪಳಗಿಸುವ ಯತ್ನ – ಇವುಗಳೆಲ್ಲಾ ಶ್ರೀಯವರಿಗೆ ಅನುಕೂಲವಾದ ಸೂಚನೆಗಳನ್ನು ನೀಡಿದ್ದಿರಬೇಕೆನಿಸುತ್ತದೆ. ಅಶ್ವತ್ಥಾಮನ ಪಾತ್ರವನ್ನು ಮಹಾಭಾರತದ ಸಂದರ್ಭದಲ್ಲಿಯೇ ಬದಲಿಸುವ ಧೈರ್ಯ ಕೂಡ ಅವರಿಗೆ ಪಂಪನಿಂದ ದೊರಕಿರುವಂತಿದೆ. ಏಕೆಂದರೆ ನಮ್ಮ ಸಾಂಪ್ರದಾಯಿಕ ನಂಬಿಕೆಗಳಲ್ಲಿ ವಿಶ್ವಾಸವಿದ್ದು ಕೂಡ ಒಂದು ಸಾಂಸ್ಕೃತಿಕ ನಿಲುವನ್ನು (ಅಶ್ವತ್ಥಾಮನ ಪಾತ್ರದಲ್ಲಿನ ಸಾಂಪ್ರದಾಯಿಕತೆಯನ್ನು) ಬದಲಿಸಲು ಅವರು ಸಿದ್ಧರಿದ್ದಿರಲಾರರು. ಅವರ ಶಿಷ್ಯರಾರೂ ಈ ವಿಚಾರವನ್ನು ಎತ್ತದೇ ಇರುವುದರಿಂದ ಈ ಪ್ರಶ್ನೆಗೆ ಉತ್ತರವು ಸಿಕ್ಕಲಾರದು. ಆದರೂ ಆಚಾರ್ಯರ ಸಾಹಸವನ್ನು ಮೆಚ್ಚಿಕೊಳ್ಳಬಹುದಾಗಿದೆ. ಆದರೆ ಆಚಾರ್ಯರು ನಮ್ಮ ಸಾಂಪ್ರದಾಯಿಕ ನಿಲುವಿಗೆ ಒಂದು ಪಾಶ್ಚಾತ್ಯ ತಿರುವನ್ನು (West oriented turn) ಕೊಡಲು ಅವರ 'ಇಂಗ್ಲಿಷ್ ಪ್ರೇಮ'ವು ದಾರಿ ತೋರಿರಬಹುದಾಗಿದೆ. (ಈ ನಿಟ್ಟಿನಲ್ಲಿ ಅವರ 'ಆಳ್ ಬ್ರಿಟಾನಿಯಾ' ಮತ್ತು ಅರಸೊತ್ತಿಗೆಯ ಮೆಚ್ಚಿಗೆಯ ಕೃತಿಗಳನ್ನು ಗುರುತಿಸಬೇಕಾದೀತು.)

ಒಟ್ಟಿನಲ್ಲಿ 'ಅಶ್ವತ್ಥಾಮನ್' ಅಂದಿನ ಪ್ರೇಕ್ಷಕನ ನಿಲುವನ್ನು ಅಲ್ಲಾಡಿಸುವಂಥದಾಗಿದ್ದಿತು. ಅದರಲ್ಲೂ ನಾಯಕನ 'ದುರಂತ-ನಿಲುವು' ಅವರ ಚಿರಂಜೀವತ್ವದ ನಂಬಿಕೆಯನ್ನು ಅಲ್ಲಾಡಿಸುವಂಥದಾಗಿತ್ತು. ಸಂಸ್ಕೃತಿಯ (ಭಾರತೀಯ) ನಿಲುವಿನ ದೃಷ್ಟಿಯಿಂದ ಇಂಥ ಬದಲಾವಣೆ ಚರ್ಚಾಸ್ಪದವಾಗುತ್ತದೆ. ಸಾಹಿತ್ಯವು ನಮ್ಮ ನಿಲುವನ್ನು 'ಅನುಕೂಲಪಡಿಸುತ್ತದೆ' ಎಂದುಕೊಳ್ಳುವುದಕ್ಕಿಂತ 'ಸುಸಂಸ್ಕೃತಗೊಳಿಸುತ್ತದೆ' ಎಂಬ ನಂಬಿಕೆಗೆ ಕೂಡ ಸೇರಲಾರದ ಮಾರ್ಪಾಟಾಗುತ್ತದೆ. ಆದುದರಿಂದ ಅಂದಿನ ದಿನಗಳಲ್ಲಿ 'ಅಶ್ವತ್ಥಾಮನ್' ಸಂಪ್ರದಾಯವಾದಿಗಳಿಂದ ಟೀಕೆಗೆ ಗುರಿಯಾದುದುಂಟು. ಅಂದರೆ ಈ ದುರಂತ ನಾಟಕವು ಇಂದಿಗೂ ತನ್ನ ಸ್ವರೂಪದಲ್ಲಿ

ಪಾಶ್ಚಾತ್ಯ ಧೋರಣೆಯದೇ ಆಗಿರುತ್ತದೆ. ಸಾಹಿತ್ಯ ಮತ್ತು ಸುಧಾರಣೆಗಳನ್ನು ಕುರಿತು ವಿಚಾರ ಮಾಡುವವರು ಸುಧಾರಣೆಯ ಜ್ವಾಲೆ ಹೊತ್ತಿಕೊಂಡಾಗ ಮಾತ್ರ ಅದರ ಸಮಕಾಲಿಕ ಸಾಹಿತ್ಯವು ಅದಕ್ಕೆ ಗಾಳಿ ಹಾಕುತ್ತದೆ ಅಥವಾ ನೆರವಾಗುತ್ತದೆ ಎಂಬುದನ್ನು ಮಾತ್ರ ಮರೆಯಬಾರದು. ಆದುದರಿಂದ ಅಶ್ವತ್ಥಾಮನ್ – ಯಾವುದೇ ಅಪಾಯವನ್ನೂ ಉಂಟುಮಾಡಲಿಲ್ಲ. ಆದರೆ ದುರಂತವಿನ್ಯಾಸದಲ್ಲಿ ಸಾಂಸ್ಕೃತಿಕವಾದ ವಸ್ತುನಿಷ್ಠವಾದುದನ್ನು ಹುಡುಕಲು ಮುಂದಿನವರಿಗೆ ನೆರವಾಯಿತು – ಎನ್ನಬಹುದು. ಇದರ ಫಲವಾಗಿಯೇ ಹೊಸಗನ್ನಡದಲ್ಲಿ ದುರಂತನಾಟಕದ ಪರಂಪರೆ – ಹುಟ್ಟಿ ಬೆಳೆದು ಫಲದಾಯಕವಾಗಿದೆ ಎನ್ನಬಹುದು.

೨

ಸಾಫೊಕ್ಲಿಸನ 'ಏಜಾಕ್ಸ್' ನಾಟಕವನ್ನು ಶ್ರೀಯವರು ಆಯ್ದುಕೊಂಡುದನ್ನು ನಾವು ಮೆಚ್ಚಲೇಬೇಕು. ಏಕೆಂದರೆ ಅದರ ನಾಯಕನಷ್ಟು ಅಗಮೆಮ್‌ನಾನ್ ಕೂಡ ಆಗುವುದಿಲ್ಲ. ಹೆಕ್ಯುಲಸ್‌ನಿಂದ ಭೀಮನ ನೆನಪಾಗುವುದಾದರೂ ಅಷ್ಟೊಂದು ಹತ್ತಿರವಾಗುವುದಿಲ್ಲ. ಅಲ್ಲದೆ 'ಏಜಾಕ್ಸ್' ನಾಟಕದ ಪಾತ್ರಗಳೆಲ್ಲಕ್ಕೂ ಸಮಾನ ಪಾತ್ರಗಳನ್ನು 'ಅಶ್ವತ್ಥಾಮನ್' ಸಂದರ್ಭದಲ್ಲಿ ಒಂದುಗೂಡಿಸಲು ಅನುಕೂಲ ವಾಗಿದೆ. ಆದುದರಿಂದ ಶ್ರೀಯವರ ಜಾಣತನಕ್ಕೆ ಈ ಕೃತಿ ಒರೆ ಹಚ್ಚಿದಂತೆ ಕಂಡು ಬರುತ್ತದೆ.

ನಾನಿಲ್ಲಿ 'ಏಜಾಕ್ಸ್' ನಾಟಕದ ಕಥಾ ಸಾರಾಂಶವನ್ನು ಕೊಡಲು ಇಚ್ಛಿಸುವು ದಿಲ್ಲ. ಏಕೆಂದರೆ ಅದರ ಮತ್ತು ಅನುಶಾಸನಪರ್ವದ ಹೋಲಿಕೆ ಮತ್ತು ವ್ಯತ್ಯಾಸಗಳು ಅವಶ್ಯ ಮೌಲ್ಯಗಳ ದೃಷ್ಟಿಯಿಂದ ಒಂದೇ (Identical) ಆಗುತ್ತವೆ. ಪಾತ್ರಗಳೂ ಹೋಲಿಕೆಯಾಗುವುದರಿಂದ ಸನ್ನಿವೇಶವನ್ನು ಮಾತ್ರ ಕೊಂಚ ತಿರುವು ಮುರುವು ಮಾಡಿ ಅತ್ಯಂತ ಸಮೀಪದ ಬದಲಾವಣೆಗಳನ್ನು ಸಾಧಿಸಲಾಗಿದೆ. ಇಂತಹ ವಸ್ತುವಿನ ಬಲೆಯಲ್ಲಿ ಅನುವಾದಕಾರ್ಯವನ್ನು ಗ್ರೀಕ್ ನಾಟಕದ ಮಾದರಿಯಲ್ಲಿಯೇ ಸಾಧಿಸಿದ್ದಾರೆ.

ಅಶ್ವತ್ಥಾಮನ್ ನಾಟಕವು ಗ್ರೀಕ್ ನಾಟಕ(ಏಜಾಕ್ಸ್)ದ ಹೆಜ್ಜೆಗಳ ಮೇಲೆಯೇ ಮುಂದುವರಿದು ಅದೇ ಗುರಿಯನ್ನು ಮುಟ್ಟುತ್ತದೆ. ಇವರ ಕಥಾನಕ ವನ್ನು ಬದಲಾಯಿಸದಂತೆ ಅಚ್ಚುಕಟ್ಟಾಗಿ ಎರಕಹೊಯ್ದಂತೆ ಸಾಧಿಸಿದ್ದಾರೆ. ಆದರೆ ಅನುವಾದದ ಕಾಲಮಾನ ಮಾತ್ರ ಮೂಲಕೃತಿಗಿಂತ ದೊಡ್ಡದಾಗಿದೆ. ಇದು ಅನಿವಾರ್ಯವೆಂಬುದನ್ನು ಒಪ್ಪಬಹುದು. ಆದರೆ ಪ್ರದರ್ಶನವು ಸುಮಾರು ಒಂದೂವರೆ ಗಂಟೆಯ ಬದಲು ಸುಮಾರು ಎರಡೂವರೆ ಗಂಟೆಗಳಾದಾಗ ಕ್ರಿಯೆಯಲ್ಲಿ ಕೆಲವು ಸನ್ನಿವೇಶಗಳು ದುರ್ಬಲವಾಗುವುದೂ ಸಹಜವಾಗುತ್ತದೆ.

ಇಂತಹ ದೌರ್ಬಲ್ಯವು ಮೇಳಗಳಲ್ಲಿದೆ. ಏಕಲವ್ಯ ಮತ್ತು ಭೀಮರ ನಡುವೆ ಹುಟ್ಟುವ ಕಲಹದಲ್ಲಿ ವಿಳಂಬವಾಗುತ್ತದೆ. ಕೆಲವು ಸ್ವಗತಗಳು ಹೆಚ್ಚು ದೀರ್ಘವಾಗುತ್ತವೆ. ಆದರೆ ಆವೇಶಗಳು (emotions) ಮಾತ್ರ ಬದಲಾಗುವುದಿಲ್ಲ. ಒಂದು ರೀತಿಯಲ್ಲಿ ಕೆಲವು ಸಡಿಲಾಗಿ ನೀಳವಾಗುತ್ತವೆ ಅಥವಾ ಸರಳವಾಗುತ್ತವೆ. ಈ ದೌರ್ಬಲ್ಯಗಳನ್ನು ಅನಿವಾರ್ಯವೆಂದು ಒಪ್ಪಿಕೊಂಡು ಇದರ ಪ್ರಯೋಗವನ್ನು ಗುರುತಿಸಬೇಕಾಗುತ್ತದೆ.

ಇದರ ಪ್ರಯೋಗವನ್ನು ಸಾಧಿಸುವುದು ಅಷ್ಟು ಸುಲಭವಾದುದಲ್ಲ. ಮೊದಲ ಬಾರಿಗೆ ಇದರ ಪ್ರಯೋಗವಾದಾಗಲೂ ಈ ದೌರ್ಬಲ್ಯಗಳು ಇರಲಿಲ್ಲವೆಂದು ಹೇಳಲಾಗುವುದಿಲ್ಲ. ಏಕೆಂದರೆ ಅವುಗಳೆಲ್ಲಾ ನಾಟಕಕ್ರಿಯೆಯಲ್ಲಿ ಸೇರಿಕೊಂಡಿವೆ. ಬಹು ಮುಖ್ಯವಾದ ಸಂದರ್ಭವನ್ನಿಲ್ಲಿ ಪ್ರಸ್ತಾಪಿಸಬಹುದು. ಅದೆಂದರೆ ನಾಯಕನಾದ ಅಶ್ವತ್ಥಾಮನ್ ತನ್ನ ಕತ್ತಿಯನ್ನು ನಾಟಿ ಅದರ ಮೇಲೆ ಹಾರಿಬೀಳುತ್ತಾನೆ – ಎಂಬ ಸಂದರ್ಭವು ಹೇಗೆ ಮಾಡುವುದಕ್ಕೂ ಅಸಾಧ್ಯವಾಗುತ್ತದೆ. ಕತ್ತಿಯನ್ನು ನೆಲದಲ್ಲಿ ನೆಡಬಹುದು, ಅದನ್ನು ಆವೇಶಭರಿತವಾಗಿ ವರ್ಣಿಸಬಹುದು. ಇದರಿಂದ ಆತನ ಸಾವಿಗಿಂತ ಮುಂಚಿನ ತೀಕ್ಷ್ಣತೆ ಸ್ಥಾಪಿತ(establish)ವಾಗುತ್ತದೆ. ಆಗ ಇದ್ದಕ್ಕಿದ್ದಂತೆ ಬೆಳಕನ್ನು ತೆಗೆದು, ಬೆಳಕನ್ನು ಮತ್ತೆ ಬರಿಸುವಷ್ಟರಲ್ಲಿ ಆತನು ಬಿದ್ದಿರುವುದನ್ನೂ ಆತನ ಬೆನ್ನಿನಲ್ಲಿ ಕತ್ತಿಯ ಮೊನೆಯು ಮೂಡಿ ನಿಂತಿರುವುದನ್ನೂ ಕಾಣಿಸಬಹುದು – ಎಂದುಕೊಂಡರೆ ಈ ವಿಚಾರದಷ್ಟು ಸುಲಭವಾಗಿ ಪ್ರೇಕ್ಷಕನನ್ನು ಸಮಾಧಾನಪಡಿಸಲಾಗುವುದಿಲ್ಲ. ಏಕೆಂದರೆ ಈವರೆಗಿನ ನಾಟಕದ ಕ್ರಿಯೆಯಲ್ಲಿ ಅಶ್ವತ್ಥಾಮನು ತನ್ನ ಕತ್ತಿಯ ಮೇಲೆ (ಪರಾಕ್ರಮಿಯಾಗಿ) ಹಾರುವನೆಂಬ ನಿರೀಕ್ಷೆಯೇ ಮುಖ್ಯವಾದ ಕ್ರಿಯೆಯಾಗಿರುತ್ತದೆ. ಅದನ್ನು ಕತ್ತಲಲ್ಲಿ ನಡೆಸುವ ಕಾರಣ ನಿರಾಶೆಯನ್ನು ಪ್ರೇಕ್ಷಕನಿಂದ ದೂರ ಮಾಡಲು ಸಾಧ್ಯವಾಗುವುದಿಲ್ಲ.

ಎರಡನೆಯದಾಗಿ ಅಶ್ವತ್ಥಾಮನ್ ನಾಟಕದಲ್ಲಿ ಬೇಡರ ಪಡೆಯು ಮೇಳವಾಗಿರುವಲ್ಲಿ ಅವರ ನೃತ್ಯ-ಗೀತಗಳು ಯಾವ ರೂಪದ್ದಾಗಿರಬೇಕೆಂಬ ವಿಷಯದಲ್ಲಿ ಸ್ಪಷ್ಟತೆಯಿರುವುದಿಲ್ಲ. ಮಧ್ಯಪ್ರದೇಶದ ಭೀಲರ ರೀತಿನೀತಿಯನ್ನು ಅನುಸರಿಸಿದರೆ ಅಥವಾ ಕರ್ನಾಟಕದ ಬೇಡರ ರೀತಿನೀತಿಯನ್ನು ಅನುಸರಿಸಿದರೆ ಸಾಲದಾದೀತು. ಏಕೆಂದರೆ ಅಂತಹುದು ಗೊಂದಲದಂತಾಗುವುದರ ಸಾಧ್ಯತೆಯೇ ಹೆಚ್ಚು. ಅಲ್ಲದೆ ಮೇಳಗೀತೆಗಳು ಜರುಗುವಲ್ಲಿ ನಾಟಕದ ಮುಖ್ಯ ಕ್ರಿಯೆಯು ತಡೆದು ತಡೆದು ಬೆಳೆಯುವಂತೆ ಆಗುತ್ತದೆ. ಆದುದರಿಂದ ಮೇಳಗಳನ್ನು ಮೊಟಕುಗೊಳಿಸಿ ಅದರ ಕ್ರಿಯೆಯನ್ನು ತೀವ್ರಗೊಳಿಸಲೇಬೇಕಾಗುತ್ತದೆ.

ಮೂರನೆಯದಾಗಿ ಸ್ವಗತಗಳು ನೀಳವಾಗುವುದರಿಂದ ಅದರ ವಿಳಂಬವನ್ನು ತಡೆದುಕೊಳ್ಳಬಲ್ಲ ಪ್ರೇಕ್ಷಕರು ಈಗಂತೂ ದೊರಕುವುದಿಲ್ಲ. ಆದುದರಿಂದ

ಅಶ್ವತ್ಥಾಮನು ತನ್ನ ದುಃಖವನ್ನು ತೋಡಿಕೊಳ್ಳುವ 'ನೀಳತೆ'ಯನ್ನು ಕಡಿಯಲು ಪುನರಾವರ್ತನೆಗೊಳ್ಳುವ ಹಲವು ಅಂಶಗಳನ್ನಾದರೂ ಸ್ವಗತದಿಂದ ಕತ್ತರಿಸಿ ಹಾಕ ಬೇಕಾಗುತ್ತದೆ. ಒಟ್ಟಿನಲ್ಲಿ ನಾಟಕದ ಕ್ರಿಯೆಯನ್ನು ಸುಮಾರು ಒಂದೂವರೆ ಗಂಟೆ ಗಳ ಅವಧಿಗೆ ತಗ್ಗಿಸುವುದರಲ್ಲಿ ತೀಕ್ಷ್ಣತೆಯೂ ಮೂಡಿ ದುರಂತದ ವಾಸ್ತವ ಸಂಕೀರ್ಣತೆಯನ್ನು ಕಾಪಾಡಿಕೊಳ್ಳಲು ಸಾಧ್ಯವಾಗುತ್ತದೆ.

ಅಶ್ವತ್ಥಾಮನ್ ನಾಟಕ ತಾತ್ವಿಕವಾಗಿ ವಿಮರ್ಶಕರ ದೃಷ್ಟಿಯಲ್ಲಿ ಶ್ರೇಷ್ಠ 'ದುರಂತ ಕೃತಿ'ಯಾದರೂ ಕನ್ನಡದ ನಾಟಕಗಳನ್ನು ಪರಿಶೀಲಿಸುವುದಕ್ಕೆ ಒಂದು ಮಾದರಿಯಾಗಲಿಲ್ಲ. ಏಕೆಂದರೆ ಅದರ ಪ್ರದರ್ಶನವೇ ಒಂದು 'ಪಂಡಿತರ ಸವಾಲು' ಆಗಿದ್ದಿತು. ಅದರ ಭಾಷೆಯನ್ನು ಗಮನಿಸಿದರೆ ಅಂತಹುದು ಮುಂದಿನ ನಾಟಕಕಾರ ರಿಗೆ ಸಾಧ್ಯವಾಗಲಿಲ್ಲ. ಒಂದು ರೀತಿಯಲ್ಲಿ ಕನ್ನಡದ ಪ್ರೇಕ್ಷಕರಿಗೆಲ್ಲಾ ಈ ನಾಟಕದ ಭಾಷೆಯು ಬೇರೆಯಾಗಿರುವಂತೆಯೇ ಭಾಸವಾಗಬಹುದು. ಇದರ 'ಭಾಷೆ'ಯನ್ನು ಕಲಿತಲ್ಲದೆ ಅಭಿನಯಿಸುವುದೂ ಕಠಿಣವಾಗುತ್ತದೆ. ಉದಾಹರಣೆಗೆ ಇದಕ್ಕೂ ಸುಲಭ ವಾಗಿರುವ ಗದಾಯುದ್ಧದ ಒಂದು ಪ್ರದರ್ಶನದಲ್ಲಿ 'ಕೌರವಾಚಲ ವಜ್ರನ್' ಎಂಬುದನ್ನು ನಟನು 'ಕೌರವಾ ಚಲವಜ್ರನ್' ಎಂದು ಒಡೆದುಬಿಟ್ಟ ಕಾರಣ ಪಂಡಿತ ಪ್ರೇಕ್ಷಕರು 'ಆಭಾಸವಾಯಿತು' ಎಂದು ಆಕ್ಷೇಪಿಸಿದ್ದಾರೆ. ಅಶ್ವತ್ಥಾಮನ್ ನಾಟಕದಲ್ಲಿ ಇಂತಹ ಉದಾಹರಣೆಗಳು ಅನೇಕ ಬರಬಹುದು. ಅಲ್ಲದೆ ಕೆಲವು ಪದಗಳು ಪುನರಾವರ್ತಿತವಾದರೂ ಅರ್ಥವಾಗುವುದಿಲ್ಲ ಅಂದರೆ ಆಶ್ಚರ್ಯವಿಲ್ಲ. ಆದುದರಿಂದಲೇ ಈ ನಾಟಕದ ಪ್ರಯೋಗಗಳು ಪಂಡಿತವರ್ಗವನ್ನು ಅಥವಾ ವಿಶ್ವವಿದ್ಯಾಲಯದ ಚೌಕಟ್ಟನ್ನು ದಾಟಲಿಲ್ಲ.

ಈ ನಾಟಕವನ್ನು ಯಾರು ಪ್ರಯೋಗಿಸಿದರೂ ಗ್ರೀಕ್ ರಂಗಭೂಮಿಯ ಸ್ಥಿತಿಯನ್ನು ಬಳಸಿಕೊಳ್ಳಬೇಕಾಗುತ್ತದೆ. ಇದರಲ್ಲಿ ಎರಡು ಮುಖ್ಯ ದೃಶ್ಯಗಳು ಬರುವುದರಿಂದ ಆಗಬೇಕಾದ ಬದಲಾವಣೆಯನ್ನು ಸೂಚಿಸಲು ಕಷ್ಟವಾಗುತ್ತದೆ. ಹೇಗೆಂದರೆ ಮೊದಲ ತೆರೆ ಸರಿದಾಗ ಕಾಣುವ ದೃಶ್ಯದಲ್ಲಿ ಪಾಳೆಯದ ಒಂದು ಕೊನೆಯಲ್ಲಿ ಅಶ್ವತ್ಥಾಮನ 'ಬಿಡಾರ'ದ ಮುಂದಿನದಾಗುತ್ತದೆ. ಇದು ನಾಟಕದ ಮೂರು ಪಾಲನ್ನು ಒಳಗೊಳ್ಳುತ್ತದೆ. ನಂತರದ ದೃಶ್ಯದಲ್ಲಿ ಕಡಲ ದಂಡೆ ಬರುವುದ ರಿಂದ ದೃಶ್ಯಜೋಡಣೆಯೇ ಬದಲಾಗಬೇಕಾಗುತ್ತದೆ. ಮೊದಲ ದೃಶ್ಯದ ನಾಟಕ ಕ್ರಿಯೆಯು ಜರುಗಿದ ಸ್ಥಳದಲ್ಲಿಯೇ ಎರಡನೆಯ 'ಕ್ರಿಯೆ' ಜರುಗಬೇಕಾಗುವುದ ರಿಂದ ಪರಿಣಾಮವನ್ನು ಸ್ವಚ್ಛವಾಗಿ ಮೂಡಿಸಲು ಅನುಕೂಲವಾಗಲಾರದು. ಇದನ್ನು ಪ್ರೇಕ್ಷಕರ ಪತಿಯಿಂದ ವಿಚಾರ ಮಾಡಿದರೆ ಮಾತ್ರ ಅರ್ಥಮಾಡಿಕೊಳ್ಳ ಬಹುದು. ಉದಾಸೀನತೆಯಿಂದ ದೃಶ್ಯಗಳನ್ನು ಅಳವಡಿಸುತ್ತಾ ಹೋಗುವ ನಮ್ಮ ಮನೋಧರ್ಮಕ್ಕೆ ಇಲ್ಲಿ ಆತಂಕವಾಗಲಾರದು. ಆದರೆ 'ಕ್ರಿಯೆ'ಯನ್ನು ಎರಡು

ಹಂತಗಳಲ್ಲಿ ಸಾಧಿಸುವ ವಿಚಾರ ಮಾಡಿದರೂ, ಪ್ರೇಕ್ಷಕರ ನೋಟದಲ್ಲಿ ಹಿಂದಕ್ಕೆ ಸರಿಸಬೇಕಾಗುವುದರಿಂದ ಮೊದಲ ಭಾಗದಷ್ಟು ಎರಡನೆಯದು ತೀಕ್ಷ್ಣವಾಗಲಾರದೆ ಹೋಗಬಹುದು. ಅಲ್ಲದೆ ಈ ಎರಡನೆಯದರಲ್ಲಿ ಕ್ರಿಯೆಯ ಓಟ ಕೂಡ ತೀವ್ರಗೊಳ್ಳಬೇಕಾಗುತ್ತದೆ. ಏಕೆಂದರೆ ನಾಟಕದ ಪ್ರಾರಂಭದ ವಿಧಾನವನ್ನು ಅತಿಕ್ರಮಿಸಿದಲ್ಲದೆ ನಾಟಕಕ್ರಿಯೆಗೆ ಕಳೆಕಟ್ಟುವುದಿಲ್ಲ. ವಾಸ್ತವವಾಗಿ ಶ್ರೀಯವರ ಅನುವಾದದಲ್ಲಿ ಈ ಎರಡನೆಯ ದೃಶ್ಯವು ಹೆಚ್ಚು ನಿಧಾನವಾಗುವುದನ್ನು ಗಮನಿಸಬಹುದು. ಹೀಗೆ ಕ್ರಿಯೆಯಲ್ಲಿಯೇ ಆತಂಕಕಾರಿ(ನಿರ್ದೇಶಕರಿಗೆ)ಯಾಗಿರುವುದರಿಂದ ಈ ನಾಟಕವು ಒಂದು ಮಾದರಿಯಾಗಿ ಕನ್ನಡ ರಂಗಭೂಮಿಯ ಬೆಳವಣಿಗೆಯಲ್ಲಿ ಅವಿಭಾಜ್ಯವಾಗಿ ಉಳಿಯಲಾರದೆ ಹೋದುದನ್ನು ಗುರುತಿಸಬೇಕಾಗಿದೆ.

ಇಂದಿಗೂ ಈ ನಾಟಕವು ಪ್ರೇಕ್ಷಕರ ಸಹಾನುಭೂತಿಯನ್ನು ಕೋರುವ ಶ್ರೇಷ್ಠ ನಾಟಕವಾಗಿದೆ ಎಂದರೆ ಸರಿಯಾದೀತು. ಒಂದು ರೀತಿಯಲ್ಲಿ ಅನುವಾದವಾದರೂ 'ಪ್ರತಿಮಾಕೃತಿ'ಯಾಗಿರುವುದರಿಂದ ಇದರ ಅಚ್ಚುಕಟ್ಟನ್ನು ಒಳಗೊಂಡ ಮತ್ತೊಂದು ಕನ್ನಡ ನಾಟಕ ಇಲ್ಲವೆಂದೇ ಹೇಳಬೇಕು. ಇಂಥ ರೂಪರೇಷೆ (frame work)ಯನ್ನು ಒಂದು ಮಾದರಿಯಾಗಿರಿಸಿಕೊಳ್ಳುವುದೂ ಕಷ್ಟಸಾಧ್ಯವಾಗುತ್ತದೆ. ವಾಸ್ತವವಾಗಿ ನಮ್ಮ ಮಾತುಕತೆಯಲ್ಲಿ ಮತ್ತು ನುಬಿಕೆಗಳಲ್ಲಿ ಸಾಕಷ್ಟು ಬದಲಾಗಿರುವ ಕಾರಣದಿಂದ ಈ ನಾಟಕದ ರಚನೆಗಿಂತ ಭಿನ್ನವಾದ ಆದರೆ ಇಷ್ಟೇ ಸಂಕೀರ್ಣವಾದ ಕೃತಿಗಳು ಹುಟ್ಟಿಕೊಂಡಿವೆ.

ಅಶ್ವತ್ಥಾಮನ್ ನಾಟಕದ ಒಂದು ಮುಖ್ಯವಾದ ವಿಷಯವೆಂದರೆ ಯಾವುದೇ ವ್ಯಕ್ತಿಯಲ್ಲಿ ಸಂದರ್ಭದಿಂದ ಒಡಮೂಡುವ ಬದಲಾವಣೆಯನ್ನು ತಡೆದುಕೊಳ್ಳಲಾಗದಂತಾದಾಗ ಅಥವಾ ಪ್ರಜ್ಞಾಪೂರ್ವಕವಾಗಿ ಬದಲಾವಣೆಯನ್ನು ತಡೆದುಕೊಳ್ಳಲು ಅಸಾಧ್ಯವಾದಾಗ ಆತ್ಮಹತ್ಯೆಯಂತಹ ಅಪಮೌಲ್ಯಕ್ಕೆ ಬೆಲೆ ಬಂದುಬಿಡುತ್ತದೆ. ಇದನ್ನೇ 'ವಿಧಿ' ಎನ್ನುತ್ತೇವೆ. ಈ ವಿಷಯವನ್ನು ಮಾನಸಿಕ ವಿಜ್ಞಾನದ ದೃಷ್ಟಿಯಿಂದ ಪರಿಶೀಲಿಸಿದರೆ ಅಶ್ವತ್ಥಾಮನ್ ಒಂದು ಅಮೂಲ್ಯ ಉದಾಹರಣೆಯೂ ಆಧಾರವೂ ಆಗಬಲ್ಲ ಕೃತಿಯಾಗಿದೆ. ಆದುದರಿಂದ ಈ ಕೃತಿ ರಂಗಭೂಮಿಯಲ್ಲಿ ಜೀವಂತವಾಗಿರಲು ಅಸಾಧ್ಯವಾಗಿದ್ದರೂ ಓದುಗನಿಗೆ ಓಷವನ್ನು ಉಂಟುಮಾಡಬಲ್ಲ ಕೃತಿಯಾಗಿ ಇಂದಲ್ಲ ನಾಳೆಗೂ ಉಳಿಯಬಲ್ಲುದಾಗಿದೆ.

ಮೇಲಿನ ವಿಚಾರಗಳನ್ನೆಲ್ಲಾ ಮೆಲುಕುಹಾಕುವುದಾದರೆ, ನಮ್ಮಲ್ಲಿ ರಂಗಭೂಮಿಯ ಚಟುವಟಿಕೆಯು ಹೆಚ್ಚಾಗಿ ಮನರಂಜನೆಯ ಹಾದಿಯಲ್ಲಿದ್ದಾಗಲೇ ಶ್ರೀ ಅವರು ಒಂದು ಬೆಲೆಬಾಳುವ ಕೃತಿಯನ್ನು ರಚಿಸಿದುದಲ್ಲದೆ ಪ್ರಯೋಗವನ್ನೂ ಸಾಧಿಸಿದುದು ಎಲ್ಲರೂ ಮೆಚ್ಚಬೇಕಾದ ವಿಷಯವಾಗಿದೆ.

# ಗದಾಯುದ್ಧ ನಾಟಕಂ: ಒಂದು ಪರಿಶೀಲನೆ

– ನಾ. ಗೀತಾಚಾರ್ಯ

ಬಿ.ಎಂ.ಶ್ರೀಯುವರ 'ಗದಾಯುದ್ಧ ನಾಟಕಂ'ಅನ್ನು ಪರಿಶೀಲಿಸುವಾಗ ನಮ್ಮ ಮುಂದೆ ಎರಡು ದೃಷ್ಟಿಗಳು ನಿಲ್ಲುತ್ತವೆ. ಒಂದು, ರುದ್ರನಾಟಕವಾಗಿ ಗದಾಯುದ್ಧ ನಾಟಕ, ಮತ್ತು ಇನ್ನೊಂದು. ರನ್ನನ ಕಾವ್ಯವನ್ನು ಪುನಃ ಸಂಪಾದಿಸುವಾಗ ಒಂದು ಹಸ್ತಪ್ರತಿಯಾಗಿ ಗದಾಯುದ್ಧ ನಾಟಕ. ಈ ಎರಡೂ ದೃಷ್ಟಿಗಳ ಮೂಲಕ ಅಭ್ಯಾಸಮಾಡಿದಾಗಲೇ ಶ್ರೀಯುವರ ಗದಾಯುದ್ಧ ನಾಟಕದ ಪರಿಪೂರ್ಣ ಪರಿಶೀಲನೆ ಸಾಧ್ಯವಾಗುವುದು. ತೀ. ನಂ. ಶ್ರೀಯುವರ ಗದಾಯುದ್ಧ ಸಂಗ್ರಹವನ್ನು ಅಭ್ಯಾಸ ಮಾಡಿರುವ ಯಾರೇ ಆದರೂ ಶ್ರೀಯುವರ ಗದಾಯುದ್ಧ ನಾಟಕದ ಗ್ರಂಥ ಸಂಪಾದನಾ ಮೌಲ್ಯವನ್ನು ಅಲ್ಲಗಳೆಯುವಂತಿಲ್ಲ. ಗದಾಯುದ್ಧ ಕಾವ್ಯದಿಂದ ನಾಟಕಕ್ಕೆ ಬೇಕಾಗುವಷ್ಟು ಪದ್ಯಗಳನ್ನು ಮಾತ್ರ ಆಯ್ದುಕೊಳ್ಳುವಾಗ ಶ್ರೀಯುವರು ಕೇವಲ 'ನಾಟಕ'ದ ದೃಷ್ಟಿಯೊಂದನ್ನೇ ಇಟ್ಟುಕೊಳ್ಳದೆ 'ಸಂಪಾದನಾ' ದೃಷ್ಟಿಯನ್ನೂ ಇಟ್ಟುಕೊಂಡಿರುವುದು ಬಹಳ ಸ್ಪಷ್ಟವಿದೆ. ತೀ.ನಂ. ಶ್ರೀಯವರು ತಮ್ಮ ಸಂಗ್ರಹದಲ್ಲಿ ಶ್ರೀಯುವರ ಪಾಠಗಳನ್ನೇ ಬಹುಮಟ್ಟಿಗೆ 'ಸ್ವೀಕೃತಪಾಠ'ವಾಗಿ ಇಟ್ಟುಕೊಂಡಿರುವುದು ಗ್ರಂಥ ಸಂಪಾದನೆಯಲ್ಲೂ ಶ್ರೀಯವರಿಗಿದ್ದ ಪಾಂಡಿತ್ಯವನ್ನು ತೋರಿಸುತ್ತದೆ. ಈವರೆಗೆ ಪ್ರಕಟವಾಗಿರುವ ಗದಾಯುದ್ಧದ ಪ್ರತಿಗಳನ್ನು ಗಮನಿಸಿದರೆ ಈ ಕಾವ್ಯದ ಸಮಗ್ರವಾದ ಪುನಃ ಸಂಪಾದನೆಯ ಅಗತ್ಯ ಕಂಡುಬರುತ್ತದೆ. ಹಾಗೆ ಸಂಪಾದಿಸುವಾಗ ಶ್ರೀಯುವರ 'ಗದಾಯುದ್ಧ ನಾಟಕಂ' ಬಹಳ ಗಂಭೀರವಾದ ಪಾತ್ರವನ್ನು ವಹಿಸುತ್ತದೆ ಎಂಬುದನ್ನು ಮರೆಯುವಂತಿಲ್ಲ. ಈ ಗ್ರಂಥ ಸಂಪಾದನಾ ದೃಷ್ಟಿ ಮತ್ತು ರುದ್ರನಾಟಕದ ದೃಷ್ಟಿಗಳೆರಡೂ ಪ್ರತ್ಯೇಕ ಲೇಖನಗಳ ವೈಶಾಲ್ಯತೆಯನ್ನು ಪಡೆಯುವುದರಿಂದ ಒಂದೇ ಲೇಖನದಲ್ಲಿ ವಿವರವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಈ ಲೇಖನದಲ್ಲಿ ಗದಾಯುದ್ಧ ನಾಟಕವನ್ನು ರುದ್ರನಾಟಕವನ್ನಾಗಿ ಮಾತ್ರ ನೋಡಲು ಪ್ರಯತ್ನಿಸಿದ್ದೇನೆ.

ಶ್ರೀಯವರ ಎಲ್ಲ ಸಾಹಿತ್ಯಕ ಸಾಧನೆಗಳನ್ನು ನಾವಿಂದು ನೋಡಬೇಕಾಗಿರುವುದು ಅವರಿದ್ದ ಯುಗಧರ್ಮದ ಹಿನ್ನೆಲೆಯಲ್ಲಿ. ಅವರು ಏನೇನನ್ನು ಸಾಧಿಸಿದರೋ ಅವೆಲ್ಲ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹೊಸ ಸೃಷ್ಟಿಗಳೇ ಆದವು. ಸಾಹಿತ್ಯಕ್ಷೇತ್ರದಲ್ಲಿ ಶ್ರೀಯವರು ಕೆಲಸಮಾಡಬೇಕಾದಾಗ ಮುಖ್ಯವಾಗಿ ಎರಡು ಸ್ತರಗಳಲ್ಲಿ ದುಡಿಯಬೇಕಾಯಿತು. ಒಂದು, ಸಾಮಾನ್ಯ ಜನರಲ್ಲಿ ಸಾಹಿತ್ಯದ, ಒಟ್ಟಾರೆ ಕನ್ನಡದ ಅರಿವನ್ನು, ಪ್ರಜ್ಞೆಯನ್ನು ಮೂಡಿಸುವುದು ; ಮತ್ತು ಇನ್ನೊಂದು, ಜ್ಞಾನಿಗಳಾದ (ಪಂಡಿತರಾದ) ಕನ್ನಡಿಗರಲ್ಲೇ ಕನ್ನಡದ ಬಗ್ಗೆ ಇದ್ದ ಅಸಡ್ಡೆತನವನ್ನು, ತಪ್ಪು ಅಭಿಪ್ರಾಯಗಳನ್ನು ಅವರ ಮನಸ್ಸಿನಿಂದ ಕಿತ್ತೊಗೆಯುವುದು. ಶ್ರೀಯವರಿಗೆ ಎರಡನೇ ಸ್ತರದ ಸಮಸ್ಯೆಯನ್ನು ಎದುರಿಸುವುದೇ ಬಹಳ ಮುಖ್ಯವಾದ ಜವಾಬ್ದಾರಿಯಾಗಿತ್ತು. ಇಂಗ್ಲಿಷ್ ಸಾಹಿತ್ಯವನ್ನು ಮುಂದಿಟ್ಟುಕೊಂಡು ಕನ್ನಡದಲ್ಲಿ 'ಏನಿದೆ' ಎಂದು ಪ್ರಶ್ನಿಸಿದ ಜನರನ್ನು ಅದೇ ಸಾಹಿತ್ಯದೊಂದಿಗೆ ಕನ್ನಡ ಸಾಹಿತ್ಯವನ್ನು ಹೋಲಿಸಿ 'ಏನಿಲ್ಲ ?' ಎಂಬ ಮರುಸವಾಲನ್ನು ಹಾಕಿ ಯಶಸ್ವಿಯಾಗಿ ಗೆದ್ದರು ಶ್ರೀಯವರು. ಈ ಹಿನ್ನೆಲೆಯಲ್ಲಿಯೇ ಅವರ ಎಲ್ಲ ಗಂಭೀರ ಸಾಹಿತ್ಯದ ಚಟುವಟಿಕೆಗಳೂ ಬರುತ್ತವೆ. ಕನ್ನಡ ಸಾಹಿತ್ಯ ಚರಿತ್ರೆ, ವ್ಯಾಕರಣ*, ಭಾಷೆ, ಛಂದಸ್ಸುಗಳ ಪುನರ್ ಪರಿಶೀಲನೆ, ಕನ್ನಡ ಸಾಹಿತ್ಯವನ್ನು ಇಂಗ್ಲಿಷ್ ಸಾಹಿತ್ಯದ ಜೊತೆಗಿಟ್ಟು ವಿಮರ್ಶಿಸಿದ ಹೊಸ ದೃಷ್ಟಿ ಎಲ್ಲವೂ ಇದರ ಪರಿಣಾಮವೇ.

ಈ ಕಾರಣಕ್ಕಾಗಿಯೇ ಶ್ರೀಯವರು ಇಂಗ್ಲಿಷ್ ಸಾಹಿತ್ಯದಿಂದ ಮುಖ್ಯವಾಗಿ ಎರಡು ಮಾರ್ಗಗಳನ್ನು ಕನ್ನಡಕ್ಕೆ ತಂದರು. ಒಂದು ನವೋದಯ ಕಾವ್ಯ, ಇನ್ನೊಂದು ದುರಂತ ನಾಟಕ ಕಲ್ಪನೆ. ಷೇಕ್ಸ್‌ಪಿಯರನ ನಾಟಕಗಳಲ್ಲಿ ವಿಶೇಷ ಪ್ರೌಢಿಮೆ ಇದ್ದ ಶ್ರೀಯವರಿಗೆ ಅಂಥದೇ ನಾಟಕ ಕಲ್ಪನೆಗಳು ಕನ್ನಡ (ಭಾರತೀಯ) ಸಾಹಿತ್ಯದಲ್ಲೂ ಇರುವುದು ಸ್ಪಷ್ಟವಾಗಿ ಗೋಚರಿಸಿತು. ಅದು ಬೆಳಕು ಕಾಣದಿದ್ದುದಕ್ಕೂ ಕಾರಣ ಸ್ಪಷ್ಟವಾಗಿತ್ತು. "ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ನಮ್ಮಲ್ಲಿ ದುಃಖಾನುಭವವಾಗಲಿ, ಮೃತ್ಯುವಿನಲ್ಲಿ ಅಮೃತತ್ವವೂ, ದುಃಖಿಮಾನವನಲ್ಲಿ ಆನಂದಮಯದೇವತಾಂಶವೂ ಇರುವುದೆಂಬ ಜ್ಞಾನವಾಗಲಿ ಇಲ್ಲವೆಂದಲ್ಲ, ಬೇಕಾದ ಹಾಗೆ ಹೊರಪ್ರಪಂಚಕ್ಕೆ ಸಾಲ ಕೊಡುವಷ್ಟು ಇದೆ. ಸೀತೆಯು ಜನ್ಮ ಸುಖವಾಗಿತ್ತೆ ? ಪತಿಯಿಂದ ಅಗ್ನಿಪರೀಕ್ಷೆಗೊಳಗಾದಾಗ, ಭೂಮಿಯನ್ನು ಬಾಯಿ ತೆರೆ

---

* ಬಿ.ಎಂ.ಶ್ರೀಯವರನ್ನು ವ್ಯಾಕರಣಕಾರರನ್ನಾಗಿ (ನನ್ನ ಗಮನಕ್ಕೆ ಬಂದಂತೆ) ಗುರುತಿಸಿಲ್ಲ ಎನಿಸುತ್ತದೆ. ವಾಸ್ತವವಾಗಿ ಹೊಸಗನ್ನಡ ವ್ಯಾಕರಣಕ್ಕೆ ಶ್ರೀಯವರೇ ಪ್ರಥಮರು 'ಮಧ್ಯಮ ವ್ಯಾಕರಣ'ಕ್ಕಿಂತ ಮುಂಚೆಯೇ ಕನ್ನಡ ವ್ಯಾಕರಣ ಹೇಗಿರಬೇಕು ಎಂಬುದನ್ನು ಶ್ರೀಯವರು ವಿವೇಚಿಸಿದ್ದಾರೆ. (ನೋಡಿ : ಕನ್ನಡಕ್ಕೆ ಒಂದು ಕಟ್ಟು ಲೇಖನದ ವ್ಯಾಕರಣ ಭಾಗ, ಶ್ರೀ ಸಾಹಿತ್ಯ, ಪುಟ ೨೬೪-೬೫)

ಎಂದು ಪ್ರಾರ್ಥಿಸಿದಾಗ ಆಕೆಯ ಮನೋಭಾವ, ಸನ್ನಿವೇಶ ಮಂಗಳವೇ ? ಅಮಂಗಳವೇ ? ರುದ್ರನಾಟಕವೇ ? ಭದ್ರ ನಾಟಕವೇ ? ಮಹಾಭಾರತ ದುಃಖ ಪೂರ್ಣವಲ್ಲವೇ ? 'ಅಂತೂ ಇಂತೂ ಕುಂತಿ ಮಕ್ಕಳಿಗೆ ರಾಜ್ಯವಿಲ್ಲ' ಇದು ದುರಂತ ವಲ್ಲವೇ ? ದುರ್ಯೋಧನ ಕರ್ಣರು ಬರಿಯ ನೀಚರೇ ? ಪಾಪಿಗಳೇ ? ಇವರ ಅಭಿಮಾನ, ಸಾವು ರುದ್ರನಾಟಕವಲ್ಲವೇ ? ಪಂಪ ರನ್ನರನ್ನು ಕೇಳಿ. ರಾವಣನು ಕರ್ಮದಿಂದ ಕೆಟ್ಟ – ಆದರೂ ಶಲಾಕಾ ಪುರುಷ, ಮುಂದೆ ಮೋಕ್ಷಗಾಮಿ ಎನ್ನುವ ನಾಗಚಂದ್ರನನ್ನು ಕೇಳಿ ... ಹರಿಶ್ಚಂದ್ರನ ಕಥೆ ಗೋಳಿನ ನಾಟಕವಲ್ಲವೇ ? ಭಾಸನ ಊರುಭಂಗದಲ್ಲಿ ದುರ್ಯೋಧನನಿಗಾಗಿ ನಮ್ಮ ಮೆಚ್ಚುಗೆ ಉಕ್ಕುವುದಿಲ್ಲವೇ ? ವ್ಯಾಸನ ಶಕುಂತಲೋಪಾಖ್ಯಾನವನ್ನು ಕಾಳಿದಾಸನು ರುದ್ರನಾಟಕವನ್ನಾಗಿಯೇ ಪರಿಣಮಿಸಬಹುದಿತ್ತಲ್ಲವೇ ? ರಂಗಸ್ಥಳದಲ್ಲಿ ಸಾವು ನೋಡದಿದ್ದರೆ, ದೂತನ ಮೂಲಕ ಕೇಳಿದರೂ ಅಮಂಗಳವೇ ಅಲ್ಲವೇ ? ರಾಮವರ್ಮ ಲೀಲಾವತಿಯಲ್ಲಿ ಸತ್ತ ನಾಯಕ ನಾಯಕಿಯರನ್ನು ತೀರ್ಥ ಚಿಮುಕಿಸಿ ಎಬ್ಬಿಸಿದ ಮಾತ್ರಕ್ಕೆ ಮಂಗಳವೇ ? ಅಮಂಗಳದೊಳಗೇ ಮಂಗಳದೃಷ್ಟಿ ಇದಕ್ಕಿಂತ ದೊಡ್ಡದಲ್ಲವೇ ? ಈ ರಹಸ್ಯವನ್ನು ನಮ್ಮವರು ಅರಿಯರೇ ? ರಂಗಸ್ಥಳದಲ್ಲಿ ಸಾವನ್ನು ನೋಡಲು ಹೆದರಿದರೆ ?"[1] ಎಂಬ ಅವರ ಮಾತಿನಲ್ಲಿ ಈ ಅಂಶ ಸ್ಪಷ್ಟವಿದೆ. ಇಂಥ ದುಃಖಾಂತಗಳನ್ನು ಇಂಗ್ಲಿಷ್ 'ಟ್ರ್ಯಾಜಿಡಿ'ಗೆ ಹೋಲಿಸಿ ನೋಡುವ ಹೊಸ ದೃಷ್ಟಿಯನ್ನು ಅಶ್ವತ್ಥಾಮನ್ ಮತ್ತು ಗದಾಯುದ್ಧ ನಾಟಕಗಳ ಮೂಲಕ ಶ್ರೀಯವರು ಕನ್ನಡಕ್ಕೆ ತಂದರು. ಇದೇ ರೀತಿ ಪಂಪಭಾರತದಿಂದ ಕರ್ಣನನ್ನು ದುರಂತನಾಯಕನನ್ನಾಗಿ ನೋಡುವ ಒಂದು ರುದ್ರನಾಟಕವನ್ನು ಹೆಕ್ಕಬೇಕೆಂಬ ಆಲೋಚನೆ ಶ್ರೀಯವರಲ್ಲಿ ಇದ್ದಂತೆ ತೋರುತ್ತದೆ.[2] ಈ ದೃಷ್ಟಿ ಕನ್ನಡ ಸಾಹಿತ್ಯದಲ್ಲಿ ಮುಂದೆ ಒಂದು ಹೊಸ ವಿಮರ್ಶೆಗೆ ದಾರಿಮಾಡಿ ಕೊಟ್ಟಿತು. "ಈ ನೂತನ ವಿಮರ್ಶಾ ಮಾರ್ಗಪ್ರವರ್ತಕರು ಶ್ರೀಯವರು. ಈ ಮಾರ್ಗವು ಗದಾಯುದ್ಧ ನಾಟಕದಿಂದ ಪ್ರಾರಂಭವಾಯಿತು. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಗದಾಯುದ್ಧ ನಾಟಕದ ಮಹತ್ವವು ಇದೂ ಒಂದು."[3]

ಶ್ರೀಕಂಠಯ್ಯನವರಿಗೆ ಬಹಳ ಹಿಂದಿನಿಂದಲೂ ರನ್ನನ ದುರ್ಯೋಧನನ ಬಗ್ಗೆ ಕನಿಕರವಿತ್ತು ಎಂಬುದನ್ನು ಅವರದೇ ಬರಹಗಳ ಮೂಲಕ ನೋಡಬಹುದು. "ರನ್ನ

---

೧. ಶ್ರೀ ಸಾಹಿತ್ಯ, ಮೈಸೂರು, ವಿಶ್ವವಿದ್ಯಾಲಯ ೧೯೮೪, ರುದ್ರನಾಟಕ, ಪುಟ ೩೨-೨೭.

೨. ಈ ಮಾತುಗಳನ್ನು ನೋಡಿ : "ಪಂಪನ ಕರ್ಣನೂ ಹೀಗೆಯೇ. ಅರಿಕೇಸರಿ ವಿಕ್ರಮಾರ್ಜುನ ನಾಯಕ. ಮೆಚ್ಚುಗೆ, ಹೊಗಳಿಕೆ ಅವನಿಗೆ. ಆದರೆ ಕಣ್ಣೀರು, ನಿಟ್ಟುಸಿರು, ಇನ್ನೊಂದು ಬಗೆಯ ಮೆಚ್ಚುಗೆ, ಹೊಗಳಿಕೆಯೂ ಕರ್ಣನಿಗೆ ! ನೆನೆವೂಡೆ ಕರ್ಣನಂ ನೆನೆಯು" – ಶ್ರೀಸಾಹಿತ್ಯ, ಪುಟ ೪೯.

೩. ಗದಾಯುದ್ಧ ಕಾವ್ಯವೂ – ಗದಾಯುದ್ಧ ನಾಟಕವೂ : ವೆಂಕಟೇಶ ಗೋ. ಕುಲಕರ್ಣಿ; ಸಂಭಾವನೆ (ಪ್ರಥಮ ಮುದ್ರಣ) ಪುಟ : ೮೭.

ನನ್ನು ನೆನೆಸಿಕೊಂಡಾಗಲೆಲ್ಲ ಆತನ ಕಾವ್ಯದಲ್ಲಿ ಎರಡು ಭಾಗಗಳು ನನ್ನ ಹೃದಯ ವನ್ನು ತುಂಬಿ ಕಣ್ಣನ್ನು ಹನಿಗೂಡಿಸುವುದು ; ಗದಾಯುದ್ಧದಲ್ಲಿ ಸ್ನೇಹಮೂರ್ತಿಯಾದ ದುರ್ಯೋಧನನ ಪ್ರಲಾಪನೆ", "ಸಾಹಸಭೀಮ ವಿಜಯದಲ್ಲಿ ಎಲ್ಲದಕ್ಕೂ ಆಶ್ಚರ್ಯಕರವಾದ ವಿಶೇಷವೆಂದರೆ ದುರ್ಯೋಧನನ ಪಾತ್ರದಲ್ಲಿ ರನ್ನನ ಸಹಾನುಭೂತಿ ನೀತಿದೃಷ್ಟಿಯಿಂದಲ್ಲ, ಕರುಣದೃಷ್ಟಿಯಿಂದ"[4] ಎನ್ನುವ ಶ್ರೀಯವರೂ ದುರ್ಯೋಧನನ ಬಗ್ಗೆ ಸಹಾನುಭೂತಿ, ಕರುಣೆ ತೋರಿಸುವುದನ್ನು ನೋಡುತ್ತೇವೆ. ಹೀಗೆ ತಾವು ಕಲ್ಪಿಸಿಕೊಂಡಿದ್ದ ಪಾಶ್ಚಾತ್ಯ ದುರಂತ ನಾಟಕದ ಚೌಕಟ್ಟಿಗೆ[5] ಹೇಳಿ ಮಾಡಿಸಿದಂತಿದ್ದ ರನ್ನನ ದುರ್ಯೋಧನನನ್ನು ಅಳವಡಿಸಿ ಅದಕ್ಕೆ 'ರುದ್ರನಾಟಕ'ದ ಮೆರುಗನ್ನು ಕೊಟ್ಟಿದ್ದಾರೆ. ಇಂಥ ಒಂದು ನಾಟಕ ಕನ್ನಡಕ್ಕೆ ತೀರ ಹೊಸದು. ಹಾಗೆ ನೋಡಿದರೆ 'ನಾಟಕ'ವೇ ಹೊಸದು. ಕನ್ನಡ ಸಾಹಿತ್ಯದಲ್ಲಿ ನಿಜವಾದ ನಾಟಕ ಪ್ರಕಾರವೇ ಇರಲಿಲ್ಲ, ಶ್ರೀಯವರ ಕಾಲದವರೆಗೆ. ಆಗತಾನೆ ಸಂಸ್ಕೃತ. ಇಂಗ್ಲಿಷ್ ಸಾಹಿತ್ಯಗಳಿಂದ ಅಲ್ಲೊಂದು ಇಲ್ಲೊಂದು ನಾಟಕಗಳು ಅನುವಾದಗೊಳ್ಳುತ್ತಿದ್ದವು. ಸುಮಾರು ೧೬೮೦ರ ಸಿಂಗಿರಾರ್ಯನ 'ಮಿತ್ರವಿಂದ ಗೋವಿಂದ', ೧೮೮೭ರ ಸುಮಾರಿನ ಪ್ರಥಮ ಸಾಮಾಜಿಕ ನಾಟಕ 'ಇಗಪ್ಪ ಹೆಗಡೆಯ ವಿವಾಹ ಪ್ರಹಸನ'ಗಳನ್ನು ಬಿಟ್ಟರೆ ಕನ್ನಡ ನಾಟಕ ಕ್ಷೇತ್ರ ಬರೀ ಬಯಲು ಎನ್ನುತ್ತಿದ್ದ ಕಾಲದಲ್ಲೇ ಶ್ರೀಯವರು ರನ್ನನ ಕಾಲದ್ದು ಎನಿಸಿಕೊಳ್ಳುವ ನಾಟಕವನ್ನು ರನ್ನನ ಕಾವ್ಯದಿಂದ ಬೇರ್ಪಡಿಸಿದರು ಎಂಬುದು ಗಮನಾರ್ಹ. ಆವರೆಗಿದ್ದ ಕನ್ನಡ ನಾಟಕಗಳನ್ನು ಕರೆಯುತ್ತಿದ್ದ ಹೆಸರಿನಿಂದಲೇ ಈ ನಾಟಕವನ್ನು ಕರೆಯಲು ಬರುತ್ತಿರಲಿಲ್ಲ. ಆದ್ದರಿಂದ ಶ್ರೀಯವರು ಈ ನಾಟಕಗಳಿಗೆ ಹೊಸ ಹೆಸರನ್ನೇ ನಾಮಕರಣ ಮಾಡಿದರು. "ಡೈನೋಸಿಸನ್‌ಗೆ ಹಲವು ರೀತಿಯಲ್ಲಿ ಸಾದೃಶ್ಯವುಳ್ಳ ಭೂಮಿಗೆ ಅಧಿನಾಯಕನಾದ ಆದರೂ ಮಂಗಳದಾಯಕ

೪. ಶ್ರೀ ಸಾಹಿತ್ಯ, ಪುಟ ೩೪೪ ಮತ್ತು ೪೯೯.

೫. "ಒಬ್ಬ ಪುರಾಣಪುರುಷನ ದುಃಖಮಯ ಚರಿತ್ರೆ ಆತನ ಮದದಿಂದಲೋ, ಕರ್ಮದಿಂದಲೋ, ಕ್ರೂರ ವಿಧಿವಿಲಾಸದಿಂದಲೋ, ತತ್ವಗಳ ಅಥವ ನಾಯಕ ಪ್ರತಿನಾಯಕರ ಹೋರಾಟದಿಂದಲೋ, ಒಬ್ಬ ವ್ಯಕ್ತಿಯ ಒಳ ಹೋರಾಟದಿಂದಲೋ, ಭಾವೋದ್ರೇಕದಿಂದಲೋ, ಯಾವುದೋ ಒಂದು ಬಗೆಯ ಅವಿವೇಕವೋ, ಅಜಾತುರ್ಯವೋ, ಅನ್ಯಾಯವೋ ಉಂಟಾಗಿ ಸಾವಿನಲ್ಲಿ ಪರ್ಯವಸಾನವಾಗಬೇಕು. ಆದರೂ ಮಾನವನ ಗುಣ ಗಾಂಭೀರ್ಯಗಳೂ, ಆತನ ಉದಾತ್ತ ಧ್ಯೇಯಗಳೂ, ಪ್ರೇಕ್ಷಕರಲ್ಲಿ ಸಹಾನುಭೂತಿಯನ್ನೂ, ಮೆಚ್ಚುಗೆಯನ್ನೂ ಉಂಟು ಮಾಡಿ ಸತ್ತರೂ ಒಳ್ಳೆಯ ಸಾವು. ಇದೂ ಸಂಸಾರದ ಸತ್ಯ ದಿಟವಾದ ಜೀವನಚಿತ್ರ. ಈ ಮರಣದ ಧ್ಯಾನ ಮಾಡಿ ಸ್ಥೈರ್ಯಗೊಳ್ಳೋಣ, ಸ್ಥಿತಪ್ರಜ್ಞರಾಗೋಣ: ಹೀಗೆ ಸತ್ತು ಅಮರವಾದ ಈ ನಾಯಕ. ಇಂತಹ ಗುಣ 'ಮೃತ್ಯುಮುಖಾತ್ ಪ್ರಮುಚ್ಯತೇ' – ಎಂಬ ಗಾಢಾನುಭವದಿಂದ ಶಾಂತಿ ರುದ್ರ ನಾಟಕದ ಫಲ. ಕಾರ್ಯವೀರರ ಪಿತೃಗಳ ದೇವತೆಗಳ ಆರಾಧನೆ, ಪ್ರಯೋಜನ – ದುಃಖಾಂತ ಮನಶ್ಶಾಂತಿ ಮೋಕ್ಷ." – ಶ್ರೀ ಸಾಹಿತ್ಯ, ಪುಟ ೩೨೬.

ನಾಗಿ ಭವರೋಗಕ್ಕೆ ಭಿಷಜನಾದ ನಾಟ್ಯ, ನಾಟಕ ಪ್ರದರ್ಶಕನಾದ ರುದ್ರನ ಹೆಸರಿನಿಂದ ಈ ಬಗೆಯ ನಾಟಕವನ್ನು ಕರೆಯಬಹುದೆಂದು ಭಾವಿಸಿ 'ರುದ್ರನಾಟಕ'ವೆಂದು ನಾನು ಗದಾಯುದ್ಧ, ಅಶ್ವತ್ಥಾಮನ್ ಮುಂತಾದ ನಾಟಕಗಳಿಗೆ ಈ ಹೆಸರನ್ನಿಟ್ಟೆನು."[6] ಅನಂತರ ದುರಂತ ನಾಟಕ, ದುಃಖಾಂತ ನಾಟಕ, ವಿಷಾದಾಂತ ನಾಟಕ ಎಂಬ ಕೆಲವು ಮಾತುಗಳು ಬಳಕೆಗೆ ಬಂದರೂ 'ರುದ್ರನಾಟಕ'ದ ಮಟ್ಟಕ್ಕೆ ಇವು ಏರಲಾರವು. ಇಡೀ ನಾಟಕದ ಒಟ್ಟು ಭಾವ ರುದ್ರನಾಟಕ ಪದದಲ್ಲಿ ಅನುಭವಕ್ಕೆ ಬರುವಂತೆ ಉಳಿದ ಪದಗಳಲ್ಲಿ ಬರಲಾರದು ಎನಿಸುತ್ತದೆ.

ಈ ಹಿನ್ನೆಲೆಯಲ್ಲಿ ರನ್ನನ ಕಾವ್ಯದಿಂದ 'ಗದಾಯುದ್ಧ ನಾಟಕ'ವನ್ನು ಸಿದ್ಧಪಡಿಸಲು ಹೊರಟ ಶ್ರೀಯವರಿಗೆ ಅಷ್ಟೇನೂ ಸಮಸ್ಯೆಯಾಗಲಿಲ್ಲ. ರನ್ನನಲ್ಲಿಯೇ ತಮ್ಮ ರುದ್ರನಾಯಕ ಇದ್ದ. ೫೭೬ ಕಂದ ಪದ್ಯಗಳೊಳಗೆಸಿಕ್ಕಿಕೊಂಡಿದ್ದ ಅವನನ್ನು ಬಹಳ ಹುಷಾರಾಗಿ ಬಿಡಿಸಿ ಪ್ರತ್ಯೇಕಿಸುವುದಷ್ಟೇ ಅವರ ಕೆಲಸವಾಗಿತ್ತು. ಅದನ್ನು ನಾಟಕದ ಚೌಕಟ್ಟಿಗೆ ಅಳವಡಿಸುವಾಗ ಎಷ್ಟು ಪಾತ್ರಗಳಿರಬೇಕು, ಎಷ್ಟು ಪದ್ಯಗಳಿರಬೇಕು, ಯಾವ ಪದ್ಯ ಎಲ್ಲಿ ಬರಬೇಕು, ಯಾರ ಬಾಯಲ್ಲಿ ಹೇಳಿಸಬೇಕು ಎಂಬುದರ ನಿರ್ಣಯವಷ್ಟೇ ಶ್ರೀಯವರದು. ಉಳಿದದ್ದೆಲ್ಲವೂ ರನ್ನನದೇ. ಇದು "ರನ್ನನ ಕೃತಿಯಿಂದ ಬೇರ್ಪಡಿಸಿ ತೆಗೆದ ಒಂದು ಭಾಗ" ಎನ್ನುವ ಎ.ಎನ್. ಮೂರ್ತಿರಾಯರ ಮಾತನ್ನು ಇಲ್ಲಿ ಗಮನಿಸಬಹುದು.

ಈ ಗದಾಯುದ್ಧ ನಾಟಕದಲ್ಲಿ ಶ್ರೀಯವರು ವಹಿಸಿರುವ ಬಹಳ ಮುಖ್ಯವಾದ ಸ್ವಾತಂತ್ರ್ಯವೆಂದರೆ ರನ್ನನ ಕನ್ನಡದ್ದೆನ್ನಬಹುದಾದ ಸಂಭಾಷಣೆಗಳನ್ನು ಸ್ವತಃ ಸೇರಿಸಿರುವುದು. ರನ್ನನಲ್ಲೇ ಇರುವ ಗದ್ಯದಿಂದ ಕೆಲವನ್ನು ಆಯ್ದುಕೊಂಡು ಬದಲಾಯಿಸಿದ್ದರೂ ಬಹುಮಟ್ಟಿನ ಸಂಭಾಷಣೆ ಶ್ರೀಯವರದ್ದೇ. ಇದು ನಾಟಕದ ಪರಿಣಾಮವನ್ನು ಹೆಚ್ಚಿಸಿದೆ ಎಂದರೆ ತಪ್ಪಾಗಲಾರದು. ಎಸ್. ವಿ. ರಂಗಣ್ಣನವರು ಈ ಬಗ್ಗೆ "ಇವುಗಳಿಂದ ಪಾತ್ರ ಸನ್ನಿವೇಶಗಳಿಗೆ ಅರ್ಥಗೌರವವೂ, ಭಾವಗೌರವವೂ ಖಚಿತವಾಗಿ ಹೆಚ್ಚಿವೆ"[6] ಎನ್ನುತ್ತಾರೆ.

* ಎನ್ನಾರಾಧನೆಯ ಶಕ್ತಿ ಇವಳ್ ...
* ಆ ಬಡವುಗಳನೇನೆಂದಾಡುವೆ ...
* ನಡೆ ಭೀಮನಂ ತೋರು ...
* ಪಿಂತಿಂ ಕಾರ್ಯಂ ಕೆಟ್ಟುದು ...
* ಕೃಷ್ಣಂಗಡ ... ಭೀಮಂ ಗಡ ...

---

೬. ಗದಾಯುದ್ಧ ಕಾವ್ಯವೂ – ಗದಾಯುದ್ಧ ನಾಟಕವೂ, ಎಸ್. ವಿ. ರಂಗಣ್ಣ, ಸಂಭಾವನೆ (ಪ್ರ. ಮುಂ.), ಪುಟ, ೭೭.

* ಹಾ ! ದುಃಶ್ಶಾಸನಾ, ಹಾ ! ಕರ್ಣಾ ...
* ನಿಮ್ಮ ಪೂರ್ವಪಕ್ಷಮೆ ನಿಮಗೆ ಸಿದ್ಧಾಂತಂ ...
* ಕಣ್ಣೀರನೊರಸು ...
* ವಿಜಯೋನ್ಮತ್ತರಿವರ್ ಕಾಣರ್ ...
* ರಾಜ್ಯಲಕ್ಷ್ಮಿ ಪೇಸಿ ಬಿಸುಟ್ಟುವಂ ...
* ಈ ಬೂತೆನ್ನಸರಂಗೇಳ್ದಲ್ಲದೆ ...

ಇತ್ಯಾದಿ ಇನ್ನೂ ಅನೇಕ ಮಾತುಗಳನ್ನು ಪಟ್ಟಿಮಾಡಬಹುದು. ಕೆಲವು ಪದ್ಯಗಳನ್ನು ಶ್ರೀಯವರು ಸ್ಥಳಾಂತರಿಸಿದ್ದಾರೆ. ಇನ್ನು ಕೆಲವು ಪದ್ಯಗಳನ್ನು ಬೇರೆ ಬೇರೆ ಪಾತ್ರಗಳ ಬಾಯಲ್ಲಿ ಹೇಳಿಸಿದ್ದಾರೆ. ಮತ್ತೆ ಕೆಲವು ಪದ್ಯಗಳನ್ನು ಸಂಭಾಷಣೆಗಳನ್ನಾಗಿ ಒಡೆದಿದ್ದಾರೆ. ಈ ಎಲ್ಲ ಬದಲಾವಣೆಗಳೂ ತಮ್ಮ ಕಲ್ಪನೆಯಲ್ಲಿದ್ದ ರುದ್ರನಾಟಕದ ಕ್ರಿಯೆಯನ್ನು ಪರಿಣಾಮಕಾರಿಯಾಗಿ ಮೂಡಿಸುವುದಕ್ಕಾಗಿಯೇ ಮಾಡಿಕೊಂಡಿದ್ದಾರೆ ಎಂಬುದು ಖಚಿತ. "ತುಱುವಂ ಕಳಿಸುವ ..." (೧-೧೧೪), "ಮಾನಧನನೆನಿಸಿ ..." (೫-೧೧೫), "ಕುರುಭೂ ಭೃದ್ಬಲಕೂಲತೂಲಪವನಂ ..." (೧-೨) ಪದ್ಯಗಳನ್ನು ಕೃಷ್ಣನಿಂದ ಹೇಳಿಸಿರುವುದು, "ಇದೆ ತೊಡೆಯ ನುಡಿದು ..." (೫-೧೨೮) ಪದ್ಯವನ್ನು ಧರ್ಮರಾಯನಿಂದಲೂ, "ಪಂಕಜಮುಂ ಸಹೃದ್ವದನಪಂಕಜಮುಂ ..." (೫-೧೪೭) ಪದ್ಯವನ್ನು ಅಶ್ವತ್ಥಾಮನಿಂದಲೂ, ವಿದೂಷಕನ ವಿಡಂಬನೆಯನ್ನು ಕೃಷ್ಣನ ಬಾಯಿಂದಲೂ, "ಗುರುವಿನ ನೆತ್ತರಂ ಕುಡಿವೆನಪ್ಪೊಡವಂ ...", "ನುಡಿಯದೆ ಪೋಗಲೀಯೆನೆಲೆ ಪೋದೊಡೆ ಧೂರ್ಜಟಿಯಾಣೆ ..." ಪದ್ಯಗಳನ್ನು ಮರುಳುಗಳ ಸಂಭಾಷಣೆಯಾಗಿಯೂ (೩ನೇ ರಂಗ), "ಕರಿಯುಂ ನುಂಗಿ ಕಳಿಂಗನಂ ನೊಣೆದ ...." ಪದ್ಯವನ್ನು ದುರ್ಯೋಧನನಿಂದಲೂ, "ಇದು ಲಾಕ್ಷಾಗೇಹದಾಹಕ್ಕಿದು ...." ಪದ್ಯವನ್ನು ಭೀಮನಿಂದಲೂ ಪರಸ್ಪರ ಮೂದಲಿಸುವ ಸಂಭಾಷಣೆಗಳನ್ನಾಗಿಸಿರುವುದು.

ಈ ಎಲ್ಲ ಬದಲಾವಣೆಗಳೂ ಭೀಮ ನಾಯಕನಾಗಿರುವ ರನ್ನನ ಗದಾಯುದ್ಧವನ್ನು ದುರ್ಯೋಧನ ನಾಯಕನಾಗುವ ರುದ್ರನಾಟಕಕ್ಕೆ ಪೋಷಕವಾಗಿ ಆಗಿರುವಂಥವುಗಳು. ರನ್ನ ತನ್ನ ಕಾವ್ಯದಲ್ಲೇ ಸೂಚಿಸಿರುವ ದುರ್ಯೋಧನನ ವ್ಯಕ್ತಿತ್ವವನ್ನೇ ಮುಖ್ಯವಾಗಿಟ್ಟುಕೊಂಡು ಶ್ರೀಯವರು ಇಲ್ಲಿ ಮುಂದುವರಿದಿದ್ದಾರೆ. ಈ ಬದಲಾವಣೆಗಳ ಕಾರಣದಿಂದಲೇ ಗದಾಯುದ್ಧ ನಾಟಕವನ್ನು ಷೇಕ್ಸ್‌ಪಿಯರನ ವಿಷಾದಾಂತ ನಾಟಕವನ್ನು ಹೋಲುವಂತೆ ಮಾಡಲು ಶ್ರೀಯವರಿಗೆ ಸಾಧ್ಯವಾಯಿತು ಎನ್ನುತ್ತಾರೆ ಒಬ್ಬ ವಿಮರ್ಶಕರು.[7] ರನ್ನನ ಕಾವ್ಯನಾಯಕ ಭೀಮ ಎನ್ನುವುದು

---

೭. ಗದಾಯುದ್ಧ ನಾಟಕಂ : ಶ್ರೀ ; ಶಾರದಾ ಮಂದಿರ, ಮೈಸೂರು ೧೯೮೨, ಮುನ್ನುಡಿ, ಪುಟ ೧೨.

ಎಷ್ಟು ನಿಶ್ಚಯವೋ, ಶ್ರೀಯವರ ನಾಟಕದ ನಾಯಕ ದುರ್ಯೋಧನ ಎನ್ನುವುದೂ ಅಷ್ಟೇ ನಿಶ್ಚಯ. ಬಹುಮಟ್ಟಿಗೆ ಎಲ್ಲ ವಿಮರ್ಶಕರೂ ಒಪ್ಪುವ ಅಂಶ ಇದು. ಆದರೆ ಎ. ಎನ್. ಮೂರ್ತಿರಾವ್ ಅವರು "ಶ್ರೀಕಂಠಯ್ಯನವರು ದುರ್ಯೋಧನನಿಗೆ ಹೆಚ್ಚು ದಯೆ ತೋರಿಸಿದ್ದಾರೆ. ಅದು ಆತನಿಗೆ ನಾಟಕದಲ್ಲಿ ಇತರರಿಗಿಂತ ಹೆಚ್ಚು ಸ್ಥಳ ಕೊಟ್ಟಿರುವಲ್ಲಿ ಮಾತ್ರ." "... ಇಲ್ಲಿಯ ಭೀಮ ರನ್ನನ ಕಾವ್ಯದಲ್ಲಿ ತಾನಿದ್ದ ಮಟ್ಟದಿಂದ ಸ್ವಲ್ಪ ಕೆಳಗಿಳಿದಿದ್ದಾನೆ. ಆದರೂ ನಾಯಕಪಟ್ಟವನ್ನು ಯಾರಿಗೆ ಕಟ್ಟಬೇಕೆಂದು ಹುಡುಕಿಕೊಂಡು ಹೊರಟರೆ ಭೀಮನ ಅರ್ಹತೆಗೇ ಬೆಲೆ ಕೊಡಬೇಕಾಗುತ್ತದೆ."[8] ಎಂದರೆ ಎಸ್. ವಿ. ರಂಗಣ್ಣನವರು ನಾಟಕದ ನಾಯಕ ದುರ್ಯೋಧನ ಎಂದೇ ಅಭಿಪ್ರಾಯಪಟ್ಟರೂ "ನಾಟಕದ ಕೌರವನಲ್ಲಿ ಪ್ರಧಾನ ಸ್ಥಾನದಿಂದ ಬಲುದೂರ ... ಕೊಂಚಮಟ್ಟಿಗೆ ವಿನಯ ದರಿದ್ರ"[9] ಎಂದು ಅಭಿಪ್ರಾಯಪಡುತ್ತಾರೆ. ಇಬ್ಬರೂ ಭೀಮನನ್ನು ಕೆಳಗಿಳಿಸಿರುವುದನ್ನು, 'ಓಹೋ! ಧರ್ಮಶ್ರವಣಂ' ಎಂಬ ಮಾತನ್ನು ಭೀಮನಿಂದ ಆಡಿಸಬೇಕಿರಲಿಲ್ಲ ಎಂದೂ, ಭೀಮ ಕಿರೀಟವನ್ನು ಒದೆಯುವ ಅಪವಾದದಿಂದ ತಪ್ಪಿಸಲು ಶ್ರೀಯವರಿಗೆ ಅವಕಾಶವಿತ್ತೆಂದೂ ಹೇಳುತ್ತಾರೆ. ಆದರೆ ಇವರ ಮಾತಿಗೆ ಶ್ರೀಯವರ ಮಾತಿನಲ್ಲೇ ಉತ್ತರವಿದೆ. "(ರನ್ನ) ಭೀಮನನ್ನು ಇಳಿಸಿಲ್ಲ, ಆದರೆ ದುರ್ಯೋಧನನನ್ನು ಏರಿಸಿರುವನು, ಘನತೆಗೊಯ್ದಿರುವನು ... ದುರ್ಯೋಧನನ ಪಾತ್ರ ತನ್ನನ್ನೊದೆದ ಭೀಮನ ಪಾತ್ರ ಅಪಾತ್ರವೆನ್ನಿಸುವ ಮಟ್ಟಿಗೆ ರನ್ನನ ಬುದ್ಧಿ ಮೀರಿ ಹೃದಯ ಹರಿದಿದೆ."[10] ಶ್ರೀಯವರ ಈ ಮಾತುಗಳು ಭೀಮ-ದುರ್ಯೋಧನರ ಪಾತ್ರದ ಬಗ್ಗೆ ತಾವು ಮಾಡಿಕೊಂಡ ಬದಲಾವಣೆಗಳನ್ನು ಸಮರ್ಥಿಸುತ್ತವೆ. ಈ ಬದಲಾವಣೆಗಳಿಗೆ ಪಂಪ ಭಾಸರ ಒಪ್ಪಿಗೆಯೂ ಇರುವುದನ್ನು ಹೇಳುತ್ತಾರೆ. ರನ್ನನ ಬಗ್ಗೆ ಶ್ರೀಯವರು ಯಾವ ಮಾತನ್ನು ಮೇಲೆ ಹೇಳಿದ್ದಾರೋ ಅದೇ ಮಾತನ್ನು ಶ್ರೀಯವರ ಬಗ್ಗೆಯೂ ಹೇಳಬಹುದು. ಭೀಮನನ್ನು ಕೆಳಗಿಳಿಸಿ ದುರ್ಯೋಧನನನ್ನು ಮೇಲೇರಿಸಿ ರುದ್ರನಾಯಕನನ್ನಾಗಿ ಮೆರೆಸುವುದು ಶ್ರೀಯವರ ಆಲೋಚನೆಯಲ್ಲ ಎಂಬುದನ್ನು ಬಹಳ ಸ್ಪಷ್ಟವಾಗಿ ಹೇಳಬಹುದು. ರನ್ನನ ದುರ್ಯೋಧನನಿಗೆ ಇನ್ನಷ್ಟು ಪುಟಕೊಟ್ಟು ಶ್ರೀಯವರು ಪ್ರತ್ಯೇಕವಾಗಿ ನಾಯಕನನ್ನಾಗಿ ಗುರುತಿಸಿರುವುದರಿಂದ ಸಹಜವಾಗಿ ಭೀಮ ಹಿಂದೆ ಸರಿಯುತ್ತಾನೆ. ಭೀಮನ ಪಾತ್ರವನ್ನು ರೋಷ-ಆವೇಶ-ಉದ್ಧಟತನ

---

೮. ಬಿ. ಎಂ. ಶ್ರೀಕಂಠಯ್ಯ. ಎ. ಎನ್. ಮೂರ್ತಿರಾವ್ : ಕನ್ನಡ ಸಾಹಿತ್ಯ ಪರಿಷತ್; ಪುಟ ೫೧, ೫೨.

೯. ಗದಾಯುದ್ಧ ಕಾವ್ಯ-ನಾಟಕ : ಎಸ್. ವಿ. ರಂಗಣ್ಣ, ಸಂಭಾವನೆ (ಪ್ರ.ಮು.), ಪುಟ ೭೬.

೧೦. ಶ್ರೀಸಾಹಿತ್ಯ, ಮೈಸೂರು ವಿಶ್ವವಿದ್ಯಾಲಯ ೧೯೬೪, ರನ್ನ, ಪುಟ ೪೯.

ಗಳೊಂದಿಗೆ ನಾವು ನೋಡುತ್ತೇವೆ. ರನ್ನನ ಕಾವ್ಯದಲ್ಲಿ ಭೀಮ ನಾಯಕನಾದ್ದರಿಂದ ಅವನ ಮೂಲಕ ತನ್ನ ಆಶ್ರಿತರಾಜ ನಾಯಕನಾಗಿರುವುದರಿಂದ ಆತನ ಹೊಗಳಿಕೆಯ ಪದ್ಯಗಳು ತುಂಬಿಕೊಂಡಿರುತ್ತವೆ. ಆದರೆ ಶ್ರೀಯವರ ನಾಟಕದಲ್ಲಿ ಆ ಹೊಗಳಿಕೆಯ ಪದ್ಯಗಳನ್ನು ಬಿಟ್ಟು ಭೀಮನ ಪಾತ್ರಕ್ಕೆ ಅಗತ್ಯವಾದಷ್ಟನ್ನು ಮಾತ್ರ ಸ್ವೀಕರಿಸಿರುವುದರಿಂದ ಆವೇಶದ ಪಾತ್ರವಷ್ಟೇ ಇಲ್ಲಿ ನೋಡಲು ಸಾಧ್ಯ. ಇಂಥ ಆವೇಶ ಪಾತ್ರದ ಭೀಮನನ್ನು ಬೇರೆ ಕಾವ್ಯಗಳ ಜೊತೆಗೆ ಹೋಲಿಸಿ ನೋಡಿದಾಗ (ಉದಾಹರಣೆ: ಕುಮಾರವ್ಯಾಸನ ಭೀಮ, ಸಿರಿಮುಡಿಗೆ ಕೈಯಿಕ್ಕಿದ ಪ್ರಸಂಗದಲ್ಲಿ ಇದಕ್ಕೆ ಕಾರಣನಾದ ಧರ್ಮಜನ ಜೂಜಾಡಿದ ಕೈಗಳ ಸುಡುವೆನೆಂದು ಆರ್ಭಟಿಸುತ್ತಾನೆ.) 'ಓಹೋ ! ಧರ್ಮಶ್ರವಣಂ' ಎಂಬ ಮಾತು ಭೀಮನನ್ನು ಕೆಳಗಿಳಿಸುತ್ತದೆಯೇ ಎಂಬ ಸಂಶಯ ಮೂಡುತ್ತದೆ.

ಶ್ರೀಯವರು ದುರ್ಯೋಧನನನ್ನು ನಾಯಕನನ್ನಾಗಿಸಿಕೊಳ್ಳುವಾಗ ಕೆಲವು ಮುಖ್ಯ ಬದಲಾವಣೆಗಳನ್ನು ಮಾಡಿಕೊಳ್ಳುತ್ತಾರೆ. ಕಾವ್ಯದಲ್ಲಿ ಬರುವ ತನ್ನ ಹಿಂದಿನ ಸಾಧನೆಗಳನ್ನು ಲೋಪಗಳನ್ನು ಹೊಗಳಿಕೊಳ್ಳುವ ಮತ್ತು ಅವುಗಳನ್ನು ಇತರರು ತೆಗಳುವ ಪದ್ಯಗಳನ್ನು ಬಹುಮಟ್ಟಿಗೆ ಬಿಟ್ಟಿದ್ದಾರೆ. ಬದಲಿಗೆ ದುರ್ಯೋಧನನನ್ನು ಹೊಗಳುವ ಪಂಪನ ಪದ್ಯವನ್ನು ಲಕ್ಷ್ಮಿಯ ಬಾಯಲ್ಲಿ ಹೇಳಿಸಿದ್ದಾರೆ. "ಎನಗಹಿತರೊಡನೆ ಪುದುವಾಳ್ಕೆನೆನೊಂದೆ" ಎಂಬ ಪಾಠಕ್ಕೆ ಬದಲಾಗಿ "ಲ್ಲೆನಗೆ **ತಲೆಗರೆದು ನೀರೊಳ್ ಕುನಿಯನೆ** ನೊಂದೆಂ" (೩-೧೧೪), ಸಂಜಯನ ಬಾಯಲ್ಲಿ ಬರುವ ಪದ್ಯದಲ್ಲಿ "ಅನಾರ್ಯಂಗಹಿತಕೇತನಂಗೆ ..." ಎಂಬುದಕ್ಕೆ ಬದಲಾಗಿ "ಆಕಾರ್ಯಂಗಹಿತಕೇತಂಗೆ ..." (೨-೨೪) ಎಂಬ ಪಾಠ ಸೇರಿಸಿರುವುದು ; "ಕಿಡೆದು ಕೌರವೇಂದ್ರಂ ಮಡಿದಂ"ಪಾಠಕ್ಕೆ ಬದಲಾಗಿ "ಕಿಡೆದು ಕೌರವೇಂದ್ರ **ಮೆಜೀವಂ**" (೫-೧೨೮) ಎಂಬುದನ್ನು ಸೇರಿಸಿರುವುದು, "ಹತಜೀವ ಹತಕಿರೀಟಂ ಹತಕೃತ್ಯ ಪ್ರತೀಕಾರ" ಎಂಬ ಪಾಠಕ್ಕೆ ಬದಲಾಗಿ "**ಹತಹೃದಯ** ಹತಕಿರೀಟಂ**ಗೆನಗಂ** ಪ್ರತಿಕಾರ ..." (೫-೧೪೩) ಎಂಬ ಮಾತುಗಳನ್ನು ಸೇರಿಸಿದ್ದಾರೆ. ಇಲ್ಲಿರುವ ಶ್ರೀಯವರ ಔಚಿತ್ಯ ಪ್ರಜ್ಞೆಯನ್ನು ನಾವು ಗಮನಿಸಬೇಕು. ಇಲ್ಲಿ ಶ್ರೀಯವರು ಬದಲಾಯಿಸಿರುವ ಪಾಠಗಳು ದುರ್ಯೋಧನನ ವ್ಯಕ್ತಿತ್ವವನ್ನು ಭವ್ಯವಾಗಿಸಲು ನೆರವಾಗುತ್ತವೆ. ಇವುಗಳ ಜೊತೆಗೆ ಆತನ ಪಶ್ಚಾತ್ತಾಪದ ಮಾತುಗಳು. "ವಿನಯಮನೊಕ್ಕು ನಿಮ್ಮ ಗುರುವೃದ್ಧರ ಪೇಳ್ದ ..." (೩-೯೮), "ನೆಲಕಿರಿಪೆನೆಂದು ಬಗೆದಿರೆ ಛಲ ಕಿರಿಪೆಂ ..." (೩-೧೦೦) ಎಂಬ ಇನ್ನೂ ಮುಂತಾದ ಪದ್ಯಗಳು. ಭೀಷ್ಮರ ಮಾತು "ಅಸ್ತ್ರಾರ್ಯಂ ಆತನ ಸತ್ವಮುಂ. ಏಕಾಂಗ ಸಾಹಸಮುಂ, ಮಾನಧನನಪ್ಪಾತನಂ", "ಇದೆಲ್ಲಂ ಕೃಷ್ಣನ ಮಾಯೆ. ದೈವದ ಮುಂದೆ ನಾವಲ್ತು" ಎನ್ನುವ ಅವನದೇ ಮಾತು ಇವುಗಳೆಲ್ಲ ಜೊತೆಗೂಡಿ ದುರ್ಯೋಧನ ಪ್ರೇಕ್ಷಕರ ಮುಂದೆ ಅಭಿಮಾನಧನನಾಗಿ, ಅದನ್ನುಳಿಸಿಕೊಳ್ಳುವುದಕ್ಕಾಗಿಯೇ ಕೊನೆವರೆಗೂ ಹೋರಾಡುವ ಛಲಗಾರನಾಗಿ, ಸಾವನ್ನೇ ಪಣವಾಗಿಡುವ

ದುರಂತ ನಾಯಕನ್ನಾಗಿ ನಿಲ್ಲುತ್ತಾನೆ. ಶ್ರೀಯವರ ಶ್ರಮ ಈ ಮಟ್ಟಿಗೆ ಸಾರ್ಥಕ ವಾಗಿದೆ ಎಂದರೆ ತಪ್ಪಾಗಲಾರದು.

ಇಲ್ಲಿ ಎ. ಎನ್. ಮೂರ್ತಿರಾಯರು 'ಗದಾಯುದ್ಧ'ಕ್ಕೆ ನಾಟಕವನ್ನು ಕೊನೆ ಗೊಳಿಸಿ ಅಶ್ವತ್ಥಾಮನ ಪ್ರಸಂಗವನ್ನು ಬಿಟ್ಟಿದ್ದಿದ್ದರೆ ನಾಟಕ ಇನ್ನಷ್ಟು ಪರಿಣಾಮಕಾರಿ ಯಾಗಿರುತ್ತಿತ್ತು ಎನ್ನುತ್ತಾರೆ.[11] ಶ್ರೀಯವರು ಸಾಹಿತ್ಯ ಚರಿತ್ರೆಯಲ್ಲಿ ರನ್ನನ ಸಾಹಸಭೀಮ ವಿಜಯವನ್ನು ಕುರಿತು ಬರೆಯುವಾಗಲೇ ಅಲ್ಲಿ ನಾಟಕ ಅಡಗಿರು ವುದನ್ನು ಗುರುತಿಸಿ ದೃಶ್ಯಗಳ ರೂಪದಲ್ಲೇ ನಮಗೆ ಪರಿಚಯಿಸಿ ಕೊಡುತ್ತಾರೆ. ಅಲ್ಲಿ 'ಗದಾಯುದ್ಧ'ಕ್ಕೆ ರುದ್ರನಾಟಕ ಮುಗಿಯಿತು. ಮುಂದಕ್ಕೆ ಮಹಾಕಾವ್ಯ ಮಂಗಳದತ್ತ ಹರಿಯುತ್ತದೆ[12] ಎಂದೇ ಬರೆದಿದ್ದಾರೆ. ಆದರೂ ನಾಟಕದಲ್ಲಿ ತಾವೂ ಮುಂದುವರಿದಿದ್ದಾರೆ. ಪ್ರಾಯಶಃ ಅಶ್ವತ್ಥಾಮ ಮತ್ತು ಲಕ್ಷ್ಮಿಯಿಂದ ರನ್ನನನ್ನು ಹೊಗಳಿಸಿ, ಬಾಲಪಾಂಡವರ ತಲೆ ನೋಡಿ ಪಶ್ಚಾತ್ತಾಪಪಟ್ಟು "ಇದೆಲ್ಲಂ ಕೃಷ್ಣನ ಮಾಯೆ ... ದೈವದ ಮುಂದೆ ನಾವಲ್ತು" ಎಂದು ಅಶ್ವತ್ಥಾಮನಿಗೆ ಹೇಳುತ್ತಲೇ ತನಗೂ ಹೇಳಿಕೊಳ್ಳುವ ದುರ್ಯೋಧನನನ್ನು ನಮ್ಮ ಮುಂದೆ ನಿಲ್ಲಿಸಿ ಅವನ ಆ ದಾರುಣ ಮರಣವನ್ನು ತೋರಿಸುವುದರ ಮೂಲಕ ಅವನ ಉದಾತ್ತತೆಯನ್ನು ಮತ್ತಷ್ಟು ಮೇಲೇರಿಸುವುದು ಶ್ರೀಯವರ ದೃಷ್ಟಿ ಎನಿಸುತ್ತದೆ. ಮೂಲಭಾರತದಲ್ಲಿ ಅಶ್ವತ್ಥಾಮನ ಪ್ರಸಂಗ ಈ ರೀತಿ ಬರುವುದಿಲ್ಲ. ತಾನು ಉಪಪಾಂಡವರನ್ನೇ ಕೊಲ್ಲು ತ್ತಿದ್ದೇನೆ ಎಂಬ ಪ್ರಜ್ಞೆ ಇರುತ್ತದೆ. ಹಾಗೆಂದೇ ಬಂದು ದುರ್ಯೋಧನನಿಗೆ ಹೇಳು ತ್ತಾನೆ. ದುರ್ಯೋಧನ ಅರೆಸಮಾಧಾನದಿಂದಲೇ ಸಾವನ್ನಪ್ಪುತ್ತಾನೆ. ಈ ಪ್ರಸಂಗ ಪಂಪನಲ್ಲೇ ಇದೆ. ಅವನು ಎಲ್ಲಿಂದ ತೆಗೆದುಕೊಂಡ ಎಂಬುದನ್ನು ಪರಿಶೀಲಿಸಬೇಕಾಗಿದೆ.

ಈ ನಾಟಕದಲ್ಲಿ ಬರುವ ಮರುಳುಗಳು ಬಹುಮಟ್ಟಿಗೆ ಷೇಕ್ಸ್‌ಪಿಯರನ ನಾಟಕದ ಮಾಟಗಾತಿಯರನ್ನು ನೆನಪಿಗೆ ತರುತ್ತವೆ. ಭೀಮನ ತಲೆಯ ಮೇಲಾಡುವ ಘೋರಮೂರ್ತಿಗಳನ್ನು ಶ್ರೀಯವರು ಗ್ರೀಕ್ ರುದ್ರನಾಟಕದಿಂದ ತಂದಿದ್ದಾರೆ. ಬಹುಮಟ್ಟಿಗೆ ಪ್ರತಿಕೂಲ ದೈವನಾದ ನಾಯಕನಿರುವ ಷೇಕ್ಸ್‌ಪಿಯರನ ರುದ್ರನಾಟಕ ಗಳನ್ನು ಹೋಲುವ ಈ ನಾಟಕದ ಮೂಲಭಾವನೆ ಕನ್ನಡದ್ದೇ ಎಂಬುದು ಬಹಳ ಗಮನಾರ್ಹ ಸಂಗತಿ.

ಪಂಪ-ರನ್ನರಿಂದ ಹರಿದುಬಂದ, ದುರ್ಯೋಧನನನ್ನು ಬೇರೊಂದು ದೃಷ್ಟಿ ಯಲ್ಲಿ ನೋಡುವ ಭಾವನೆ ಶ್ರೀಯವರಲ್ಲಿ ಮತ್ತಷ್ಟು ಕುಸುರಿ ಕೆಲಸಕ್ಕೊಳಗಾಗಿ

---

೧೧. ಎ. ಎನ್. ಮೂರ್ತಿರಾವ್, ಬಿ. ಎಂ. ಶ್ರೀಕಂಠಯ್ಯ, ಕನ್ನಡ ಸಾಹಿತ್ಯ ಪರಿಷತ್, ಪುಟ ೫೭.

೧೨. ಶ್ರೀಸಾಹಿತ್ಯ, ಪುಟ ೫೦೫,

ದುರ್ಯೋಧನ ಕರುಣಾಮೂರ್ತಿಯಾಗಿ, ಜನರ ಮರುಕಕ್ಕೊಳಗಾದರೂ ಮಹಾಭಾರತದ ಮೂಲಕ ಆತ ಪಡೆದಿರುವ ವ್ಯಕ್ತಿತ್ವವನ್ನು ಜನಮನದಿಂದ ಅಳಿಸಿ ಹಾಕಲು ಸಾಧ್ಯವಾಗುವುದಿಲ್ಲ. ಶ್ರೀಯವರೇ ಒಂದೆಡೆ "ದುರ್ – ಎಂದಲ್ಲವೇ ಜನರ ಮನಸ್ಸಿನಲ್ಲಿ ಇವನ ಹೆಸರು ನೆಟ್ಟಿರುವುದು" ಎಂದು ಹೇಳುತ್ತಾರೆ. ಈ ಭಾವನೆಯನ್ನು ಕಿತ್ತೊಗೆದು ಜನರ ಮನಸ್ಸಿನಲ್ಲಿ ಇವನ ಬಗ್ಗೆ 'ಸದ್ಭಾವನೆ' ಮೂಡಿಸ ಬೇಕೆಂದು ಗದಾಯುದ್ಧವನ್ನು ಶ್ರೀಯವರು ಬರೆದರೆಂಬಂತಿದೆ ಅವರ ಮಾತಿನ ಧಾಟಿ. ಈ ಸಂಬಂಧದಲ್ಲಿ ಎ. ಎನ್. ಮೂರ್ತಿರಾಯರು ಎತ್ತಿರುವ ಪ್ರಶ್ನೆ ಅಭ್ಯಾಸಾರ್ಹವಾಗಿದೆ.[13] ಗದಾಯುದ್ಧದಲ್ಲಿ ಭೀಮ ಬಿಸ್ದಾಗ ದುರ್ಯೋಧನ "ಇದು ಧರ್ಮಯುದ್ಧಂ, ಪೋಯ್ಯೆಂ ಬಿಟ್ಟಿನಂ, ಇರಿ ಎಟ್ಟಿರಿಸುವೆಂ ಗದೆಯ ಗಾಳಿಯಿಂ" ಎಂದು ಹೇಳುತ್ತಾನೆ. ಇದು ಸಾಧ್ಯವೇ ? ಪಾಂಡವರನ್ನು ಉದ್ದೇಶ ಪೂರ್ವಕವಾಗಿಯೇ ಹಿಂಸಿಸಿದ. ಅಧರ್ಮಪಾಲನೆಯನ್ನೇ ತನ್ನ ವೃತ್ತಿಯಾಗಿಟ್ಟು ಕೊಂಡಿದ್ದ ಅದೇ ದುರ್ಯೋಧನನೇ ಇವನು ? ಎಂಬ ಪ್ರಶ್ನೆ ನಮ್ಮನ್ನು ಕಾಡುತ್ತದೆ. ಸಮಯ ಸಿಕ್ಕರೆ ಸಾಕು ಪಾಂಡವರನ್ನು ನಾಶಮಾಡಲು ಕಾಯುತ್ತಿದ್ದ ಇವನು ಹೀಗೆ ಅವಕಾಶ ಸಿಕ್ಕಿರುವಾಗ 'ಧರ್ಮಯುದ್ಧ' ಎನ್ನುತ್ತ ಕುಳಿತುಕೊಳ್ಳು ತ್ತಾನೆಯೇ ಎಂಬ ಮೂಲಭೂತ ಪ್ರಶ್ನೆಯೊಂದಿಗೆ ರುದ್ರನಾಟಕವೊಂದರ ರುದ್ರ ನಾಯಕನಾಗಲು ಈ ದುರ್ಯೋಧನನಿಗೆ ಅರ್ಹತೆಗಳಿವೆಯೇ ಎಂಬ ಪ್ರಶ್ನೆ ಸಹಜ ವಾಗಿ ಏಳುತ್ತದೆ. 'ಗದಾಯುದ್ಧ ನಾಟಕ'ದ ಮಟ್ಟಿಗೆ ನಾಯಕನನ್ನಾಗಿಸಲು ಶ್ರೀಯವರು ಪ್ರಯತ್ನಪಟ್ಟಿದ್ದರೂ ಅವನ ಗದಾಯುದ್ಧ ನಾಟಕದ ಪರಿಧಿಯ ಹೊರಗೆ ನಡೆದಿದ್ದ ಅವನ 'ದುರ್-ವ್ಯಕ್ತಿತ್ವ' ನೆನಪಿಗೆ ಬಾರದೆ ಇರುವುದಿಲ್ಲ. ಸರೋವರದಲ್ಲಿ ಹೇಡಿಯಂತೆ ಅಡಗಿಕೊಂಡಿರುವುದು, ಕರ್ಣನ ಹುಟ್ಟಿನ ಗುಟ್ಟು ತಿಳಿದಿದ್ದರೂ ಅವನಿಗೆ ತಿಳಿಸದೆ, ಅವನ ಪಾಲನ್ನು ಅವನಿಗೆ ಕೊಡದೆ ವಂಚಿಸಿರು ವುದು (೩-೮೫), ತುರುಗಳನ್ನು ಕದಿವ, ನಾರಿಯ (ಕೃಷ್ಣೆಯ) ಸೀರೆಯನ್ನು ಸೆಳೆಯುವ, ಕೊಳವನ್ನು ಹಿಂದುಹಿಂದಾಗಿ ಹೋಗಿ ಅಡಗಿಕೊಳ್ಳುವ ದುರ್ನಯ ಗಳು (೫-೧೧೪) ಅವನಲ್ಲಿರುವುದರಿಂದ ಆತನ ಛಲ ಕೇವಲ ಸೇಡಾಗಿ, ಅಭಿಮಾನ ದುರಭಿಮಾನವಾಗಿ ಕೊನೆಗೆ ಆತನ ಮರಣಕ್ಕೆ ಆತನೇ ಕಾರಣನಾಗುತ್ತಾನಾದ್ದರಿಂದ ರುದ್ರನಾಟಕದ ನಾಯಕನ ಮಹೋನ್ನತಿ, ಅಂತಃಶಕ್ತಿಗಳು ಇಲ್ಲಿ ಪರಿಪೂರ್ಣವಾಗಿಲ್ಲ ವೆಂದೆನಿಸುತ್ತದೆ.

ಇಂಥ ಕೆಲವು ಸಂದೇಹಗಳಿಗೆ ಇಲ್ಲಿ ಅವಕಾಶವಿದ್ದರೂ ಶ್ರೀಯವರು ಈ ನಾಟಕವನ್ನು ರಚಿಸಿದ ಯುಗಧರ್ಮ, ಪರಿಸರ ಇವುಗಳ ಹಿನ್ನೆಲೆಯಲ್ಲಿ ಈ ಸಂದೇಹ ಗಳು ಗೌಣವಾಗಿ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಹೊಸದೊಂದು ಪ್ರಕಾರವನ್ನು ತಂದು

---

೧೩. ಬಿ. ಎಂ. ಶ್ರೀಕಂಠಯ್ಯ, ಕನ್ನಡ ಸಾಹಿತ್ಯ ಪರಿಷತ್, ಪುಟ ೫೫.

ಕೊಟ್ಟಿರುವುದೇ ಮುಖ್ಯವಾಗುತ್ತದೆ. ಹೊಸದೊಂದನ್ನು ಕನ್ನಡಕ್ಕೆ ತರಬೇಕು ಎನ್ನುವ ಮೂಲಭಾವನೆಯೇ ಶ್ರೀಯವರ ಈ ನಾಟಕ ರಚನೆಯ ಮುಖ್ಯ ಗುರಿಯಾಗಿದ್ದುದರಿಂದ ಅವರಿಗೆ ಪರಿಚಿತವಿದ್ದ ಗ್ರೀಕ್ ಪರಂಪರೆಯ ಮತ್ತು ಷೇಕ್ಸ್‌ಪಿಯರ್‌ನ, ಎರಡೂ ರುದ್ರನಾಟಕಗಳ ಕಲ್ಪನೆಗಳು ಇಲ್ಲಿ ಮೇಳವಿಸಿ ಒಂದು ಸಂಕೀರ್ಣ ರುದ್ರನಾಟಕ ಕೃತಿಯಾಗಿ ಮಾರ್ಪಟ್ಟಿದೆ. ಈ ದೃಷ್ಟಿಯಲ್ಲಿ ಈ ನಾಟಕವನ್ನು ಅಭ್ಯಾಸಮಾಡುವುದು ಸೂಕ್ತ ಎನಿಸುತ್ತದೆ.

# ಪಾರಸಿಕರು

---

– ಓ. ಎಲ್. ನಾಗಭೂಷಣ ಸ್ವಾಮಿ

ಬಿ. ಎಂ. ಶ್ರೀಯವರ ಮೂರು ನಾಟಕಗಳೂ ಭಾಷಾಂತರ ಸಾಹಿತ್ಯದ ಮೂರು ಮುಖ್ಯ ಪ್ರಕಾರಗಳಿಗೆ ಸೇರಿದವು. ೧೯೨೬ರಲ್ಲಿ ಬಂದ 'ಗದಾಯುದ್ಧ ನಾಟಕಂ' ಒಂದು 'ರೂಪಾಂತರ' – ರನ್ನನ ಹಳಗನ್ನಡ ಚಂಪೂ 'ರೂಪ'ದ ಕೃತಿ ಇಲ್ಲಿ ನಾಟಕದ ರೂಪ ತಾಳಿದೆ. ವಸ್ತುವೂ ಸಂಸ್ಕೃತಿಯೂ ಕನ್ನಡದ್ದೆ, ಆದರೆ ರೂಪ ಮಾತ್ರ ಹೊಸದು. ಲಭ್ಯವಸ್ತುವನ್ನು ಬಳಸಿಕೊಂಡು ನಾಟಕ ಸಾಹಿತ್ಯವನ್ನು ಸೃಷ್ಟಿಸಲು ಬೇಕಾಗುವ ಹೊಸ ತಂತ್ರವನ್ನು ಈ ನಾಟಕ ಕನ್ನಡಕ್ಕೆ ಪರಿಚಯಿಸಿತು. ೧೯೨೯ರಲ್ಲಿ ಬಂದ 'ಅಶ್ವತ್ಥಾಮನ್' ಸೊಫೊಕ್ಲಿಸನ 'ಏಜಾಕ್ಸ್' ನಾಟಕದ 'ಅನು-ವಾದ' – ಬೇರೆಯ ಭಾಷೆ-ಸಂಸ್ಕೃತಿಯ ಕೃತಿಯೊಂದನ್ನು ಅನು-ಸರಿಸಿ. ಅದರ ಸತ್ವಕ್ಕೆ ಸಮಾನಾಂತರವಾದ ಭಾಷೆ ಮತ್ತು ಸಾಂಸ್ಕೃತಿಕ ದೃಷ್ಟಿಗಳನ್ನು ಕನ್ನಡಕ್ಕೆ ಕೊಡುವ ಯತ್ನ. ಪರಕೀಯ ಸಂಸ್ಕೃತಿಯ ಬದುಕಿನ ದೃಷ್ಟಿಕೋನದ ಅರಿವನ್ನು ಬಳಸಿಕೊಂಡು ಹೇಗೆ ತಮ್ಮ ಪುರಾಣ ಇತಿಹಾಸಗಳನ್ನು ಹೊಸ ಕಲಾಕೃತಿಯ ನಿರ್ಮಾಣಕ್ಕೆ ಮೂಲ ಸಾಮಗ್ರಿಗಳನ್ನಾಗಿ ಪರಿವರ್ತಿಸಿಕೊಳ್ಳಬಹುದೆಂಬ 'ಹೊಸ' ದೃಷ್ಟಿಯನ್ನು ಈ ನಾಟಕ ಪರಿಚಯಿಸಿತು. ಈ 'ಹೊಸ' ದೃಷ್ಟಿ ಉಂಟುಮಾಡಿದ ಆಘಾತದಿಂದಲೇ 'ಅಶ್ವತ್ಥಾಮನ್' ಬಗ್ಗೆ, ಶ್ರೀಯವರ ಉಳಿದ ಯಾವುದೇ ನಾಟಕಗಳಿಗಿಂತ ಅಗಾಧ ಪ್ರಮಾಣದ ಉದ್ವೇಗ ತುಂಬಿದ ಚರ್ಚೆ ನಡೆಯಿತು. ೧೯೩೫ರಲ್ಲಿ ಬಂದ 'ಪಾರಸಿಕರು' ಈಸ್ಕಿಲಸನ 'ಪರ್ಶಿಯನ್ಸ್' ನಾಟಕದ 'ಭಾಷಾ-ಅಂತರ'. ಇದರ ಭಾಷೆ ಕನ್ನಡವಾದರೂ ವಸ್ತು ಮತ್ತು ಧೋರಣೆಗಳ ಗ್ರೀಕ್‌ತನ ಹಾಗೇ ಉಳಿದಿದೆ. 'ಪಾರಸಿಕರು' ತನ್ನ ಮೂಲ ಪೌರತ್ವವನ್ನು ಹಾಗೇ ಉಳಿಸಿಕೊಂಡಿರುವ ಸಾಂಸ್ಕೃತಿಕ ರಾಯಭಾರಿ. ಪ್ರಪಂಚದ ಹಳೆಯ ಸಂಸ್ಕೃತಿ-ರಂಗಭೂಮಿಯ, ಪ್ರಾಚೀನ ನಾಟಕಕಾರನ, ಅವನ ನಾಟಕ ತಂತ್ರಗಳ ಪರಿಚಯ ಮಾಡಿಕೊಡುತ್ತದೆ. 'ಪಾರಸಿಕರು' ಹೆಚ್ಚು ಚರ್ಚೆಗೆ ಒಳಗಾಗದಿರುವುದಕ್ಕೆ ಇದೂ ಒಂದು ಕಾರಣವಿರಬಹುದು.

ತನ್ನ ಭಾಷಾ-ಅಂತರ ಲಕ್ಷಣದಿಂದ ಮತ್ತು ವಸ್ತುವಿನ ಅಪರಿಚಿತತೆಯಿಂದ ಈ ನಾಟಕ ಉಳಿದೆರಡು ಕೃತಿಗಳಂತೆ ಸಹೃದಯರನ್ನು ಗಾಢವಾಗಿ ಕಲಕುವುದಿಲ್ಲ. ಆದರೆ, ಕನ್ನಡ ನಾಟಕವನ್ನು ಕುರಿತು ಅಧ್ಯಯನ ಮಾಡುವಾಗ, ಗ್ರೀಕ್ ನಾಟಕದಿಂದ ಕನ್ನಡ ನಾಟಕ ಏನೇನನ್ನು ಪಡೆಯಿತು ಎಂದು ವಿವೇಚಿಸುವಾಗ ಮತ್ತು ಭಾಷಾಂತರ ಎಂಬ ವಿಷಯವನ್ನೇ ಕುರಿತು ತಾತ್ವಿಕವಾಗಿ ಯೋಚಿಸುವಾಗ 'ಪಾರಸಿಕರು' ಮುಖ್ಯವಾದದ್ದಾಗುತ್ತದೆ.

'ಪರ್ಷಿಯನ್ಸ್'ಈಸ್ಕಿಲಸನ ಅತ್ಯುತ್ತಮ ನಾಟಕವಲ್ಲ. ಈಸ್ಕಿಲಸ್ ತೊಂಬತ್ತು ನಾಟಕಗಳನ್ನು ಬರೆದಿದ್ದನಂತೆ. ಈಗ ಸಿಕ್ಕಿರುವುದು ಏಳು ಮಾತ್ರ. ಇವು ಏಳೂ ಗ್ರೀಕ್ ರಂಗಭೂಮಿ ಶೈಶವ ಸ್ಥಿತಿಯಿಂದ ಪ್ರಬುದ್ಧ ಸ್ಥಿತಿಗೆ ಬೆಳೆದ ರೀತಿಯನ್ನು, ನಾಟಕಕಲೆಯ ಬೆಳವಣಿಗೆಗೆ ಈಸ್ಕಿಲಸ್ ಕೊಟ್ಟ ಕಾಣಿಕೆಗಳನ್ನು ಮನವರಿಕೆ ಮಾಡಿ ಕೊಡುತ್ತವೆ. (ಗ್ರೀಕ್ ಗಂಭೀರ ನಾಟಕವು ನಮಗೆ ಈಗ ಪರಿಚಿತವಾಗಿರುವ ಸ್ವರೂಪ ವನ್ನು ಪಡೆದದ್ದೇ ಈಸ್ಕಿಲಸನಿಂದಾಗಿ) 'ಅಗಮೆಮ್ನಾನ್' ಈಸ್ಕಿಲಸನ ಅತ್ಯುತ್ತಮ ಕೃತಿಯಾದರೂ 'ಪರ್ಷಿಯನ್ಸ್'ಗೆ ಪ್ರಾಮುಖ್ಯ ಬಂದಿರುವುದು ಈ ನಾಲ್ಕು ಕಾರಣಗಳಿಗಾಗಿ : ೧) ಅದು ಸಮಕಾಲೀನ ಐತಿಹಾಸಿಕ ಘಟನೆಯನ್ನು ಆಧರಿಸಿ ರಚಿತವಾದ ನಾಟಕಗಳ ಪೈಕಿ (ನಮಗೆ ಸಿಕ್ಕಿರುವುದರಲ್ಲಿ) ಮೊದಲನೆಯದು. ೨) ಅದರ ಶೈಲಿ ಮತ್ತು ಕಾವ್ಯಗುಣ. ೩) ಅದು ಗ್ರೀಕ್ ನಾಟಕ ತಂತ್ರ ಮತ್ತು ಈಸ್ಕಿಲಸನ ನಾಟಕ ತಂತ್ರಗಳ ಬೆಳವಣಿಗೆಯಲ್ಲಿ ಮುಖ್ಯ ಘಟ್ಟವನ್ನು ಸೂಚಿಸುತ್ತದೆ. ೪) ಅದು ವ್ಯಕ್ತಪಡಿಸುವ ಗ್ರೀಕ್ ತಾತ್ವಿಕದೃಷ್ಟಿ.

'ಪರ್ಷಿಯನ್ಸ್' ಮೊಟ್ಟಮೊದಲು ರಂಗಭೂಮಿಯ ಮೇಲೆ ಪ್ರದರ್ಶಿತ ವಾದದ್ದು ಕ್ರಿ. ಪೂ. ೪೭೨ರಲ್ಲಿ. ಕೇವಲ ಎಂಟು ವರ್ಷಗಳ ಹಿಂದಷ್ಟೆ ಸಲಾಮಿಸ್ ಎಂಬಲ್ಲಿ ನಡೆದ ಯುದ್ಧದಲ್ಲಿ ಗ್ರೀಕರು ಪರ್ಶಿಯನ್ ಸೈನ್ಯವನ್ನು ಸೋಲಿಸಿ ಸದೆ ಬಡಿದಿದ್ದರು. ಪರ್ಶಿಯನರ ಸೋಲು (ಮತ್ತು ಅದರಿಂದ ಗ್ರೀಕರು ಕಲಿಯಬೇಕಾದ ಪಾಠ) ಈಸ್ಕಿಲಸನ ನಾಟಕದ ವಸ್ತು. ಈಸ್ಕಿಲಸ್ ಕೂಡ ಸಲಾಮಿಸ್‌ನ ಯುದ್ಧದಲ್ಲಿ ಅಥೆನ್ಸಿನ ಸೈನಿಕನಾಗಿ ಪಾಲ್ಗೊಂಡಿದ್ದ. ಪರ್ಶಿಯನ್ನರು ಗ್ರೀಕರಮೇಲೆ ಒಟ್ಟು ಮೂರು ಬಾರಿ ದಾಳಿಮಾಡಿದರು. ಮೊದಲೆರಡು ಬಾರಿ ಡೇರಿಯಸ್ (ನಾಟಕದ ದರ್ಯವುಷ) ಚಕ್ರವರ್ತಿ ದಾಳಿಯ ನೇತೃತ್ವ ವಹಿಸಿದ್ದ. ಮೂರನೆಯ ಬಾರಿ ಸಲಾಮಿಸ್‌ನ ನಿರ್ಣಾಯಕ ಯುದ್ಧದಲ್ಲಿ ಕ್ಷಯಾರ್ಷ ಮುಖಂಡನಾಗಿದ್ದ. (ಅದರ ಹಿಂದಿನ ಮರಥಾನ್ ಯುದ್ಧದಲ್ಲೂ ಪರ್ಶಿಯನರು ಸೋತಿದ್ದರು. ಅದರಲ್ಲೂ ಈಸ್ಕಿಲಸ್ ಭಾಗವಹಿಸಿದ್ದ) ಈಗ ಚಾರಿತ್ರಿಕ ಹಿನ್ನೋಟದಲ್ಲಿ ಮರಥಾನ್ ಮತ್ತು ಸಲಾಮಿಸ್ ಯುದ್ಧಗಳು ಪೂರ್ವ-ಪಶ್ಚಿಮ ನಾಗರಿಕತೆಗಳ ಸಂಘರ್ಷವಾಗಿ, ರಾಜತ್ವ• ಪ್ರಜಾಪ್ರಭುತ್ವ ಸಂಸ್ಕೃತಿಗಳ ಸಂಘರ್ಷವಾಗಿ ನಮಗೆ ಕಾಣುತ್ತದೆ. ಪರ್ಶಿಯನ್

ದಾಳಿಯನ್ನು ಹಿಮ್ಮೆಟ್ಟಿಸಿದ ಅಥೆನ್ಸ್ ನಂತರದಲ್ಲಿ ಹೆಲನಿಕ್ ನಾಗರಿಕತೆಯ ಕೇಂದ್ರವಾಗಿ ಬೆಳೆದದ್ದು ಇತಿಹಾಸ. ಪಾಶ್ಚಾತ್ಯ ನಾಗರಿಕತೆ-ಸಂಸ್ಕೃತಿಗಳ, ನಿಜವಾದ ಅರ್ಥದ, ಸಂಧಿಕಾಲದಲ್ಲಿ ಬದುಕಿದ್ದ ಈಸ್ಕಿಲಸ್, ಸಲಾಮಿಸ್ ಯುದ್ಧವನ್ನೆ ಮೂಲ ಸಾಮಗ್ರಿಯಾಗಿ ಬಳಸಿಕೊಂಡು 'ಪರ್ಶಿಯನ್ಸ್' ರಚಿಸಿದ.

ಸಮಕಾಲೀನ ಸಂಗತಿಯನ್ನೆ ಗಂಭೀರ ನಾಟಕದ ವಸ್ತುವಾಗಿ ತೆಗೆದುಕೊಂಡಾಗ ಬರುವ ಸಮಸ್ಯೆಗಳು ಈಸ್ಕಿಲಸನಿಗೂ ಎದುರಾಗಿವೆ. ಯುದ್ಧದ ದಿಗ್ವಿಜಯವನ್ನು ಆಚರಿಸುವ ಸಂಭ್ರಮಕ್ಕೆಂದು ಬರೆದ ನಾಟಕ, ಆತನ ದೃಷ್ಟಿಯಲ್ಲಿ, ಮನುಷ್ಯನ ಮಿತಿಗಳನ್ನು ಸೂಚಿಸುವ ಗಂಭೀರ ನಾಟಕವಾಗಬೇಕಿತ್ತು. ಈಸ್ಕಿಲಸ್ ಅಳವಡಿಸಿಕೊಂಡ ನಾಟಕ ತಂತ್ರಗಳು ಇಂದು ನಮಗೆ ತುಂಬ ಸರಳವಾಗಿ ಕಾಣುತ್ತವೆ. ಆದರೆ ಧಾರ್ಮಿಕ ಆಚರಣೆಯ ಸಮೂಹಕ್ರಿಯೆಯಾಗಿದ್ದ ಒಂದು ಚಟುವಟಿಕೆ ಲೌಕಿಕ ನಾಟಕ ಕಲೆಯಾಗಲು ತೊಡಗಿದ್ದೆ ಈಸ್ಕಿಲಸನ ಕೃತಿಗಳಿಂದ ಎಂಬುದನ್ನು ಗಮನಿಸಿದಾಗ ಅವನ ನಾಟಕತಂತ್ರದ ಐತಿಹಾಸಿಕ ಮಹತ್ವ ಅರಿವಾಗುತ್ತದೆ. ಮೊದಲನೆಯದಾಗಿ, ಕಾಲದ ದೃಷ್ಟಿಯಿಂದ ಸಮೀಪದ್ದಾದ ಕತೆಯನ್ನು ಈಸ್ಕಿಲಸ್ 'ದೇಶದ' ದೃಷ್ಟಿಯಿಂದ ದೂರದಲ್ಲಿರಿಸಿ ನೋಡುತ್ತಾನೆ. ಹೀಗಾಗಿ ಗ್ರೀಕರ ಗೆಲುವನ್ನು ಆಚರಿಸುವ ನಾಟಕ ಹೇಗೆ ಸಂಭ್ರಮವನ್ನು ಮೀರಿದ ಗಂಭೀರತೆಯನ್ನು ಪಡೆಯುತ್ತದೆಂಬುದನ್ನು ಗಮನಿಸಿ. ಕತೆ ನಡೆಯುವುದು ದೂರದ ಪರ್ಶಿಯಾದಲ್ಲಿ. ಈ ದೂರದಿಂದ ಕೊನೆಯಪಕ್ಷ ನಾಲ್ಕು ಲಾಭಗಳಾಗಿವೆ. (೧) ಗಂಭೀರ ನಾಟಕಕ್ಕೆ ಅಗತ್ಯವಾದ ನಿರ್ಲಿಪ್ತತೆಯನ್ನು ಸಾಧಿಸುವುದು. ಗ್ರೀಕರ ದೃಷ್ಟಿಯಿಂದ ಕತೆಯನ್ನು ಹೇಳಿದ್ದರೆ ಗೆಲುವಿನ ಸಂಭ್ರಮವಷ್ಟೆ ಆಗುತ್ತಿತ್ತು. ಸೋತ ಪರ್ಶಿಯನರ ದೃಷ್ಟಿಕೋನವನ್ನು ಆರಿಸಿಕೊಂಡದ್ದು ಮನುಷ್ಯನ ಅಹಂಕಾರ-ಪತನಗಳನ್ನು ಸೂಚಿಸಲು, ತನ್ನ ನಾಡಿನ ಗ್ರೀಕರಿಗೂ ಮನುಷ್ಯನ ಮಿತಿಯನ್ನು ಬೋಧಿಸಲು ಸಹಾಯ ಮಾಡುತ್ತದೆ. ಗೆದ್ದವರ ಸಂಭ್ರಮಕ್ಕಿಂತ ಸೋತವರ ಪಾಡು ದುರಂತದ ಅಭಿವ್ಯಕ್ತಿಗೆ ಸಹಾಯಕವಾಗುವಂಥದು. (೨) ಪೂರ್ವದೇಶದ ಚಕ್ರವರ್ತಿಯ ರಾಜಧಾನಿಯಲ್ಲಿ ಕತೆ ನಡೆವುದರಿಂದ, ರಂಗದ ಮೇಲೆ ದೃಶ್ಯವೈಭವವನ್ನು ನಿರ್ಮಿಸುವುದಕ್ಕೆ ಅವಕಾಶ ದೊರೆಯುತ್ತದೆ. ದೃಶ್ಯವೈಭವ ಬಾಹ್ಯ ಕ್ರಿಯೆಯ ಅಭಾವವನ್ನು ತುಂಬಲು ಸ್ವಲ್ಪಮಟ್ಟಿಗೆ ಸಹಾಯ ಮಾಡುತ್ತದೆ. (೩) ಪರ್ಶಿಯನ್ ಸಾಮ್ರಾಜ್ಯ ಮತ್ತು ಕ್ಷಯಾರ್ಷನ ಅವನತಿಗೆ ಈ ದೃಶ್ಯವೈಭವ ಅದ್ಭುತ ವೈದೃಶ್ಯವನ್ನು ಒದಗಿಸುತ್ತವೆ. (೪) ಮನುಷ್ಯನ ಬದುಕು, ಮನುಷ್ಯ-ದೇವರ ಸಂಬಂಧ, ಬದುಕಿನಲ್ಲಿ ವಿಧಿಯ ಕೈವಾಡ ಈ ಮುಂತಾದ, ಈಸ್ಕಿಲಸನ ತಾತ್ವಿಕ ವಿಚಾರಗಳನ್ನು ಮಂಡಿಸಲು ಖಚಿತವಾದ, ಮೂರ್ತವಾದ ಹಿನ್ನೆಲೆಯನ್ನು ಒದಗಿಸುತ್ತದೆ.

ಈಸ್ಕಿಲಸನ ನಾಟಕ ತಂತ್ರ ಸರಳವಾದದ್ದು. ಸರಳವಾದ ರಂಗಭೂಮಿಗೆ ಬರೆದ ನಾಟಕ ಇದು ಎಂಬುದನ್ನು ಮರೆಯಬಾರದು. ಘಟನೆಗಳು, ಸಂಘರ್ಷ, ಶಿಖರಸ್ಥಿತಿ, ಭಾವಶಮನ – ಇಂಥ ನಮಗೆ ಪರಿಚಿತವಾದ ಗಂಭೀರ ನಾಟಕ ರಚನಾ ತಂತ್ರ ಇಲ್ಲಿಲ್ಲ. "ಹೋರಾಟದ ಫಲವಾಗಿ ಆಗಲಿ, ಘಟನೆಗಳ ಸಂಯೋಜನೆಯಿಂದಾಗಲಿ, ದುರಂತದ ಕಡೆಗೆ ಸಾಗುವ" ರೀತಿಯೂ ಇಲ್ಲಿಲ್ಲ. ಇಲ್ಲಿ ನಿರೂಪಣೆಯೇ ಪ್ರಧಾನ ಪಾತ್ರ ವಹಿಸುತ್ತದೆ. ಬಾಹ್ಯಕ್ರಿಯೆ ಇಲ್ಲವೇ ಇಲ್ಲ ಎಂಬಷ್ಟು ಅಲ್ಪ ಪ್ರಮಾಣದ್ದಾಗುತ್ತದೆ. ನಡೆಯುವ ದುಃರಂತ ನಾಟಕದ ಆರಂಭಕ್ಕೂ ಮೊದಲೇ ನಡೆದು ಹೋಗಿದೆ. ಯುದ್ಧ ಮುಗಿದು ಪರ್ಷಿಯ ಸೋತು ಆಗಿದೆ. ಇಲ್ಲಿರುವುದು ಕೇವಲ ಸೋಲಿನ ನಿರೂಪಣೆ ಮತ್ತು ಆ ಸೋಲಿನಿಂದ ಮನುಷ್ಯರು, ಮುಖ್ಯವಾಗಿ ಗ್ರೀಕರು ಕಲಿಯಬೇಕೆಂದು ಈಸ್ಕಿಲಸ್ ಬಯಸುವ ನೀತಿ. ಘಟನೆ ಪ್ರೇಕ್ಷಕರಿಗೆಲ್ಲ ಪರಿಚಿತವಾದದ್ದರಿಂದ, ಅವರೆಲ್ಲರನ್ನೂ ಗಾಢವಾಗಿ ಕಲಕಿದ ಸಂಗತಿಯಾದದ್ದರಿಂದ, ಈಸ್ಕಿಲಸನ 'ನಾಟಕ' ಕೇವಲ ನೆಪಮಾತ್ರದ ನಿರೂಪಣೆಯಾಗಿ ನಿಜವಾದ 'ನಾಟಕ' ಪ್ರೇಕ್ಷಕರ ಮನಸ್ಸುಗಳಲ್ಲಿ ನಡೆಯುತ್ತಿದ್ದಿರಬೇಕು. 'ನಾಟಕ'ದ ಒಂದೊಂದು ಮಾತೂ ಕೇವಲ ಎಂಟು ವರ್ಷಗಳ ಹಿಂದಷ್ಟೆ ನಡೆದ ಘಟನೆಗಳು ಅಥೆನ್ಸಿನ ಜನರ ಮನಸ್ಸಿನಲ್ಲಿ ಮರು ಸೃಷ್ಟಿಗೊಳ್ಳುವಂತೆ ಮಾಡಿ ಭಾವೋದ್ವೇಗದ ವಿದ್ಯುತ್‌ಸಂಚಾರ ಹುಟ್ಟಿಸುತ್ತಿದ್ದಿರಬೇಕು. ಆದ್ದರಿಂದ 'ಪಾರಸಿಕರು' ಈಸ್ಕಿಲಸನಲ್ಲಿ ನಮಗೆ ಬರಹದ ಮೂಲಕ ಸಿಗುವುದು ಶೇಕಡಾ ಐವತ್ತು ಅಥವ ಇನ್ನೂ ಕಡಮೆ. ಕೃತಿಯಲ್ಲಿ ನಾಟಕೀಯತೆ ಇಲ್ಲದಿದ್ದರೂ, 'ನಾಟಕ' ಪ್ರೇಕ್ಷಕರ ಮನಸ್ಸಿನಲ್ಲಿ ಸಂಭವಿಸುವಂತೆ ಪ್ರಚೋದಿಸುವ 'ಕಾರಣ' ಆಗಿತ್ತು. ಇಂಥ ಕೃತಿ ಕನ್ನಡಕ್ಕೆ ಬಂದಾಗ ಸಹಜವಾಗಿಯೇ ತಣ್ಣಗಾಗುತ್ತದೆ. ಗ್ರೀಕರ ಕಾಲ-ದೇಶ ಬದ್ಧ ಅನುಭವ ನಮ್ಮದಲ್ಲವಾದ್ದರಿಂದ, ಉತ್ತಮ ಗಂಭೀರ ನಾಟಕ ನಮ್ಮ ಮನಸ್ಸನ್ನು ಕಲಕಬೇಕು ಇತ್ಯಾದಿ ನಿರೀಕ್ಷೆಗಳನ್ನಿಟ್ಟುಕೊಂಡು ಈಸ್ಕಿಲಸನ ಈ ಕನ್ನಡ ಭಾಷಾಂತರ ಓದಿದರೆ ನಿರಾಸೆ ಖಂಡಿತವಾಗಿ ಆಗುತ್ತದೆ. ಬರೆದ ನಾಟಕವನ್ನೇನೋ ಭಾಷಾಂತರಿಸಬಹುದು, ಆದರೆ 'ನಾಟಕ'ಕ್ಕೆ ಕಾರಣವಾದ ಜನಸಮೂಹದ ಅನುಭವವನ್ನು ಮನಃಸ್ಥಿತಿಯನ್ನು ಕನ್ನಡಕ್ಕೆ ಒದಗಿಸುವುದು ಹೇಗೆ? ಕನ್ನಡ 'ಪಾರಸಿಕರು' ಜನಪ್ರಿಯವಾಗದಿರುವುದಕ್ಕೆ, ಚರ್ಚೆ ನಡೆಯದಿರುವುದಕ್ಕೆ ಇದೂ ಒಂದು ಮುಖ್ಯ ಕಾರಣ. 'ಪಾರಸಿಕರು' ಅಭ್ಯಾಸ ಮಾಡಿ ತಿಳಿಯಬೇಕಾದ, ಬೌದ್ಧಿಕವಾಗಿ ಮಾತ್ರ ಅನುಭವಿಸಬಹುದಾದ ತಣ್ಣನೆ ನಾಟಕ ಅನ್ನಿಸಿಬಿಡಬಹುದು.

ಇನ್ನು ಪಾರಸಿಕರು ಅಳವಡಿಸಿಕೊಂಡಿರುವ ನಿರೂಪಣೆಯ ತಂತ್ರವನ್ನು ಸ್ವಲ್ಪ ಗಮನಿಸಬಹುದು. ಈಸ್ಕಿಲಸನ ನಾಟಕ(ಇಂಗ್ಲಿಷ್ ಅನುವಾದ)ದಲ್ಲಿ ೧೦೭೬ ಸಾಲುಗಳಿವೆ. ಕನ್ನಡ ಭಾಷಾಂತರದಲ್ಲಿ ೯೩೩ ಸಾಲುಗಳಿವೆ. ಇದರಲ್ಲಿ ನಿರೂಪಣೆಯ

ಆರು ನಿರ್ದಿಷ್ಟ ಘಟ್ಟಗಳನ್ನು ಗುರುತಿಸಬಹುದು. (೧) ಸಾಲು ೧ ರಿಂದ ೧೮೩ರ ವರಗೆ : ಪರ್ಷಿಯದ ರಾಜಧಾನಿ ಸೂಸದಲ್ಲಿ ನಗರದ ಹಿರಿಯರ ಮೇಳ, ಹೆಲನರ ಮೇಲೆ ದಂಡೆತ್ತಿಹೋದ ಕ್ಷಯಾರ್ಷ ಮತ್ತವನ ಸೈನ್ಯದ ಸುದ್ದಿ ತಿಳಿಯದೆ ವ್ಯಾಕುಲಗೊಂಡಿದ್ದಾರೆ. ಪರ್ಸದ ಹಿರಿಮೆ, ಸುದ್ದಿ ತಿಳಿಯದ ಆತಂಕ, ವಿಧಿ-ದೇವರ ಆಣತಿ ಬಗ್ಗೆ ಕಳವಳ, ವಿನಾಶದ ಸ್ಪಷ್ಟ-ಅಸ್ಪಷ್ಟ ಮುನ್ಸೂಚನೆ, ಪ್ರಾರ್ಥನೆಯ ಬಯಕೆ ಈ ಭಾಗದಲ್ಲಿ ನಿರೂಪಿತವಾಗುತ್ತವೆ.

“ಅಳುಕು ಬಹುದೇಕೆನಗೆ, ಮತ್ತೆ ಭಯದಿಂತ ?
ಮತ್ತೆ ಮರಳದೊ, ನಮ್ಮ ದಳಕಿಹುದೊ ಮುಂತ ?
ಸೂಸಪುರಿ ಬೆಳಗದೋ, ಪಾಡದೋ ಮತ್ತೆ ?
ಹಾಳು ಬೀಡೆನಿಪುದೇ ಇನ್ನದಕೆ ಹೊತ್ತೆ ?’’ (೪.೧ ; ಸಾಲು ೧೪೭-೧೫೦)

ಇದು ಈ ಭಾಗದಲ್ಲಿ ಮುಖ್ಯವಾಗಿ ವ್ಯಕ್ತವಾಗುವ ಭಾವ. (೨) ಸಾಲು ೧೮೪ ರಿಂದ ೨೬೧ರವರೆಗೆ : ಹುತೌಷಳ (ಸತ್ತರಾಜ ದರ್ಯವುಷನ ಹೆಂಡತಿ, ಕ್ಷಯಾರ್ಷನ ತಾಯಿ) ಪ್ರವೇಶ. ರಾತ್ರಿ ಬಿದ್ದ ಕೆಟ್ಟ ಕನಸು, ಹಗಲು ಕಂಡ ಉತ್ಪಾತಗಳಿಂದ ಕಂಗಾಲಾದ ಆಕೆ ಮೇಳದವರ ಬಳಿ ಮುಂದೇನೆಂಬ ಸಲಹೆ ಕೇಳಲು ಬರುತ್ತಾಳೆ. ಇಲ್ಲಿ ಅವಳು ಕಂಡ ಕನಸಿನ ವರ್ಣನೆ ಬರುತ್ತದೆ, ಒಳಿತಿಗೆ ದೇವರನ್ನು ಪ್ರಾರ್ಥಿಸು ಎಂಬ ಸಲಹೆ ದೊರೆಯುತ್ತದೆ. ಮೇಳದೊಡನೆ ಆಕೆ ನಡೆಸುವ ಮಾತಿನಲ್ಲಿ ಪರ್ಷಿಯಕ್ಕೂ ಅಥೆನ್ಸಿಗೂ ಇರುವ ವ್ಯತ್ಯಾಸದ ಪ್ರಸ್ತಾಪ ಬರುತ್ತದೆ.

ಹುತೌಷ : ಆಳ್ಗಳಿರಲಿ, ಸಿರಿ ಇಹುದೋ ? ನಮ್ಮ ಸಿರಿಗೆ ಸರಿಯಂದೊ?
ಮೇಳ : ಬೆಳ್ಳಿ ಹೊಸಲ ಬಸಿರಿಂದ ಭೂಮಿಯೆ ತಾನ್ ಸುರಿವಳು.
ಹುತೌಷ : ಅಂಬನೆಸೆದು ನಾಟಬಲ್ಲ ಬಿಲ್ಲ ಕೊಬ್ಬೊ ಅವರದು ?
ಮೇಳ : ಇಲ್ಲ, ತಾಯಿ. ನಾಟು ಈಟಿ, ಹೊತ್ತ ಹರಿಗೆ, ಕಟ್ಟಣಿ.
ಹುತೌಷ : ಆ ಹಿಂಡಿಗೆ ಕುರುಬನಾರು ? ಒಡೆದು ? ಆಳ್ವ ಪೆರ್ಗ್ದೊರೆ ?
ಮೇಳ : ದೊರೆಗೆ ಆಳ್ಗಳಲ್ಲಿ ಅವರು, ತಮ್ಮ ತಾವೆ ಆಳ್ವರು.
ಹುತೌಷ : ಒಡೆಯರಾಳ್ವ ಪಡೆಯನವರೆಂತು ತಡೆಯಲಾಪರು ?
ಮೇಳ : ದರ್ಯವುಷನೆ ಬಲ್ಲನದನು – ಹಿರಿಯ ಪಡೆ ! ಸಿರಿಯ ಪಡೆ!

(ಕೊನೆಯ ಮಾತು ಇಂಗ್ಲಿಷಿನಲ್ಲಿ ಹೀಗಿದೆ : They destroyed Dareius' army great in number, fair in show) ೨೫೦–೨೫೭

ತಮ್ಮನ್ನು ತಾವೇ ಆಳಿಕೊಳ್ಳುವ, ಯಾರಿಗೂ ಗುಲಾಮರಲ್ಲದ ಅಥೆನ್ಸಿನ ಜನರಿಗೆ ದೈವವೂ ಸಹಾಯ ಮಾಡಿತು ಎಂಬುದು ಮುಂದಿನ ಘಟ್ಟದಲ್ಲಿ ದೂತನ ಮಾತಿನಿಂದ ತಿಳಿಯುತ್ತದೆ. ರಾಜತ್ವದ ಅಹಂಕಾರ, ಮನುಷ್ಯನ ಮಿತಿಯನ್ನೇ ಮರೆಸಿ, ರಾಜನನ್ನು ಮಾತ್ರವಲ್ಲ ಇಡೀ ರಾಜ್ಯವನ್ನೂ ದುರಂತಕ್ಕೆಳೆದೀತು – ಎಂಬುದು

ಈಸ್ಕಿಲಸನ ಧೋರಣೆ ಎಂದೂ ಊಹಿಸಬಹುದು. ಸಾಲು ೨೬೧ ರಿಂದ ೪೪೪ರ ವರೆಗೆ ಹರಡಿರುವ ನಿರೂಪಣೆಯ ಮೂರನೆ ಭಾಗದಲ್ಲಿ : ಕತೆ ಮುಂದುವರಿಯುತ್ತದೆ, ಅದೂ ದುರಂತದ ಪ್ರತ್ಯಕ್ಷದರ್ಶಿಯ ಮಾತಿನಲ್ಲಿ. ದೀರ್ಘವಾದ, ಸತ್ತ ವೀರರ ಹೆಸರುಗಳ ಪಟ್ಟಿ ಇದೆ, ಯುದ್ಧದ ವರ್ಣನೆ ಇದೆ, ಪಾರಸಿಕರ ಕಗ್ಗೊಲೆಯ ಚಿತ್ರವಿದೆ, ಸೋತು ಹಿಂದೋಡಿದ ಪಾರಸಿಕರು ಅನುಭವಿಸಿದ ಕೋಟಲೆಗಳ ವಿವರಗಳು ದೊರೆಯುತ್ತವೆ. ಈ ಭಾಗದಲ್ಲಿ ಅತ್ಯುತ್ತಮವೆನಿಸುವ ಕಾವ್ಯಭಾಗಗಳು, ತೀರ ವಾಸ್ತವವೆನಿಸುವ ಯುದ್ಧಚಿತ್ರಗಳು ಇವೆ. (ಸಾಲು ೩೬೦ ರಿಂದ ೩೮೦ರ ವರೆಗಿನ ಭಾಗವನ್ನು ಗಮನಿಸಿ.) "ದೇವರ್ಕಳೆಡರ ಕೊಡೆ ಹೊರಬೇಕು ತಾಳ್ಮೆಯಲಿ/ಮರ್ತ್ಯರಾದವರು" (೨೯೫) "ನಮ್ಮಳಿವೆ ? ಆದೈವ ಚಿತ್ತಂ" (೪೩೧) ಇಂಥ ಮಾತುಗಳು ವಿಧಿಯ ಹಿರಿಮೆಯನ್ನು ಮನುಷ್ಯನ ಅಲ್ಪತೆಯನ್ನು ಸಾರುವಂತೆ ಇಲ್ಲಿ ಅನೇಕ ಕಡೆ ಬರುತ್ತವೆ. ಈ ಭಾಗದ ಮತ್ತೊಂದು ಸ್ವಾರಸ್ಯಕರ ಅಂಶವೆಂದರೆ, ಈಸ್ಕಿಲಸ್ ತನ್ನ ದೇಶದ ಶತ್ರುವಿನ ಬಾಯಿಂದ, ಅದೂ ಸೋತವನ ಬಾಯಿಂದ, ತನ್ನ ಅಥೆನ್ಸಿನ ಹಿರಿಮೆಯನ್ನು ತೀರ ಸಹಜವೆಂಬಂತೆ ಹೊಗಳಿಸಿರುವುದು ; ಮತ್ತು "ಹೆಬ್ಬಲಿದ ಹಮ್ಮಿನಲಿ ಪಡಗರಿಸಿ, ಕೈಬೀಸಿದನೊ ನಮ್ಮ ಮಗನು ?" (೩೩೪) "ಮುಂದಪ್ಪುದನು ಕಾಣ, ದೇವರ್ಕ್ಕಳೊಳಗೆಯೇ ನೆಯ್ಯುವುದ ಕಾಣ" (೩೪೬) "ಓ ಕ್ರೂರಿ, ಮತ್ಸರದ ದೈವವೆ !... ಆನೆ ಹೆಜ್ಜೆಯನಿಟ್ಟು ಹೊಸಕಿದೆಯ ಪೊರಳಿಸುತ ಪಾರಸಿಕ ಜನವನ್" (೪೩೩) ಇಂಥ ಸಮತೋಲನದ ಮಾತುಗಳಿಂದ 'ಹೆಮ್ಮೆ' ಹೇಗೆ, ಅಥೆನ್ಸ್ ಕೊಬ್ಬಿದರೆ, ಪಾರಸಿಕರ ಪತನಕ್ಕೆ ಕಾರಣವಾದಂತೆ ತಮಗೂ ಮೃತ್ಯು ಆದೀತು ಎಂದು ಎಚ್ಚರಿಸುವ ಧ್ವನಿ ಇರುವಂಥದ್ದು. ಆದರೂ ಕನ್ನಡದ ಮಟ್ಟಿಗೆ ಸಾಕಷ್ಟು ದೀರ್ಘವಾದ ಈ ನಿರೂಪಣಾ ಭಾಗ ತೀರ ನೀರಸ ಎಂದೇ ಎನ್ನಿಸೀತು. ವೀರರ ಹೆಸರಿನ ಪಟ್ಟಿ ನಮಗೆ ಕೇವಲ ಹೆಸರುಗಳಷ್ಟೆ ಆಗಿ ಉಳಿದೀತು.

ಸಾಲು ೪೪೫ರಿಂದ ೫೦೬ರವರೆಗೆ ಇರುವ ನಿರೂಪಣೆಯ ನಾಲ್ಕನೆಯ ಘಟ್ಟ ಮೇಳದ ಗೀತೆಯ ಮೂಲಕ ಪರ್ಶಿಯದ ದುರಂತದ ವಿವಿಧ ಆಯಾಮಗಳನ್ನು ಚಿತ್ರಿಸುತ್ತದೆ. ನಡೆದ ಘಟನೆ ಪಾರಸಿಕರ 'ಸೊಕ್ಕು' ಮುರಿಯಲು ದೇವರು ಹೂಡಿದ ಹೂಟ : ಇಡೀ ಒಂದು ಜನಪದ ವ್ಯರ್ಥವಾಯಿತು : ಹಳೆಯ ನಂಬಿಕೆಗಳೆಲ್ಲ, ಸಂಸ್ಕೃತಿಯ ಮೌಲ್ಯಗಳೆಲ್ಲ ನಾಶವಾಯಿತು ಎಂದು ಮೇಳ ಗೋಳಿಡುತ್ತದೆ.

"ಒಡೆಯಬಾರದ ಕೊರಗು ಮನೆಗೆ, ಇನಿಯ ಬಾರದ ಕೊರಗು ಹೆಣ್ಗೆ
ಮಕ್ಕಳಿಲ್ಲದ ಕೊರಗು ಮುಪ್ಪಿಂಗೆ, ಕಾವರಿಲ್ಲದ ಕೊರಗು ಮಕ್ಕಳ್ಗೆ"
(೪೯೦-೪೯೧)

ಎಂಬ ಮಾತು ತೀರ ಮನಕಲಕುವಂತೆ ಯುದ್ಧದ ಅಮಾನವೀಯತೆಯನ್ನು ಚಿತ್ರಿಸಿದರೆ,

"ಸಡಿಲಿದುದು ಸಾಮ್ರಾಜ್ಯ : ರಾಜರ ಭಯವೆ ತೊಲಗಿತು : ಹೋಯ್ತು ಬಲವೆಲ್ಲ" (೪೯೯)

ಎಂಬಂಥ ಮಾತುಗಳು ಮನುಷ್ಯ ಸಮಾಜದ ಪರಿವರ್ತನೆಯ ಒಂದು ಘಟ್ಟವನ್ನು, ಯುದ್ಧ ನಿರ್ಣಾಯಕವಾಗಿ, ಅನಿವಾರ್ಯವಾಗಿ ತಂದ ಬದಲಾವಣೆಯನ್ನು ಧ್ವನಿಸುತ್ತದೆ.

ಇಡೀ ನಾಟಕದ ಅತ್ಯುತ್ತಮ ಭಾಗ, ಸಾಲು ೫೦೭ರಿಂದ ೭೪೩ರವರೆಗೆ ಚಾಚಿಕೊಂಡಿರುವ ನಿರೂಪಣೆಯ ಐದನೆಯ ಘಟ್ಟ. 'ನಾಟಕೀಯ ಪಾತ್ರ ಚಿತ್ರಣ' (ಡ್ರಾಮೆಟಿಕ್ ಕ್ಯಾರೆಕ್ಟರೈಸೇಷನ್)ದ ಪ್ರಥಮ ಪ್ರಯತ್ನಗಳನ್ನು ಈ ನಾಟಕದಲ್ಲಿ ಮುಖ್ಯವಾಗಿ ಈ ಭಾಗದಲ್ಲಿ ಗಮನಿಸಬಹುದು. ಪಾತ್ರವೊಂದರ ಮನೋವಿಶ್ಲೇಷಣೆ ಈಸ್ಕಿಲಸನ ಕಾಲದ ರಂಗಭೂಮಿಗೆ ಅಪರಿಚಿತವಾಗಿತ್ತು. ರಕ್ತ ಮಾಂಸ ತುಂಬಿದ 'ಜೀವಂತ' ಪಾತ್ರಗಳು ಇರಲೇ ಇಲ್ಲವೆಂದರೂ ಸರಿ. 'ಪರ್ಷಿಯನ್ಸ್'ನಲ್ಲಿ ಬರುವ 'ಹುತೌಷ' ನಮಗೆ ಪಾತ್ರಚಿತ್ರಣದ ಪ್ರಯತ್ನದ ಪಳೆಯುಳಿಕೆಯಾಗಿ ಕಾಣುತ್ತಾಳೆ. ಈ ಐದನೆಯ ಘಟ್ಟದಲ್ಲಿ ವಿವಿಧ ಮನೋವೃತ್ತಿಗಳ ಸಂಘರ್ಷವನ್ನು ಚಿತ್ರಿಸುವ ಹಂಬಲ ಇರುವುದನ್ನು ಗುರುತಿಸಬಹುದು. ದರ್ಯವುಷನ ಪ್ರೇತಾತ್ಮದ ಆವಾಹನೆ ಕೇವಲ ದೃಶ್ಯವೈಭವವಾಗಿ ಅಷ್ಟೆ ಉಳಿಯುವುದಿಲ್ಲ. ಈಸ್ಕಿಲಸನ ಉದ್ದೇಶಕ್ಕೆ ಅತ್ಯಂತ ಅಗತ್ಯವಾದದ್ದಾಗುತ್ತದೆ. ಪರ್ಷಿಯಕ್ಕೆ ಬಂದೆರಗಿದ ದುರಂತದ ಅರ್ಥವೇನು ? ಯಾಕೆ ಹೀಗಾದದ್ದು ? ಪರಿಣಾಮ ಏನು ? ಇಂಥ ವಿವರಗಳನ್ನು ಈಸ್ಕಿಲಸ್ ದರ್ಯವುಷನ ಪ್ರೇತಾತ್ಮದ ಮುಖಾಂತರ ತಿಳಿಸುತ್ತಾನೆ. ಹುತೌಷ ತಾಯಿಯಾಗಿ ಕ್ಷಯಾರ್ಷನ ದುರಂತವನ್ನು ಸಹಿಸಲಾರಳು. ಮೇಳ ಸುದ್ದಿ ಕೇಳಿ ದಿಗ್ಭ್ರಾಂತವಾಗಿದೆಯಾದ್ದರಿಂದ, ಇತರ ಗ್ರೀಕ್ ಮೇಳಗಳಂತೆ, ತಾತ್ವಿಕ ಚಿಂತನೆಗಳಲ್ಲಿ ತೊಡಗುವ ಸಮತೋಲನ ಕಳೆದುಕೊಂಡಿದೆ. ದೂತ ಯುದ್ಧಭೂಮಿಯಿಂದ ಪೆಟ್ಟು ತಿಂದು ಬಂದವ. ನಿಷ್ಪಕ್ಷಪಾತವಾಗಿ ನಡೆದ ಸಂಗತಿ ಕಾಣಲಾರ. ಹಾಗಾಗಿ ಭೌತಿಕ ದೇಹದ ಕಟ್ಟು ಮೀರಿದ, ಅಧೋಲೋಕದಲ್ಲಿ ವಿಶೇಷ ಅರಿವು ಪಡೆದ ದರ್ಯವುಷನ ಆತ್ಮ ಕಾಣಿಸಿಕೊಂಡು ಪರ್ಷಿಯದ ಹಿಂದಿನ ಹಿರಿಮೆ, ಇಂದಿನ ದುರಂತದ ಕಾರಣ, ಮುಂದೆ ಇನ್ನೂ ಕಾದಿರುವ ವಿನಾಶಗಳನ್ನು ತಿಳಿಸಿ. ಇವಕ್ಕೆಲ್ಲ ಪರ್ಷಿಯನರ ಹೆಮ್ಮೆ, ಅಹಂಕಾರಗಳೇ ಮೂಲ ಎಂದು ತಿಳಿಸುತ್ತದೆ.

"ಆವೊನುಂ ಹೆಬ್ಬಯಕೆಗೆಲವತ್ತು ಮಿತಿಮೀರಿ,
ಕಯ್ಗೆ ಬಾರದ ಗುರಿಗೆ ಕಟ್ಟೊಲ್ಮೆಯನ್ ತೆತ್ತು,
ಕಳೆಯಬಾರದು ದೇವರಿತ್ತೊಂದು ಭಾಗ್ಯವನ್,
ಗಗನಕ್ಕೆ ನೆಗೆದಡರುವರ ಹಮ್ಮುಗಳ ಮೆಟ್ಟಿ,
ತಕ್ಕಕಾಲದೆ ಕೊಬ್ಬನಿಳಿಪದಿರನಾ ಸ್ಯೂಸ್ ೭೦೦-೭೧೪

ಇದು ಈಸ್ಕಿಲಸ್‌ನ ಪ್ರತಿಪಾದಿಸಲು ಬಯಸುವ ತತ್ತ್ವವೂ ಹೌದು. ದರ್ಯವುಷ

ನೊಡನೆ ಮೇಳ ಮಾತಾಡಲು ಅಂಜುವುದು, ಹುತೌಪ ಪ್ರಶ್ನೆಗಳನ್ನು ಕೇಳುವುದು ಇಂಥ ಭಾಗದಲ್ಲಿ ಪಾತ್ರಗಳ ಮನೋವೃತ್ತಿ ಬಗ್ಗೆ ಈಸ್ಕಿಲಸ್ ಚಿಂತಿಸತೊಡಗಿದ್ದ ಎಂಬುದು ವ್ಯಕ್ತವಾಗುತ್ತದೆ.

ಸಾಲು ೭೮೪ ರಿಂದ ೯೩೩ರ ವರೆಗೆ ಇರುವ ಭಾಗ ನಿರೂಪಣೆಯ ಕೊನೆಯ ಘಟ್ಟ. ಸೋತು, ಜರ್ಜರಿತನಾಗಿ, ನಿಸ್ತೇಜನಾದ ಚಕ್ರವರ್ತಿ ಕ್ಷಯಾರ್ಷ ಕಾಣಿಸಿಕೊಳ್ಳುತ್ತಾನೆ. ಮೇಳ ಅವನೊಡನೆ ಕಠಿಣವಾಗಿ ವರ್ತಿಸುತ್ತದೆ. ಕೊನೆಗೆ ತೀವ್ರವಾದ ಗೋಳಿನಲ್ಲಿ, ನಾಟಕ ಮುಗಿಯುತ್ತದೆ.

ಇಡೀ ನಾಟಕ ಹೀಗೆ ಒಂದು ಅಖಂಡ ನಿರೂಪಣೆ. ಇದನ್ನ ಒಟ್ಟಿಗೆ ಹಿಡಿದಿಡಲು ಯಾವುದೇ ಒಂದು 'ಪಾತ್ರ' ಇಲ್ಲ. ಅದರ ಬದಲಿಗೆ ಈಸ್ಕಿಲಸನ ಗಂಭೀರ ಶೈಲಿ ಮತ್ತು ಕಾವ್ಯ ಇದೆ. ಈ ಅಂಶಗಳ ವಿವೇಚನೆ ದೀರ್ಘವಾಗುವುದರಿಂದ ಇಲ್ಲಿ ಕೆಲವು ಸೂಚನೆಗಳನ್ನಷ್ಟೆ ಕೊಡಬಹುದು. ಕತ್ತಲು-ಬೆಳಕುಗಳ ವೈರುಧ್ಯ, ಹೂವು, ಬಲೆ – ಕೊನೆಯುಪಕ್ಷ ಈ ಮೂರು ನಾಟಕದುದ್ದಕ್ಕೂ ಪ್ರತಿಮೆಗಳಾಗಿ ಬೆಳೆದು ನಿರೂಪಣೆಗೆ ಐಕ್ಯವನ್ನು ಒದಗಿಸುತ್ತವೆ.

ಪಾರಸಿಕರು ಇಷ್ಟವಾಗದಿರುವುದಕ್ಕೆ ಕಾರಣಗಳು ಮೂಲಕೃತಿಯಲ್ಲೆ ಇವೆ. ಕ್ರಿಯೆಯ ಅಭಾವ, ಉದಾತ್ತವಾದ ಪಾತ್ರಗಳಿಲ್ಲದಿರುವುದು, ನಿರೂಪಣೆಯಲ್ಲಿರುವ ನಾಟಕೀಯತೆಯ ಅಭಾವ ಇತ್ಯಾದಿ. ಆದರೆ ಭಾಷಾಂತರ ಕೃತಿಯಾಗಿ 'ಪಾರಸಿಕರು' ಸಾಧಿಸಿದ್ದೇನು ಎಂಬ ಪ್ರಶ್ನೆಗೆ ಉತ್ತರ ಕೊಡುವುದು ಸ್ವಲ್ಪ ಕಷ್ಟದ ಕೆಲಸ. ಭಾಷಾಂತರದಿಂದ ನಾವು ಏನನ್ನು ನಿರೀಕ್ಷಿಸುತ್ತೇವೆ? ನಾಟಕವನ್ನು ಕುರಿತು ನಮಗೆ ಯಾವ ಧೋರಣೆಗಳಿವೆ? ಎಂಬ ಪ್ರಶ್ನೆಗಳು ಮುಖ್ಯವಾಗುತ್ತವೆ. ಮೂಲಕ್ಕೆ ನಿಷ್ಠವಾಗಿರಬೇಕು ಹಾಗೂ ಭಾಷಾಂತರಗೊಂಡ ಭಾಷೆಯ ಜಾಯಮಾನಕ್ಕೆ ಸಹಜವೆನಿಸುವಂತಿರಬೇಕು ಎಂಬ ಎರಡೂ ಅಪೇಕ್ಷೆಗಳು ಭಾಷಾಂತರಕಾರನನ್ನು ವಿರುದ್ಧ ದಿಕ್ಕುಗಳಲ್ಲಿ ಸೆಳೆಯುವ ಅಂಶಗಳು. ಹಾಗಾಗಿ "ಧರೆಯ ಲಕ್ಷ್ಮಿಯರ ತಲೆಯಾರಾಮ" (ಸಾಲು ೧೧೧), "ಪಾರಸಿಕ ವೀರರಿಗೆ ಹಾ ರಾಹುಕೇತು" (ಸಾಲು ೧೫೬) "ರುದ್ರ ಮಾಡಿಂ" (ಸಾಲು ೧೪೪) ಇಂಥ ಮಾತುಗಳು ಸಹಜ ಕನ್ನಡ ಪ್ರಯೋಗಗಳಾಗಿದ್ದರೂ ಗ್ರೀಕ್ ವಾತಾವರಣದಲ್ಲಿ ಈ ಭಾರತೀಯ ಕಲ್ಪನೆಗಳು ಅಷ್ಟು ಹೊಂದಲಾರವೆನಿಸುತ್ತದೆ. ಈಸ್ಕಿಲಸನನ್ನು ಕನ್ನಡಕ್ಕೆ ಮೊದಲು ಪರಿಚಯ ಮಾಡಿಸಿದ್ದು ನಾಟಕ ರಚನೆಯ ಸಾಧ್ಯತೆಗಳನ್ನು ಅನ್ವೇಷಿಸಿದ್ದು ನಿಸ್ಸಂದೇಹವಾಗಿ ಪಾರಸಿಕರು ಮಾಡಿದ ಸಾಧನೆಗಳು.

ನಾಟಕವೆಂಬುದು ಒಂದು ಸಂಕೀರ್ಣ ಪ್ರದರ್ಶಕ ಕಲೆ, ಅದರ ಸ್ವರೂಪ ಮತ್ತು ನಿಯಮಗಳು ಕಾವ್ಯ, ಅಥವಾ ಕಾದಂಬರಿ ಇಂಥ 'ಶ್ರವ್ಯ ಕಾವ್ಯ' ಕ್ಕಿಂತ ಭಿನ್ನ ಎಂಬ ಅರಿವು ನವೋದಯ ನಾಟಕ ಲೇಖಕರಿಗೆ ಅಷ್ಟು ಸ್ಪಷ್ಟವಾಗಿರಲಿಲ್ಲವೇನೋ ಎಂದು

ತೋರುತ್ತದೆ. 'ಇಂಗ್ಲಿಷ್ ಗೀತಗಳು' ಕನ್ನಡ ಕಾವ್ಯದ ಮೇಲೆ ಮಾಡಿದ ಪರಿಣಾಮಕ್ಕೂ, ಪಾರಸಿಕರು ಅಥವ ಇತರ ನಾಟಕಗಳು ಕನ್ನಡ ನಾಟಕದ ಮೇಲೆ ಮಾಡದೆ ಹೋದ ಪರಿಣಾಮಕ್ಕೂ ಮುಖ್ಯ ಕಾರಣ ಇದೇ – ನವೋದಯ ನಾಟಕಕಾರರು ರಂಗಭೂಮಿಯ ಪ್ರದರ್ಶನವನ್ನು ಉದ್ದೇಶಿಸಿ ಬರೆಯಲಿಲ್ಲ. ನಾಟಕವೂ 'ಸಾಹಿತ್ಯ'ವೆಂದೇ ಅವರ ಧೋರಣೆಯಾಗಿತ್ತು. ಶ್ರೀಯವರು ಹೇಳುವ ಈ ಮಾತುಗಳನ್ನು ಗಮನಿಸಿ: "ಹಳಗನ್ನಡದಲ್ಲಿ ನನಗೂ ಅಕ್ಕರೆ ಉಂಟು: ತಿಳಿಯಾದ, ಬಿಗಿಯಾದ, ತಿರುಳಾದ, ಇಂಪಾದ ಆ ನುಡಿಯನ್ನು ಕೈಬಿಡುವುದೆಂದರೆ ನನಗೂ ವ್ಯಸನವೇ. ಮುಂದೆ ಜನರಲ್ಲಿ ಅದರ ತಿಳಿವಳಿಕೆ ಹೆಚ್ಚಿದ ಮೇಲೋ, ಇಲ್ಲ, ಕೇವಲ ವಿದ್ಯಾವಂತರೇ ತಿಳಿಯಬೇಕಾದ ತತ್ವಗಳಿಗಾಗಿಯೋ, ಇಲ್ಲ, ಪರಮೋತ್ಕೃಷ್ಟವಾದ ಕಾವ್ಯ-ನಾಟಕ-ಗೀತೆಗಳಿಗಾಗಿಯೋ ಅದನ್ನು ಉಪಯೋಗಿಸಬಹುದು." ('ಶ್ರೀ ಸಾಹಿತ್ಯ' ಪುಟ ೨೫೪) ಈ ಮಾತು ಶ್ರೀಯವರಿಗೆ ಹಳಗನ್ನಡದ ಮೇಲೆ ಇರುವ ಅಭಿಮಾನವನ್ನು ತೋರುತ್ತದೆ. ಶ್ರೀಯವರಿಗೆ ಭಾಷೆ, ಲಯ, ಛಂದಸ್ಸುಗಳ ಮೇಲಿರುವ ಅಸಾಧಾರಣ ಹಿಡಿತದಿಂದಾಗಿ ಅವರ ಲೇಖನಿಯಿಂದ ಮೂಡಿದ ಈ ಹಳಗನ್ನಡ ಭಾಷಾಂತರ ಬಹಳ ಚೆನ್ನಾಗಿ ಓದಿಸಿಕೊಳ್ಳುತ್ತದೆ. ಮತ್ತು ಇದೇ ಕಾರಣದಿಂದ ರಂಗಭೂಮಿಯ ಮೇಲೆ ವಿಫಲವಾಗುತ್ತದೆ. ಜನರಲ್ಲಿ ಬಳಕೆಯಲ್ಲಿಲ್ಲದ, ಮತ್ತೆಂದೂ ಬಳಕೆಗೆ ಬರಲು ಸಾಧ್ಯವೇ ಇಲ್ಲದ, ಭಾಷಾರೂಪದ ನಾಟಕವನ್ನು 'ವಿಶಿಷ್ಟ' ಪ್ರೇಕ್ಷಕರು ಮೆಚ್ಚಬಹುದು ಅಷ್ಟೆ. ನವೋದಯಕಾಲದಲ್ಲಿ ಭಾಷಾಂತರಗೊಂಡ ನಾಟಕ ಕೃತಿಗಳಲ್ಲಿ – ಶ್ರೇಷ್ಠ ನಾಟಕಗಳು – ಮ್ಯಾಕ್‌ಬೆತ್, ಪ್ರಮಿಥ್ಯೂಸ್, ಯೂರಿಪಿಡಸ್‌ನ ಮತ್ತು ಸೊಫೊಕ್ಲಿಸನ ಕೃತಿಗಳು – ಇತ್ಯಾದಿ ಶ್ರೀಯವರ ಮಾದರಿಯನ್ನೇ ಅನುಸರಿಸಿದವು. ಅಂದರೆ, ಶ್ರೇಷ್ಠ 'ಸಾಹಿತ್ಯ'ವನ್ನು ಕನ್ನಡಕ್ಕೆ ತಂದವು, ಕನ್ನಡ ನಾಟಕ-ರಂಗಭೂಮಿಯನ್ನು ಎಳ್ಳಷ್ಟೂ ಬದಲಾಯಿಸಲಿಲ್ಲ. ಇಂಗ್ಲಿಷ್ ಗೀತಗಳಿಗೆ ಬಳಸಿದಂತೆ ನಾಟಕಕ್ಕೂ ಶ್ರೀಯವರು ಹೊಸಗನ್ನಡವನ್ನೇ ಬಳಸಿದ್ದರೆ, ಗ್ರೀಕ್‌ನ ದ್ವಿತೀಯದರ್ಜೆಯವೆನಿಸುವ ನಾಟಕಗಳ ಬದಲು ಈಡಿಪಸ್‌ನಂಥ, ಅಥವಾ ಷೇಕ್ಸ್‌ಪಿಯರ್‌ನಂಥ ಕೃತಿಗಳನ್ನ ಆಯ್ದುಕೊಂಡಿದ್ದರೆ, ಕಾವ್ಯ ಕ್ಷೇತ್ರದಲ್ಲಿ ಬೀಸಿದಂಥ ಹೊಸಗಾಳಿ ಕನ್ನಡ ನಾಟಕ ಕ್ಷೇತ್ರದಲ್ಲೂ ೧೯೩೦ರ ದಶಕದಲ್ಲೇ ಬೀಸುತ್ತಿತ್ತೋ ಏನೋ. ಪಾರಸಿಕರನ್ನು ಇಷ್ಟು ವರ್ಷಗಳ ನಂತರ ಓದಿದ ಮೇಲೆ ಉಳಿಯುವ ಭಾವ ಇದೇ. "ಶ್ರೀಯವರ ಪ್ರತಿಭೆ ಮಹಾಕೃತಿಯೊಂದರ ಲಯಕ್ಕೆ ಸರಿಯಾಗಿ ಮಿಡಿಯಬಲ್ಲುದು, ಅದರ ಕರೆಗೆ ಓಗೊಡಬಲ್ಲುದು ; ಆದರೆ ತಾನೇ ಆ ಮಟ್ಟದ ಕೃತಿಯನ್ನು ಸೃಷ್ಟಿಸಲಾರದು." (ಎ.ಎನ್. ಮೂರ್ತಿರಾವ್, 'ಚಿತ್ರಗಳು-ಪತ್ರಗಳು' ಪುಟ ೮೭) ಕೇವಲ ಭಾವೋದ್ವೇಗ ಪ್ರಧಾನವಾದ ಗದಾಯುದ್ಧ, ಅಥವ ಪಾರಸಿಕರುಗಳ ಬದಲಿಗೆ, ಗಾಢ, ಸಂಕೀರ್ಣ ನಾಟಕಗಳಿಗೆ ಶ್ರೀಯವರ ಪ್ರತಿಭೆ ಮಾರ್ನುಡಿದಿದ್ದರೆ – ಎಂಬ ಹಂಬಲ, ಹಳಹಳಿ ಖಂಡಿತ ಓದುಗನಲ್ಲಿ ಉಂಟಾಗುತ್ತದೆ.

# ಶ್ರೀ ಅವರ ಭಾಷಾಪ್ರಯೋಗಗಳು

—ಕೃಷ್ಣ ಪರಮೇಶ್ವರ ಭಟ್ಟ

ಶ್ರೀಯವರ ಸಾಹಿತ್ಯಕೃತಿಗಳಲ್ಲಿ ಬಳಕೆಯಾದ ಭಾಷೆಯನ್ನು ಕುರಿತು ಕೆಲವು ಮಾತುಗಳನ್ನು ಹೇಳಲು ಈ ಲೇಖನದಲ್ಲಿ ಪ್ರಯತ್ನಿಸಲಾಗಿದೆ. ಶ್ರೀ ಅವರಿಂದ ರಚಿತವಾದ ಸಾಹಿತ್ಯ ಕೃತಿಗಳೆಲ್ಲ ಪದ್ಯರೂಪದಲ್ಲಿವೆ: ಎರಡು ಕವನಸಂಗ್ರಹಗಳು ಹಾಗೂ ಮೂರು ನಾಟಕಗಳು ಇವುಗಳಲ್ಲಿ 'ಹೊಂಗನಸುಗಳು' ಎಂಬ ಕವನ ಸಂಗ್ರಹ ಮಾತ್ರ ಸ್ವತಂತ್ರ ಕೃತಿ. 'ಅಶ್ವತ್ಥಾಮನ್' ಎಂಬ ನಾಟಕ ಭಾಷೆ-ರೂಪಗಳಲ್ಲಿ ಹೊಸತನದಿಂದ ಕೂಡಿದ್ದು. 'ಇಂಗ್ಲಿಷ್ ಗೀತಗಳು' ಹಾಗೂ 'ಪಾರಸಿಕರು' ಅನುವಾದಗಳು. 'ಗದಾಯುದ್ಧ ನಾಟಕಂ' ಹಳೆಯ ಕಾವ್ಯವೊಂದರ ಮಾರ್ಪಾಡು.

ಮುಂದೆ, ಲೇಖನದಲ್ಲಿ ಶ್ರೀ ಅವರ ಭಾಷೆಯನ್ನು ಕುರಿತು ಹೇಳುವಾಗ 'ಗದಾಯುದ್ಧ ನಾಟಕ'ವನ್ನುಳಿದ ಇತರ ಕೃತಿಗಳನ್ನು ಅದರಲ್ಲಿಯೂ 'ಹೊಂಗನಸು ಗಳು' ಹಾಗೂ 'ಇಂಗ್ಲಿಷ್ ಗೀತಗಳು' ಎಂಬ ಸಂಗ್ರಹಗಳನ್ನು ಮುಖ್ಯವಾಗಿ ಆಧಾರ ವಾಗಿಟ್ಟುಕೊಂಡಿದ್ದೇನೆ.*

೧

ಕನ್ನಡಸಾಹಿತ್ಯದಲ್ಲಿ ಶತಮಾನಗಳಿಂದ ಚರ್ವಿತಚರ್ವಣವಾಗುತ್ತಿರುವ ಕಾವ್ಯ ಪದ್ಧತಿಯನ್ನು ಮುರಿದು ಹೊಸಮಾರ್ಗವೊಂದನ್ನು ರೂಢಿಸಿಕೊಳ್ಳಬೇಕೆಂಬ ಬಯಕೆ. ಉತ್ಸಾಹಗಳಿಂದ ಕೂಡಿದ ಶ್ರೀ ಅವರು ಕಾವ್ಯದ ವಸ್ತು, ವಿಷಯಗಳಿಗೆ ಸಂಬಂಧಿಸಿ ದಂತೆ ಹೇಗೋ ಹಾಗೆಯೇ ಭಾಷೆಗೆ ಸಂಬಂಧಿಸಿದಂತೆ ಕೂಡ ಖಚಿತವಾದ ಆಲೋಚನೆ ಯನ್ನು ತಾಳಿದುದು ಸಿರೀಕ್ಷಿತವಾದ ಸಂಗತಿಯೇ. ಅವರ 'ಕನ್ನಡಿಗರಿಗೆ ಒಳ್ಳೆಯ

* ಮುಂದೆ ಶ್ರೀ ಅವರ ಹೇಳಿಕೆ-ಅಭಿಪ್ರಾಯಗಳನ್ನು ಕುರಿತ ಉಲ್ಲೇಖಗಳನ್ನು ನೀಡುವಾಗಲೆಲ್ಲ ಶ್ರೀ ಅವರ ಗದ್ಯ-ಪದ್ಯ ಬರಹಗಳ ಸಮಗ್ರ ಆವೃತ್ತಿಯಾದ 'ಶ್ರೀ ಸಾಹಿತ್ಯ' ವನ್ನು ಆಧಾರವಾಗಿರಿಸಿಕೊಂಡಿದ್ದೇನೆ.

ಸಾಹಿತ್ಯ' ಹಾಗೂ 'A hand book of rhetoric' ಎಂಬ ಕೃತಿಗಳಲ್ಲಿ ಇವು ವ್ಯಕ್ತವಾಗಿವೆ. ಈ ಆಲೋಚನೆಗಳು ಅವರ ಸ್ವತಂತ್ರ ಹಾಗೂ ಅನುವಾದಿತ ಸಾಹಿತ್ಯಕೃತಿಗಳ ಭಾಷೆಯಲ್ಲಿ ಮೂರ್ತರೂಪ ಪಡೆದಿರುವುದನ್ನೂ ನೋಡಬಹುದು. ಮುಂದೆ ರೂಢಿಸಿಕೊಳ್ಳಬೇಕಾದ ಕನ್ನಡದ ಕಾವ್ಯದ ಭಾಷೆ ಹೇಗಿರಬೇಕು ? ರೂಪ ಹೇಗಿರಬೇಕು ? – ಎಂಬುದನ್ನು ಕುರಿತಂತೆ ಅವರ ಆಲೋಚನೆಗಳನ್ನು ಹೀಗೆ ಸಂಗ್ರಹಿಸಿಕೊಳ್ಳಬಹುದು : "ಸದ್ಯಕ್ಕೆ ... ದೊಡ್ಡ ಕವನಗಳನ್ನಾಗಲೀ, ಸ್ವಂತ ನಾಟಕಗಳನ್ನಾಗಲೀ ಬರೆಯುತಕ್ಕದ್ದಲ್ಲ." (ಶ್ರೀ ಸಾ. ಪು. ೨೨೫) ಹಿಂದಿನ ಕವಿಗಳು ಉತ್ತಮವಾದ, ಸರಳವಾದ ಕನ್ನಡದ ಮಾತುಗಳನ್ನು ಮೂಲೆಗೆ ತಳ್ಳಿ ಕ್ಲಿಷ್ಟವಾದ ಸಂಸ್ಕೃತವನ್ನು ತುರುಕಿ ಕನ್ನಡ ಭಾಷೆಯನ್ನು ಹಿಂದುಮಾಡಿದರು. (ಶ್ರೀ ಸಾ. ಪು. ೨೫೧) ಇನ್ನುಮುಂದೆ ಹೊಸಗನ್ನಡವನ್ನೇ ಬಳಸಬೇಕು. ಹಳಗನ್ನಡವನ್ನು ಬಳಸಲೇಬಾರದೆಂದಲ್ಲ. ಅದನ್ನು ಕೆಲವು ಸೀಮಿತ ಸಂದರ್ಭಗಳಲ್ಲಿ ಮಾತ್ರ ಕೇವಲ ವಿದ್ಯಾವಂತರೇ ತಿಳಿಯಬೇಕಾದ ತತ್ತ್ವಗಳಿಗಾಗಿಯೋ ಇಲ್ಲವೇ ಉತ್ಕೃಷ್ಟವಾದ ಕಾವ್ಯ-ನಾಟಕ-ಗೀತೆಗಳಿಗಾಗಿಯೋ ಉಪಯೋಗಿಸಬಹುದು. (ಶ್ರೀ ಸಾ. ಪು. ೨೫೪) ಆದರೆ ಭಾಷೆಯನ್ನು ಸುಲಭಮಾಡುತ್ತೇನೆಂದು ಹೊರಟು ಭಾಷೆಯನ್ನು ಅಬದ್ಧ ಮಾಡಬಾರದು. ಗ್ರಾಮ್ಯವನ್ನು ದೂರವೇ ನಿಲ್ಲಿಸಿ, ಭಾಷೆ ಶುದ್ಧವಾಗಿ, ಬಿಗಿಯೂ ಕಟ್ಟೂ ಇರುವಂತೆ ಜಾಗ್ರತೆ ವಹಿಸಬೇಕು. (ಶ್ರೀಸಾ. ಪು. ೨೫೭) ಪರಭಾಷೆಯ ಶಬ್ದಗಳನ್ನು ಅನಿವಾರ್ಯವಾದಲ್ಲಿ ಮಾತ್ರ ಸ್ವೀಕರಿಸಬೇಕು. ಅದೂ ಜನಬಳಕೆಗೆ ಬಂದು ನೆಲೆಯೂರಿದ ಶಬ್ದಗಳನ್ನು ಮಾತ್ರ ಸ್ವೀಕರಿಸಬೇಕು. ಸ್ವೀಕರಿಸಬೇಕಾದ ಸಂದರ್ಭದಲ್ಲಿ ಇಂಗ್ಲಿಷ್-ಹಿಂದುಸ್ಥಾನಿ ಶಬ್ದಗಳ ನಡುವೆ ಆಯ್ಕೆಯ ಪ್ರಶ್ನೆ ಬಂದಾಗ ಹಿಂದೂಸ್ಥಾನಿ ಶಬ್ದಗಳನ್ನೇ ಸ್ವೀಕರಿಸಬೇಕು. ಆದರೆ ಸಾಧ್ಯವಾದಷ್ಟೂ ದೇಶ್ಯಶಬ್ದಗಳನ್ನೇ ಹೊಸ ಭಾವ-ಅರ್ಥಗಳನ್ನು ವ್ಯಕ್ತಪಡಿಸುವಂತೆ ಹಿಗ್ಗಿಸಿ, ಕುಗ್ಗಿಸಿ ಬಳಸಬೇಕು (ಶ್ರೀ ಸಾ. ಪು. ೨೬೦-೬೩) ಸಾಮಾನ್ಯವಾಗಿ ಒಂದು ಶಬ್ದದ ಮಹತ್ವ ಅದರ ಉದ್ದವನ್ನು ಅವಲಂಬಿಸುವುದಿಲ್ಲವಾದರೂ ಶಬ್ದ ಚಿಕ್ಕದಾದಷ್ಟೂ, ದೇಶ್ಯವಾದಷ್ಟೂ ಪರಿಚಿತವಾದಷ್ಟೂ ಅದು ಹೆಚ್ಚು ಪರಿಣಾಮಕಾರಿಯಾಗಿರುತ್ತದೆ. (ಶ್ರೀ ಸಾ. ಪು. ೬೨೧)

ಮೇಲಿನ ವಾಕ್ಯಗಳು ಕಾವ್ಯಭಾಷೆಯನ್ನು ಕುರಿತ ಶ್ರೀ ಅವರ ಆಲೋಚನೆಗಳನ್ನು ತಕ್ಕಮಟ್ಟಿಗೆ ಸ್ಪಷ್ಟಪಡಿಸುತ್ತವೆ. ಅವರ ಲೇಖನಗಳಲ್ಲಿ ಹಾಗೂ ಸಾಹಿತ್ಯಕೃತಿಗಳಲ್ಲಿ ಇವಕ್ಕೆ ವಿರೋಧವಾದ ಸಂಗತಿಗಳು ಅಪರೂಪವಾಗಿಯಾದರೂ ಕಾಣಿಸಿಕೊಳ್ಳದೆ ಇಲ್ಲ. ಉದಾಹರಣೆಗೆ, ಸಂದರ್ಭಗಳಿಗೆ ಅನುಗುಣವಾಗಿ ದೇಶೀಶಬ್ದಗಳನ್ನೇ ವಿಸ್ತೃತಾರ್ಥದಲ್ಲಿಯೋ ಸಂಕುಚಿತಾರ್ಥದಲ್ಲಿಯೋ ಬಳಸಬೇಕೆಂದು ಒಂದೆಡೆ ಹೇಳಿ ಇನ್ನೊಂದೆಡೆ ದೇಶೀಶಬ್ದಗಳು ಉದ್ದಿಷ್ಟಾರ್ಥವನ್ನು ನೀಡದಿದ್ದರೆ ಅನ್ಯಭಾಷೆಯ ಶಬ್ದಗಳನ್ನು ಸ್ವೀಕರಿಸಬಹುದು ಎಂದಿದ್ದಾರೆ. ತೋರಿಕೆಗೆ ಇಲ್ಲಿ ವಿರೋಧವಿಲ್ಲವೆನಿಸ

ಬಹುದು. ಆದರೆ ಕಾವ್ಯದಲ್ಲಿ ಶಬ್ದವೊಂದರ ಮೂಲಾರ್ಥವನ್ನು ವಿಸ್ತರಿಸಿ/ಸಂಕೋಚಿಸಿ ಬಳಸಿದಾಗ ಅದು ವ್ಯಕ್ತವಾಗಬೇಕಾದದ್ದು ಆ ಶಬ್ದದ ಸ್ವಸಾಮರ್ಥ್ಯದಿಂದಲ್ಲ; ಅದು ವ್ಯಕ್ತವಾಗುವಂತೆ ಕಾವ್ಯದಲ್ಲಿ ಇತರ ಶಾಬ್ದಿಕ ಹಾಗೂ ವಿಷಯಕ ಪರಿಸರವನ್ನು ಕಟ್ಟಿಕೊಡುವುದು ಕವಿಯ ಸಾಮರ್ಥ್ಯಕ್ಕೆ ಬಿಟ್ಟದ್ದು. ಇಂತಹ ಸಂದರ್ಭಗಳಲ್ಲಿ ಶಬ್ದಾರ್ಥವೊಂದಕ್ಕೆ ರೂಢಿಯ ಅರ್ಥದ ಜೊತೆಗೆ ಹೊಸ ಅರ್ಥದ ಛಾಯೆಯೊಂದನ್ನು ಆರೋಪಿಸಲು ಕವಿ ಕೈಗೊಳ್ಳುವ ಉಪಾಯಗಳಲ್ಲಿ ಒಂದು, ಪರ್ಯಾಯೋಕ್ತಿಯನ್ನು ಬಳಸುವುದು. ಉದಾಹರಣೆಗೆ, ಸಾಮಾನ್ಯಭಾಷೆಯಲ್ಲಿ ಸಮಾನಾರ್ಥಕಗಳಾದ ಪಾಲಕ ಹಾಗೂ ಪ್ರಭು ಎಂಬ ಶಬ್ದಗಳು ತಮ್ಮ ಧ್ವನಿ ಸಮುಚ್ಚಯಗಳಲ್ಲಿ ತೋರುವ ವ್ಯತ್ಯಾಸದಿಂದ ಕಾವ್ಯದಲ್ಲಿ ಬೇರೆ ಬೇರೆ ಅರ್ಥದ ಛಾಯೆಗಳನ್ನು ಪ್ರಕಟಿಸಲು ಶಕ್ತವಾಗುತ್ತವೆ. ಪ್ರಭು ಶಬ್ದ ಸೂಚಿಸುವ ಅಧಿಕಾರ, ಧಾರ್ಷ್ಟ್ಯ ಮುಂತಾದ (ಇನ್ನೊಂದು ಶಬ್ದ ಸೂಚಿಸದ) ಗುಣಗಳನ್ನು ವ್ಯಕ್ತಪಡಿಸುವಲ್ಲಿ ಈ ಶಬ್ದದ ಧ್ವನಿಗಳೂ ಅವುಗಳ ಜೋಡಣೆಯೂ ಕಾರಣವಾಗಿವೆ. ಆದರೆ ಶ್ರೀಯವರು ಪರ್ಯಾಯೋಕ್ತಿಗಳ ಬಳಕೆಯನ್ನು ವಿರೋಧಿಸುವಂತೆ ತೋರುತ್ತದೆ. (ಶ್ರೀ ಸಾ. ಪು. ೨೬೦) ವಿದ್ಯಾವಂತರ ಭಾಷೆಯಲ್ಲಿ ಬಳಕೆಯಾಗುವ ಸಾಧ್ಯತೆಯಿಲ್ಲದ ಸಂಸ್ಕೃತಶಬ್ದಗಳನ್ನೂ ಗ್ರಾಮ್ಯಶಬ್ದಗಳನ್ನೂ ಬಳಸಬಾರದೆಂದು ಶ್ರೀ ಅವರು ಹೇಳುತ್ತಾರೆ. ಆದರೆ ಉದ್ಭವಿಸು, ಒಪ್ಪೆ, ದೊಪ್ಪ ಮುಂತಾದ ಶಬ್ದಗಳು (ತೀರ ಕಡಿಮೆ ಸಂಖ್ಯೆಯಲ್ಲಿ) ಅವರ ಕಾವ್ಯದಲ್ಲಿ ಬಳಕೆಯಾಗಿದೆ. ಹಾಗೆಯೇ ಅರ್ಥವಾಗದ ಹಳಗನ್ನಡದ ಶಬ್ದಗಳನ್ನು ಬಳಸಬಾರದೆನ್ನುತ್ತಾರೆ. ಆದರೆ ಅವರ ಕವನ, ನಾಟಕಗಳಲ್ಲಿ ಹಳಗನ್ನಡದ ಶಬ್ದಗಳಲ್ಲದೆ (ಇಂದಿನ ಉಚ್ಚಾರಣೆಯಲ್ಲಿಲ್ಲದ) ಧ್ವನಿಗಳ ಬಳಕೆಯೂ ಆಗಿದೆ. ಆದರೆ ಇವೆಲ್ಲ ಅಷ್ಟೊಂದು ಮುಖ್ಯವಾದ ಸಂಗತಿಗಳಲ್ಲ ಎಂದು ನಿರ್ಲಕ್ಷಿಸಬಹುದು. ಇವುಗಳನ್ನು ಕುರಿತು ಕೊನೆಯಲ್ಲಿ ಮತ್ತೆ ಕೆಲವು ಮಾತುಗಳನ್ನು ಹೇಳಲು ಪ್ರಯತ್ನಿಸುತ್ತೇನೆ.

ಶ್ರೀ ಅವರ ಲೇಖನಗಳಲ್ಲಿ ಹೇಳಿರುವ ಮಾತುಗಳಿಂದ ಅವರ ಮನೋಧರ್ಮ ಸ್ಪಷ್ಟವಾಗಿದೆ: ಬದಲಾಗಿರುವ ಪರಿಸರದ ಹಿನ್ನೆಲೆಯಲ್ಲಿ ಹೊಸ ಭಾವ, ಹೊಸ ಅನುಭವಗಳನ್ನು ವ್ಯಕ್ತಪಡಿಸಲು ಹಳೆಯ ಕಾವ್ಯದ ಮಾದರಿಗಳು – ರೀತಿ, ರೂಪ, ಭಾಷೆಗಳು ಸಾಲವು. ಆದ್ದರಿಂದ ಈ ಮಾದರಿಗಳಿಂದ ಅದರಲ್ಲಿಯೂ ಸಂಸ್ಕೃತದ ಕಾವ್ಯಗಳ ಪ್ರಭಾವದಿಂದ ಹೊರಬರುವುದು ಅನಿವಾರ್ಯ. ಈ ದಿಸೆಯಲ್ಲಿ ಇಂಗ್ಲಿಷ್ ಕಾವ್ಯದ ಮಾದರಿಗಳು ಸಹಾಯಕಾರಿ.

೨

ಶ್ರೀ ಅವರು ಕಾವ್ಯಭಾಷೆಯನ್ನು ವಿದ್ಯಾವಂತರು ಮಾತನಾಡುವ (ಅಂದಿನ) ಕನ್ನಡಕ್ಕೆ ಸಮೀಪವಾಗಿ ತರಬೇಕೆಂಬ ಆಶಯವನ್ನು ಇಟ್ಟುಕೊಂಡಿದ್ದರೆಂಬುದನ್ನು

ಮೇಲೆಯೇ ಹೇಳಲಾಗಿದೆ. ಈ ಆಶಯ ಹಾಗೂ ಇತರ ಕೆಲವು ತಾಂತ್ರಿಕ ವಿಧಾನಗಳು ಅವರ ಕೃತಿಗಳಲ್ಲಿ ಹೇಗೆ ವ್ಯಕ್ತವಾಗಿದೆಯೆಂಬುದನ್ನು ಈಗ ಪರಿಶೀಲಿಸಬಹುದು. ಆಡುಮಾತಿನ ಈ ಒಂದು ಸರಳ ವಾಕ್ಯವನ್ನು ಗಮನಿಸಿ : 'ಮರ ಉರುಳಿ ಬಿದ್ದಿದೆ' ಆಡುಮಾತಿನ ಬೇರೆ ಬೇರೆ ಸಂದರ್ಭಗಳಲ್ಲಿಯೆ ಈ ವಾಕ್ಯದ ಪದಗಳು ಪಲ್ಲಟಗೊಂಡು 'ಉರುಳಿ ಬಿದ್ದಿದೆ ಮರ', 'ಬಿದ್ದಿದೆ ಮರ ಉರುಳಿ', 'ಮರ ಬಿದ್ದಿದೆ ಉರುಳಿ,' ಎಂದು ಮುಂತಾಗಿ ಬಳಕೆಯಾಗಬಹುದು. ಹಾಗೆಯೆ 'ನಾನು ಹಣ್ಣನ್ನು ತಿಂದೆ' ಎಂಬ ವಾಕ್ಯದಲ್ಲಿಯ ಪದಗಳನ್ನೂ ಸ್ಥಾನಪಲ್ಲಟಗೊಳಿಸಿ ಬಳಸಬಹುದು. ಈಗ ವಿಶೇಷಣ, ಕ್ರಿಯಾವಿಶೇಷಣಗಳಿಂದ ಕೂಡಿದ ಇನ್ನೊಂದು ವಾಕ್ಯವನ್ನು ಗಮನಿಸಿ : 'ತುಂಟ ಹುಡುಗ ದೊಡ್ಡ ಹಣ್ಣನ್ನು ತಿಂದುಬಿಟ್ಟ.' ಈ ವಾಕ್ಯದಲ್ಲಿಯ ಪದಗಳು ಜೋಡಣೆಯಾಗಿರುವ ರೀತಿಯನ್ನು ಹೀಗೆ ತೋರಿಸಬಹುದು :




ಇಲ್ಲಿ 'ತುಂಟ ಹುಡುಗ' ಹಾಗೂ 'ದೊಡ್ಡ ಹಣ್ಣನ್ನು ತಿಂದುಬಿಟ್ಟ' ಎಂಬಿವು ಈ ವಾಕ್ಯದ ಮೇಲಿನ ಹಂತದ ಎರಡು ಘಟಕಗಳು ಅಥವಾ ಸಾಕ್ಷಾದಂಗಗಳು. 'ದೊಡ್ಡ ಹಣ್ಣನ್ನು' ಹಾಗೂ 'ತಿಂದುಬಿಟ್ಟ' ಎಂಬಿವು ಇನ್ನೂ ಕೆಳಗಿನ ಹಂತದ ಸಾಕ್ಷಾದಂಗಗಳು : ಹೀಗೆಯೇ ಒಡೆಯುತ್ತ ಹೋದಂತೆ ಇತರ ಕೆಳಗಿನ ಹಂತದ ಸಾಕ್ಷಾದಂಗಗಳು ದೊರೆಯುತ್ತವೆ. ಈ ವಾಕ್ಯವನ್ನು ಆಡುಮಾತಿನಲ್ಲಿ ಬಳಸಿದಾಗ ಅದನ್ನು ಯಾವ ಯಾವ ರೂಪದಲ್ಲಿ ಬಳಸಬಹುದೆಂಬುದನ್ನು ಗಮನಿಸಿ : ಮೇಲೆ ಹೇಳಿದ ವಾಕ್ಯರೂಪದ ಜೊತೆಗೆ 'ತುಂಟ ಹುಡುಗ ತಿಂದುಬಿಟ್ಟ ದೊಡ್ಡ ಹಣ್ಣನ್ನು' ಹಾಗೂ 'ದೊಡ್ಡ ಹಣ್ಣನ್ನು ತಿಂದುಬಿಟ್ಟ ತುಂಟ ಹುಡುಗ' (ಇಲ್ಲೆಲ್ಲ ಹಣ್ಣನ್ನು ಎಂಬುದು ಹಣ್ಣನ್ನ ಅಥವಾ ಹಣ್ಣ ಎಂಬ ಸಂಕ್ಷೇಪರೂಪ ತಾಳಬಹುದು) ಎಂಬ

ರೂಪಗಳು ಬಳಕೆಯಾಗುವುದೂ ಸಾಧ್ಯ. ಆದರೆ 'ದೊಡ್ಡ ಹಣ್ಣು ತುಂಟ ಹುಡುಗ ತಿಂದುಬಿಟ್ಟ' ಎಂಬುದಾಗಲೀ 'ತಿಂದುಬಿಟ ದೊಡ್ಡ ಹಣ್ಣು ತುಂಟ ಹುಡುಗ' ಎಂಬುದಾಗಲೀ ಅಸಾಧ್ಯವಲ್ಲವಾದರೂ ಬಳಕೆಯಾಗುವ ಸಂಭವ ಕಡಿಮೆ. ಅಂದರೇನಾಯಿತು ? ವಾಕ್ಯದಲ್ಲಿಯ ಮೇಲು ಹಂತದ ಸಾಕ್ಷಾದಂಗಗಳನ್ನು ಮಾತ್ರ (ಮೇಲಿನ ವಿಭಜನೆಯಲ್ಲಿ ದಪ್ಪಕ್ಷರದಲ್ಲಿ ತೋರಿಸಿದ ಭಾಗ) ಅದಲುಬದಲುಗೊಳಿಸಿ ಬಳಸಬಹುದೇ ವಿನಾ ಒಂದು ಘಟಕ(ಸಾಕ್ಷಾದಂಗ)ದೊಳಗೆ ಇನ್ನೊಂದನ್ನು ತೂರಿಸಿ ಬಳಸುವ ಸಂಭವ ಕಡಿಮೆ. ಇನ್ನು 'ತುಂಟ ಹುಡುಗ ಹಣ್ಣು ದೊಡ್ಡ ತಿಂದುಬಿಟ್ಟ' ಅಥವಾ 'ಹುಡುಗ ದೊಡ್ಡ ಹಣ್ಣು ತುಂಟ ತಿಂದುಬಿಟ್ಟ' ಎಂಬಂತಹ ರೂಪಗಳು ಕಾಣಿಸಿಕೊಳ್ಳುವುದು ಸಾಧ್ಯವೇ ಇಲ್ಲ. ಅಂದರೆ 'ದೊಡ್ಡ ಹಣ್ಣು' ಎಂಬಂತಹ ಕೆಳಹಂತದ ಘಟಕಗಳಲ್ಲಿಯ ಪದಗಳನ್ನು ಅದಲುಬದಲಾಗಿಸಿ ಬಳಸುವುದಾಗಲೀ 'ತುಂಟ ಹುಡುಗ', 'ದೊಡ್ಡ ಹಣ್ಣು' ಎಂಬಂತಹ ಬೇರೆ ಬೇರೆ ಘಟಕಗಳಿಗೆ ಸೇರಿದ ಪದಗಳನ್ನು ಕೂಡಿಸಿ ಬಳಸುವುದಾಗಲೀ ಆಡುಮಾತಿನಲ್ಲಿ ಸಾಧ್ಯವೇ ಇಲ್ಲ. ಆದರೆ ಕಾವ್ಯಭಾಷೆಯಲ್ಲಿ 'ತುಂಟಹುಡುಗ ತಿಂದುಬಿಟ್ಟ ದೊಡ್ಡಹಣ್ಣು' ಎಂಬಂತಹ ರೂಪವಾಗಲೀ 'ಹುಡುಗ ತಿಂದುಬಿಟ್ಟ ಹಣ್ಣು ದೊಡ್ಡ' ಎಂಬಂತಹ ರೂಪವಾಗಲೀ ಬಳಕೆಯಾಗುವುದು ತೀರ ಸಾಧ್ಯ. ಆದರೆ 'ಹುಡುಗ ದೊಡ್ಡ ಹಣ್ಣು ತುಂಟ ತಿಂದುಬಿಟ್ಟ' ಎಂಬ ರೂಪದ ಬಳಕೆ ಅಸಾಧ್ಯ. ಅಂದರೆ ಕಾವ್ಯಭಾಷೆಯಲ್ಲಿ ಕೆಳಗಿನ ಹಂತದ ಘಟಕಗಳಲ್ಲಿಯ ಪದಗಳನ್ನೂ ಅದಲುಬದಲಾಗಿಸಬಹುದು ; ಆದರೆ ಬೇರೆ ಬೇರೆ ಘಟಕಗಳಿಗೆ ಸೇರಿದ ಪದಗಳನ್ನು ಹತ್ತಿರ ತರುವುದು ಇಲ್ಲಿಯೂ ಸಾಧ್ಯವಿಲ್ಲ ಎಂದರ್ಥ.

ಈಗ ಮೇಲಿನ ವಾಕ್ಯಕ್ಕಿಂತ ಹೆಚ್ಚು ಸಂಕೀರ್ಣವಾದ **'ತುಂಟ ಹುಡುಗ ದೊಡ್ಡ ಹಣ್ಣನ್ನು ಕೆಳಗೆ ಬೀಳಿಸಿ ತಿಂದುಬಿಟ್ಟ'** ಎಂಬ ವಾಕ್ಯವನ್ನು ಗಮನಿಸೋಣ. ಇದರಲ್ಲಿ 'ತುಂಟ ಹುಡುಗ ದೊಡ್ಡ ಹಣ್ಣನ್ನು ಕೆಳಗೆ ಬೀಳಿಸಿದ' ಎಂಬ ವಾಕ್ಯ 'ತುಂಟ ಹುಡುಗ ದೊಡ್ಡ ಹಣ್ಣನ್ನು ತಿಂದುಬಿಟ್ಟ' ಎಂಬ ಎರಡು ವಾಕ್ಯಗಳು ಸೇರಿವೆ. ಈ ವಾಕ್ಯವನ್ನು ಆಡುಮಾತಿನಲ್ಲಿ ಬಳಸುವಾಗ ಮೇಲೆ ಹೇಳಿದ ರೂಪದ ಜೊತೆಗೆ 'ದೊಡ್ಡ ಹಣ್ಣನ್ನು ಕೆಳಗೆ ಬೀಳಿಸಿ ತುಂಟ ಹುಡುಗ ತಿಂದುಬಿಟ್ಟ' ಎಂಬ ರೂಪ ಕಾಣಿಸಿಕೊಳ್ಳಲು ಸಾಧ್ಯವಿದೆ. (ಇಲ್ಲಿ ಹಣ್ಣನ್ನು ಎಂಬುದು ಹಣ್ಣು ಎಂದಾಗಬಹುದು) ಇತರ ಬದಲಾವಣೆಗಳು ಸಾಧ್ಯವಿಲ್ಲ. ಆದರೆ ಕಾವ್ಯಭಾಷೆಯಲ್ಲಿ 'ತುಂಟ ಹುಡುಗ ತಿಂದುಬಿಟ್ಟ ದೊಡ್ಡಹಣ್ಣು ಕೆಳಗೆ ಬೀಳಿಸಿ', 'ಕೆಳಗೆ ಬೀಳಿಸಿ ತುಂಟ ಹುಡುಗ ದೊಡ ಹಣ್ಣು ತಿಂದುಬಿಟ್ಟ', 'ದೊಡ್ಡಹಣ್ಣು ಬೀಳಿಸಿ ಕೆಳಗೆ ತಿಂದುಬಿಟ್ಟ ತುಂಟ ಹುಡುಗ' ಎಂಬಂತಹ ರೂಪಗಳೂ ಬಳಕೆಯಾಗುವುದು ಸಾಧ್ಯ. ಇಂತಹ ಸಂಕೀರ್ಣವಾಕ್ಯಗಳ ವಿಷಯದಲ್ಲಿ, ಆಡುಮಾತಿನಲ್ಲಿ, ಸರಳವಾಕ್ಯಗಳ ವಿಷಯದಲ್ಲಿ ತೋರುವಷ್ಟು ಪದಗಳ

ಸ್ಥಾನಪಲ್ಲಟವೂ ಸಾಧ್ಯವಿಲ್ಲವೆಂದಾಯಿತು. ಮೇಲೆ ಉದಾಹರಣೆಯಾಗಿ ತೆಗೆದುಕೊಂಡ ಎರಡು ವಾಕ್ಯಗಳನ್ನು ಬೇರೆ ಬೇರೆ ರೂಪಗಳಲ್ಲಿ ಬಳಸಬಹುದಾದ ಸಾಧ್ಯತೆಗಳನ್ನು ಹೋಲಿಸಿದರೆ ಈ ಮಾತು ಸ್ಪಷ್ಟವಾದಂತೆಯೇ.

ಇಲ್ಲಿಯವರೆಗಿನ ವಿವರಣೆಯನ್ನು ಹೀಗೆ ಸಂಗ್ರಹಿಸಬಹುದು. ತೀರ ಸರಳ ವಾಕ್ಯವೊಂದನ್ನು ಬಳಸಿದಾಗ ಆಡುಮಾತಿನಲ್ಲಾಗಲೀ, ಕಾವ್ಯದಲ್ಲಾಗಲೀ ವಾಕ್ಯದ ಪದಗಳನ್ನು ಹೇಗೆ ಬೇಕಾದರೂ ಪಲ್ಲಟಗೊಳಿಸಿ ಬಳಸಬಹುದು. (ಉದಾಹರಣೆ. 'ರಾಮು ಹಣ್ಣು ತಿಂದ' ಎಂಬ ವಾಕ್ಯವನ್ನು ನೋಡಬಹುದು.). ಆದರೆ ವಾಕ್ಯರಚನೆ ಸಂಕೀರ್ಣವಾಗುತ್ತ ಹೋದಂತೆ ಆಡುಮಾತಿನಲ್ಲಿ ಅದಕ್ಕಿರುವ ಪರ್ಯಾಯರೂಪಗಳು ಕಡಿಮೆ ; ಮೇಲುಮಟ್ಟದ ಘಟಕಗಳ ಸ್ಥಾನಬದಲಾವಣೆ ಮಾತ್ರ ಸಾಧ್ಯ. ಆದರೆ ಕಾವ್ಯಭಾಷೆಯಲ್ಲಿ ಪರ್ಯಾಯರೂಪಗಳ ಸಂಖ್ಯೆಯು ಸಾಧ್ಯತೆ ಹೆಚ್ಚು. ವಾಕ್ಯದ ಕೆಳಹಂತದ ಘಟಕವೊಂದರಲ್ಲಿ ಒಂದಕ್ಕಿಂತ ಹೆಚ್ಚು ಪದಗಳಿದ್ದಾಗ ಆಡುಮಾತಿನಲ್ಲಿ ಈ ಪದಗಳ ಅದಲು-ಬದಲು ಸಾಧ್ಯವಿಲ್ಲ ; ಕಾವ್ಯಭಾಷೆಯಲ್ಲಿ ಇದು ಸಾಧ್ಯ.* ಆದರೆ ಆಡುಮಾತಿನಲ್ಲಾಗಲೀ, ಕಾವ್ಯಭಾಷೆಯಲ್ಲಾಗಲೀ ಎರಡು ಬೇರೆ ಬೇರೆ ಘಟಕಗಳಿಗೆ ಸೇರಿದ ಪದಗಳನ್ನು ಹತ್ತಿರ ತಂದು ಬಳಸುವುದು ಸಾಧ್ಯವಿಲ್ಲ. ಹೀಗೆ ವಾಕ್ಯರಚನೆಯ ವಿಷಯದಲ್ಲಿ ಕಾವ್ಯಭಾಷೆ ಹಾಗೂ ಆಡುಮಾತುಗಳು (೧) ಇಡೀ ಘಟಕದ ಸ್ಥಾನ ಪಲ್ಲಟ ಹಾಗೂ (೨) ಒಂದೇ ಘಟಕದೊಳಗಿನ ಪದಗಳ ಪಲ್ಲಟ – ಈ ಸಂಗತಿಗಳಲ್ಲಿ ಬೇರೆಯಾಗುತ್ತವೆ ಎಂದಂತಾಯಿತು. ಕಾವ್ಯಭಾಷೆಯಲ್ಲಿ ಇವೆರಡೂ ಸಾಧ್ಯ ; ಆಡುಮಾತಿನಲ್ಲಿ ಇವೆರಡೂ ಸಾಧ್ಯವಿಲ್ಲ.

ಶ್ರೀ ಅವರ ಇಂಗ್ಲಿಷ್ ಗೀತಗಳಲ್ಲಾಗಲೀ, 'ಹೊಂಗನಸುಗಳು' ಸಂಗ್ರಹದ ಕವನಗಳಲ್ಲಾಗಲೀ ಕಾವ್ಯಭಾಷೆಗೆ ವಿಶಿಷ್ಟವಾದ ಮೇಲೆ ಹೇಳಿದ ಎರಡು ಸಾಧ್ಯತೆಗಳಲ್ಲಿ ಎರಡನೆಯದನ್ನು ಮಾತ್ರ ಬಳಸಿಕೊಳ್ಳುತ್ತಾರೆ. ಮೊದಲನೆಯ ಸಾಧ್ಯತೆ – ಒಂದೇ ಘಟಕದೊಳಗಿನ ಪದಗಳ ಸ್ಥಾನಪಲ್ಲಟ ಇಲ್ಲವೆಂದೇ ಹೇಳಬೇಕು. ಘಟಕಗಳ ಸ್ಥಾನಪಲ್ಲಟ ಕೂಡ, ತುಲನಾತ್ಮಕವಾಗಿ ಸರಳ ವಾಕ್ಯಗಳಲ್ಲಿ ಮಾತ್ರ ಕಂಡುಬರುತ್ತದೆ. ಹಾಗೂ ಇಂತಹ ಸರಳವಾಕ್ಯಗಳು ಹೆಚ್ಚಾಗಿ ಬಳಕೆಯಾಗಿರುವುದು ಶ್ರೀ ಅವರ ಅನುವಾದ ಕವನಗಳಲ್ಲಿ – ಇಂಗ್ಲಿಷ್ ಗೀತಗಳಲ್ಲಿ. ಉದಾಹರಣೆಗೆ. "ಆರು ನೀನೆಲೆ ಹರುಷಪೂರುತಿ ?" (← ಎಲೆ ಹರುಷಪೂರುತಿ, ನೀನು ಆರು?)[1], "ವಾದ್ಯದ ಹಲುಬಿಲ್ಲ, ಹೆಣವ ಕೋಟೆಗೆ ನಾವು ತ್ವರೆಯಲೊಯ್ದಾಗ" (ನಾವು ಹೆಣವ

---

* ಕಾವ್ಯಭಾಷೆಯಲ್ಲಿಯೂ ಒಂದೇ ಘಟಕದಲ್ಲಿರುವ ಪದಗಳ ಪರಸ್ಪರ ಸ್ಥಾನಪಲ್ಲಟಕ್ಕೆ ಕೆಲವು ನಿರ್ಬಂಧಗಳು ಇವೆಯಾದರೂ ಇಲ್ಲಿ ಅವುಗಳ ವಿವರಣೆಯನ್ನು ಉದ್ದೇಶಪೂರ್ವಕವಾಗಿ ಕೈ ಬಿಟ್ಟಿದ್ದೇನೆ.

೧ ಇಂಗ್ಲಿಷ್ ಗೀತಗಳು : 'ಬಾನಾಡಿ'

ಕೋಟೆಗೆ ತ್ವರೆಯುಲೊಯ್ದಾಗ ವಾದ್ಯದ ಹಲುಬಿಲ್ಲ)[2], "ತೂರುವುದಂ ಹಿಮಗಾಳಿ ಹಣ್ಣೆಲೆಯನಾದು" (ಹಿಮಗಾಳಿ ಹಣ್ಣೆಲೆಯನ್ನು ಆದು ತೂರುವುದು)[3], "ಆಹ, ಎಲ್ಲಡಗಿತೋ ಆರ್ಯಧರ್ಮದ ಕರುಣ" (ಆಹ, ಆರ್ಯಧರ್ಮದ ಕರುಣ ಎಲ್ಲಡಗಿತೋ)[4] ಎಂಬಿತ್ಯಾದಿ ಸಾಲುಗಳನ್ನು ಉದಾಹರಣೆಯನ್ನಾಗಿ ನೋಡ ಬಹುದು.

ಶ್ರೀ ಅವರ ಸ್ವಂತಕವನಗಳ ಸಂಗ್ರಹವಾದ ಹೊಂಗನಸುಗಳಲ್ಲಿ, ಸರಳವಾಕ್ಯಗಳ ಬಳಕೆಯಾಗಲೀ, ವಾಕ್ಯಗಳಲ್ಲಿಯ ಘಟಕಗಳ ಅದಲುಬದಲಾದ ಬಳಕೆಯಾಗಲೀ ಹೋಲಿಸಿದಲ್ಲಿ ತುಂಬ ಕಡಿಮೆ. ಆದರೆ ಸಂಕೀರ್ಣವಾಕ್ಯಗಳು ವ್ಯತ್ಯಸ್ತರೂಪತಾಳಿರು ವುದನ್ನು ಕೆಲವು ಉದಾಹರಣೆಗಳೊಂದಿಗೆ ಇಲ್ಲಿ ಗಮನಿಸಬಹುದು : "ಎಲ್ಲಿ ಆರ‍್ಯರ ರಾಜರು ?" (←ಆರ‍್ಯರ ರಾಜರು ಎಲ್ಲಿ ?)[5], "ಎಲ್ಲಿ ಕಲೆಗಳ ಬೆಳೆಸಿ ಲಕ್ಷ್ಮಿಯ ನೊಲಿಸಿ ನಿಲಿಸಿದ ಧೀರರು ?" (← ಕಲೆಗಳ ಬೆಳೆಸಿ, ಲಕ್ಷ್ಮಿಯ ನಿಲಿಸಿದ ಧೀರರು ಎಲ್ಲಿ ?)[6], "ಅಲ್ಲೆಲ್ಲಿ ನೋಡಿದರು ಬಾನಕರೆಯಂಲಿ ಹದುಗಿ ಕಾರ ಮುಗಿಲಂತಿಹವು ಬೆಟ್ಟಹಬ್ಬಿ" (← ಅಲ್ಲೆಲ್ಲಿ ನೋಡಿದರು ಬೆಟ್ಟಹಬ್ಬಿ ಬಾನಕರೆಯಲ್ಲಿ ಹದುಗಿ ಕಾರ ಮುಗಿಲಂತಿಹವು)[7], "ಮರೆತು ತನ್ನನು ರಾಜ್ಯಸೇವೆಯಲಿ ನಿಲಿಸುವನು ಧರ್ಮವನು ರಾಜರ್ಷಿ ಕರ್ಮಯೋಗಿ" (← ರಾಜರ್ಷಿ ಕರ್ಮಯೋಗಿ ರಾಜಸೇವೆಯಲಿ ತನ್ನನು ಮರೆತು ಧರ್ಮವನು ನಿಲಿಸುವನು)[8]. ಇಲ್ಲಿಯ ನಾಲ್ಕು ವಾಕ್ಯಗಳು ಕ್ರಮವಾಗಿ ಹೆಚ್ಚು ಹೆಚ್ಚಾಗಿ ವ್ಯತ್ಯಸ್ತರೂಪವನ್ನು ಪಡೆದಂಥವುಗಳು. (ಅಂದರೆ, ಉದಾಹರಣೆಗೆ, ಮೊದಲನೆಯದು ಆಡುಮಾತಿನ ಮೂಲವಾಕ್ಯಕ್ಕೆ ಉಳಿದವುಗಳಿಗಿಂತ ಹೆಚ್ಚು ಹತ್ತಿರ ವಾದದ್ದು – ಆಡುಮಾತಿನ ವಾಕ್ಯದ ರೂಪಕ್ಕೆ ಕೇವಲ ಒಂದೇ ರೂಪಾಂತರ ನಿಯಮ ವನ್ನು ಅನ್ವಯಿಸಿ ಪಡೆಯಬಹುದಾದದ್ದು. ಉಳಿದ ವಾಕ್ಯರೂಪಗಳನ್ನು ಪಡೆಯುಲು ಕ್ರಮವಾಗಿ ಹೆಚ್ಚು ಸಂಖ್ಯೆಯ ರೂಪಾಂತರ ನಿಯಮಗಳು ಬೇಕಾಗುತ್ತವೆ). ಆದರೆ ಅನೇಕ ಸಂಕೀರ್ಣವಾಕ್ಯಗಳು ಆಡುಮಾತಿನ ರಚನೆಯನ್ನು ಹಾಗೆಯೇ ಉಳಿಸಿ ಕೊಂಡು ಬಂದಿರುವುದನ್ನು ಈ ಸಂಗ್ರಹದಲ್ಲಿ ನೋಡಬಹುದು. ಇದಕ್ಕೆ ಒಂದೆರಡು ಉದಾಹರಣೆ :

---

೨. ಇಂಗ್ಲಿಷ್ ಗೀತಗಳು : 'ಸರ್ ಜಾನ್ ಮೂರನ್ನು ಹೂಳಿದ್ದು'

೩. ಇಂಗ್ಲಿಷ್ ಗೀತಗಳು : 'ವೀರಗಲ್ಲು'

೪. ಇಂಗ್ಲಿಷ್ ಗೀತಗಳು : 'ದುಃಖಸೇತು'

೫. ಹೊಂಗನಸುಗಳು : 'ಭರತಮಾತೆಯ ನುಡಿ'

೬. ಅದೇ

೭. ಹೊಂಗನಸುಗಳು : 'ಮೈಸೂರ ಮಕ್ಕಳು'

೮. ಅದೇ

"ಒಪ್ಪೆ ಹೊಳಲನು ಮೆರೆದು ಮಿತ್ರರಾಜರ ಬರಿಸಿ ಸುಖಗೊಳಿಸುತಿಪರು.
ಹೊಲಗಳನು ತಡೆಗಟ್ಟಿ ಬೆಂದಕಾಡನು ಬೆಳಸಿ ಹಸುರೆರಚುತಿಪರು
..............................
ಪ್ರಜೆಗಳೊಲುಮೆಯ ಸೆಳೆದು, ರಾಜರಲಿ ಗಣ್ಯತೆಯ ಪಡೆದು
ಮೆರೆಯುವರು"[9]

'ಅಶ್ವತ್ಥಾಮನ್' ನಾಟಕದಲ್ಲಿಯೂ ಮೇಳಗೀತಗಳನ್ನುಳಿದವರೆ ಇತರ ಗದ್ಯಾತ್ಮಕ ಭಾಗಗಳಲ್ಲಿ ಆಡುಮಾತಿನ ರಚನೆಯನ್ನೆ ಎಲ್ಲೆಡೆಗೂ ಬಳಸಿಕೊಳ್ಳಲಾಗಿದೆ. ಆದರೆ ಮೇಳಗೀತಗಳಲ್ಲಿಯ ವಾಕ್ಯಗಳು ಹೆಚ್ಚಾಗಿ ಇಂಗ್ಲಿಷ್ ಗೀತಗಳಲ್ಲಿ ವಾಕ್ಯಗಳಂತೆ ಹೆಚ್ಚು ಸರಳವಾಗಿದ್ದು, ಅಂತೆಯೇ ವಾಕ್ಯಘಟಕಗಳ ಪಲ್ಲಟವನ್ನೂ ತೋರುತ್ತವೆ.

ಶ್ರೀ ಅವರ ಕೃತಿಗಳಲ್ಲಿ ವಾಕ್ಯರಚನೆ ಮಾತ್ರವಲ್ಲದೆ ಇತರ ಸಂಗತಿಗಳಲ್ಲೂ ವಿಭಿನ್ನತೆಯಿವೆ. ಇಂಗ್ಲಿಷ್ ಗೀತಗಳಲ್ಲಿಯ ಕವನಗಳಲ್ಲಿ ಉಪಮೆಗಳ-ರೂಪಕಗಳ ಬಳಕೆ ಅವರ ಸ್ವಂತ ಕವನಗಳಲ್ಲಿಗಿಂತ ಹೆಚ್ಚು ಪ್ರಮಾಣದಲ್ಲಿ ಕಾಣಿಸಿಕೊಳ್ಳುತ್ತದೆ. ಇಲ್ಲಿ ಅನುಪ್ರಾಸಗಳ ಬಳಕೆ, ಅಂತ್ಯಪ್ರಾಸಗಳ ಬಳಕೆ ಹೆಚ್ಚು. ಉದಾಹರಣೆಗೆ,

೧. "ಆಸೆಬಲೆಯನು ತೊಲಗಿ,
ಬಿಸಿಲಕಾಯುತ ಮಲಗಿ,
ಉಣ್ಣುವೂಟವ ಕಂಡು
ತಣ್ಣನೆಯ ತಣಿದುಂಡು ನಲಿವನಾರ್ಕೃ"[10]

೨. "ಚೆಲುವು ಚೆಲ್ಲುವ ತೊರೆಯ ಕೆರೆಗಳ,
ಎಂತು ಮೆರೆವಿರೊ ಅರಳುತ!
ಎಂತು ಕೆಲೆವಿರೊ ಹಕ್ಕಿಗಳಿರಾ,
ಹಲುಬುತಿಹನೇ ನರಳುತ"[11]

ಎಂಬ ಈ ಸಾಲುಗಳನ್ನು ನೋಡಬಹುದು. ಉದಾಹರಣೆ(೧)ರಲ್ಲಿ ಮೊದಲೆರಡು ಸಾಲುಗಳಲ್ಲಿ ಲ ವರ್ಣ ಪುನರಾವೃತ್ತಗೊಂಡಿದ್ದರೆ ಮುಂದಿನೆರಡು ಸಾಲುಗಳಲ್ಲಿ ಮೂರ್ಧನ್ಯವರ್ಣಗಳು (ಟ್, ಡ್, ಣ್) ಪುನರಾವೃತ್ತಗೊಂಡಿವೆ. ಉದಾಹರಣೆ (೨) ರಲ್ಲಿ ಧ್ವನಿಸಾಮ್ಯವುಳ್ಳ ಲ, ರಗಳು ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತವೆ. ಇಂಗ್ಲಿಷ್ ಗೀತಗಳಲ್ಲಿ ಅವರ ಸ್ವಂತ ಕವನಗಳಿಗೆ ಹೋಲಿಸಿದರೆ ಪೂರ್ಣಕ್ರಿಯಾಪದಗಳ ಬಳಕೆ ಕಡಿಮೆ. "ಇನಿಯರ ಬೇಟ, ಬನದಲಿ ಬೆಳದಿಂಗಳ ಊಟ" ಎಂಬಂತಹ ಕ್ರಿಯಾಪದರಹಿತ ವಾಕ್ಯಗಳ ಸಂಖ್ಯೆ ಗಮನಾರ್ಹ ಪ್ರಮಾಣದಲ್ಲದೆ. ಅಲ್ಲದೆ ಈ

೯. ಹೊಂಗನಸುಗಳು : 'ಶ್ರೀಕೃಷ್ಣರಾಜ ರಜತಮಹೋತ್ಸವ ಪ್ರಗಾಥ'
೧೦. ಇಂಗ್ಲಿಷ್ ಗೀತಗಳು : 'ಅಡವಿ ಮರದಡಿಯಲ್ಲಿ'
೧೧. ಇಂಗ್ಲಿಷ್ ಗೀತಗಳು : 'ಬಿಟ್ಟ ಹೆಣ್ಣು'

ಸಂಗ್ರಹದ ಕವನಗಳಲ್ಲಿ ಪದವಿಭಜನೆ ಬಹುಮಟ್ಟಿಗೆ ಪದವಿಭಜನೆಯೂ ಆಗಿ ಕಾಣಿಸಿಕೊಳ್ಳುತ್ತದೆ (ಅಂದರೆ ಇಲ್ಲಿಯ ಯತಿ ಸಹಜ ಯತಿಯಾಗಿದೆ). ಒಂದು ಪದ ಒಂದಕ್ಕಿಂತ ಹೆಚ್ಚು ಮಾತ್ರಾಗಣವನ್ನು ಹೊಂದಿರುವುದು ಬಹಳ ಕಡಿಮೆ. ಒಂದಕ್ಕಿಂತ ಹೆಚ್ಚು ಮಾತ್ರಾಗಣಗಳಿಂದ ಕೂಡಿದಲ್ಲಿ ಪ್ರಕೃತಿ+ಪ್ರಕೃತಿ ಅಥವಾ ಪ್ರಕೃತಿ+ಪ್ರತ್ಯಯ ಎಂಬ ಅರ್ಥಘಟಕಗಳಾಗಿಯೇ ವಿಭಜನೆ ಹೊಂದುತ್ತವೆ. ಉದಾಹರಣೆಗೆ,

"ಮುಗಿಲಿನಲಿ ಮಳೆಬಿಲ್ಲ ಕಾಣುತಲೆ ನಾನು
ನೆಗೆದು ಕುಣಿದಾಡುವುದು ಹೃದಯ ತಾನು !"12

ಎಂಬ ಸಾಲುಗಳನ್ನು ಗಮನಿಸಬಹುದು. ಇಲ್ಲಿಯ ಕವನಗಳಲ್ಲಿ ಬಳಕೆಯಾದ ನಾಮಪ್ರಕೃತಿಗಳಲ್ಲಿ ಬಹುಪಾಲು ಮೂರ್ತರೂಪವನ್ನು ಹೇಳುವಂತಹವು. ಆದರೆ ಹೊಂಗನಸುಗಳಲ್ಲಿಯ ಕವನಗಳಲ್ಲಿ. ಇದಕ್ಕೆ ವಿರುದ್ಧವಾಗಿ ಬಹುಪಾಲು ನಾಮಪ್ರಕೃತಿಗಳು ಅಮೂರ್ತವಾದವುಗಳು. ಹೋಲಿಸಿದಲ್ಲಿ ಇಲ್ಲಿ ಪೂರ್ಣಕ್ರಿಯಾಪದ ಗಳ ಬಳಕೆ ಹೆಚ್ಚು. ಪದಗಳು ಹೆಚ್ಚು ಉದ್ದವಾದವುಗಳು. ಪದಗಳು ಅನೇಕವೇಳೆ ಎರಡಕ್ಕಿಂತ ಹೆಚ್ಚು ಗಣಗಳನ್ನು (ಅದೂ ೫ ಮಾತ್ರೆಯ ಗಣಗಳನ್ನು) ಹೊಂದಿರುತ್ತವೆ. ಇಂತಹ ಪದಗಳು ಕೆಲವೊಮ್ಮೆ ಅರ್ಥಗಣಗಳಾಗದೆ (ಮಾತ್ರಾಗಣ = ಅರ್ಥ ಘಟಕ ಎಂಬರ್ಥದಲ್ಲಿ) ಕೇವಲ ವರ್ಣಗಳಾಗಿ ಬಳಕೆಯಾಗಿರುವುದೂ ಉಂಟು. "ಜನರಕ್ಕರೆಯನುಕ್ಕಿಸುವನು" ಎಂಬ ೫+೫+೨ ಗಣದ ರೂಪವನ್ನು ಇಲ್ಲಿ ಉದಾಹರಣೆಯಾಗಿ ನೋಡಬಹುದು. ಇಲ್ಲಿಯ ಕವನಗಳಲ್ಲಿ ಪೂರ್ಣಕ್ರಿಯಾಪದಗಳ ಬಳಕೆಯೂ ಹೆಚ್ಚು. ವಾಕ್ಯಗಳು ಸಾಮಾನ್ಯವಾಗಿ ನಾಮಪದ, ಕ್ರಿಯಾಪದ ಹಾಗೂ ಕ್ರಿಯಾವಿಶೇಷಣ ಪದಗಳನ್ನೇ ಹೆಚ್ಚಾಗಿ ಒಳಗೊಳ್ಳುತ್ತವೆ. ವಿಶೇಷಣಗಳ ಬಳಕೆ ಕಡಿಮೆ. ಉಪಮೆ-ರೂಪಕಗಳ ಬಳಕೆ ತೀರ ಕಡಿಮೆ. 'ಇಂಗ್ಲಿಷ್ ಗೀತಗಳು' ಹಾಗೂ 'ಹೊಂಗನಸುಗಳು' ನಡುವಿನ ಈ ರಚನೆಯ ಭಿನ್ನತೆಗೆ ಒಂದು ಕಾರಣ – ಇಂಗ್ಲಿಷ್ ಗೀತಗಳು ಅನುವಾದಿತವಾಗಿರುವುದು – ಬೇರೊಂದು ಮೂಲಕ್ಕೆ ಬದ್ಧವಾಗಿ ಬರೆದಿರುವವು. ಉಪಮೆ-ರೂಪಗಳ ಸಂಖ್ಯೆಯ ಹೆಚ್ಚಳಕ್ಕೆ ಇದೇ ಕಾರಣವೆಂದು ಹೇಳಬಹುದು. ಆದರೆ ಪದಗಳೇ ಗಣವಾಗುವಂತೆ ಚಿಕ್ಕಚಿಕ್ಕ ಪದಗಳನ್ನು ಬಳಸುವಲ್ಲಿಯಾಗಲೀ, ಅನುಪ್ರಾಸದ ಬಳಕೆಯಲ್ಲಾಗಲೀ ಇಂಗ್ಲಿಷ್ ಮೂಲದ ಪ್ರಭಾವವೇ ಇದೆ ಎಂದು ಹೇಳುವಂತಿಲ್ಲ. ಒಂದೇ ಮೂಲದ ಎರಡು ಬೇರೆಬೇರೆ (ಬಿ. ಎಂ. ಶ್ರೀ. ಹಾಗೂ ಗೋವಿಂದ ಪೈ ಅವರ) ಅನುವಾದಗಳನ್ನು ಗಮನಿಸಿದರೆ ಇದು ಸ್ಪಷ್ಟವಾದೀತು :

---

೧೨. ಇಂಗ್ಲಿಷ್ ಗೀತಗಳು : 'ಮಳೆಬಿಲ್ಲು'

**ಶ್ರೀ ಅವರ ಅನುವಾದ**

ಆರು ನೀನೆಲೆ ಹರುಷಮೂರುತಿ
ಹಕ್ಕಿಯೆಂಬರೆ ನಿನ್ನನು !
ತೋರಿ ದಿವಿಜರು ಸುಳಿವ ಬಳಿ ಸುಖ
ವುಕ್ಕಿ ಬಹ ನಿನ್ನೆದೆಯನು
ಹಾರಿ ನೆನೆಯದ ಕಲೆಯ ಕುಶಲದ
ಭೂರಿ ಗಗನದೊಳೆರೆಯುವೆ.

**ಪೈ ಅವರ ಅನುವಾದ**

ಸೊಗಯಿಸೈ ಸುಖಜೀವಿ
ನೆಗೆವಕ್ಕಿ ನೀನಲ್ಲ
ಗಗನದಿಂದಲೊ ಗಗನದಂಗಿಂದಲೊ
ವೊಗೆವೆ ತುಂಬೆದೆಯುಮಂ
ಬಗೆದಿಲ್ಲದಿಹ ಭಿನ್ನ
ಣಿಗೆಯುಗುವುದಾರಗಾಯನದ ಝರಿಯಿಂ

ಶ್ರೀ ಅವರಲ್ಲಿ ಗಣವಿಭಜನೆ (೩+೪+೩+೨. ೩+೪+೨) ಹೇಗೆ ಬಹುಮಟ್ಟಿಗೆ ಪದವಿಭಜನೆಯಾಗಿ (ನಿನ್ನದೆಯನು ಹಾಗೂ ಗಗನದೊಳೆರೆಯುವೆ ಎಂಬಲ್ಲಿ ಮಾತ್ರ ಅರ್ಥವಿಭಜನೆಯಾಗಿ) ಬರುತ್ತವೆಯೆಂಬುದನ್ನೂ ಆದರೆ ಪೈ ಅವರ ಅನುವಾದದಲ್ಲಿ ಬೇರೆ ಬೇರೆ ಪದಗಳ ಅಂಗಗಳು ಒಂದೇ ಗಣಕ್ಕೆ (೫+೫) ಸೇರುತ್ತವೆಯೆಂಬುದನ್ನೂ ಈ ಎರಡು ಪದ್ಯಗಳನ್ನು ಹೋಲಿಸಿ ತಿಳಿದುಕೊಳ್ಳಬಹುದು.

ಇಂಗ್ಲಿಷ್ ಗೀತಗಳಲ್ಲಿ ವರ್ಣಗಳ ಪುನರಾವರ್ತನೆ ಹೆಚ್ಚಾಗಿದ್ದರೆ ಹೊಂಗನಸುಗಳಲ್ಲಿ ಇಡೀ ಶಬ್ದ ಅಥವಾ ಒಂದು ವ್ಯಾಕರಣ ರಚನೆ ಆವರ್ತನಗೊಳ್ಳುತ್ತದೆ. (ನಲಿನಲಿದು, ಕುಣಿಕುಣಿದಾಡಿ; ಆಡುವ ಹಾಡುವ, ಬರೆಯುವ-ಕೊರೆಯುವ, ಕಟ್ಟುವ ಕಳೆಗಳ ಹೂಡಿಸುವ – ಎಂಬೀ ರೂಪಗಳನ್ನು ಉದಾಹರಣೆಯಾಗಿ ನೋಡಬಹುದು.) ಪೂರ್ಣಕ್ರಿಯಾಪದಗಳ ಬಳಕೆ ಇಲ್ಲಿ ಗಮನಾರ್ಹ ಪ್ರಮಾಣದಲ್ಲಿದ್ದರೂ ಹೆಚ್ಚಿನವು ಮಾಡುವರು, ಹರಸುವರು – ಎಂಬಂತಹ ಅಭೂತ ರೂಪವನ್ನು ಹೊಂದಿದ್ದು ಬಹುಮಟ್ಟಿಗೆ ಸ್ವಭಾವವಾಚಕಗಳಂತೆ ಬಳಕೆಯಾಗಿವೆ. ಭೂತರೂಪಗಳ ಬಳಕೆಯಾಗಿದ್ದರೂ ಅವು ಆಗು ಅಥವಾ ಇರು ಧಾತುಗಳ ಭೂತರೂಪಗಳಾಗಿಯೋ (ಉದಾಹರಣೆ – ಬಯಲಾಯ್ತು, ಮರೆಯಾಯ್ತು) ಪಾದಪೂರಣಕ್ಕಾಗಿ ಬಂದ ರೂಪಗಳೋ (ಆಡಿದಳು, ಪಾಡಿದಳು ಎಂಬಂತಹ ರೂಪಗಳು) ಆಗಿವೆ. ಹೀಗಿರುವುದರಿಂದ ಕ್ರಿಯಾಪದಗಳ ಬಳಕೆಯಿದ್ದೂ ಕವನ ಕ್ರಿಯೆಯನ್ನು ಹೇಳದಂತಹ ಸ್ಥಿತಿಯೊದಗಿದೆ. 'ಅಶ್ವತ್ಥಾಮನ್' ನಾಟಕ ಗದ್ಯಾತ್ಮಕ ಭಾಗಗಳಲ್ಲಿ ಆಡುಮಾತಿನ ರಚನೆಯನ್ನು (ವಾಕ್ಯ ರಚನೆಯಲ್ಲಿ) ತೋರಿದರೂ ಶಬ್ದಗಳು ಹಾಗೂ ಪದರಚನೆಯಲ್ಲಿ ಹಳಗನ್ನಡವನ್ನು ಅನುಕರಿಸಿದೆ. 'ಇಂಗ್ಲಿಷ್ ಗೀತಗಳು' ಹಾಗೂ 'ಹೊಂಗನಸುಗಳು' ಆಡುಮಾತಿನಿಂದ ಬೇರೆಯಾಗುವಲ್ಲಿ ಇನ್ನೂ ಒಂದು ಸಮಾನಗುಣವನ್ನು ಹೊಂದಿವೆ: ಆಡುಮಾತಿನ ಬರುತ್ತಾನೆ, ಬಂದಿದ್ದಾನೆ, ಬರುತ್ತಿದ್ದಾನೆ ಎಂಬಂತಹ ಕ್ರಿಯಾಪದಗಳು ಪ್ರತ್ಯಯ ರೂಪವನ್ನು ಬದಲಿಸಿಕೊಂಡು ಬರುವನು, ಬಂದಿಹನು, ಬರುತಿಹನು ಎಂಬಂತೆ ಬಳಕೆಯಾಗಿವೆ ಹಾಗೂ ಆಡುಮಾತಿನಲ್ಲಿ ಆಗಾಗ ಬಳಕೆಯಾಗುವ ಸಹಾಯಕ ಕ್ರಿಯಾಪದಗಳನ್ನು (ಉದಾಹರಣೆ – **ಕುಳಿತುಕೊಂಡ**, ನಿಟ್ಟುಸಿರಿಟ್ಟ, ಬಂದುಬಿಟ್ಟ

ಇತ್ಯಾದಿ) ಇಲ್ಲಿ ಬಳಸಿಕೊಂಡಿಲ್ಲ. (‘ಬ್ಲೆನ್‌ಹೀಮ್ ಕದನ’ ಎಂಬ ಕವನಮಾತ್ರ ಇದಕ್ಕೆ ಅಪವಾದ).

ಒಟ್ಟಿನಲ್ಲಿ ಹೀಗೆ ಹೇಳಬಹುದು : ವಾಕ್ಯರಚನೆಯ ದೃಷ್ಟಿಯಿಂದ ‘ಇಂಗ್ಲಿಷ್ ಗೀತಗಳು’, ‘ಹೊಂಗನಸುಗಳು’ ಹಾಗೂ ‘ಅಶ್ವತ್ಥಾಮನ್’ – ಈ ಕೃತಿಗಳು ಕ್ರಮವಾಗಿ ಆಡುಮಾತಿಗೆ ಒಂದಕ್ಕಿಂತ ಇನ್ನೊಂದು ಹೆಚ್ಚು ಸಮೀಪವಾಗಿವೆ. ಶಬ್ದಕೋಶ, ಪದರಚನೆಯ ವಿಷಯದಲ್ಲಿ ಅಶ್ವತ್ಥಾಮನ್ ಉಳಿದೆರಡರಿಂದ ಗಮನಾರ್ಹವಾಗಿ ಬೇರೆಯಾಗಿದೆ ; ಪದವಿಭಜನೆ, ವರ್ಣಾವೃತ್ತಿಗಳ ವಿಷಯದಲ್ಲಿ ಇಂಗ್ಲಿಷ್ ಗೀತಗಳು ಉಳಿದೆರಡರಿಂದ ಪ್ರತ್ಯೇಕವಾಗಿ ನಿಲ್ಲುತ್ತದೆ ; ಹಾಗೂ ಇದರಿಂದಾಗಿ ಇಲ್ಲಿಯ ಕವನಗಳಿಗೆ ಒಂದು ರೀತಿಯ ಬಂಧವೂ ಹೆಚ್ಚಿನ ಗೇಯತೆಯೂ ಸಾಧ್ಯವಾಗುತ್ತದೆ.

೩

ಅರ್ಥವಾಗದ ಹಳಗನ್ನಡವನ್ನಾಗಲೀ ಕನ್ನಡಕ್ಕೆ ಒಗ್ಗದ, ರೂಢಿಯಲ್ಲಿಲ್ಲದ ಸಂಸ್ಕೃತ ಶಬ್ದಗಳನ್ನಾಗಲೀ ಬಳಸಬಾರದು ಎಂಬುದು ಶ್ರೀ ಅವರ ಅಭಿಪ್ರಾಯವೆಂದು ಹಿಂದೆಯೇ ಹೇಳಿದ್ದೇನೆ. ಆದರೆ ಪದ, ವಾಕ್ಯರಚನೆ ಹಾಗೂ ವರ್ಣಗಳು – ಇವೆಲ್ಲವುಗಳನ್ನೂ ಅನುಕರಿಸಿದ ‘ಅಶ್ವತ್ಥಾಮನ್’ (ಹಾಗೂ ‘ಪಾರಸಿಕರು’) ನಾಟಕದ ಭಾಷೆ ಈ ಅಭಿಪ್ರಾಯಕ್ಕೆ ವಿರೋಧವಾಗಿದೆ. ಹಾಗೆಯೇ ಕನ್ನಡ ಕಾವ್ಯದಲ್ಲಿ ಹೊಸತನ್ನು ತರಬೇಕೆಂಬ ಉತ್ಸಾಹವನ್ನು ತೋರಿಸಿದ ಶ್ರೀ ಅವರೇ ಸದ್ಯಕ್ಕೆ ದೀರ್ಘ ಕವನಗಳ ರಚನೆಯಾಗಲೀ, ಸ್ವಂತ ನಾಟಕಗಳ ರಚನೆಯಾಗಲೀ ಅವಶ್ಯವಿಲ್ಲವೆಂದಿರುವುದೂ ಸೋಜಿಗದ ವಿಷಯವೇ. ಬಹುಶಃ ಇವುಗಳನ್ನು ಹೀಗೆ ಅರ್ಥೈಸಿಕೊಳ್ಳಬೇಕೆಂದು ತೋರುತ್ತದೆ : ದೀರ್ಘ ಕಾವ್ಯಗಳು ಕಥೆಯನ್ನು ಒಳಗೊಳ್ಳಬೇಕಾದ ಆವಶ್ಯಕತೆಯಿರುವುದರಿಂದ ಕಥೆಯ ಶಿಲ್ಪವನ್ನು ಸಾಧಿಸಲು, ಇಂಗ್ಲಿಷ್ ಗೀತಗಳ ಮಾದರಿಯ – ಭಾವಗೀತಗಳಿಗೆ ಅನುಕೂಲವಾದ ಭಾಷೆ ಒಗ್ಗಲಾರದು. ಆದ್ದರಿಂದ ಆ ಪ್ರಕಾರ(form)ವನ್ನೆ ಬಿಡುವುದೊಳಿತು. ಅಥವಾ ಆ ಪ್ರಕಾರಗಳು ಆಧುನಿಕ ಮನೋಧರ್ಮಕ್ಕೆ ತಕ್ಕವಲ್ಲವೆನಿಸಿರಬೇಕು. ಹಾಗೆಯೇ ಗ್ರೀಕ ನಾಟಕಗಳ ಮಾದರಿಯ ನಾಟಕಗಳೂ ಇಂದು ರಚಿತವಾಗುವುದು ಸಾಧ್ಯವಿಲ್ಲ ( – ಇತರ ಅನೇಕರು ಅಭಿಪ್ರಾಯಪಡುವಂತೆ – ) ವೆನ್ನಿಸಿರಬೇಕು. ಆದರೆ ಇಲ್ಲಿ ಮತ್ತೆರಡು ಪ್ರಶ್ನೆಗಳು ಹುಟ್ಟುತ್ತವೆ : ಗ್ರೀಕ್ ನಾಟಕಗಳನ್ನು ಅವರೇ ರೂಪಾಂತರಿಸಿ ಕನ್ನಡಕ್ಕೆ ತಂದುದರ ಔಚಿತ್ಯವಾದರೂ ಏನು ? ಕಥಾನಕಗಳನ್ನು ಗದ್ಯದ ಕಾದಂಬರಿರೂಪದ ಮೂಲಕ ನೀಡುವ ಸೂಚನೆ ನೀಡಬಹುದಿತ್ತಲ್ಲ ? (ಕನ್ನಡದಲ್ಲಿ ಆಗಲೇ ಸ್ವತಂತ್ರ ಹಾಗೂ ಅನುವಾದಿತರೂಪದಲ್ಲಿ ಕಾದಂಬರಿಗಳು ಹುಟ್ಟಿದ್ದವೆಂಬುದರ ಹಿನ್ನೆಲೆಯಲ್ಲಿ ಈ ಪ್ರಶ್ನೆಯನ್ನು ಹಾಕಿಕೊಳ್ಳಬೇಕು.) ಇಲ್ಲಿಯ ಎರಡನೆಯ ಪ್ರಶ್ನೆಗೆ ಉತ್ತರ ಕಂಡು

ಕೊಳ್ಳುವುದು ಸುಲಭವಲ್ಲ. ಗದ್ಯ ಸಾಹಿತ್ಯ ಪ್ರಕಾರಗಳ ಬಗೆಗೆ ಅವರ ಅಭಿಪ್ರಾಯ ಏನಿತ್ತೊ ತಿಳಿಯದು. ಆದರೆ ಗ್ರೀಕ್ ನಾಟಕಗಳ ರೂಪಾಂತರದ ಹಿಂದಿನ ಅವರ ಮನೋಧರ್ಮ, ಅವರ ಇಂಗ್ಲಿಷ್ ಗೀತಗಳ ಅನುವಾದದ ಹಿಂದಿನ ಮನೋಧರ್ಮಕ್ಕಿಂತ ಬೇರೆಯಾಗಿತ್ತು ಎನಿಸುತ್ತದೆ. ಹೊಸ ಸಾಹಿತ್ಯವನ್ನು ಹುಟ್ಟುಹಾಕುವ ಬಲವಾದ ಉದ್ದೇಶ ಅವರ ಇಂಗ್ಲಿಷ್ ಗೀತಗಳ ಹಿಂದೆ ಇದ್ದರೆ ನಾಟಕಗಳ ರೂಪಾಂತರದಲ್ಲಿ ಅಂತಹ ಯಾವ ಉದ್ದೇಶವೂ ಇರುವಂತಿಲ್ಲ. ಗ್ರೀಕ್ ನಾಟಕಗಳ ಬಗೆಗೆ ಅವರಿಗಿದ್ದ ವೈಯಕ್ತಿಕವಾದ ಒಲವು ಇದಕ್ಕೆ ಕಾರಣವೆಂದು ತೋರುತ್ತದೆ. ಅಂತೆಯೇ ಆ ಪ್ರಕಾರದ ಗಂಭೀರತೆಯನ್ನು ಉಳಿಸಿಕೊಳ್ಳುವ ಸಲುವಾಗಿ ಹಳಗನ್ನಡವನ್ನು ಬಳಸಿಕೊಂಡಿರಬಹುದು. ರನ್ನನ ಗದಾಯುದ್ಧ ಕಾವ್ಯ ದಲ್ಲಿಯೂ ಇಂತಹುದೇ ಒಂದು ಪ್ರಕಾರವನ್ನು ಅವರು ಕಂಡುಕೊಂಡಿದ್ದರಿಂದ ಅದನ್ನು ರನ್ನನ ಮಾತುಗಳಲ್ಲಿಯೇ ನಾಟಕವಾಗಿಸಿರಬಹುದು. ಹಾಗಿಲ್ಲದೇ ಅಲ್ಲಿಯ ವಸ್ತುವನ್ನು ಉಪಯೋಗಿಸಿಕೊಂಡು .(ಭಾವಗೀತ ಪ್ರಕಾರದಂತೆ) ನಾಟಕ ಪ್ರಕಾರ ವೊಂದನ್ನು ತರಬೇಕೆಂಬ ಯಾವ ಉದ್ದೇಶವೂ ಅವರಲ್ಲಿದ್ದಂತಿಲ್ಲ. 'ಗದಾಯುದ್ಧ ನಾಟಕ'ದ ಭಾಷೆ, 'ಅಶ್ವತ್ಥಾಮನ್' ನಾಟಕದ ಭಾಷೆ ಬೇರೆಯಾಗಿರುವುದಕ್ಕೆ ನನಗೆ ಹೊಳೆಯುವ ಕಾರಣ ಇದೊಂದೇ.

# ಶ್ರೀಯವರ ಸಾಹಿತ್ಯ ವಿಮರ್ಶೆ ಮತ್ತು ಸಾಹಿತ್ಯ ಚಿಂತನೆ

– ಕೆ. ವಿ. ನಾರಾಯಣ

ಬಿ. ಎಂ. ಶ್ರೀಯವರನ್ನು ವಿಮರ್ಶಕರನ್ನಾಗಿ ಗುರುತಿಸಿ, ಅವರ ವಿಮರ್ಶಾ ತತ್ತ್ವಗಳನ್ನು ಸಂಗ್ರಹಿಸಿ, ವಿಶ್ಲೇಷಿಸುವ ಯಾವುದೇ ಪ್ರಯತ್ನವಾದರೂ, 'ವಿಮರ್ಶೆ' ಎಂಬ ಚಟುವಟಿಕೆಯನ್ನು, 'ಸಾಹಿತ್ಯವನ್ನು ಕುರಿತ ಸಾಮಾನ್ಯ ಚಿಂತನೆ' ಎಂಬ ನೆಲೆಗೆ ಒಯ್ದು ವ್ಯಾಖ್ಯಾನಿಸಬೇಕು. ಈಹೊತ್ತು 'ವಿಮರ್ಶೆ' ಎಂಬ ಪದ ಪಡೆದಿರುವ ಸಾಂಸ್ಕೃತಿಕ ನೆಲೆಗಳು ಶ್ರೀಯವರಲ್ಲೂ ಗುರುತಿಸಲು ಸಿಗುತ್ತವೆಯಾದರೂ, ಇಂದಿನ ವಿಮರ್ಶೆಯ ಪರಿಕರಗಳನ್ನು ಅವರಲ್ಲಿ ನಿರೀಕ್ಷಿಸಲಾಗದು. ಆದ್ದರಿಂದ ಕನ್ನಡ ವಿಮರ್ಶೆಯ ಮೊದಲ ಹೆಜ್ಜೆಗಳು ಮಾತ್ರ ಶ್ರೀಯವರಲ್ಲಿ ಕಾಣಸಿಗುತ್ತವೆ. ಅವರು ರೂಪಿಸಿದ ಚಿಂತನೆಗಳು ನಾಲ್ಕು ದಶಕಗಳ ಕಾಲವಾದರೂ ಕನ್ನಡ ವಿಮರ್ಶಾಚಿಂತನೆಯ ಒಂದು ಪ್ರವಾಹವನ್ನಾದರೂ ಪ್ರಭಾವಿಸಿತ್ತು ಎಂಬುದು ಗಮನಾರ್ಹ. ಹಾಗಾಗಿ ಅವರ ವಿಚಾರಗಳಿಗೆ ಸಹಜವಾಗಿಯೇ ಚಾರಿತ್ರಿಕ ಮಹತ್ವವಿದೆ.

ಶ್ರೀಯವರು ಸಾಹಿತ್ಯವನ್ನು ಕುರಿತು ಬರೆದ ಬರಹಗಳಲ್ಲಿ ಮೊದಲನೆಯದು ೧೯೧೯ರಲ್ಲಿ ಪ್ರಕಟಗೊಂಡಿದೆ. ಅಲ್ಲಿಂದ ಮುಂದಕ್ಕೆ ಸುಮಾರು ಎರಡೂವರೆ ದಶಕಗಳಲ್ಲಿ ಅವರು ಇಂಗ್ಲಿಷ್ ಮತ್ತು ಕನ್ನಡಗಳಲ್ಲಿ ಬರೆದರು. ಈ ಅವಧಿಯ ಲೇಖನಗಳಲ್ಲಿ ನಾವು ಅವರ ಚಿಂತನೆಯ ಮುಖ್ಯನೆಲೆಗಳಲ್ಲಿ ತೀರಾ ಗಮನಾರ್ಹವಾದ ಬೆಳವಣಿಗೆಯನ್ನಾಗಲೀ, ಬದಲಾವಣೆಯನ್ನಾಗಲೀ ಗುರುತಿಸಲಾರೆವು. ಅಂದರೆ ಸಾಹಿತ್ಯವನ್ನು ಕುರಿತಂತೆ ಅವರ ವಿಚಾರಗಳು ಬಹುಮಟ್ಟಿಗೆ ಅವರ ಮೊದಲ ಬರಹದ ಹೊತ್ತಿಗಾಗಲೇ ಸಿದ್ಧಗೊಂಡಿದ್ದವು. ಈ ವಿಚಾರಗಳನ್ನು ಅವುಗಳ ಬೇರೆಬೇರೆ ಅಂಶಗಳನ್ನು ಯುಕ್ತ ಅವಧಾರಣೆಯೊಂದಿಗೆ ಅವರ ಬರಹಗಳಲ್ಲಿ ನಾವು ಕಾಣಬಹುದಾಗಿದೆ.

ಇಂಗ್ಲಿಷ್ ಕಲಿತವರು ಸಾಹಿತ್ಯವನ್ನು ನೋಡುತ್ತಿರುವ ದೃಷ್ಟಿ ನೂತನವಾಗಿದೆ ಎಂಬ ಮಾತು ಶ್ರೀಯವರ ಮೊದಲ ಬರಹಗಳಲ್ಲಿಯೇ ಕಾಣಿಸಿಕೊಳ್ಳುತ್ತದೆ (೧೯೧೯). ಈ ಸಾಂಸ್ಕೃತಿಕ ಮುಖಾಮುಖಿಯಲ್ಲಿ – ಈ ಬಗೆಗೆ ಮುಂದೆ ಹೆಚ್ಚಿನ ವಿವರಗಳಿವೆ – ಇಂಗ್ಲಿಷ್ ಹಾಗೂ ಆ ಮೂಲಕ ಲಭಿಸಿದ ಐರೋಪ್ಯ ಸಾಹಿತ್ಯದ ಪರಿಚಯ ಕನ್ನಡ ಸಾಹಿತ್ಯವನ್ನು ನೋಡಲು ಹೊಸದೃಷ್ಟಿಯನ್ನು ಒದಗಿಸಿತೆಂದು ಒಪ್ಪಬಹುದು. ಆದರೆ ಈ 'ಹೊಸದೃಷ್ಟಿ' ಕೂಡ ಇಂಗ್ಲಿಷ್ ಪರಿಸರಕ್ಕೆ ಹಳೆಯದೇ ಆಗಿತ್ತು. ಶ್ರೀಯವರು ಹಾಗೂ ಅವರಿಂದ ಕಲಿತು, ವಿಮರ್ಶಕರಾದ ಇತರ ಕೆಲವು ಇಂಗ್ಲಿಷ್ ಅಧ್ಯಾಪಕರ ಬರಹಗಳಲ್ಲಿ (ಉದಾಹರಣೆ ಎಸ್. ವಿ. ರಂಗಣ್ಣನವರು) ಹೀಗೆ 'ಹಳತಾದುದನ್ನೆ' ಹೊಸದೆಂದು ಸ್ವೀಕರಿಸಿದರೆಂಬ ಮಾತನ್ನು ಎಂ. ಜಿ. ಕೃಷ್ಣಮೂರ್ತಿಯವರು ಹೇಳುತ್ತಾರೆ (೧೯೭೩). ಆಪಾದನೆಯ ಧಾಟಿಯ ಈ ಮಾತು ಇಂದಿನ ಇಂಗ್ಲಿಷ್ ಅಧ್ಯಾಪಕರಿಗೂ ಅನ್ವಯಿಸುತ್ತದೆ. ಕನ್ನಡದ ಮಟ್ಟಿ ಗಂತೂ ಇಂಗ್ಲಿಷ್ ಅಧ್ಯಾಪಕರು ಇನ್ನೂ ಈ ಕಂದರವನ್ನು ತುಂಬುವ ಯತ್ನದಲ್ಲೇ ಇದ್ದಾರೆ. ಈ ಬಗೆಗೆ ವಿವರವಾದ ಚರ್ಚೆ ಸಾಧ್ಯವಾದರೂ, ಈ ಪ್ರಸಂಗದಲ್ಲಿ ಈ ವಿಚಾರವನ್ನು ಮಂಡಿಸುತ್ತಿರುವುದಕ್ಕೆ ಕೆಲವು ಕಾರಣಗಳಿವೆ. ಕನ್ನಡ ವಿಮರ್ಶೆಯ ಒಂದು ಪ್ರಮುಖ ವೈರುಧ್ಯವೊಂದರ ಬೀಜಗಳು ಶ್ರೀಯವರ ವಿಚಾರಗಳಲ್ಲೇ ಕಾಣಸಿಗುತ್ತವೆ ಎಂಬುದಷ್ಟೇ ನಮಗೆ ಇಲ್ಲಿ ಗಮನಾರ್ಹವಾಗಿದೆ.

ತಾವು ಸಾಹಿತ್ಯವನ್ನು ಕುರಿತು ಚಿಂತನೆ, ಕೃಷಿ ನಡೆಸುತ್ತಿದ್ದ ಕಾಲದ ಲಕ್ಷಣ ವನ್ನು ಗುರುತಿಸುವಾಗ ಶ್ರೀಯವರು 'ಪುನರುಜ್ಜೀವನ' ಎಂಬ ಮಾತನ್ನು ಬಳಸಿ ದ್ದಾರೆ; ಅಲ್ಲದೆ ಆ ಮಾತಿಗೆ ವ್ಯಾಪ್ತಿಯನ್ನೂ ನೀಡಿದ್ದಾರೆ. 'ರಿನೇಸಾನ್ಸ್', 'ರಿಸರ್ಜಂಟ್' ಎಂಬ ಪದಗಳ ಅರ್ಥವ್ಯಾಪ್ತಿಗೆ ಸರಿಹೊಂದುವಂತೆ 'ಪುನರುಜ್ಜೀವನ' ಎಂಬ ಮಾತನ್ನು ಶ್ರೀಯವರು ರೂಪಿಸಿದಂತೆ ತೋರುತ್ತದೆ. ಈಚಿನ ದಶಕಗಳಲ್ಲಿ 'ನವೋದಯ'ವೆಂಬ ಮಾತು ಬಳಕೆಗೆ ಬಂದಿದೆ. ಈ ಮಾತು ಬಹುಮಟ್ಟಿಗೆ ಪಾರಿಭಾಷಿಕ ಅರ್ಥವನ್ನು ಪಡೆದುಕೊಂಡದ್ದು ಸ್ವಾತಂತ್ರ್ಯೋತ್ತರ ವರ್ಷಗಳಲ್ಲಿ. ಅಂದರೆ ಸಾಂಸ್ಕೃತಿಕವಾದ ಒಂದು ಅವಧಿಯನ್ನು, ಅದರ ಹೊರಗೆ ನಿಂತು ವ್ಯಾಖ್ಯಾನಿಸಿ ದಾಗ ರೂಪುಗೊಂಡ ಪದ. ಆದರೆ ಶ್ರೀಯವರು ಬಳಸಿದ ಪದ ಕೇವಲ ವ್ಯಾಖ್ಯಾನ ಮಾತ್ರವಾಗಿರದೆ. ಸಮಕಾಲೀನ ಸಂದರ್ಭದ ತರ್ಕಬದ್ಧ ಗ್ರಹಿಕೆಯೂ, ಮುನ್ನಡೆಯ ಕಾರ್ಯಕ್ರಮಗಳ ನಿಯೋಜಕ ನೆಲೆಯೂ ಆಗಿದೆ.

ಒಡೆಯರ ಆಡಳಿತ ವ್ಯಾಪ್ತಿಯ ಕರ್ನಾಟಕದಲ್ಲಿ ಈ 'ಪುನರುಜ್ಜೀವನ'ದ ಕಾಲವು ಸಾಹಿತ್ಯಕ್ಷೇತ್ರದಲ್ಲಿ, ಮೂಲದಲ್ಲಿ ಪರಸ್ಪರ ವಿರೋಧವುಳ್ಳ ಎರಡು ಸಂಗತಿ ಗಳಿಂದ ಪ್ರೇರಣೆ ಪಡೆದಿದೆ. ಅಭಿಜಾತ ಇಲ್ಲವೇ ಉತ್ಕೃಷ್ಟಯುಗ (ಕ್ಲಾಸಿಕಲ್ ಯುಗ)ದ ಚೈತನ್ಯವನ್ನು ಪುನರಭಿನಯಿಸುವ ಅನುಸರಣಯುಗದ ಚಿಂತನೆಗಳು

ಹಾಗೂ ಆ ಚೈತನ್ಯದೊಡನೆ ಮುಖಾಮುಖಿಯಾಗುವ ರೊಮ್ಯಾಂಟಿಕ್ ಚಿಂತನೆಗಳು ಇವು ಎರಡೂ ಆ ಅವಧಿಯ ಸಾಹಿತ್ಯ ಚಿಂತನೆಗಳನ್ನು ಪ್ರೇರೇಪಿಸಿವೆ. ಷೆಲ್ಲಿ ಪ್ರೊಮಿತ್ಯೂಸನನ್ನು ಬಂಧಮುಕ್ತನನ್ನಾಗಿ ಮಾಡುವುದಕ್ಕೂ, ಶ್ರೀಯವರು ಅಶ್ವತ್ಥಾಮನನ್ನು ಚಿರಂಜೀವಿ ಪಟ್ಟದಿಂದ ಚ್ಯುತಗೊಳಿಸುವುದಕ್ಕೂ ಸಂಬಂಧವಿದೆ ಎಂದೇ ನನ್ನ ನಿಲುವು. ಶ್ರೀಯವರ ಯತ್ನದಲ್ಲಿ ಮೇಲೆ ನಮೂದಾದ ವೈರುಧ್ಯ ಸಾಕಾರಗೊಂಡಿದೆ. ಶ್ರೀಯವರ ಸಾಹಿತ್ಯ ಚಿಂತನ, ಕೃತಿಗಳನ್ನು ಮಾತ್ರವಲ್ಲದೆ ಮೈಸೂರು ವಿಶ್ವವಿದ್ಯಾಲಯದ ಪ್ರಭಾವಲಯಕ್ಕೆ ಬಂದ, ಆ ಮೂಲಕ ಶ್ರೀಯವರ ವಿಚಾರಗಳ ಪ್ರಭಾವಕ್ಕೆ ಒಳಗಾದ, ಆ ಮುಂದಿನ ನಾಲ್ಕು ದಶಕಗಳ ಕಾಲದ ಪ್ರಮುಖ ಕವಿ, ಚಿಂತಕರಲ್ಲೂ ಈ ವೈರುಧ್ಯ ಬೇರೆ ಬೇರೆ ಪ್ರಮಾಣದಲ್ಲಿಯಾದರೂ ಕಾಣುತ್ತದೆ. ವಿಮರ್ಶಾ ತತ್ತ್ವಗಳ ಮಟ್ಟಿಗೆ ಈ ಬಗೆಯ ಚಿಂತನೆಯ ಶೃಂಗಬಿಂದು ವೆಂದರೆ ತೀ.ನಂ.ಶ್ರೀಯವರ 'ಭಾರತೀಯ ಕಾವ್ಯಮೀಮಾಂಸೆ'.

'ಪುನರುಜ್ಜೀವನ'ವನ್ನು ಶ್ರೀಯವರೇ ಕೆಲವೆಡೆ ವ್ಯಾಖ್ಯಾನಿಸಿ ಹೇಳುವ ಮಾತುಗಳಿಂದ ಮೊದಲು ಮಾಡೋಣ : "ಒಂದು ಜನಪದವೂ, ಒಂದು ಸಾಹಿತ್ಯವೂ ನವಯುಗಕ್ಕೆ ಪ್ರವೇಶ ಮಾಡುವಾಗ ಹಿಂದಿನದರಲ್ಲಿ ಜೀವದಾಯಕವಾದ ಸಾರವನ್ನು ಉಳಿಸಿಕೊಳ್ಳುವುದೂ, ಮಲಿನವಾಗಿ ಜಾಡ್ಯ ಮುಸುಕಿರುವ ಬುದ್ಧಿಯನ್ನು ತಿದ್ದಿ ಹೊಸ ಮಾರ್ಗಕ್ಕೆ ಎಳೆದುಕೊಳ್ಳುವುದೂ, ಕೊಳೆತು ಕೆಟ್ಟು ಬದುಕಾಗದ, ಕೆಲಸಕ್ಕೆ ಅಡ್ಡಿಯಾಗಿ ಬರುವ ಭಾವಗಳನ್ನು ಕೊಯ್ದು ಹಾಕಿ, ನಿರ್ಮೂಲ ಮಾಡಿ, ಹೊಸ ನಡತೆಗಳನ್ನು ನೆಡುವುದಕ್ಕೆ ಅವಕಾಶ ಮಾಡಿಕೊಳ್ಳುವುದೂ ಆವಶ್ಯಕ ಕ್ರಿಯೆ ಗಳಾಗಿವೆ." (೧೯೩೦, ಪುಟ ೨೫೦) ಸಾಹಿತ್ಯಕ್ಕೆ ಸಂಬಂಧಿಸಿದಂತೆ 'ಪುನರುಜ್ಜೀವನ' ಎಂಬ ಮಾತು ಬಳಕೆಯಾಗಿದ್ದರೂ, ಅದು ಮುಖ್ಯವಾಗಿ ಸಾಮಾಜಿಕ ಜೀವನದ ನೆಲೆಗಳಿಂದ ಗ್ರಹಿಸಿದ್ದು ಎಂಬುದಂತೂ ಖಚಿತ. ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಪರಿಣಾಮಗಳಿಂದ ಜೀವನಕ್ರಮದಲ್ಲಿ ನಡೆಯುತ್ತಿದ್ದ ಗುಣಾತ್ಮಕ ಪರಿವರ್ತನೆಗೆ ಸ್ಪಂದಿಸುತ್ತಾ ಶ್ರೀಯವರು ತಮ್ಮ ವಿಚಾರಗಳನ್ನು ರೂಪಿಸಿಕೊಂಡಿ ದ್ದಾರೆ. ಈ ಶತಮಾನದ ಆರಂಭದ ವೇಳೆಗಾಗಲೇ ಸಾಹಿತ್ಯ ರಚನೆಯಲ್ಲೂ ಈ ಪರಿವರ್ತನೆಗೆ ತಕ್ಕ ಮಾದರಿಗಳ ಶೋಧನೆ ಮೊದಲಾಗಿತ್ತು. ಶ್ರೀಯವರು, ಹಾಗಾಗಿ, ಹೊಸದನ್ನು ಅಳವಡಿಸಿಕೊಳ್ಳಬೇಕೆಂಬ ವಿಚಾರಕ್ಕಿಂತ, ಹಳೆಯದಕ್ಕೆ ಇಡಿಯಾಗಿ ಕಟ್ಟುಬೀಳದೆ ಅದರ ಉಚಿತ ಪ್ರವರ್ತನೆಯ ಬಗೆಗೆ ಹೆಚ್ಚು ಒತ್ತು ನೀಡಿದ್ದಾರೆ. 'ಪುನರುಜ್ಜೀವನ' ಎಂಬ ಮಾತೇ ಹೀಗೆ ಭೂತಕಾಲಕ್ಕೆ ಪ್ರತಿಕ್ರಿಯಿಸುವ ನೆಲೆಯಲ್ಲಿದೆ. ಇದನ್ನು ಗಮನಿಸಬೇಕು. ಆದ್ದರಿಂದ ಶ್ರೀಯವರ ಸಾಹಿತ್ಯ ಚಿಂತನೆಯ ಪ್ರಧಾನ ಆಶಯವೇ ಹಳೆಯ ಸಾಹಿತ್ಯದ ಪ್ರಸ್ತುತತೆಯ ಚರ್ಚೆಯಾಗಿದ್ದು, ಸಮಕಾಲೀನ ಸಾಹಿತ್ಯ ಲಕ್ಷಣ ನಿರೂಪಣೆ ಅಲ್ಲಿ ಆನುಷಂಗಿಕ ಆಸಕ್ತಿ ಮಾತ್ರವಾಗಿದೆ. ಅಥವಾ

ಬರಲಿರುವ ಸಾಹಿತ್ಯದ ಸ್ವರೂಪ ಎಂಥದಿರಬೇಕು ಎಂಬುದನ್ನು ಕುರಿತಂತೆ ಒಂದು ಆಶಾಚಿಂತನೆಯನ್ನಷ್ಟೇ ಅವರಲ್ಲಿ ನಾವು ಕಾಣುತ್ತೇವೆ. ಬಹುಶಃ ಈ ನೆಲೆಯ ಅವರ ಚಿಂತನೆಗಳು ಗಾಢವಾಗಿ ಅವರ ಸೃಜನಶೀಲ ಕೃತಿಗಳಲ್ಲಿ ಪ್ರಕಟಗೊಂಡವು ಎಂಬ ನಿರ್ಣಯ ಸಾಧ್ಯ. ಅದನ್ನು ಕುರಿತು ಇಲ್ಲಿ ಚರ್ಚೆ ಬೆಳೆಸುವುದಿಲ್ಲ.

"ಪುನರುಜ್ಜೀವನ ಎಂದರೆ ಪುನರುತ್ಥಾನವಲ್ಲ, ಜೀರ್ಣೋದ್ಧಾರವಲ್ಲ, ಅನುಸರಣವಲ್ಲ, ಅನುಕರಣವಲ್ಲ" (೧೯೩೫, ಪುಟ ೨೮೫) ಎಂಬ ಮಾತನ್ನು ಗಮನಿಸಿ. ಸಾಹಿತ್ಯಪರಂಪರೆಯೊಂದರ ಬಗೆಗೆ ವರ್ತಮಾನ ತಳೆಯಬೇಕಾದ ನಿಲುವನ್ನು ಈ ಮಾತುಗಳಲ್ಲಿ ಸ್ಪಷ್ಟಪಡಿಸುತ್ತಾ ಶ್ರೀಯವರು, ತಾವು ಬಳಸುತ್ತಿರುವ ಮಾತಿಗೆ ನಿರ್ದಿಷ್ಟ ವ್ಯಾಪ್ತಿಯನ್ನು ಕಲ್ಪಿಸಲೆಂದು, ಯಾವುದು ತಮ್ಮ ಉದ್ದೇಶವಲ್ಲವೋ ಅದನ್ನು ಹೇಳಿದ್ದಾರೆ. ಈ ಮಾತು ಹೇಳುವ ವೇಳೆಗಾಗಲೇ ಹೊಸಗನ್ನಡ ಸಾಹಿತ್ಯದಲ್ಲಿ ಸಾಕಷ್ಟು ಕೃಷಿ ನಡೆದಿತ್ತು. ಹಾಗೂ ಆ ಸಾಹಿತ್ಯಕೃತಿಗಳು ವಸ್ತು, ವಿನ್ಯಾಸ, ರೂಪ, ದೃಷ್ಟಿಕೋನಗಳಲ್ಲಿ ಹಿಂದಿನ ಸಾಹಿತ್ಯಕೃತಿಗಳಿಂದ ಭಿನ್ನವಾಗಿರುವುದನ್ನು ಗಮನಿಸಿದವರು ಎಬ್ಬಿಸಿದ ವಾದಗಳ ಹಿನ್ನೆಲೆಯಲ್ಲಿ ಶ್ರೀಯವರ ಮೇಲಿನ ವಿವರಣೆ ಗಮನಾರ್ಹವಾಗುತ್ತದೆ. ಹಳೆಯುದೆಲ್ಲವೂ ಶ್ರೇಷ್ಠ, ಪವಿತ್ರ, ಅನುಕರಣೆಗೆ ತಕ್ಕದು ಎಂದು ತಿಳಿದುಕೊಂಡ ಪಂಡಿತರ ಎದುರು ಇವರು ಇನ್ನೊಂದು ತುದಿಯಲ್ಲಿ ನಿಂತು ವಾದಭೂಮಿಕೆಯಲ್ಲಿ ಮಾತ್ರ ಯುಕ್ತವೆನಿಸುವ ಮಾತನ್ನೂ ಹೇಳಿದ್ದಾರೆ: "ನವಜೀವನದಲ್ಲಿ ಕಾಲಿಡುತ್ತಿರುವ, ನವ್ಯದರ್ಶನವನ್ನು ಕೈಕೊಳ್ಳುತ್ತಿರುವ ಜನಸಾಮಾನ್ಯಕ್ಕೆ ಹಳಗನ್ನಡ ಮತ್ತು ನಡುಗನ್ನಡ ಕಾವ್ಯಮಾಲೆಯಿಂದ ಅಷ್ಟು ಹೆಚ್ಚಾದ ಪ್ರಯೋಜನವಾಗಲಾರದೆಂದು ನಾನು ಶಂಕಿಸುತ್ತೇನೆ." (೧೯೩೦, ಪುಟ ೨೬೫) ಈ ನಿಲುವು ಪ್ರಾಚೀನವಾದುದನ್ನು ಸಾರಾಸಗಟಾಗಿ ಅಲ್ಲಗಳೆದಂತೆ ಕಂಡರೂ, ವಾಸ್ತವದಲ್ಲಿ ಹಳಹಳಿಕೆಯ ಧೋರಣೆಗೆ ನೀಡಿದ ಎದುರೇಟು ಮಾತ್ರ. ಏಕೆಂದರೆ ಶ್ರೀಯವರು ಹಳಗನ್ನಡ, ನಡುಗನ್ನಡ ಕಾವ್ಯಗಳ ಪ್ರಾಸ್ತುತ್ಯವನ್ನು ಬೇರೆ ಬಗೆಯಲ್ಲಿ ಸಾದರಪಡಿಸುತ್ತಾರೆ.

ಹಿಂದಿನ ಕಾವ್ಯಕೃತಿ ಪರಂಪರೆಯಲ್ಲಿ ಈ ಹೊತ್ತಿಗೆ ಯೋಗ್ಯವಾಗುವಂಥ ಅಂಶಗಳನ್ನು ಪಡೆಯಬೇಕೆಂದು ಹೇಳುವಾಗ, ಕೃತಿಯು ತನ್ನ ಕಾಲವನ್ನು ಮೀರಿ ಬೇರೊಂದು ಕಾಲದ ಸಂಸ್ಕೃತಿಯ ಸಮಯಕ್ಕೆ ತಕ್ಕ ಅರ್ಥಗಳನ್ನು ನೀಡಲು ಶಕ್ತವಾದ ಬಂಧವನ್ನು ಹೊಂದಿರುವುದೆಂಬ ಇಂದಿನ ಚಿಂತನೆಗಳು ಶ್ರೀಯವರ ಗಮನದಲ್ಲಿ ಇರದೆ. ಎಲ್ಲ ಕಾಲಕ್ಕೂ ಸಲ್ಲುವ ಕೆಲವು ಸಮಾನ ಆಸಕ್ತಿಗಳನ್ನು ಶೋಧಿಸುವ ಅಪೇಕ್ಷೆ ಮಾತ್ರ ಇದ್ದಂತಿದೆ. ಕನ್ನಡ, ಸಂಸ್ಕೃತ. ಇಂಗ್ಲಿಷ್ ಮತ್ತು ಗ್ರೀಕ್ ಭಾಷೆಯ ಸಾಹಿತ್ಯಕೃತಿಗಳಲ್ಲಿ. ಅವು ಭಿನ್ನ ಕಾಲದೇಶಗಳಲ್ಲಿ ರೂಪುತಳೆದವಾದರೂ ಕೂಡ, ನಾವು ಪಡೆಯುವ ಅನುಭವದಲ್ಲಿ, ತಿರುಳಿನಲ್ಲಿ ಕಾಲದೇಶ ವಿಶೇಷಗಳ

ಆವರಣವನ್ನು ಭಗ್ನಗೊಳಿಸಿದ 'ಶುದ್ಧ ಮಾನವೀಯ' ನೆಲೆಗಳಿಂದ ಕೂಡಿರುವುದಾಗಿರುತ್ತದೆಂದು ಅವರು ಯೋಚಿಸಿದಂತೆ ತೋರುತ್ತದೆ. ಇದು ಮುಖ್ಯವಾಗಿ ಇಂಗ್ಲೆಂಡಿನ ಅನುಸರಣಯುಗ ಇಲ್ಲವೇ ನವಪ್ರಾಜ್ಞ ಯುಗದ (ನಿಯೋ ಕ್ಲಾಸಿಕಲ್) ಆಲೋಚನೆಗಳನ್ನು ಹೋಲುತ್ತದೆಂಬುದನ್ನು ಗಮನಿಸಬೇಕು.

ಹಾಗೆ ನೋಡಿದರೆ, ತನ್ನ ಹಿಂದಿನ ಕಾಲವನ್ನು ಕವಿಯೊಬ್ಬ ಹೇಗೆ ತನ್ನ ಕಾಲಕ್ಕೆ ಅನುಗುಣವಾಗಿ ಮರು ಹೊಂದಾಣಿಕೆ ಮಾಡಿಕೊಳ್ಳುತ್ತಾನೆ ಹಾಗೂ ಆ ಮೂಲಕ ತನ್ನ ಕೃತಿಯನ್ನು ಸಮಕಾಲೀನಗೊಳಿಸುತ್ತಾನೆ ಎಂಬುದು, ಶ್ರೀಯವರಿಗೆ ಕೇವಲ ತಮ್ಮ ಕಾಲದ ಸಮಸ್ಯೆಯಾಗಿ ಮಾತ್ರ ತೋರದೆ ಎಲ್ಲ ಕಾಲದ ಕವಿಗಳಿಗೂ ಅನ್ವಯಿಸುವುದೆಂದು ಅನಿಸಿದೆ. ಏಕೆಂದರೆ ಸಾಹಿತ್ಯ ಚರಿತ್ರೆಯ ರಚನೆಯಲ್ಲಿ ಅವರು ಕವಿಯೊಬ್ಬನ ಅನನ್ಯತೆಯನ್ನು ಗುರುತಿಸಲು ಬಳಸುವ ಮಾನದಂಡಗಳಲ್ಲಿ, ಆತ ತನ್ನ ಹಿಂದಿನ ಕಾವ್ಯ ಪರಂಪರೆಯಿಂದ ವಸ್ತುವನ್ನು ಸ್ವೀಕರಿಸಿಯೂ ಅದರ ಮೂಲಕ ತನ್ನ ಕಾಲದ ಸಂಗತಿಗಳನ್ನು, ಚಿಂತನೆಗಳನ್ನು ಎಷ್ಟರಮಟ್ಟಿಗೆ ಮಂಡಿಸಲು ಶಕ್ತನಾಗಿದ್ದಾನೆಂಬುದು ಒಂದು ಮುಖ್ಯ ನೆಲೆಯಾಗಿರುತ್ತದೆ. ಹಳತು ಹೊಸತುಗಳ ಹೊಂದಾಣಿಕೆಯ ಸಮಸ್ಯೆಯು ಎಲ್ಲ ಕಾಲಕ್ಕೂ ಅನ್ವಯಿಸುವುದೇ ಅಲ್ಲದೆ, ಆ ಸಮಸ್ಯೆಯ ಪರಿಹಾರವಾಗಿ ಸಮನ್ವಯ ಮಾರ್ಗವನ್ನು ಹಿಡಿಯುವುದು ಕವಿಯ ಸಾಧನೆಯ ನಿಕಷವಾಗುವುದೆಂಬುದನ್ನು ಶ್ರೀಯವರು ತಳೆದರು.

'ಸಾಹಿತ್ಯ'ವನ್ನು ಅವರು ವ್ಯಾಖ್ಯಾನಿಸುವ ಕ್ರಮವನ್ನು ನೋಡೋಣ : "ವಿಷಯವೇನೆ ಆಗಿರಲಿ ಸರಸ್ವತೀ ಪ್ರಸಾದವನ್ನು ಪಡೆದು. ರಸೋತ್ಪಾದನ ಶಕ್ತಿ. ಕಲ್ಪನಾಶಕ್ತಿಗಳಿಂದ ಕೂಡಿ. ತನ್ನದೇ ಒಂದು ಪ್ರತಿಭೆಯೂ ರೀತಿಯೂ ವ್ಯಕ್ತಿತ್ವವೂ ತನ್ನ ಕಾವ್ಯದಲ್ಲಿ ಉಕ್ಕುವಂತೆ ಮಾಡಿ. ಓದುವವರ ಹೃದಯವನ್ನು ಹೊಕ್ಕು ಅಲ್ಲಿ ಸೌಂದರ್ಯದ ಅನುಭವವನ್ನುಂಟುಮಾಡಬಲ್ಲ ಕವಿಗಳ ಗ್ರಂಥಗಳೇ ಸಾಹಿತ್ಯವೆನ್ನಿಸಿಕೊಳ್ಳುವುದಕ್ಕೆ ಯೋಗ್ಯ." (೧೯೨೭, ಪುಟ ೪೭೦) ಈ ವ್ಯಾಖ್ಯೆಯಲ್ಲಿ ಹೊಸ ಸಂಗತಿಗಳೇನೂ ಇಲ್ಲ. ಕೃತಿಯ ಒಳಗಿನ ತಿರುಳು ಏನೇ ಆಗಿರಲಿ ಅದರ ಮಂಡನೆಯ ಕ್ರಮದಲ್ಲಿ ವೈಶಿಷ್ಟ್ಯವಿರಬೇಕೆನ್ನುವುದೂ, ಆ ವೈಶಿಷ್ಟ್ಯಕ್ಕೆ ನಿಯಾಮಕ ಮತ್ತು ಮಾನದಂಡವೆಂದರೆ ಓದುಗನ ಅನುಭವವೆನ್ನುವುದೂ ಭಾರತೀಯ ಪಾರಂಪರಿಕ ಚಿಂತನೆಯೇ ಸರಿ. ಇದೇ ನಿಲುವನ್ನು ಬೇರೊಂದು ಬಗೆಯಲ್ಲಿ ಮಂಡಿಸುವ ಈ ಮಾತನ್ನು ನೋಡಿರಿ: "ಕಾವ್ಯ ಪ್ರತಿಪಾದಿಸುವ ತತ್ತ್ವ ಒಪ್ಪಿಗೆ ಇಲ್ಲದಿದ್ದರೂ. ಕಾವ್ಯದ ಬರವಣಿಗೆಗಾಗಿ ಅದನ್ನು ಮೆಚ್ಚಬೇಕು." (೧೯೨೮, ಪುಟ ೩೪೭) ವಿವಕ್ಷಿತ ಪರಿಣಾಮದ ಸಾಧ್ಯತೆಯು ಸಾಧಿತವಾಗುವ ಮೂಲಕವೇ ಕೃತಿಯ ಗೆಲುವನ್ನು ಪರಿಗಣಿಸಬೇಕೆಂಬ ನಿಲುವಿನಿಂದ ಹೊಸ ಸಾಹಿತ್ಯಕ್ಕೆ ಕೆಲವು ಗುರಿಗಳನ್ನು ಶ್ರೀಯವರು ಸೂಚಿಸುತ್ತಾರೆ: "ನಾವು. ಕನ್ನಡಿಗರು. ಇಂದು ಸತ್ತವರನ್ನು ಎಬ್ಬಿಸುವುದಷ್ಟೇ

ಅಲ್ಲ, ಬದುಕಿರುವವರನ್ನೂ ಎಚ್ಚರಗೊಳಿಸುವುದಕ್ಕೆ ಹೊರಟಿರುವೆವು. ಹಿಂದಿನ ಸಾಹಿತ್ಯವನ್ನು ಪ್ರಯೋಜನಕಾರಿಯಾಗಿ ಮಾಡುವುದಕ್ಕೇ ಅಲ್ಲ: ಹೊಸ ಉತ್ತಮ ಸಾಹಿತ್ಯವೊಂದನ್ನು ಸೃಷ್ಟಿ ಮಾಡುವುದಕ್ಕೆ ಹೊರಟಿರುವೆವು. ಹೊರಟವರು. ವಿಲಾಸವತಿಯ ಕೊರಳಿನ ಪುಷ್ಪಮಾಲಿಕೆಯಲ್ಲ ಸಾಹಿತ್ಯ. ಮಾನವಜೀವನದ ಪುನರ್ನಿರ್ಮಾಣಕಾರ್ಯದಲ್ಲಿ ಬದ್ಧಕಂಕಣವಾಗಿರುವ ವೀರನ ಕೈಯಿನ ಖಡ್ಗವೂ ಅಹುದೆಂದು ತಿಳಿದಿರುವೆವು." (೧೯೩೦, ಪುಟ ೨೨೮) ಈ ಮಾತಿನಲ್ಲಿ ಸಾಹಿತ್ಯದ ನಿಯೋಗವನ್ನು ಅನುಸರಿಸಿ ಅದರ ಸ್ವರೂಪವನ್ನು ನಿಶ್ಚಯಗೊಳಿಸಬೇಕಾಗುವ ಸಾಧ್ಯತೆಯನ್ನು ಶ್ರೀಯವರು ವಿವರಿಸುತ್ತಿದ್ದಾರೆ. ಅಥವಾ ಹಾಗೆ ನಿರ್ಧಾರಗೊಂಡ ಸನ್ನಿವೇಶವನ್ನು ಅವರು ಮಾದರಿ ಎಂಬಂತೆ ಪರಿಗಣಿಸಿದ್ದಾರೆ. ಈ ಸಮಾಜ ಸಮ್ಮುಖ ನಿಯೋಗವು ಹೊಸಕಾಲದ ತುಡಿತವೇ ಸರಿ. ವಿದ್ಯಾಭ್ಯಾಸದ ಪರಿಣಾಮ ದಿಂದ. ಸಮಾಜದ ಒಂದು ಭಾಗವಾದರೂ ಅಕ್ಷರಗಳನ್ನು ಓದಬಲ್ಲವರಾದ ಸಂದರ್ಭ ದಲ್ಲಿ ಅವರ ಓದಿನ ಸಾಮಗ್ರಿಯಾಗುವ ಸಾಹಿತ್ಯಕೃತಿಗಳು ಹೊಂದಬೇಕಾಗುವ ಹೊಣೆಯು ಹೆಚ್ಚು. ಇದನ್ನು ಕುರಿತಂತೆ. ಉತ್ಸಾಹದ ಭಾರ ಹೆಚ್ಚಾಗಿರುವಂತೆ ತೋರುವ, ಮೇಲಿನ ಮಾತುಗಳು ಮೂಡಿವೆ.

ಅಲ್ಲದೆ ಶಿಕ್ಷಣದ ಭಾಗವಾಗಿ ಸಾಹಿತ್ಯದ ಅಧ್ಯಯನ ಮೊದಲಾಗಿ ಆ ವೇಳೆಗೆ (ಈ ಶತಮಾನದ ಮೊದಲ ಎರಡು ದಶಕಗಳವರೆಗೆ) ಸುಮಾರು ನಾಲ್ಕೈದು ದಶಕಗಳೇ ಸಂದಿದ್ದವು. ಪಾರಂಪರಿಕ ಕಾವ್ಯವಾಚನ. ವ್ಯಾಖ್ಯಾನಗಳ ಜೊತೆಗೆ ಹಾಗೂ ಬದಲಾಗಿ ಹೀಗೆ ಸಾಹಿತ್ಯವನ್ನು ಓದಿನ ಭಾಗವನ್ನಾಗಿ ಅಭ್ಯಾಸಮಾಡುವ ಪದ್ಧತಿ ಮೂಡಿ. ಹಾಗೆ ಓದುವುದಕ್ಕೆ ತಕ್ಕ ಕೃತಿಗಳನ್ನು ಹಿಂದಿನ ಸಾಹಿತ್ಯದಿಂದ ಆಯ್ದುಕೊಳ್ಳಲಾಗುತ್ತಿತ್ತು. ಶಿಕ್ಷಣದ ಹಲವು ಉದ್ದೇಶಿತ ಗುರಿಗಳಲ್ಲಿ ವ್ಯಕ್ತಿಯ ಸಮಾಜೀಕರಣವೂ ಒಂದು. ಅದುದರಿಂದ ಆ ಗುರಿಗೆ ಪೋಷಕವಾಗುವ ಸಾಹಿತ್ಯ ವನ್ನು ಆ ಕೃತಿಯಿಂದ ಆಯ್ದು ಒದಗಿಸಬೇಕೆಂಬ ಆಕಾಂಕ್ಷೆ ಶ್ರೀಯವರ ವಿಚಾರಗಳಲ್ಲಿ ಕಂಡುಬಂದಿತು. ಸಾಂಪ್ರದಾಯಿಕ ಇಂಗ್ಲಿಷ್ ಶಿಕ್ಷಣ, ಭಾರತೀಯ ಮಾದರಿಯಲ್ಲೇ ಸಾಹಿತ್ಯವನ್ನು ವ್ಯಾಕರಣ ಮತ್ತು ತರ್ಕಗಳ ನಡುವೆ ಇರಿಸಿ, ಅವೆರಡರ ಬೋಧನೆಗೆ ಇದರಿಂದ ಸಾಮಗ್ರಿಯನ್ನು ಬಳಸುತ್ತಿತ್ತು. ಸಾಹಿತ್ಯದ ಅಧ್ಯಯನದ ಪ್ರಮುಖ ಪರಿಣಾಮದ ನೆಲೆಯಿಂದ ಹೀಗೆ ಅದನ್ನು ಬೇರೇನೋ ಕಾರಣಕ್ಕೆ ಬಳಸುವುದು ಆನುಷಂಗಿಕವಾದುದಾಗಬೇಕು. ಇದೇ ಕಾರಣದಿಂದ ಶ್ರೀಯವರು ಹಳೆಯ ಸಾಹಿತ್ಯ ವನ್ನು ಕುರಿತಂತೆ ತಳೆಯುವ ಅಭಿಪ್ರಾಯಗಳು ನಿಯಂತ್ರಿತವಾಗಿ ರೂಪುಗೊಂಡಿವೆ ಎಂಬ ನಿಲುವನ್ನು ತಲುಪಬಹುದು.

ಪ್ರಾಚೀನ ಸಾಹಿತ್ಯದ ಬಹುಪಾಲು ಪಾಠ ದೋಷಗಳಿಂದ ತುಂಬಿದೆ ಎಂಬು ದನ್ನು ಶ್ರೀಯವರು ಗುರುತಿಸಿದ್ದಾರೆ. ಅವೆಲ್ಲವನ್ನೂ ಸಂಗ್ರಹಿಸಿದರೆ ಅವು ಹೀಗಿವೆ :

ವಸ್ತುವಿನಲ್ಲಿ ನಾವೀನ್ಯ ರಾಹಿತ್ಯ, ರೀತಿಯ ಏಕತಾನತೆ, ಭಾವಗಳ ಚರ್ವಿತ ಚರ್ವಣ, ಅತಿರೇಕ ವರ್ಣನೆ, ಭಾಷೆಯಲ್ಲಿ ಸಂಸ್ಕೃತದ ಬಳಕೆಯ ಆಡಂಬರ ಹಾಗೂ ಕೇವಲ ಪದ್ಯರೂಪಕ್ಕೆ ಸಿಕ್ಕ ಹೆಚ್ಚಿನ ಮನ್ನಣೆ (೧೯೨೮, ಪುಟ ೨೫೦) ಇವೆಲ್ಲವು ಗಳಿಂದ ಮುಕ್ತವಾದ ಸಾಹಿತ್ಯ ಕೃತಿಗಳನ್ನು, ಕೃತಿಭಾಗಗಳನ್ನು ಪ್ರಸಾರಗೊಳಿಸ ಬೇಕು ಎಂದು ಮೇಲಿಂದ ಮೇಲೆ ಅವರು ಹೇಳಿದ್ದಾರೆ. ಆ ದಿಕ್ಕಿನಲ್ಲಿ ಅವರು ಪ್ರವೃತ್ತರಾಗಿದ್ದುದಕ್ಕೆ ಮೈಸೂರು ವಿಶ್ವವಿದ್ಯಾಲಯವು ಪ್ರಸಾರಾಂಗದ ಮೂಲಕ ಹಳೆಯ ಕಾವ್ಯಗಳ ಸಂಗ್ರಹ ಆವೃತ್ತಿಗಳನ್ನು ಮುದ್ರಿಸಲು ತೊಡಗಿದುದೇ ಸೂಚನೆ ಯಾಗಿದೆ. ಹಾಗಿದ್ದರೂ ಗಮನಿಸಬೇಕಾದ ಮಾತೊಂದಿದೆ. ಕ್ರೈಸ್ತ ಮಿಷನರಿಗಳೂ ಸೇರಿದಂತೆ. ಪಲವು ದೇಶೀಯ ಶೋಧಕರ ಯತ್ನದಿಂದ 'ಮರಳಿ ಕಂಡ' ಕೃತಿಗಳ ಹಸ್ತಪ್ರತಿ ಸಮುದಾಯವೆಲ್ಲ ಅವಗಾಹನೆಗೆ, ಪರಿಗ್ರಹಣಕ್ಕೆ ಯೋಗ್ಯವಲ್ಲವೆಂಬ ನಿಲುವನ್ನು ಹೇಳುವ ಈ ಮಾತುಗಳನ್ನು ನೋಡಿರಿ: "ಎಷ್ಟೋ ಉತ್ತಮವಾದ ವ್ಯವಹಾರಗಳಿಗೆ ವಿನಿಯೋಗಿಸಬೇಕಾಗಿ ಬಂದಿರುವ ಈ ನೂತನ ಕಾಲದಲ್ಲಿ ನಮ್ಮ ಹ್ರಸ್ವಜೀವಮಾನವನ್ನು ವಾತ್ಸಲ್ಯದಿಂದ ಪೂರ್ವಗ್ರಂಥಗಳಿಗೆ ಅರ್ಪಿಸಿ ಕೃಷಿ ಮಾಡಲು ಅವಕಾಶವುಂಟೇ ?" (೧೯೨೮, ಪುಟ ೩೪೧) ಈ ವಿವೇಚನಾಯುಕ್ತ ಆಯ್ಕೆಯನ್ನು ನಿಯಂತ್ರಿಸುವ ಮೌಲ್ಯವು ಶೈಕ್ಷಣಿಕ ನೆಲೆಯಿಂದ ರೂಪುಗೊಂಡ ದ್ದೆಂಬುದನ್ನು ಈ ಮೊದಲೇ ಸ್ಪಷ್ಟಪಡಿಸಲಾಗಿದೆ. ಹೀಗಿದ್ದರೂ ಪ್ರಾಚೀನ ಸಾಹಿತ್ಯಕೃತಿಗಳಿಗೆ ಸಾಹಿತ್ಯೇತರವಾದ ಉಪಯುಕ್ತತೆಯೂ ಇರುವುದೆಂಬುದನ್ನು ಗುರುತಿಸುತ್ತಾ, ಚರಿತ್ರೆಯನ್ನು ಪುನಾರಚಿಸಲು, ಭಾಷೆಯ ಬೆಳವಣಿಗೆಯನ್ನು ಅರಿಯಲು ಈ ಕೃತಿಸಮುದಾಯವೆಲ್ಲ ಒಂದಲ್ಲ ಒಂದು ವಿಧದಲ್ಲಿ ಬಳಕೆಗೆ ಬರುತ್ತ ದೆಂದು ಹೇಳಿದ್ದಾರೆ.

ಪಾಂಡಿತ್ಯ, ಶಾಸ್ತ್ರ, ಕಾಲದ ಅಭಿರುಚಿ ಹಾಗೂ ಮತದ ಚೌಕಟ್ಟು ಗಳೊಳಗೆ ಹಿಂದಿನ ಕವಿಗಳು ಸಿಕ್ಕಿಕೊಂಡಿದ್ದರೂ ಅವರೊಳಗಿನ 'ನಿಸರ್ಗಕವಿ' ಯೊಬ್ಬ ಈ ಮಿತಿಗಳನ್ನು ಮೀರಿ ಶ್ರೇಷ್ಠ ಕಾವ್ಯವನ್ನು, ಅಂದರೆ ನಮಗೂ ಯುಕ್ತವೆನಿಸುವ ಕಾವ್ಯವನ್ನು ರಚಿಸಿದ್ದಾನೆ. ಅವನ ರಚನೆಗಳನ್ನು. ಒಟ್ಟು ಕೃತಿಯಲ್ಲಿ ಅಂಥ ಭಾಗಗಳನ್ನು ನಾವು ಸಂಗ್ರಹಿಸಬೇಕಾಗಿದೆ. "ವಿಮರ್ಶೆಯ ಮೂಲಕವಾಗಿ ನಮ್ಮ ಪೂರ್ವಸಾಹಿತ್ಯ ರಾಶಿಯಿಂದ ಉತ್ತಮ ಕಾವ್ಯಗಳನ್ನು ಕಾವ್ಯ ಭಾಗಗಳನ್ನು ಶೋಧಿಸಿ ತೆಗೆದು ಕಾವ್ಯಕೋಶಗಳನ್ನು ಸಿದ್ಧಪಡಿಸುವ ಹೊಣೆಯನ್ನು ಗುರುತಿಸ ಲಾಗಿದೆ." (೧೯೨೮, ಪು. ೨೭೫) "ಪುರಾತನ ಪ್ರೌಢ ಸಾಹಿತ್ಯ, ಮಧ್ಯಕಾಲದವರ ಸುಲಭ ಸಾಹಿತ್ಯ, ನೂತನರ ರಂಜಕ ಸಾಹಿತ್ಯ"ದಲ್ಲಿ ಹೀಗೆ ಜರಡಿಯಾಡುವ ಪ್ರಕ್ರಿಯೆಯನ್ನೇ ವಿಮರ್ಶೆ ಎಂಬ ಸಾಮಾನ್ಯ ಅರ್ಥದಲ್ಲಿ ಶ್ರೀಯವರು ಬಳಸುತ್ತಾರೆ. ಈ ಶೋಧನಕ್ರಿಯೆಯ ಹೊಣೆ ಹೊತ್ತವರು, ನಿಜವಾದ ಕವಿ ಯಾರು ? ಯಾರದು

ಗುಹಾಧ್ವನಿ ? ನಿಜವಾದ ಕವಿಗಳಲ್ಲಿ ಪ್ರಧಾನರು ಯಾರು ? ಅವರ ಕವಿತ್ವದ ಸತ್ವ ಯಾವುದು ? ಸತ್ವಶಾಲಿ ಕವಿತೆಗಳಲ್ಲಿ ತಾರತಮ್ಯವನ್ನು ಗುರುತಿಸುವುದೆಂ ಹೇಗೆ ? ಎಂಬಿವೇ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಬೇಕಾಗುವುದು. ಅಲ್ಲದೆ ಅಂಥ ಕಾವ್ಯಗಳ ಗುಣ, ನ್ಯೂನತೆಗಳನ್ನು ಕಾಣಬೇಕಾಗುತ್ತದೆ. ನ್ಯೂನತೆಯನ್ನು ನಿರ್ಧರಿಸುವ ಅಂಶವೆಂದರೆ ಸಾಮಾಜಿಕ ನೀತಿ ಹಾಗೂ ನಡಾವಳಿಯ ಸಂಹಿತೆ. ಆ ಕಾಲದ ಕಾವ್ಯ ನಮ್ಮ ಕಾಲಕ್ಕೆ 'ಆನಂದ, ಸುಪ್ರೇರಣೆ ಹಾಗೂ ಕಾವ್ಯ ಫಲಗಳನ್ನು ನೀಡುವುದೇ ಎಂಬುದನ್ನು ವಿಮರ್ಶೆಯಲ್ಲಿ ತೊಡಗುವವನು ಗುರುತಿಸಬೇಕಾಗುತ್ತದೆ. ಶ್ರೀಯವರು ಮಂಡಿಸುವ ಈ ಅಪೇಕ್ಷೆಗಳು ಬಹುಮಟ್ಟಿಗೆ ಮೌಲ್ಯಮಾಪನದ ಕಡೆಗೆ ಒಲವೆ ಯನ್ನು ತೋರುತ್ತವೆ. ಆದರೆ ಇಂಥ ಮೌಲ್ಯಮಾಪನಕ್ಕೆ ಬೇಕಾದ ಮಾನದಂಡಗಳು ಸಿದ್ಧವಾಗಿಲ್ಲವೆಂಬ ತಿಳಿವೂ ಅವರಿಗೆ ಇದೆ. "ಹಿಂದಿನ ಸಂಸ್ಕೃತ ಮಾರ್ಗವನ್ನು, ಈಗಿನ ಇಂಗ್ಲಿಷ್ ಮಾರ್ಗವನ್ನು ಪ್ರಕೃತದಲ್ಲಿ ಜನರ ಸ್ವಭಾವ ಅಭಿಪ್ರಾಯ ಲಾಭಗಳನ್ನು, ಗಣನೆಗೆ ತಂದು, ಸರ್ವಮತವನ್ನು ತೂಕಮಾಡಿ, ವಿಪರೀತಕ್ಕೆ ಹೋಗದೆ, ಉತ್ತಮ ಪಕ್ಷವನ್ನೆ ಹಿಡಿಯತಕ್ಕದ್ದಾಗಿದೆ." (೧೯೨೮, ಪುಟ ೨೫೩) ಈ ಮಾತಿನಲ್ಲಿ ಯಾವ ಮಾರ್ಗ ಯೋಗ್ಯವಾದುದೆಂಬ ಚಿಂತನೆ ಇದೆ. ಆದರೆ ಸುಮಾರು ಇದೇ ವೇಳೆಗೆ ಅವರು ಬರೆದಿರಬಹುದಾದ (ಪ್ರಕಟವಾಗಿದ್ದು ಮಾತ್ರ ಅನಂತರದಲ್ಲಿ) ಅವರ ಸಾಹಿತ್ಯ ಚರಿತ್ರೆಯ ಬರವಣಿಗೆಯ ಪ್ರವೇಶಿಕೆಯಲ್ಲಿ ಹೇಳುವ ಮಾತನ್ನು ನೋಡಿ : "ಕಾವ್ಯವಿಮರ್ಶೆಯ ಭಾಗದಲ್ಲಿ ವ್ಯವಸ್ಥೆಯಾಗಿ ಎಲ್ಲರೂ ಒಪ್ಪಬಹುದಾದ ಅಭಿಪ್ರಾಯ ಗಳು ಪ್ರಚಾರದಲ್ಲಿಲ್ಲವಾದ್ದರಿಂದಲೂ ಹೊಸದಾಗಿ ಸಿಕ್ಕಿರುವ ನಿಕ್ಷೇಪವನ್ನು ಕನ್ನಡಿಗರು ಇನ್ನೂ ಆಶ್ಚರ್ಯಪಟ್ಟು ಹೊಗಳಿಕೊಳ್ಳುವ ಸಂಭ್ರಮದಲ್ಲಿಯೇ ಇರುವುದ ರಿಂದಲೂ, ಪೂರ್ವದ ಸಂಪ್ರದಾಯವಾದ ಸಂಸ್ಕೃತ ಕಾವ್ಯಲಕ್ಷಣ ರುಚಿಗೂ ಈ ಕಾಲದ ಇಂಗ್ಲಿಷ್ ಕಾವ್ಯಾಭ್ಯಾಸ ಬಲದಿಂದ ಉಂಟಾಗಿರುವ ಹೊಸರುಚಿಗೂ ಬಹಳ ತಾರತಮ್ಯವಿರುವುದರಿಂದಲೂ, ಆ ಭಾಗಕ್ಕೆ ಇಲ್ಲಿ ಹೆಚ್ಚಾಗಿ ಪ್ರವೇಶಮಾಡುವುದು ಸೂಕ್ತವಾಗಿ ಕಾಣಿಸಲಿಲ್ಲ." (ಪು. ೪೦೯) ವಿಮರ್ಶೆಯ ಮೊದಲ ಹಂತಗಳಲ್ಲಿ ಕಂಡುಬರುವ ಇಕ್ಕಟ್ಟನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ. ಅಲ್ಲದೆ ಆ ಮೂಲಕ ಶ್ರೀಯವರ ಸಾಹಿತ್ಯ ಚಿಂತನೆಗಳ ಪ್ರಾಯೋಗಿಕ ಮಿತಿಗಳು ಕೂಡ ವಿಮರ್ಶೆಯ ಮಟ್ಟಿಗಾದರೂ ಸ್ಪಷ್ಟಗೊಂಡಂತೆ ಆಗುತ್ತದೆ. ಹೀಗೆಂದಾಗ ಅವರ ವಿಮರ್ಶನ ಸಾಮರ್ಥ್ಯವನ್ನು ಕುರಿತು ಟೀಕೆ ಮಾಡುತ್ತಿಲ್ಲ. ಬದಲಾಗಿ ಸಂದರ್ಭವನ್ನು ಕೇವಲ ವಿವರಿಸುತ್ತಿದ್ದೇನೆ ; ಅಷ್ಟೆ.

ಕವಿ, ಕೃತಿ ವಿಮರ್ಶೆಯ ಭಾಗದಲ್ಲೂ ಶ್ರೀಯವರು ಹಳಗನ್ನಡ ಸಾಹಿತ್ಯದ ಬಗೆಗೆ ಬರೆದಷ್ಟನ್ನು ನಡುಗನ್ನಡ ಹಾಗೂ ಅವರ ಸಮಕಾಲಿನ ಕೃತಿಗಳ ಬಗೆಗೆ ಬರೆದಿಲ್ಲ.. ಇದರಿಂದಾಗಿ ಅವರ ವಿಮರ್ಶನ ವಿಚಕ್ಷಣೆಯ ಹರವನ್ನು ಗುರುತಿಸಲು

ಕೆಲವಾದರೂ ಮಿತಿಗಳು ಉಂಟಾಗುತ್ತವೆ ಎಂಬುದನ್ನು ಒಪ್ಪಲೇಬೇಕಾಗುತ್ತದೆ. ಏಕೆಂದರೆ ತಮ್ಮ ಚಿಂತನೆಗಳನ್ನು ಸಾಹಿತ್ಯದ ಬೇರೆ ಬೇರೆ ಮಾದರಿಗಳೊಡನೆ ಪರೀಕ್ಷಿಸಿ ನೋಡಿ ಅದರ ಸಾಮರ್ಥ್ಯವನ್ನು ಸಾಬೀತು ಮಾಡಿಕೊಳ್ಳುವ ಹೊಣೆ ಯಾವ ವಿಮರ್ಶಕನಿಗಾದರೂ ಇದ್ದೇ ಇರುವುದಷ್ಟೆ.

ರುದ್ರನಾಟಕವೆಂಬ ಪದವನ್ನು 'ಟ್ರಾಜಿಡಿ'ಗೆ ಬದಲಾಗಿ ಬಳಸಿ ಚಲಾವಣೆಗೆ ತಂದು ಅದರ ವಿವರಣೆಯನ್ನು ನೀಡಿ, ಕನ್ನಡವೂ ಸೇರಿದಂತೆ ಭಾರತೀಯ ಭಾಷೆಗಳಲ್ಲಿ ರುದ್ರನಾಟಕಗಳು ಏಕಿಲ್ಲವೆಂದು ಚಿಂತಿಸಿ, ಅದಕ್ಕೆ ಒಂದು ಕಾರಣವನ್ನೂ ಹುಡುಕಿ, ಆ ಕೊರತೆಯನ್ನು ತುಂಬಲು ಆ ಬಗೆಯ ರುದ್ರನಾಟಕಗಳನ್ನು ಅನುವಾದಿಸಿ, ರೂಪಾಂತರಿಸಿ ಕೊಟ್ಟವರು ಶ್ರೀಯವರು. ಸಾವನ್ನು ರಂಗದ ಮೇಲೆ ತಂದು ಅಭಿನಯಿಸಲಾಗದು ಎಂಬ ನಾಟ್ಯಶಾಸ್ತ್ರದ ನಿರ್ದೇಶವೇ ಒಂದು ಕಾರಣವಾಗಿ ನಾಯಕನ ಮೃತ್ಯು ನಾಟಕಗಳ ವಸ್ತುವಾಗಲಿಲ್ಲವೆಂದೂ, ಕಾವ್ಯಪರಂಪರೆಯಲ್ಲಿ ಪ್ರತಿನಾಯಕನ ನೆಲೆಯಿಂದ ಕಂಡಾಗ ರುದ್ರನಾಟಕಗಳಿಗೆ ಅವಶ್ಯವೆನಿಸುವ ದುರಂತಗಳು ಕಾಣಸಿಗುತ್ತವೆ ಎಂದು ಹೇಳಿದ್ದಾರೆ. ಜೀವನದ ಕಟುಸತ್ಯವನ್ನು ಎದುರಿಸಲು ನೋಟಕರು ಸಿದ್ಧರಿರಬೇಕೆಂದು ಹೇಳುತ್ತಾ ಅವರು ಹೀಗೆ ಹೇಳಿದ್ದಾರೆ : "ಗೌತಮನು ಕಿಸಾಗೋತಮಿಗೆ ಕಲಿಸಿದ ಬುದ್ಧಿಯನ್ನು ನಮ್ಮ ಹಳದ ಲಾಕ್ಷಣಿಕರು ಕಲಿಯಬೇಕು. ಸಾವನ್ನೂ ಅಳಲನ್ನೂ ಆಖ್ಯಾನ ಕಾವ್ಯದಲ್ಲಿ ಓದಿ ಮರುಗುವಂತೆಯೇ ಕಣ್ಣೆದುರಿಗೆ ಕೆಟ್ಟದ್ದನ್ನು ನೋಡಿ ಮರುಗಿ, ಧೀರರಾಗಬೇಕು." (೧೯೪೫, ಪುಟ ೩೨೭) ಈ ಮಾತಿನಲ್ಲಿ ಸಾಹಿತ್ಯವು ಜೀವನ ಮಂಡನೆಯಲ್ಲಿ ಆಯ್ಕೆ ಮಾಡತೊಡಗಬಾರದೆಂದು, ಯಾವುದು ನಿರಂತರವಾಗಿ ನಮ್ಮೊಡನೆ ಇರುವುದೋ ಅದನ್ನು ತನ್ನ ವ್ಯಾಪ್ತಿಗೆ ತೆಗೆದುಕೊಳ್ಳಲು ಹಿಂಜರಿಯಬಾರದೆಂದು ಹೇಳುವಂತಿದೆ. ರುದ್ರನಾಟಕದಲ್ಲಿ ಮಂಡಿತವಾಗುವ ನೋವನ್ನು, ಕೆಡುಕನ್ನು ಜೀವನದ ಸಂದರ್ಭದ ನೋವು, ಕೆಡುಕುಗಳಿಗೆ ಸಂವಾದಿಯಾಗಿ ಪರಿಗಣಿಸುವುದಾಗಲೀ, ಪಾರಂಪರಿಕ ಕೃತಿಗಳ ಪ್ರತಿನಾಯಕರನ್ನು ದುರಂತನಾಯಕರೆಂದು ಮರುಚಿಂತನೆಗೆ ಒಳಪಡಿಸುವುದಾಗಲೀ, ರುದ್ರನಾಟಕದ ಬದ್ಧ ಸಾಂಪ್ರದಾಯಿಕ ಚೌಕಟ್ಟಿಗೆ ತಕ್ಕುದಲ್ಲವಾದರೂ, ವ್ಯಕ್ತಿಯನ್ನು ಕೃತಿಯ ಕೇಂದ್ರಕ್ಕೆ ತರುವ ಯತ್ನವಾಗಿ ಶ್ರೀಯವರ ವಿಚಾರಗಳು ಚಿಂತನೆಗೆ ಸಾಮಗ್ರಿಯನ್ನು ಒದಗಿಸುತ್ತವೆ. ಪಾರಿಭಾಷಿಕವಾಗಿ ಹೇಳುವುದಾದರೆ ಈ ಪರಿವರ್ತನೆಯನ್ನು ಎಪಿಕ್ ಸ್ತರದಿಂದ ನಾಟಕ ಸ್ತರಕ್ಕೆ (ಫ್ರಮ್ ಎಪಿಕ್ ಮೋಡ್ ಟು ಡ್ರಮಟಿಕ್ ಮೋಡ್) ಆದ ಬದಲಾವಣೆ ಎಂದು ವಿವರಿಸಬಹುದು. ಪ್ರಾಚೀನ ಕೃತಿಗಳಲ್ಲಿ ನಿರೂಪಣೆ ಹಾಗೂ ವರ್ಣನೆ ಪ್ರಧಾನವಾದ ಎಪಿಕ್ ಸ್ತರದಲ್ಲಿ ವ್ಯಕ್ತಿಪ್ರಜ್ಞೆಯ ಪ್ರತ್ಯೇಕತೆಗೆ ಅವಕಾಶವೇ ಇಲ್ಲ. ಶ್ರೀಯವರು ಈ ಪರಿಸ್ಥಿತಿಯನ್ನು ವ್ಯತ್ಯಸ್ತಗೊಳಿಸಿ ಭಾವಪ್ರಧಾನ ನಾಟಕಸ್ತರಕ್ಕೆ ಅವಧಾರಣ ನೀಡಿದರು. ಇಲ್ಲಿ

ವ್ಯಕ್ತಿಪ್ರಜ್ಞೆಯ ಪ್ರತ್ಯೇಕತೆಗೆ ಅವಕಾಶವಿದೆ. ಇಂಥ ಚಿಂತನೆಯನ್ನು ಅವರು ಬೇರೆಯಾಗಿ ಮಂಡಿಸಿದುದೇ ಅಲ್ಲದೆ ತಮ್ಮ ಸೃಜನ ಸಾಹಿತ್ಯಕೃತಿಗಳಲ್ಲೂ ಮಂಡಿಸಿದರು. ನಾಗಚಂದ್ರನ ರಾವಣ, ಪಂಪ ಮತ್ತು ರನ್ನರ ದುರ್ಯೋಧನರು ಇವರ ಬಗೆಗೆ ಅವರ ವಿಮರ್ಶೆಯು ಮುಖ್ಯವಾಗಿ ಇದೇ ನಿಲುವಿನದಾಗಿದೆ. ಶ್ರೀಯವರ ಈ ವಿಚಾರ ಆ ಮುಂದಿನ ಸಾಹಿತ್ಯ ಮತ್ತು ವಿಮರ್ಶೆಗಳೆರಡಕ್ಕೂ ಪ್ರಭಾವದ ಮೂಲವಾಯಿತೆಂಬುದನ್ನು ಹೇಳಲು ಹೆಚ್ಚಿನ ಪುರಾವೆಗಳ ಆವಶ್ಯಕತೆ ಇಲ್ಲ.

ಜನಪದ ಸಾಹಿತ್ಯವನ್ನು ಕುರಿತ ಶ್ರೀಯವರ ಬರಹ (೧೯೩೧) ಹಲವು ದೃಷ್ಟಿಗಳಿಂದ ಗಮನಾರ್ಹ. ಕೇವಲ ಆಚರಣೆ(ಪರ್‌ಫಾರ್‌ಮೆನ್ಸ್)ಯಲ್ಲಿ ಮಾತ್ರ ಉಳಿದಿದ್ದ ಈ ಸಾಹಿತ್ಯವು ಶಿಷ್ಟ ಸಾಹಿತ್ಯದೊಡನೆ ಹೇಗೆ ಸಂಬಂಧ ಪಡೆದಿದೆ ಎಂಬ ಸಂಗತಿಯನ್ನು ಮಾತ್ರವಲ್ಲದೆ, ಆ ಸಾಹಿತ್ಯಕ್ಕೂ ಜನಜೀವನಕ್ಕೂ ಇರುವ ಸಂಬಂಧವ ನಿಕಟತೆಯನ್ನು ಶ್ರೀಯವರು ವಿವರಿಸಿದ್ದಾರೆ. ಆ ಭಾಗದ ಅವರ ಬರಹ, ಆಶಯದಲ್ಲಿ ಅಲ್ಲವಾದರೂ, ವಿವರಣೆಯ ಕ್ರಮ ಹಾಗೂ ಉತ್ಸಾಹಗಳಲ್ಲಿ ಜಾರ್ಜ್ ಥಾಂಸನ್ನನ 'ಮಾರ್ಕ್ಸಿಸಂ ಅಂಡ್ ಪೊಯಟ್ರಿ'ಯ ಮೊದಲ ಕೆಲವು ಪುಟಗಳನ್ನು ನೆನಪಿಗೆ ತರುತ್ತದೆ. (ಆ ಪುಸ್ತಕ ಶ್ರೀಯವರ ಬರಹದ ಅನಂತರದ್ದು.) ಶುದ್ಧಕಾವ್ಯದ ಹುಡುಕಾಟದಲ್ಲಿದ್ದ ಶ್ರೀಯವರಿಗೆ ಜನಪದ ಕಾವ್ಯ ಅಂಥ ಸಾಧ್ಯತೆಗಳನ್ನು ಗರಿಷ್ಠ ಪ್ರಮಾಣದಲ್ಲಿ ಮೈಗೂಡಿಸಿಕೊಂಡಂತೆ ತೋರಿದ್ದರಲ್ಲಿ ಆಶ್ಚರ್ಯವಿಲ್ಲ. (ಇಲ್ಲಿ ಆನುಷಂಗಿಕವಾದ ಒಂದು ಮಾತು. ಕರ್ನಾಟಕದ ದಕ್ಷಿಣಭಾಗದ ಒಡೆಯರ ಮೈಸೂರಿನಲ್ಲಿ ಬೆಳೆದ ಸಾಹಿತ್ಯ ನವೋದಯದ ಮೊದಲಲ್ಲಿ ಇಂಗ್ಲಿಷ್ ಕವಿತೆಗಳ ಅನುವಾದ, ರೂಪಾಂತರವಾದ ಶ್ರೀಯವರ 'ಇಂಗ್ಲಿಷ್ ಗೀತಗಳು'; ಇದೇ ಹೊತ್ತಿನಲ್ಲಿ ಉತ್ತರ ಕರ್ನಾಟಕದಲ್ಲಿ ಇಂಥ ನವೋದಯವನ್ನು ಬೆಳೆಸಿದ ಗೆಳೆಯರ ಗುಂಪು ಜನಪದಗೀತೆಗಳನ್ನು ಸಂಗ್ರಹಿಸುತ್ತಿದ್ದರು. ಹಾಗೂ ಅಂಥ ಒಂದು ಸಂಗ್ರಹಕ್ಕೆ ಶ್ರೀಯವರೇ ಮುನ್ನುಡಿಯನ್ನು ಬರೆದರು. ಈ ಸಂಗತಿಗಳು ನಮಗೆ ಇಡೀ ಪರಿಸ್ಥಿತಿಯನ್ನು ಅರಿಯಲು ಕೆಲವು ಒಳನೋಟಗಳನ್ನು ಒದಗಿಸಬಹುದಲ್ಲವೇ ?)

ಶ್ರೀಯವರ ಸಾಹಿತ್ಯ ಚಿಂತನೆಗಳಲ್ಲಿ ಸಾಹಿತ್ಯ ಚರಿತ್ರೆ ಹಾಗೂ ತೌಲನಿಕ ಸಾಹಿತ್ಯ ಅಧ್ಯಯನಗಳನ್ನು ಕುರಿತ ವಿಚಾರಗಳೂ ಇವೆಯಾದರೂ ಅವುಗಳನ್ನಿಲ್ಲಿ ನಾನು ಚರ್ಚಿಸಿಲ್ಲವೇಕೆಂದರೆ ಪ್ರತ್ಯೇಕವಾದ ಲೇಖನಗಳಿಗೆ ಅವು ವಸ್ತುವಾಗಬಲ್ಲವು ಎಂಬ ಕಾರಣದಿಂದ. ಒಟ್ಟಾರೆಯಾಗಿ ಶ್ರೀಯವರ ಸಾಹಿತ್ಯ ಸಂಬಂಧಿ ವಿಚಾರಗಳನ್ನು ಗಮನಿಸಿ ಕೆಲವು ಮಾತುಗಳನ್ನು ಹೇಳಬಹುದಾಗಿದೆ.

ಹೊಸತಾದ ಸಾಹಿತ್ಯದ ಸನ್ನಿವೇಶ ತಳೆಯುತ್ತಿದ್ದ ಆಕಾರವನ್ನು ಗ್ರಹಿಸಿ ಚಿಂತನೆಗೆ ತೊಡಗಿದ ಇವರ ವಿಚಾರಗಳಿಗೆ ಎರಡು ಮುಖ್ಯ ಲಕ್ಷಣಗಳಿವೆ. ಒಂದು,

ಪುನರುಜ್ಜೀವನ ಕಾಲದ ವ್ಯಾಖ್ಯಾನ ; ಎರಡು. ಹೊಸ ಸಾಹಿತ್ಯ ಹೇಗಿರಬೇಕೆಂಬ ಚಿಂತನೆಯ ಜೊತೆಗೆ ಅಂಥ ಮಾರ್ಗವನ್ನು ರೂಪಿಸ ಹೊರಟ ಪ್ರವರ್ತಕನ ನಿಲುವು. ಈ ಎರಡು ಸಂಗತಿಗಳಲ್ಲಿ ಮೊದಲನೆಯದು ಅವರ ಸಾಹಿತ್ಯ ಚಿಂತನೆಗಳಲ್ಲೂ, ಎರಡನೆಯದು ಅವರ ಸೃಜನಶೀಲ ಕೃತಿಗಳಲ್ಲೂ ಕಂಡುಬರುತ್ತದೆ.

# ಕಾವ್ಯಮೀಮಾಂಸೆಗೆ 'ಶ್ರೀ' ಅವರ ಕೊಡುಗೆ

— ಕೆ. ಕೃಷ್ಣಮೂರ್ತಿ

ಪೂಜ್ಯ ಬಿ. ಎಂ. ಶ್ರೀ. ಅವರು ಇಂಗ್ಲಿಷ್ ಮಾಧ್ಯಮದ ಮೂಲಕ ವಿಶ್ವ ಸಾಹಿತ್ಯದ ಬಹುಮುಖ ವಿಸ್ತಾರ-ವೈವಿಧ್ಯಗಳನ್ನು ಗಮನಿಸಿದ್ದವರು. ಇಂಗ್ಲಿಷ್ ಸಾಹಿತ್ಯದಲ್ಲಂತೂ ಪ್ರಗಾಢವಾದ ಪರಿಣತಿಯನ್ನು ಪಡೆದಿದ್ದವರು. ಛಾಸರ್, ಷೇಕ್ಸ್‌ಪಿಯರ್, ಮಿಲ್ಟನ್, ಡ್ರೈಡನ್, ವರ್ಡ್ಸ್‌ವರ್ತ್, ಕೋಲೆರಿಜ್, ಕೀಟ್ಸ್, ಷೆಲ್ಲಿ, ಬ್ರೌನಿಂಗ್, ಟೆನಿಸನ್ ಮುಂತಾದವರ ಉತ್ತಮ ಕೃತಿಗಳು ಅವರಿಗೆ ವಾಚೋವಿಧೇಯವಾಗಿದ್ದವು. ಹಾಗೆಯೇ ಪ್ರಾಚೀನ ಗ್ರೀಕ್ ನಾಟಕಕಾರರಿಂದ ಆರಂಭವಾಗಿ ಷೇಕ್ಸ್‌ಪಿಯರನಲ್ಲಿ ಪುನರ್ನವ ರೂಪಾಂತ ನಾಟಕಗಳ, ಮುಂದೆ ಆಧುನಿಕರ ಕೈಯಲ್ಲಿ ಅದು ಪಡೆದ ಹೊಸ ಹೊಸ ರೂಪಗಳ ಆಳವಾದ ಪರಿಚಯ ಅವರಿಗಿತ್ತು. ಜಾನ್ಸನ್, ಗೋಲ್ಡ್‌ಸ್ಮಿತ್, ಲ್ಯಾಮ್, ಸ್ಟೀವನ್‌ಸನ್ ಮುಂತಾದ ಉತ್ತಮ ಗದ್ಯಕಾರರ ವೈಶಿಷ್ಟ್ಯ ಅವರ ಮನಸ್ಸನ್ನು ಸೆಳೆದಿತ್ತು. ಒಟ್ಟಿನಲ್ಲಿ ಗದ್ಯ ಸಾಹಿತ್ಯದ ನಾನಾ ಮುಖಗಳಾದ ಲಲಿತಪ್ರಬಂಧ, ಕಥೆ-ಕಾದಂಬರಿಗಳೇ ಆಧುನಿಕ ರಚನೆಯ ಮುಖ್ಯಾಂಗಗಳಾಗಿದ್ದರೂ ಉತ್ತಮ ಶೈಲಿಯ ವಿಚಾರಸಾಹಿತ್ಯವೂ ಇಂಗ್ಲಿಷಿನಲ್ಲಿ ತೀವ್ರಗತಿಯಿಂದ ರಚಿತವಾಗುತ್ತಿತ್ತು. ಹಾಗೆಯೇ ಪದ್ಯಬಂಧಗಳಲ್ಲಿ ಕೂಡ ಪ್ರಗಾಥ, ಶೋಕಗೀತ, ಚತುರ್ದಶಪದಿಗಳಂತಹ ಪರಂಪರಾಗತ ಚೌಕಟ್ಟುಗಳ ಜತೆಜತೆಗೇ ವಿನೂತನವಾದ ಛಂದೋಲಯಗತಿಗಳ ಅನ್ವೇಷಣೆಯನ್ನೂ ಸಾರ್ಥಕ ವಾಗಿ ಇಂಗ್ಲಿಷ್ ಕವಿಗಳು ಕೈಗೊಂಡಿದ್ದುದು ಶ್ರೀಯವರ ಲಕ್ಷ್ಯವನ್ನು ಸೆಳೆಯಿತು. ಇವೆಲ್ಲವನ್ನೂ ಸ್ಥೂಲವಾಗಿ, ವಿಹಂಗಮ ದೃಷ್ಟಿಯಿಂದ ಅವಲೋಕಿಸಲು ಸಹಾಯಕ ವಾಗಿದ್ದ ಸಾಹಿತ್ಯಚರಿತ್ರೆಗಳ ಹಾಗು ಆಳವಾಗಿ ಅಧ್ಯಯನ ಮಾಡಲು ನೆರವೀಯು ತ್ತಿದ್ದ ಸಾಹಿತ್ಯ ವಿಮರ್ಶಕರ ವಿಪುಲ ರಚನೆಗಳ ಬಗೆಗೆ ಅವರಿಗೆ ಆದರವುಂಟಾಯಿತು. ಸಾಹಿತ್ಯ ವೈದುಷ್ಯದ ವಿವಿಧ ಅಂಗಗಳಾದ ವಿಶ್ವಕೋಶ, ಭಾಷಾವಿಜ್ಞಾನ, ಛಂದಶ್ಶಾಸ್ತ್ರಚರಿತ್ರೆ, ವ್ಯಾಕರಣ-ಕೋಶಾದಿಗಳಲ್ಲೂ ಪಾಶ್ಚಾತ್ಯರ ಸಾಧನೆ ಬೆರಗಾಗಿಸು

ವಂತೆ ವ್ಯವಸ್ಥಿತವಾಗಿತ್ತು. ಇದನ್ನೆಲ್ಲ ಅರಗಿಸಿ ರಕ್ತ ಮಾಡಿಕೊಂಡ ಮೊದಲ ಕನ್ನಡಿಗ ಮಹಾನುಭಾವರು ಬಿ. ಎಂ. ಶ್ರೀ ಅವರು.

ಕನ್ನಡ ಭಾಷೆ-ಸಾಹಿತ್ಯಗಳ ಅಧ್ಯಯನವನ್ನು ಅವರು ಅಂದಿನ ಪ್ರಾಚೀನ ಕ್ರಮದಲ್ಲಿ ತಕ್ಕಮಟ್ಟಿಗೆ ಪಡೆದವರೂ ಆಗಿದ್ದರು. ಪಠ್ಯರಚನೆಗಾಗಿ ಬರುತ್ತಿದ್ದ ಗ್ರಂಥಗಳೇ – ಹಳೆಯ ಕಾವ್ಯಗಳಿಂದ ಸಂಕಲಿತ ಭಾಗಗಳೇ – ಹೊಸ ಕನ್ನಡ ಗ್ರಂಥ ಗಳೆನಿಸುತ್ತಿದ್ದ ದುಷ್ಕಾಲವದು. ಸ್ವತಂತ್ರವಾದ ಗದ್ಯಪದ್ಯ ರಚನೆಗೆ ಅವಕಾಶವೂ ಇರಲಿಲ್ಲ ; ಉತ್ತೇಜನವೂ ಇರಲಿಲ್ಲ ; ಪ್ರಯೋಜನವೂ ಇರಲಿಲ್ಲ. ಆಸ್ಥಾನಗಳಲ್ಲಿ ಹಿಂದಿನ ಚಂಪೂಪ್ರಬಂಧಗಳ ಪ್ರೌಢಭಾಷೆಗೆ, ಹಳಗನ್ನಡ-ಸಂಸ್ಕೃತಮಯ ಜಟಿಲ ಭಾಷೆಗೆ ಮಾತ್ರ ಪುರಸ್ಕಾರವಿತ್ತು. ಆದ್ದರಿಂದ ಅನುಕರಣಪರವಾದ ಕಾವ್ಯಗಳನ್ನೇ ಪಂಡಿತರು ಬರೆಯುತ್ತಿದ್ದರು. ಜನರ ಬಾಯಲ್ಲಿರುತ್ತಿದ್ದ ಹಾಡುಗಳಿಗೂ, ಪದ ಗಳಿಗೂ ಸಾಹಿತ್ಯವೆಂಬ ಪದವಿ ದೂರವಾಗಿತ್ತು. ನಡುಗನ್ನಡದ ಷಟ್ಪದೀ ಕಾವ್ಯಗಳೇ ಜನಪ್ರಿಯತೆಯನ್ನು ಗಳಿಸಿದ್ದವು. ಸಾಮಾನ್ಯರಿಗೆ ಕನ್ನಡ ಸಾಹಿತ್ಯದ ವೈಶಾಲ್ಯ-ವೈವಿಧ್ಯಗಳ ಪ್ರಜ್ಞೆ ಮೂಡುವಂತಹ ಸಾಹಿತ್ಯಚರಿತ್ರೆಯನ್ನು ಯಾರೂ ಬರೆದಿರ ಲಿಲ್ಲ. ಕನ್ನಡ ಛಂದೋಬಂಧಗಳ ಉಗಮ-ವಿಕಾಸ-ವೈಚಿತ್ರ್ಯಗಳನ್ನು ಯಾರೂ ಶಾಸ್ತ್ರೀಯವಾಗಿ, ವ್ಯವಸ್ಥಿತವಾಗಿ ಸಂಶೋಧಿಸಿರಲಿಲ್ಲ. ಭಾಷಾವಿಕಾಸ, ಶಬ್ದರೂಪ ವ್ಯತ್ಯಯಗಳ ವೈಜ್ಞಾನಿಕ ಅಧ್ಯಯನವನ್ನು ಯಾರೂ ಕೈಗೊಂಡಿರಲಿಲ್ಲ. ಸಂಸ್ಕೃತ ವ್ಯಾಕರಣ-ಛಂದೋಬಂಧ-ಕೋಶಾದಿಗಳ ಪಾಂಡಿತ್ಯವೇ ಕನ್ನಡ ಪಾಂಡಿತ್ಯಕ್ಕೆ ಪೋಷಕ ವೆಂಬ ರೂಢಭಾವನೆ ಬೆಳೆದುಬಂದಿತ್ತು. ಹಿಂದಿನ ಮಹಾಕವಿಗಳ ಅನುಸರಣೆಯನ್ನು ಕೈಬಿಟ್ಟು, ಹೊಸ ವಿಷಯಗಳ – ದೇಶಪ್ರೇಮ, ವಿಶ್ವಮಾನವೀಯ ಮೌಲ್ಯಗಳು, ವೈಯಕ್ತಿಕವಾದ ನಾನಾ ಭಾವಲಹರಿಗಳು, ಪ್ರಕೃತಿ ನಿರೀಕ್ಷಣೆ, ಚೆಲುವಿನ ಸಂವೇದನೆ, ಜೀವನದ ಅಮರ ಕ್ಷಣಗಳು – ಮುಂತಾದವನ್ನು ತಮ್ಮದೇ ಆದ ಹೊಸ ರೀತಿಯಲ್ಲಿ ಹೊಸ ಛಂದೋಗತಿಗಳಲ್ಲಿ ಬರೆಯುವ ಸಾಧ್ಯತೆಯನ್ನು ಆವಿಷ್ಕರಿಸಬೇಕೆಂಬ ಹಂಬಲ ವಿದ್ದವರೇ ವಿರಳ ; ಹಂಬಲವಿದ್ದವರಿಗೂ ಪ್ರತಿಷ್ಠಿತರ ಬೆಂಬಲವಿರುತ್ತಿರಲಿಲ್ಲ. ಹೀಗಾಗಿ ಕನ್ನಡ ಸಾಹಿತ್ಯ ಒಬ್ಬ ಪ್ರತಿಷ್ಠಿತ, ಸೂಕ್ಷ್ಮ ಸಂವೇದನಾಸಮರ್ಥ, ಸಾಹಿತ್ಯ ಮರ್ಮಜ್ಞ ವಿದ್ವಾಂಸನ, ನವೋನ್ಮೇಷ ಪ್ರತಿಭಾಶಾಲಿಯ ಬರವನ್ನು ಕಾತರದಿಂದ ಎದುರು ನೋಡುತ್ತಿತ್ತು. ಆ ಆಹ್ವಾನಕ್ಕೆ ಉತ್ತರರೂಪವಾಗಿಯೆನ್ನುವಂತೆ ಸರ್ವಾಂಗೀಣ ಸಾಮರ್ಥ್ಯಸಂಪನ್ನರಾದ 'ಶ್ರೀ' ಅವರು ಮುಂದೆ ಬಂದರು.

ಜನಪದ ಜೀವನವಲ್ಲಿ ಕನ್ನಡದ ಜೀವಾಳವನ್ನು ಅರಿತು ಮನಗಾಣುವುದಕ್ಕಾಗಿ ದೇಶಾಟನೆ ಮಾಡಿದರು ; ಪಂಡಿತರ ಗೆಳೆತನವನ್ನು ನಾಡಿನ ನಾಲ್ಕೂ ದಿಕ್ಕಿನಲ್ಲಿ ಬೆಳೆಸಲೆಂದು ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ಸಂಘ ಮುಂತಾದ ಸಂಸ್ಥೆಗಳನ್ನು ಸೃಷ್ಟಿಸಿದರು. ತಾವು ವಿಶ್ವವಿದ್ಯಾಲಯದ ಪ್ರತಿಷ್ಠಿತ ಪ್ರಾಧ್ಯಾಪಕರಾಗಿದ್ದುದಲ್ಲದೆ,

ತಮ್ಮೆಲ್ಲ ಇಂಗ್ಲಿಷ್ ಪರಿಣತಿಯನ್ನೂ ಕನ್ನಡದ ಮುನ್ನಡೆಗಾಗಿ ಧಾರೆಯೆರೆಯುವ ಕೈಂಕರ್ಯವನ್ನು ಕೈಗೊಂಡರು. ಅದಕ್ಕಾಗಿ ತಮ್ಮ ತನು-ಮನ-ಧನಗಳನ್ನೆಲ್ಲ ಸಮರ್ಪಿಸಿ ಧನ್ಯತೆ ಪಡೆದರು. ಎಲ್ಲಕ್ಕಿಂತ ಹೆಚ್ಚಾಗಿ, ತಮ್ಮ ಇಂಗ್ಲಿಷ್-ಕನ್ನಡ ಸಹೋದ್ಯೋಗಿಗಳ ಮತ್ತು ಶಿಷ್ಯರ. ಸಾಹಿತ್ಯ ಕೃಷಿಕಾರರ ಮತ್ತು ಕನ್ನಡ ಪ್ರೇಮಿಗಳ, ಒಂದು ಪ್ರಬಲ ತಂಡವನ್ನೇ ನಿರ್ಮಿಸಿ ಅವರಲ್ಲಿ ಕನ್ನಡ ಅಭಿಮಾನದ ಸ್ಫೂರ್ತಿಯನ್ನು ತುಂಬಿದರು; ಜನಜಾಗೃತಿಗಾಗಿ ಅವರೆಲ್ಲರೂ ಉತ್ಸಾಹದಿಂದ ಮುಂದಾಗುವಂತೆ ಹುರಿದುಂಬಿಸಿದರು. ಹೊಸ ಕನ್ನಡ ಸಾಹಿತ್ಯ ಪ್ರಯೋಗಗಳನ್ನು ಕೈಗೊಂಡ ಪ್ರತಿಭಾಶಾಲಿಗಳನ್ನು ಅವರೆಷ್ಟೇ ಎಳೆಯರಿದ್ದರೂ ತುಂಬಿದ ಹೃದಯದಿಂದ ಹರಸಿ ಪ್ರೋತ್ಸಾಹಿಸಿದರು. ಹೀಗೆ ನಾನಾ ದಿಶೆಗಳಲ್ಲೂ ಕನ್ನಡದ ದೀಕ್ಷೆಯೊಂದು ಪ್ರಚಂಡ ಪ್ರಭಾವವೆಂಬಂತೆ ಅದರ ಹೊಸ ಗಾಳಿ ಬೀಸತೊಡಗಿತು. ಈ ಹೊಸಗಾಳಿಯಲ್ಲಿ ಹಳೆಯ ಜೊಳ್ಳುಗಳೆಲ್ಲ ಹಾರಿಹೋದವು. ಹಳೆಯುದರಲ್ಲಿದ್ದ ಗಟ್ಟಿ ಕಾಳುಗಳನ್ನು ಉಳಿಸಿಕೊಳ್ಳುವ ಚಾತುರ್ಯವೂ ಶ್ರೀ ಅವರದೇ. ಎಲ್ಲ ಹಿಂದಿನ ಮಹಾಕವಿಗಳನ್ನೂ – ಜೈನರಿರಲಿ, ವೀರಶೈವರಿರಲಿ, ಬ್ರಾಹ್ಮಣರಿರಲಿ – ಸಮಾನ ಸಹಾನುಭೂತಿಯಿಂದ ಪುನರವಲೋಕಿಸಿ, ಶುಷ್ಕವೂ ನೀರಸವೂ ಆದ ಭಾಗಗಳನ್ನು ತೆಗೆದುಹಾಕಿ, ಇಂದಿಗೂ, ಎಂದಿಗೂ, ಶ್ರೇಷ್ಠವೆನಿಸಬಲ್ಲ ಕಾವ್ಯಭಾಗಗಳನ್ನು ಮಾತ್ರ ಒಟ್ಟುಮಾಡಿಕೊಡುವ ಮಹಾಸಾಹಸವನ್ನು ಕೂಡ ಶ್ರೀ ಅವರೇ ಕೈಗೆತ್ತಿಕೊಂಡರು. ಕೈಗೆತ್ತಿಕೊಂಡ ಕಾರ್ಯ ಯಾವುದೇ ಇರಲಿ, ಅದನ್ನು ಆಧುನಿಕ ವಿದ್ವನ್ಮಣಿಗಳು ಮೆಚ್ಚುವ ಗುಣಮಟ್ಟ ತಪ್ಪದಂತೆ ಸಾಧಿಸಿದ ಹಿರಿಮೆ ಶ್ರೀ ಅವರದು.

ಕನ್ನಡದಲ್ಲಿ ಆಧುನಿಕ ಸಾಹಿತ್ಯ ಪ್ರಗತಿಗೆ ಅಗತ್ಯವಾದ ಸಕಲಾಂಶಗಳನ್ನೂ ಸೂಕ್ಷ್ಮವಾಗಿ ವಿಶ್ಲೇಷಿಸಿ. ಎಲ್ಲ ಕಿಟಿಕಿಗಳಿಂದಲೂ ಹೊಸಗಾಳಿ ಬರುವಂತೆ, ಹೊಸ ಜಾಗೃತಿ ಬೆಳೆಯುವಂತೆ ಶ್ರೀ ಅವರು ನಿರಂತರವಾಗಿ ಶ್ರಮಿಸಿದರು. ಪ್ರಧಾನವಾಗಿ ಆಧುನಿಕತೆಗೆ ಪಾಶ್ಚಾತ್ಯಸಾಹಿತ್ಯವೇ ಬಾಗಿಲೆಂದು ಅವರು ಭಾವಿಸಿದ್ದೇನೋ ನಿಜವೇ. ಆದರೆ ಭಾರತದ ಸಕಲಭಾಷೆಗಳಿಗೂ ಮಾತೃಸ್ಥಾನದಲ್ಲಿದ್ದು ಶಬ್ದಸಂಪತ್ತು, ಸಾಹಿತ್ಯ ರೂಪ, ಸಾಹಿತ್ಯಮೌಲ್ಯ, ಸಾಹಿತ್ಯಶಿಲ್ಪ – ಮುಂತಾಗಿ ಹಲವಾರು ರೀತಿಗಳಿಂದ ನಿರಂತರ ಪ್ರಭಾವ ಕೇಂದ್ರವಾಗಿದ್ದ ಸಂಸ್ಕೃತದ ಅಧ್ಯಯನವನ್ನು ಅವರು ಕಡೆಗಣಿಸಲಿಲ್ಲ. ತೌಲನಿಕ ಸಾಹಿತ್ಯದೃಷ್ಟಿಯನ್ನು ಅವರು ಸಂಪೂರ್ಣವಾಗಿ ಮೈಗೂಡಿಸಿಕೊಂಡಿದ್ದರಿಂದ, ಪಾಶ್ಚಾತ್ಯರ ಪ್ರಾಚೀನ ಶ್ರೇಷ್ಠ ಭಾಷೆಗಳಾದ ಲ್ಯಾಟಿನ್, ಗ್ರೀಕ್‌ಗಳ ಹಿರಿಮೆಗರಿಮೆಗಳನ್ನು ಅವರು ಇಂಗ್ಲಿಷ್ ಭಾಷಾಪ್ರಭುತ್ವಕ್ಕೆ ಅವಶ್ಯ ಪೂರಕಗಳೆಂಬುದನ್ನು ಮನಗಂಡಿದ್ದರಲ್ಲದೆ, ಕನ್ನಡ ಭಾಷೆಯ ಖಚಿತ ಹಾಗೂ ಉಚಿತ ಶಬ್ದಸಂಪತ್ತಿನ ಸಂಘಟನೆಗೆ, ಹೊಸ ಶಬ್ದರೂಪಗಳ ನಿರ್ಮಾಣಕ್ಕೆ ಸಂಸ್ಕೃತದ ನೆರವು ಅಗತ್ಯವೆಂದು ಭಾವಿಸಿದ್ದರು. ಅವರ ವಿಶಾಲ ಮನೋಭೂಮಿಕೆಯಲ್ಲಿ ಯಾವ ಸಂಕುಚಿತತೆ ಅಥವಾ

ಸ್ವಭಾಷಾ ದುರಭಿಮಾನಕ್ಕೂ ಎಡೆಯಿರಲಿಲ್ಲ. ಸಮಕಾಲೀನ ಕನ್ನಡ ಪ್ರಗತಿಯ ಪಥದಲ್ಲಿ ಎಷ್ಟರಮಟ್ಟಿಗೆ ಅಗತ್ಯವೋ ಅಷ್ಟರಮಟ್ಟಿಗೆ ಸಂಸ್ಕೃತದ ಆಳವಾದ ಅರಿವನ್ನೂ ನೆರವನ್ನೂ ಅವರು ಸ್ವಾಗತಿಸುತ್ತಿದ್ದರು. ತೌಲನಿಕ ಭಾಷಾಶಾಸ್ತ್ರದ, ತೌಲನಿಕ ಛಂದಶ್ಶಾಸ್ತ್ರದ ಬುನಾದಿಯನ್ನು ಹಾಕಿದವರೇ ಬಿ. ಎಂ. ಶ್ರೀ. ಅವರ ಸಂಸ್ಕೃತ ಅಭ್ಯಾಸ ಉತ್ತಮ ಮಟ್ಟದ್ದಾಗಿರದಿದ್ದರೆ ಈ ವಿಶೇಷಾಧ್ಯಯನಗಳು ಇಷ್ಟೊಂದು ಸಪ್ರಮಾಣವಾಗಿ ಇಂದಿಗೂ ಉಳಿಯುತ್ತಿರಲಿಲ್ಲ. ಅವರ ಹಳಗನ್ನಡ-ನಡುಗನ್ನಡ-ಹೊಸಗನ್ನಡ ಸಾಹಿತ್ಯಕೃತಿಗಳ ವಿಮರ್ಶೆಯಲ್ಲಿ ಭಾರತೀಯರ ರಸಾಲಂಕಾರಗಳ ಔಚಿತ್ಯದೃಷ್ಟಿಯೂ ಪಾಶ್ಚಾತ್ಯರ ಸಾಂಪ್ರದಾಯಿಕ ವಿಮರ್ಶನ ದೃಷ್ಟಿಯೊಂದಿಗೆ ಸಮಸಮವಾಗಿ ಸಮ್ಮಿಳಿತವಾಗಿರುವುದನ್ನು ನೋಡುತ್ತೇವೆ.

ಹೀಗೆ ತೆರೆದ ಮನ ಶ್ರೀಯವರದ್ದಾದುದರಿಂದಲೇ ಅವರ ಪ್ರಭಾವವಲಯದಲ್ಲಿ ಸ್ಫೂರ್ತಿಗೊಂಡ ಉದ್ದಾಮ ಕವಿ-ಪಂಡಿತ ಲೇಖಕರಲ್ಲಿ ಪ್ರೊ॥ ಎ. ಆರ್. ಕೃಷ್ಣಶಾಸ್ತ್ರಿ. ಪ್ರೊ॥ ತೀ. ನಂ. ಶ್ರೀಕಂಠಯ್ಯ, ಪ್ರೊ॥ ಎಂ. ವಿ. ಸೀತಾರಾಮಯ್ಯ. ಪ್ರೊ॥ ಡಿ. ಎಲ್. ನರಸಿಂಹಾಚಾರ್ ಮುಂತಾದ ಕೆಲವರು ಸಂಸ್ಕೃತ ಸಾಹಿತ್ಯ ಹಾಗು ಅಲಂಕಾರಶಾಸ್ತ್ರಗಳ ಸಮತೂಕದ ಕನ್ನಡ ನಿರೂಪಣೆಯಲ್ಲಿ ಪ್ರವೃತ್ತರಾದದನ್ನು ಕಾಣುತ್ತೇವೆ. ಪ್ರೊ॥ ಎಸ್. ವಿ. ರಂಗಣ್ಣ, ಪ್ರೊ॥ ಕೆ. ವಿ. ರಾಘವಾಚಾರ್, ಪ್ರೊ॥ ಎ. ಎನ್. ಮೂರ್ತಿರಾವ್ ಮುಂತಾದ ಪಾಶ್ಚಾತ್ಯ ಸಾಹಿತ್ಯಾರಾಧಕರು ಕನ್ನಡ ರಚನೆಯ ಹೊಸ ಆಯಾಮಗಳ ನಿರ್ಮಾಣಕ್ಕನುವಾದುದನ್ನೂ ನೋಡುತ್ತೇವೆ. ಸಹಜ ಪ್ರತಿಭಾಸಂಪನ್ನರಾದ ಕುವೆಂಪು, ವಿ. ಸೀತಾರಾಮಯ್ಯ ಮುಂತಾದವರನ್ನೂ ಕಾಣುತ್ತೇವೆ. ಯಾರಲ್ಲಿಯೂ ಪರಭಾಷಾ ದ್ವೇಷವಿಲ್ಲ. ತಮಿಳು, ಸಂಸ್ಕೃತ, ಗ್ರೀಕ್, ಇಂಗ್ಲಿಷ್, ತೆಲುಗು, ಮುಂತಾದ ಎಲ್ಲ ಇತರ ಸಾಹಿತ್ಯಗಳಿಂದಲೂ ರತ್ನಗಳನ್ನು ಆಯ್ದುತಂದು ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸುವ ಕಳಕಳಿಯನ್ನಷ್ಟೇ ಕಾಣುತ್ತೇವೆ. ಈ ದೃಷ್ಟಿಯಿಂದ ನೋಡುವಾಗ ಅವರ ಸಾಹಿತ್ಯಾನುಯಾಯಿಗಳೆಲ್ಲ ಉತ್ತಮ ಆಧುನಿಕ ವಿಮರ್ಶನ ಪ್ರಜ್ಞೆಯವರೇ ಎಂಬ ಸಾಮಾನ್ಯ ಅಂಶ ನಮಗೆ ಸ್ಪಷ್ಟವಾಗುತ್ತದೆ.

ಹೀಗೆ ಶ್ರೀ ಅವರ ಕಾರ್ಯಕ್ಷೇತ್ರ ಸಾಹಿತ್ಯಕ ಮೇರೆಯನ್ನು ದಾಟಿ ಸಾಮಾಜಿಕ, ರಾಜಕೀಯ, ಭೌಗೋಲಿಕ ಸ್ತರಗಳನ್ನೂ ವ್ಯಾಪಿಸುವಷ್ಟು ವಿಶಾಲವಾಯಿತು. ಅಖಂಡ ಕರ್ನಾಟಕದ ಪರಿಕಲ್ಪನೆ, ಅದಕ್ಕಾಗಿ ಪ್ರಚಾರ ಭಾಷಣಗಳ ಪ್ರಾಚುರ್ಯ, ನಾಡಿನ ಮೂಲೆ ಮೂಲೆಗಳಲ್ಲೂ ಪ್ರವಾಸ ಮತ್ತು ಗಣ್ಯರ ಮೈತ್ರಿಯ ಸಂಪಾದನೆ, ಕನ್ನಡ ಪ್ರಚಾರಕ್ಕಾಗಿ ದೊಡ್ಡ ಬಳಗದ ಸಂಘಟನೆ, ಕನ್ನಡದ ಆಧುನಿಕ ಶಾಸ್ತ್ರೀಯ ನಿಘಂಟು ಹಾಗು ವಿಶ್ವಕೋಶಗಳ ಯೋಜನೆ, ಪ್ರಾಚೀನ ಗ್ರಂಥಗಳಲ್ಲಿ ಆಯ್ದ ಉತ್ತಮ ಭಾಗಗಳಿಗೆ ಆಧುನಿಕ ಸಾಹಿತ್ಯವಿಮರ್ಶೆ ಹಾಗು ಟಿಪ್ಪಣಿಗಳ ಸಮೇತ

ಗ್ರಂಥಸಂಪಾದನಾ ಶಾಸ್ತ್ರಕ್ಕನುಸಾರವಾದ ಪ್ರಕಟನೆಯ ವ್ಯವಸ್ಥೆ, ಶಿಕ್ಷಣ ಕ್ರಮದಲ್ಲಿ ಹಾಗು ಸರಕಾರದ ಶಾಸಕಾಂಗ ವ್ಯವಹಾರದಲ್ಲಿ ಕನ್ನಡಕ್ಕೆ ಪ್ರಥಮಸ್ಥಾನದ ಅಗತ್ಯದ ಬಗ್ಗೆ ಕಳಕಳಿ – ಇವೇ ಮುಂತಾಗಿ ಅವರ ದೂರದರ್ಶಿತ್ವ ಹಾಗು ಮಾರ್ಗದರ್ಶಿತ್ವ ಹಲವಾರು ಮುಖಗಳಿಂದ ಹೊರಹೊಮ್ಮಿದವು. ಹೀಗೆ ಅವರ ಸಮರ್ಪಿತ ಕಾಯಕದಿಂದ ಕನ್ನಡ ನಾಡಿನಲ್ಲಿ ನವಚೇತನದ ತಂಗಾಳಿ ಬೀಸಿದ್ದು ಮಾತ್ರವಲ್ಲ: ಕನ್ನಡ ನೆಲದಲ್ಲೆಲ್ಲ ಮಳೆಹನಿಯೂ ಸುರಿಯಿತು: ನೆಲ ತಂಪಾಯಿತು. ಪ್ರತಿಭೆಯ ನವನಿರ್ಮಾಣಕ್ಕೆ ಬಂದಿದ್ದ ಕ್ಷಾಮ ತೊಲಗುವಂತೆ, ಅವರು ಹೊಸದಾದ ಗಟ್ಟಿ ಬೀಜಗಳನ್ನು ತಮ್ಮ ವಿವೇಚನೆಯ ಮೊರದಲ್ಲಿ ಕೇರಿ ಹದಮಾಡಿ. ಹಿಂದಿನ ಜಳ್ಳು ಗಳನ್ನೂ ಹೊಟ್ಟನ್ನೂ ತೂರಿ, ಒದಗಿಸಿದ್ದು ಮಾತ್ರವಲ್ಲ: ನೆಲವನ್ನು ಉತ್ತು ಹದಮಾಡಲು ಅನೇಕ ಶಿಷ್ಯಗಾರರನ್ನು ತಯಾರುಮಾಡಿದರು: ಎಲ್ಲರೂ ಕೂಡಿ ಬೀಜ ಬಿತ್ತಿದರು; ಅನಲ್ಪಕಾಲದಲ್ಲೇ ಉತ್ತಮ ಚಿನ್ನದ ಬೆಳಸು ಸಿದ್ಧವಾಗು ವಂತಾಯಿತು.

ಹೀಗೆ ಆಧುನಿಕ ಜೀವನದ ನಿಜವಾದ ಕನ್ನಡಿಯಾಗಬೇಕಾದ ನವಸಾಹಿತ್ಯದಲ್ಲಿ ಹಳೆಯ ಛಂದೋಬಂಧಗಳ, ಹಳೆಯ ಕಾವ್ಯಮಾರ್ಗಗಳ, ಹಳೆಯ ಭಾಷಾ ರೂಪಗಳ ಬಳಕೆ ಶ್ರೀಯವರಿಗೆ ಕೃತಕವೂ ಪರಿತ್ಯಾಜ್ಯವೂ ಎನಿಸಿದ್ದರಲ್ಲಿ ಸೋಜಿಗವಿಲ್ಲ. ಅವರು ದತ್ತಿಯಿಟ್ಟ ಸುವರ್ಣಪದಕದ ಕವನಸ್ಪರ್ಧೆಗೆ ಲೇಖಕರು ಹಿಂದಿನ ಕಂದ-ವೃತ್ತ ಗಳನ್ನು ಬಳಸಲಾಗದೆಂಬ ನಿಷೇಧವಿತ್ತು. ತತ್ಕಾಲದಲ್ಲಿ ಹೊಸದರ ಪ್ರೋತ್ಸಾಹನಕ್ಕೆ ಇಂತಹ ಉಗ್ರ ನಿಬಂಧನೆಗಳಿಗೆ ಅಗತ್ಯವಿದ್ದಿರಬಹುದಾದರೂ, ನಿಜವಾಗಿ ಒಂದು ಸಾಹಿತ್ಯದ ಪೂರ್ಣ ವಿಕಾಸಕ್ಕೆ ಪೂರ್ವಪರಂಪರೆಯನ್ನು ಕತ್ತರಿಸಿಹಾಕುವ ನಿಲವು ಪೂರಕವಾಗುವ ಬದಲು ಮಾರಕವೇ ಆಗುವುದು ಹೆಚ್ಚು. ಇಂತಹ ಬದ್ಧವೈರದ ನಿಲವು ನಮ್ಮ ಸೋದರ ಭಾಷೆಗಳಾದ ತೆಲುಗು, ತಮಿಳು, ಮಲಯಾಳಗಳಲ್ಲಿ ಇಲ್ಲದ್ದರಿಂದ ಅವರ ಆಧುನಿಕ ಸಾಹಿತ್ಯ ಇನ್ನಷ್ಟು ಶ್ರೀಮಂತಿಕೆಯಿಂದ ಕಂಗೊಳಿಸು ತ್ತಿದೆ. ಮಾನವನ ಸಾರ್ವಕಾಲಿಕ ಮೌಲ್ಯಗಳಾದ ಲೋಕನೀತಿ, ಸ್ವಧರ್ಮ, ದೈವಭಕ್ತಿ, ರಾಷ್ಟ್ರಭಕ್ತಿ, ಮಹಾತ್ಮರ ಪ್ರಶಸ್ತಿ, ನಾನಾವಿಧ ಭಾವಪ್ರಕಟನೆಗೆ ಅನುಗುಣವಾದ ಗೀತಸಾಹಿತ್ಯ – ಇವೇ ಮುಂತಾದ ಕಾವ್ಯಪ್ರಕಾರಗಳಲ್ಲಿ ಹೊಸ ಆಶಯ ಹಳೆಯ ಪರಂಪರೆಯ ಛಂದೋಬಂಧಗಳಲ್ಲಿಯೇ ಆಕೃತಿವೆತ್ತು ಹೆಚ್ಚಿನ ಜನಪ್ರಿಯತೆಯನ್ನು ಗಳಿಸುವುದನ್ನು ಈ ಇತರ ಭಾಷೆಗಳಲ್ಲಿ ನೋಡುತ್ತೇವೆ. ಇಂಗ್ಲಿಷಿನಲ್ಲಿಯೂ ಇತರ ಆಧುನಿಕ ಪಾಶ್ಚಾತ್ಯ ಭಾಷೆಗಳಲ್ಲಿಯೂ ಪರಂಪರಾಗತ ಛಂದೋಗತಿಗಳನ್ನು ಅನುಸರಿ ಸುವ ಉತ್ತಮ ಹೊಸಕವಿಗಳು ಇಂದಿಗೂ ಇದ್ದಾರೆ. ಕನ್ನಡದಲ್ಲಿಯೂ ಅಲ್ಲೊಮ್ಮೆ ಇಲ್ಲೊಮ್ಮೆ ಬಸವಪ್ಪಶಾಸ್ತ್ರಿ, ಡಿ. ವಿ. ಜಿ. ಮುಂತಾದವರು ಇದರ ಮೂಲಭೂತ ಅಂತಸ್ಸತ್ವವನ್ನು ತಮ್ಮ ಹೊಸ ರಚನೆಗಳಲ್ಲಿ ಅದ್ಭುತವಾಗಿ ನಿದರ್ಶಿಸಿದ್ದಾರೆ. ಸ್ವತಃ

ಶ್ರೀ ಅವರೇ ತಮಿಳಿನ ನೀತಿಕಾವ್ಯವಾದ 'ಕುರುಳ್' ಗ್ರಂಥದ ಹಲವಾರು ಮುಕ್ತಕಗಳನ್ನು ಕಂದಪದ್ಯಗಳಲ್ಲಿ ಅನುವಾದಿಸಿದ್ದರಂತೆ. ಅದು ಪ್ರಕಟವಾಗದೆ ಉಳಿದುದು ನಾಡಿನ ದುರ್ದೈವ. ದೊರೆಗಿಂತ ಅವರ ಅನುಯಾಯಿಗಳೇ ನಿಷ್ಠುರೆಂಬ ಇಂಗ್ಲಿಷ್ ಗಾದೆಯಂತೆ ಕನ್ನಡ ಆಧುನಿಕ ಕವಿಗಳಿಗೆ ಕಂದ-ವೃತ್ತಗಳೆಲ್ಲ ವರ್ಜ್ಯವೇ ಎಂಬಂತಹ ವಿಪರೀತ ಪರಿಸ್ಥಿತಿಯೊದಗಿದ್ದರೆ, ಇದಕ್ಕೆ ಶ್ರೀ ಅವರೇ ಕಾರಣವೆನ್ನುವಂತಿಲ್ಲ. ಅವರ ಮನೋವೈಶಾಲ್ಯ ನಮಗಿನ್ನೂ ಮೂಡಿಬರಬೇಕಾಗಿದೆಯಷ್ಟೇ. ಪ್ರಾಚೀನ ರೀತಿಯ ಛಂದೋವೈದುಷ್ಯವನ್ನು ಶ್ರೀಯವರು ಅರಿತು ಆಸ್ವಾದಿಸುತ್ತಿದ್ದ, ಮೆಚ್ಚಿ ವಿವರಿಸುತ್ತಿದ್ದ ಸೊಬಗು ಅವರ ವ್ಯಕ್ತಿತ್ವಕ್ಕೇ ಮೀಸಲಾಗಿ, ಮಿಕ್ಕ ಅವರ ಪ್ರಶಂಸಕರಲ್ಲಿ ಹೆಚ್ಚಾಗಿ ಪ್ರಕಟವಾಗದೆಹೋಯಿತು.

ಸಂಸ್ಕೃತದಲ್ಲಿ 'ಪಲ್ಲವಗ್ರಾಹಿ' ಪಾಂಡಿತ್ಯ ಎಂಬ ಮಾತೊಂದಿದೆ. ಅದಕ್ಕೆ ತೋರಿಕೆಯ ಪಾಂಡಿತ್ಯ, ಆಳವಲ್ಲದ್ದು ಎಂಬ ತಾತ್ಪರ್ಯವಿದೆ. ಅದೇ ಇಂದಿನ ಸಾಹಿತ್ಯ ಕ್ಷಿತಿಜದಲ್ಲಿ ಎತ್ತೆತ್ತಲೂ ತಾಂಡವವಾಡುತ್ತಿರುವುದನ್ನು ಸೂಕ್ಷ್ಮಮತಿಗಳು ಗಮನಿಸಿದ್ದಾರೆ. ಸಾಹಿತ್ಯದ ಅಧ್ಯಯನದ ಹಾಗು ಭಾಷಾಶಾಸ್ತ್ರದ ಅಂಗಗಳು ಒಂದೊಂದೂ ಒಂದು ಸ್ವತಂತ್ರ ಶಾಸ್ತ್ರವಾಗಿ ಬೆಳೆದಿರುವುದರ ಪರಿಣಾಮವಾಗಿ ಇಂದು ಪರಿಮಿತ ಕ್ಷೇತ್ರದ ವಿಶೇಷಜ್ಞರು ಅಧಿಕವಾಗಿದ್ದಾರೆ; ಆದರೆ ಇಡಿಯ ಪೂರ್ಣದೃಷ್ಟಿ ಅದೇ ಪ್ರಮಾಣದಲ್ಲಿ ಕುಗ್ಗಿದೆ. ಈ ಶತಮಾನದ ಆರಂಭದಲ್ಲಿ ಶ್ರೀ ಅವರು ಭಾಷೆಗಳ ಅಧ್ಯಯನಕ್ಕೆ, ಸಂಶೋಧನೆಗೆ, ತೊಡಗಿದಾಗ ಇಂತಹ ಸ್ಥಿತಿಯಿರಲಿಲ್ಲ. ಅವರದು ಅಂದಿನ ವಿಶ್ವಗ್ರಾಹಿಯಾದ, ಸಾರಗ್ರಾಹಿಯಾದ ಘನೀಭೂತ ಪಾಂಡಿತ್ಯ. ಮೂಲ ಸಾಹಿತ್ಯ ಸಾಮಗ್ರಿಯ ಸ್ವಂತ ಪರಿಶೀಲನದಿಂದ, ನೇರ ಅನುಭವದಿಂದ ಪ್ರತ್ಯಕ್ಷಜ್ಞಾನ ಅವರದು. ನೂರಾರು ಸಂದರ್ಭಗ್ರಂಥಗಳಲ್ಲಿ ಉಕ್ತವಾದ ಹಲವಾರು ತಜ್ಞರ ಅಭಿಪ್ರಾಯಗಳನ್ನಾಧರಿಸಿ ಎರವಲು ತಂದ **(Second hand)** ವಿದ್ವತ್ತೆಯವರಿಗೂ ಅವರಿಗೂ ದೂರ. ಸಂಸ್ಕೃತದ ವೇದಕಾಲೀನ ಛಂದಸ್ಸುಗಳಾಗಲಿ, ಗ್ರೀಕ್ ಭಾಷೆಯ ದುರಂತ ನಾಟಕಗಳಾಗಲಿ, ತಮಿಳು ಛಂದಸ್ಸಿನ ವಿವಿಧ ಲಯ-ಗತಿಗಳಾಗಲಿ, ಕನ್ನಡದ, ಧರ್ಮಯುಗ, ಭಕ್ತಿಯುಗಗಳ ಪ್ರೌಢ ಇಲ್ಲವೆ ಲಲಿತ ಬಂಧಪ್ರಕಾರಗಳಾಗಲಿ ಅವರ ಸ್ವಂತ ಅಧ್ಯಯನದ ವ್ಯಾಪ್ತಿಗೆ ಒಳಗಾಗಿದ್ದವು. ಆದರೆ ಈ ವಿನೂತನ ಅಧ್ಯಯನಗಳಿಗೆಲ್ಲ ಕೇಂದ್ರಬಿಂದುವಾಗಿ ನಿಂತ ಅವರ ಆಧುನಿಕ ಸಾಹಿತ್ಯದೃಷ್ಟಿ ಅವರ ಪಾಶ್ಚಾತ್ಯ ಸಾಹಿತ್ಯಾಭ್ಯಾಸದ ಬಳುವಳಿಯೇ ಸರಿ. ಪಾಶ್ಚಾತ್ಯ ವಿದ್ವನ್ಮಣಿಗಳ ಸಾಹಿತ್ಯಶಾಸ್ತ್ರದ ಇತಿಹಾಸವನ್ನೂ, ಕಾವ್ಯಮೀಮಾಂಸೆಯ ವಿವಿಧ ಮಜಲುಗಳನ್ನೂ, ಭಾಷಾಶಾಸ್ತ್ರ ವಿಶ್ಲೇಷಣೆಯನ್ನೂ, ಗ್ರಂಥಸಂಪಾದನ ಮರ್ಮವನ್ನೂ ಅವರು ಕೂಲಂಕಷವಾಗಿ ಅಧ್ಯಯನಮಾಡಿ, ಅದರ ಸಾರವನ್ನರಗಿಸಿ ರಕ್ತಗತ ಮಾಡಿಕೊಂಡಿದ್ದರು. ಇದರ ಪರಿಣಾಮವಾಗಿ

ಶತಶತಮಾನಗಳಿಂದ ಸಾಗಿಬಂದ ಪಾಶ್ಚಾತ್ಯ ಸಾಹಿತ್ಯಾಭ್ಯಾಸದ ಪರಂಪರೆಯ ಬಗ್ಗೆ ಶ್ರೀ ಅವರಿಗೆ ಗೌರವಭಾವನೆಯಿದ್ದಂತೆ ಒಳನೋಟವೂ ಮೇಳವಿಸಿದ್ದಿತು.

ಪಾಶ್ಚಾತ್ಯ ಕಾವ್ಯಮೀಮಾಂಸೆಯ ಇತಿಹಾಸದಲ್ಲಿ ಪ್ಲೇಟೋ-ಅರಿಸ್ಟಾಟಲರು ಆದ್ಯರಾದರೆ, ಸೇಂಯರ್‌ಟ್ಸ್‌ಬರಿ ಅದರ ಉತ್ತಮ ಸಂಗ್ರಾಹಕರೂ ವಿವರಣಕಾರರೂ ಆಗಿದ್ದರು. ಗ್ರೀಕರಲ್ಲೂ ಅವರ ಮೇಲ್ಪಂಕ್ತಿಯಲ್ಲಿ ಸಾಗಿದ ಲ್ಯಾಟಿನ್ ಕಾವ್ಯ ಮೀಮಾಂಸಕರಲ್ಲೂ ಲಾಂಗೈನಸ್, ಹೋರೇಸ್, ಸಿಸೆರೋ ಮುಂತಾದ ಮೇಧಾವಿ ಗಳಿದ್ದರು. ಅವರ ವಿವಿಧ ಸಾಹಿತ್ಯ ಪ್ರಕಾರಗಳ – ಮಹಾಕಾವ್ಯ, ಕಥನಕಾವ್ಯ, ಭಾವಗೀತ, ಪ್ರಗಾಥ, ಸಾನೆಟ್, ಶೋಕಗೀತ, ನೀತಿಪದ್ಯ, ವಿಡಂಬನಕಾವ್ಯ, ಇತ್ಯಾದಿ – ವಿಶಿಷ್ಟ ಪದ್ಯಬಂಧ ಸ್ವರೂಪವನ್ನೂ: ದುರಂತನಾಟಕ, ಸುಖಾಂತನಾಟಕ, ಪ್ರಹಸನ ಮುಂತಾದ ನಾಟಕ ಪ್ರಭೇದಗಳ ಲಕ್ಷಣವನ್ನೂ ಒಟ್ಟಾರೆ ಕಾವ್ಯಸಾಮಾನ್ಯ ಲಕ್ಷಣವನ್ನೂ ನಿರೂಪಿಸಿ ಸರ್ವಸ್ವೀಕೃತವಾದ ಸಾಹಿತ್ಯಸೂತ್ರಗಳನ್ನು ಸಿದ್ಧಾಂತಿಸಿ ದ್ದರು. ಮುಂದೆ ಐರೋಪ್ಯ ಭಾಷೆಗಳ ಆಧುನಿಕ ಚಿಂತಕರೆಲ್ಲ ಈ ಕಾವ್ಯಸೂತ್ರ ಗಳನ್ನು ಸ್ವಲ್ಪ ಸ್ವಲ್ಪ ಬದಲಿಸಿಕೊಂಡರೂ ಒಟ್ಟಿನಮೇಲೆ ಅವುಗಳ ಶಾಶ್ವತ ವ್ಯಾಪಕತೆಯನ್ನು, ಸಾರ್ವಕಾಲೀನ ಪ್ರಾಮಾಣ್ಯವನ್ನು ಪ್ರಶ್ನಿಸುವ ಹವ್ಯಾಸಕ್ಕೆ ೧೯ನೆಯ ಶತಮಾನದ ಆದಿಯವರೆಗೂ ಹೋಗಿರಲಿಲ್ಲ. ಈ ಸರ್ವಸಂಪ್ರತಿಪನ್ನ ಪ್ರಾಚೀನ ಸಾಹಿತ್ಯಕ್ಕೆ ಪ್ರತಿಷ್ಠಿತ ಸಾಹಿತ್ಯ (Classical Literature) ಎಂಬ ಮನ್ನಣೆ ಸಾಮಾನ್ಯವಾಗಿತ್ತು. ಬಿ. ಎಂ. ಶ್ರೀ ಅವರೂ ಇದನ್ನು 'ಶ್ರೇಷ್ಠ ಸಾಹಿತ್ಯ' ವೆಂದೇ ಹೆಸರಿಸಿ ಹಳಗನ್ನಡದ ಮಹಾಕವಿಗಳಾದ ಪಂಪ-ರನ್ನ, ನಡುಗನ್ನಡದ ಹರಿಹರ-ರಾಘವಾಂಕ, ಜೈಮಿನಿ-ಕುಮಾರವ್ಯಾಸ ಮುಂತಾದವರ ಕಾವ್ಯಗಳನ್ನೂ ಸಂಸ್ಕೃತ ಮಹಾಕಾವ್ಯಗಳನ್ನೂ ಈ ವರ್ಗದಲ್ಲೇ ಪರಿಗಣಿಸುತ್ತಾರೆ. ಇವುಗಳ ಬಗ್ಗೆ 'ಶ್ರೀ' ಅವರ ಗೌರವಾದರಗಳೂ ಇಂದಿಗೂ ನಮಗೆ ಮನನೀಯವಾಗಿವೆ. ಅವುಗಳ ಕೃತ್ರಿಮ ಅನುಕರಣೆಗಳ ಬಗ್ಗೆ ಅವರಿಗೆ ಎಷ್ಟೇ ಅನಾದರವಿದ್ದರೂ ಶ್ರೇಷ್ಠ ಕಾವ್ಯದ ಮೂಲದ್ರವ್ಯವನ್ನು ಗುರುತಿಸಿ ಪ್ರತ್ಯೇಕಿಸುವ 'ಶ್ರೀ'ಗಳ ವಿಮರ್ಶನಪ್ರಜ್ಞೆ ಪ್ರಾಕ್ತನ ಸಾಹಿತ್ಯವನ್ನೆಲ್ಲ ಇಂದಿನವರಿಗೆ ನಿರುಪಯೋಗಿಯೆಂದು ಸುತರಾಂ ಗುಡಿಸಿ ಹಾಕುವಂತಹುದಲ್ಲ. ಇವುಗಳ ಅರ್ಥಪೂರ್ಣ ವಿಮರ್ಶೆ ಶಕ್ಯವಾಗಲು ಅಗತ್ಯಬೀಳುವ ಕಾವ್ಯಸೂತ್ರಗಳನ್ನೆಲ್ಲ ಅವರು ಇಂಗ್ಲಿಷಿನ ತಮ್ಮ Handbook of Rhetoric ಎಂಬ ಕೈಪಿಡಿಯಲ್ಲಿ ಸ್ಫುಟವಾಗಿ ಪ್ರತಿಪಾದಿಸಿದ್ದಾರೆ. ಅವರು ಬರೆದ ವಿವಿಧ ಕನ್ನಡ ಲೇಖನಗಳಲ್ಲಿ ಹಾಗು ಮಾಡಿದ ಅನೇಕ ಕನ್ನಡ ಭಾಷಣಗಳಲ್ಲಿ, ಹಾಗು ಪ್ರಕಟಿಸಿದ ಪುಸ್ತಕ ವಿಮರ್ಶೆಗಳಲ್ಲಿ ಈ ಸೂತ್ರಗಳನ್ನೆಲ್ಲ ಹೆಚ್ಚಾಗಿ ಪೂರ್ವದ ಕನ್ನಡ ಕೃತಿಗಳಿಗೆ ಅನ್ವಯಿಸಿ ತಮ್ಮದೇ ಆದ ಸೂಕ್ಷ್ಮ ಸಂವೇದನಾಪೂರ್ಣ ವಿಮರ್ಶಾಪ್ರಯೋಗ ಗಳನ್ನು ಒದಗಿಸಿದ್ದಾರೆ. ಹೀಗೆ ಮಾಡುವಲ್ಲಿ ಸಾಹಿತ್ಯವಿಮರ್ಶೆ ಕೂಡ ಒಂದು

ಸಾಹಿತ್ಯಪ್ರಕಾರವಾಗಿ ಕಂಗೊಳಿಸಬೇಕೆಂಬ ನಿರೀಕ್ಷೆ 'ಶ್ರೀ'ಗಳಿಗಿದ್ದುದನ್ನು ನೋಡುತ್ತೇವೆ. ಉತ್ತಮ ಪದ್ಯಕಾವ್ಯದ ವಿಮರ್ಶೆ ಉದಾತ್ತ ಹಾಗೂ ಉಜ್ವಲ ಗದ್ಯದಲ್ಲಿ, ಸರಸ-ಸಂಕಥಾ-ವಿನೋದದ ಮಾದರಿಯಲ್ಲಿ ಮುನ್ನಡೆಯುವುದನ್ನು ಅವರು ಇಂಗ್ಲಿಷಿನಲ್ಲಿ ಕಂಡಿದ್ದರು. ಅದನ್ನು ಕನ್ನಡದಲ್ಲಿಯೂ ಅವರು ನಿರರ್ಗಳವಾಗಿ ಸಾಧಿಸಿದರು. ಎಂತಲೇ ಇಂದಿಗೂ ಅವರ ಕಾವ್ಯವಿಮರ್ಶೆಗಳು ಸಾಹಿತ್ಯ ಗುಣಗಳಿಂದ ಭರಿತವಾಗಿದ್ದು ಚಿತ್ತರಂಜಕವಾಗಿ ಉಳಿದಿವೆ. ಮಿಕ್ಕ ಕೆಲವರ ವಿಮರ್ಶೆಗಳಂತೆ ನೀರಸವಾಗಿ ಹಳೆಯ ದಾಖಲೆಗಳಷ್ಟೇ ಎನಿಸುವಂತಾಗಿಲ್ಲ. ಈ ವಿಮರ್ಶೆಗಳಲ್ಲಿ 'ಶ್ರೀ' ಅವರ ವೈಯಕ್ತಿಕ ದುರಭ್ಯಾಸ(Mannerism)ದಂತೆ ಒಮ್ಮೊಮ್ಮೆ ಭಾಸವಾಗುವ ಉದ್ಗಾರವಾಚಕಗಳ ಸರಮಾಲೆಯ ದ್ವಿಪದ ಅಥವಾ ತ್ರಿಪದ ವಾಕ್ಯಗಳಿರುವುದುಂಟು. ಆದರೆ ಭಾವದ ಓಟಕ್ಕೆ ದ್ರುತಗತಿಯನ್ನೂ, ಭಾಷೆಗೆ ಬಿಗುವನ್ನೂ, ಉಕ್ತಿವಿಧಾನಕ್ಕೆ ವೈವಿಧ್ಯವನ್ನೂ ಇದು ತಂದುಕೊಡುವ ಚಮತ್ಕಾರ ಸಣ್ಣದಲ್ಲ.

ಪಾಶ್ಚಾತ್ಯರಲ್ಲೂ ಗದ್ಯಸಾಹಿತ್ಯ ನಮ್ಮಂತೆಯೇ ಕಡೆಕಡೆಗೆ ಬೆಳೆದಂಥದು, ಅದರ ಅಂದಚಂದಗಳ ಕಡೆಗೆ ಲಕ್ಷ್ಯ ಪೂರೈಸಿದ ಲೇಖಕರು ಪ್ರಾಚೀನ ವಾಗ್ಮಿಗಳ ಕಲಾಕೌಶಲವನ್ನು, ನಿರ್ದಿಷ್ಟ ಅಲಂಕಾರಗಳ ಹಾಗು ವಕ್ರೋಕ್ತಿ ಸೂಳ್ನುಡಿಗಳ ಸಮುಚಿತ ಸಂಪ್ರಯೋಗದಿಂದಲೂ, 'ಕಾಕು' ಅಥವಾ ದನಿಯ ಏರಿಳಿತಗಳಿಗನುಗುಣವಾಗಿ ಓದುಗರ ಭಾವವನ್ನು ಕೆರಳಿಸುವ ಭಾಷೆಯ ನಾನಾ ಪರಿಗಳಿಂದಲೂ ಮೈಗೂಡಿಸಿಕೊಳ್ಳುವ ವಾಡಿಕೆಯಿತ್ತು. ಇದು ಕನ್ನಡಕ್ಕೆ ತೀರಾ ಹೊಸದು. ಅಚ್ಚಗನ್ನಡ ಶಬ್ದಗಳ ಬನಿ, ಬೀಸು, ಇವನ್ನು ಲಕ್ಷ್ಯಪೂರ್ವಕವಾಗಿ ಗಮನಿಸಿ, ಜಾನಪದ ವಾಕ್ಯವಿನ್ಯಾಸಗಳ ಜಾಡನ್ನು ಮೈಗೂಡಿಸಿಕೊಂಡು, ಪದಪ್ರಯೋಗದಲ್ಲಿ ವೈವಿಧ್ಯ ಸಾಧ್ಯವಾಗುವಂತೆ ಗ್ರಾಂಥಿಕ, ಲೌಕಿಕ, ವ್ಯಾವಹಾರಿಕ, ಗ್ರಾಮ್ಯ – ಇವುಗಳ ಹದವರಿತ ಮಿಶ್ರಣದಿಂದ ಹೊಸ ಹೊಸ ವಾಕ್ಯವಿನ್ಯಾಸಗಳನ್ನು ಕೂಡ ಅವರು ಮೊದಲಿಗೆ ಮಾಡಿ ತೋರಿಸಿದ ಮಹಾನುಭಾವರು. ಹೀಗೆ ಕಾವ್ಯಾನುಶೀಲನಕ್ಕೆ ಉಚಿತವಾದ ಪ್ರಾಚೀನ ಮಹಾಕೃತಿಗಳ ಆಯ್ಕೆ, ಆಯ್ದ ಕೃತಿಗಳ ರಸಗ್ರಹಣೆಗೆ ಸಮುಚಿತವಾದ ಗುಣದೋಷ ವಿವೇಚನೆಗೆ ಅವಶ್ಯವಾದ ಸುಂದರ ಸಾಹಿತ್ಯಗದ್ಯ – ಇವೆರಡನ್ನೂ ಕನ್ನಡಕ್ಕೆ ಅಳವಡಿಸಿ ಮೊದಲಿಗೆ ತೋರಿಸಿದ ಮಹಾಸಾಹಸ ಶ್ರೀ ಅವರದು. ಹಿಂದಿನ ಪಂಡಿತರಿಗೆ ಈ ಮಾರ್ಗ ಅಪರಿಚಿತವಾಗಿದ್ದುದರಿಂದ ಅವರಿಗೂ ಇವರೇ ಮಾರ್ಗದರ್ಶಕರಾದರು. ಹಳೆಯ ಸೀಸೆಗೂ ಹೊಸ ಪೇಯವನ್ನು ತುಂಬಿಟ್ಟಂತಾಯಿತು. ಹಳೆಯ ದೀಪದಿಂದಲೇ ಹೊಸ ದೀಪಗಳನ್ನು ಹಚ್ಚಿಟ್ಟಂತಾಯಿತು. ಕನ್ನಡ ಸಾಹಿತ್ಯದ ನವೋದಯ ಅಭೂತಪೂರ್ವ ಉಲ್ಲಾಸದಿಂದ ಮೈದೋರಲು ನಾಂದಿಯಾಯಿತು.

ಪಾಶ್ಚಾತ್ಯ ಗದ್ಯಸಾಹಿತ್ಯದಲ್ಲಿ ಮಧ್ಯಯುಗದ ಫೇರಿ-ಟೇಲ್, ರೋಮಾಂಚಕ ಸಾಹಸಗಳ ಕಲ್ಪಿತ ಕಥೆಗಳು ಮೊದಮೊದಲು ಬಂದರೂ ೧೬, ೧೭, ೧೮, ೧೯ನೆಯ ಶತಮಾನಗಳ ವೇಳೆಗೆ ಸಣ್ಣಕಥೆ, ಆತ್ಮಕಥೆ, ಜೀವನಚರಿತ್ರೆ, ವಿವಿಧ ಪ್ರಕಾರಗಳ ಕಾದಂಬರಿಗಳು, ನೀತಿಕಥೆ, ಧರ್ಮಸಂದೇಶ, ದಿನಚರಿ ಇತ್ಯಾದಿ ಹಲವಾರು ಪ್ರಕಾರಗಳು ತುಂಬಾ ಜನಪ್ರಿಯವಾಗಿ ಪ್ರಚಾರಕ್ಕೆ ಬರುತ್ತಿದ್ದವು. ಕನ್ನಡ ಸಾಹಿತ್ಯ ಈ ಎಲ್ಲ ದಿಕ್ಕುಗಳಲ್ಲೂ ವಿಕಸಿತವಾಗಲು ತಕ್ಕ ಸೂಚನೆಗಳು ಶ್ರೀಗಳಿಂದ ಏಳಿಗೆಯರಿಗೆ ದೊರೆತವು.

ಆದರೆ ಎಲ್ಲಕ್ಕಿಂತ ಹೆಚ್ಚಾಗಿ ಅವರ ಕಾವ್ಯಮೀಮಾಂಸೆಯ ಸತ್ಪರಿಣಾಮವನ್ನು ನಾವು ಕಾಣುವುದು ಸಮಕಾಲೀನ ಪದ್ಯಕಾವ್ಯಪ್ರಕಾರಗಳ ಆತ್ಮೀಯ ವಿಮರ್ಶೆಯ ಪ್ರಸಂಗದಲ್ಲಿ. ಇಂಗ್ಲಿಷಿನಲ್ಲಿ ಪರಂಪರಾಗತ ಮಹಾಕಾವ್ಯಗಳ, ನಾಟಕಗಳ ಸಂಪ್ರದಾಯವನ್ನು ಬದಿಗೊತ್ತಿ, ಶಾಸ್ತ್ರನಿಯಮಗಳ ಕಟ್ಟಿಗೆ ಬದ್ಧನಲ್ಲದವನೇ ನಿಜವಾಗಿ ಪ್ರತಿಭಾವಂತನಾದ ಸುಕವಿಯೆಂಬ ಕ್ರಾಂತಿಕಾರಿ ರೊಮ್ಯಾಂಟಿಕ್ ಕವಿಗಳು ಆಗ ವಿಮರ್ಶಕರ ಗಮನವನ್ನು ಸೆಳೆದಿದ್ದರು. ಮಾನವನ ಸಾಮಾಜಿಕ ಜೀವನದ, ನಿಸರ್ಗದ ನಿಗೂಢ ರಹಸ್ಯಗಳನ್ನೆಲ್ಲ ಪ್ರತಿಭೆಯೆಂಬ ಅಂತಶ್ಚಕ್ಷುವಿನಿಂದ ಸಾಕ್ಷಾತ್ಕರಿಸುವ ಅಪ್ರತಿಹತ ಮಹಾಚೈತನ್ಯ ಕವಿಯದೆಂಬ ರೊಮ್ಯಾಂಟಿಕ್ ಘೋಷಣೆ, ವರ್ಡ್ಸ್‌ವರ್ತ್ ಕೋಲೆರಿಜ್ ಕೀಟ್ಸ್, ಷೆಲ್ಲಿ, ಬೈರನ್ ಮುಂತಾದವರ ಸ್ವಚ್ಛಂದ ಅಥವಾ ಪೂರ್ವ ನಿಯಮಗಳಿಗೆ ಒಳಗಾಗದ ಕವಿತಾವಿಲಾಸಗಳು ಕವಿಪ್ರತಿಭೆಯ ಮಹಿಮೆಯತ್ತ ತತ್ತ್ವಚಿಂತಕರನ್ನೂ ತಿರುಗಿಸಿತ್ತು. ಸೌಂದರ್ಯಶಾಸ್ತ್ರದ ವ್ಯವಸ್ಥಿತ ವಿವೇಚನೆಗೆ ತತ್ತ್ವಶಾಸ್ತ್ರಿಗಳು ಹೊರಟಿದ್ದರು. ಕೋಲೆರಿಜ್, ಷೆಲ್ಲಿಂಗ್, ಕ್ರೋಚೆ, ಮೇರೆಡಿತ್, ಬ್ರಾಡ್ಲೆ ಕ್ವಿಲರ್‌ಕೂಚ್ – ಮುಂತಾದವರ ವಿದ್ವತ್ಪ್ರಬಂಧಗಳಿಂದ ಪ್ರಭಾವಿತವಾದ ಶ್ರೀಗಳ ಕಾವ್ಯಮೀಮಾಂಸೆ ಸಾರ್ವಕಾಲೀನ ಚಿರಂತನಸಾಹಿತ್ಯಕ್ಕೆ ಗೌರವ ಸಲ್ಲಿಸಿದರೂ ರಮ್ಯ ಕಾವ್ಯಗಳತ್ತ ತನ್ನ ಹೆಚ್ಚಿನ ಒಲವನ್ನು ಉಳಿಸಿಕೊಳ್ಳುತ್ತದೆ. ಇದರಲ್ಲಿ ಕವಿಯ ಜೀವನಮೀಮಾಂಸೆ, ಪಾತ್ರನೈಜತೆ, ಪಾತ್ರವೈಶಿಷ್ಟ್ಯ, ಕಾಲ-ಪರಿಸ್ಥಿತಿಗಳ ಪ್ರಭಾವ, ವ್ಯಕ್ತಿಜೀವನದ ಘಟನೆಗಳ ಪರಿಣಾಮ, ಶೈಲಿಯ ಘಟಕಗಳ ವಿಶ್ಲೇಷಣೆ, ಹಿಂದಿನ ಕೃತಿಗಳಿಂದಾಗಿರುವ ಪ್ರಭಾವಮುದ್ರೆ, ಮುಂದಿನ ಕವಿಗಳ ಮೇಲೆ ಈ ಕೃತಿಯ ಪರಿಣಾಮದ ವಿವೇಚನೆ – ಇವೇ ಮುಂತಾಗಿ ಅನೇಕ ಅಂಗಗಳು ಸಮ್ಮಿಳಿತವಾಗುತ್ತವೆ. ಈ ಅಂಗಗಳ ಪರಿಣಾಮಕಾರಿ ಸಂವೇದನೆ ವಿಮರ್ಶಕನಿಂದ ವಿಮರ್ಶಕನಿಗೆ ಬೇರೆ ಬೇರೆಯಾಗುವ ಸಂಭವ ಹೆಚ್ಚಾದ್ದರಿಂದ ಇಲ್ಲಿ ಕಾವ್ಯಮೀಮಾಂಸಕನ ಸುಸಂಸ್ಕೃತ ಅಭಿರುಚಿಯ ಪ್ರಶ್ನೆಯೂ ಮುಖ್ಯವಾಗುತ್ತದೆ. ಪರಿಸ್ಫುರಿಸುವ ಕವಿಪ್ರತಿಭೆ ಅದೇ ಸಂವೇದನೆಗೆ ಸ್ಪಂದಿಸುವಂತಹ ಸದಭಿರುಚಿಯನ್ನೂ ಅಪೇಕ್ಷಿಸುತ್ತದೆ. ಹೀಗೆ ಸದಭಿರುಚಿಯನ್ನು ಸಾಹಿತ್ಯದಲ್ಲಿ ಬೆಳೆಸಿಕೊಳ್ಳಲು ಸಮಕಾಲೀನ ಹಾಗು ಸಾರ್ವಕಾಲೀನ

ಸಾಹಿತ್ಯಗಳೆರಡಕ್ಕೂ ರಸಿಕರು ತೆರೆದ ಹೃದಯದವರಾಗಿರಬೇಕಾಗುತ್ತದೆ. ಗುಣ ದೋಷಗಳನ್ನು ಪೃಥಕ್ಕರಿಸಿ ಸ್ಪಷ್ಟವಾಗಿ ತಮ್ಮ ನಿಲುವನ್ನು ಅಭಿವ್ಯಕ್ತಗೊಳಿಸು ವಲ್ಲಿಯೂ ನಿರ್ಭೀತರಾಗಿರಬೇಕಾಗುತ್ತದೆ. ವಿಮರ್ಶೆಯಲ್ಲಿ ರಸಗ್ರಹಣೆ, ಆಸ್ವಾದನೆ, ಶ್ಲಾಘನೆ, ವಿವರಣೆ, ಗುಣದೋಷ ವಿವೇಚನೆ, ತೌಲನಿಕವಾಗಿ ಪ್ರಭಾವಗಳ ಪರೀಕ್ಷಣದಿಂದ ಕವಿಯ ಸ್ಥಾನನಿರ್ದೇಶನ – ಮುಂತಾದವೆಲ್ಲ ಅಂಗವಾಗಿ ಸೇರಿಕೊಳ್ಳು ತ್ತವೆ. ಇದಕ್ಕೆ ಐತಿಹಾಸಿಕ-ವಿವೇಚಕ ದೃಷ್ಟಿಕೋನ ಮೊದಲ ಅಗತ್ಯ. ಒಂದು ಉತ್ತಮ ಸಾಹಿತ್ಯಕೃತಿ ಉತ್ತಮವಾಗಲು ಹಲವು ಹದಿನೆಂಟು ದಿಕ್ಕೋನಗಳಿಂದ ಬೇರೆ ಬೇರೆ ಅಭಿರುಚಿಯ ವಿಮರ್ಶಕರು ಆ ಕೃತಿಯ ವಿವಿಧಾಂಗಗಳನ್ನು – ವಸ್ತು, ಪಾತ್ರ, ಶೈಲಿ, ಜೀವನ ಮೀಮಾಂಸೆ, ಐತಿಹಾಸಿಕ ಸ್ಥಾನನಿರ್ಣಯ ಇತ್ಯಾದಿ – ಪರೀಕ್ಷಿಸಿದಾಗಲೂ ಅದು ಶ್ರೇಷ್ಠವೆಂದೇ ಭಾಸವಾಗುತ್ತಿರಬೇಕು. ಹೀಗೆ ಆಪಾತತಃ ವಿಭಿನ್ನವೆನಿಸುವ ಸಾಹಿತ್ಯ ವಿಮರ್ಶೆಗಳೆಲ್ಲಕ್ಕೂ ಒಟ್ಟಿನಲ್ಲಿ ತಮ್ಮದೇ ಆದ ಪ್ರತ್ಯೇಕ ಸಾರ್ಥಕ್ಯವಿದೆ.

ಶ್ರೀ ಅವರ ಭಾಷಣಗಳನ್ನು ಕೇಳಿ, ಅವರ ಲೇಖನಗಳನ್ನೂ ಗ್ರಂಥಗಳನ್ನೂ ಅಷ್ಟಿಷ್ಟು ಓದಿರುವ ನನಗೆ ಕಾವ್ಯಮೀಮಾಂಸೆಯನ್ನು ಕುರಿತಂತೆ 'ಶ್ರೀ' ಅವರ ನಿಲವು ಹೇಗೆ ತೋರಿಬರುತ್ತದೆನ್ನುವುದರ ಒಂದು ಸಣ್ಣ ನಿರ್ದೇಶನವಿದು. ಕಳೆದ ಐದು ದಶಕಗಳಲ್ಲಿ ಫ್ರಾನ್ಸ್, ಜರ್ಮನಿ, ಇಂಗ್ಲೆಂಡ್, ರಷ್ಯ, ಅಮೆರಿಕಾಗಳಲ್ಲಿ ಗಣನಾತೀತವಾದ ಕಾವ್ಯಸಿದ್ಧಾಂತ ಪಂಥಗಳು ಆವಿರ್ಭವಿಸಿವೆ. ಅವುಗಳಲ್ಲೆಷ್ಟೋ ಹುಟ್ಟಿ ಸತ್ತೂ ಇವೆ : ಕೆಲವು ಪುನರುಜ್ಜೀವಿತವಾಗುತ್ತಲೂ ಇವೆ. ಆದರೆ ಇವುಗಳ ದೃಷ್ಟಿಯಿಂದ 'ಶ್ರೀ' ಅವರ ನಿಲವನ್ನು ಅಳೆಯುವ ಮಹತ್ಕಾರ್ಯ ಮಿಕ್ಕ ವಿಶೇಷಜ್ಞರಿಗೆ ಸಾಧ್ಯವಾಗಬಹುದು ; ಅದು ನನ್ನ ತುತ್ತಲ್ಲ !

# ಸಾಹಿತ್ಯ ಚರಿತ್ರಕಾರರಾಗಿ 'ಶ್ರೀ'

— ಸಿ. ಪಿ. ಕೃಷ್ಣಕುಮಾರ್

## ೧

ಕನ್ನಡ ನವೋದಯದ ಅಧ್ವರ್ಯು, ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು. ಹೊಸಗನ್ನಡ ಸಾಹಿತ್ಯದ ಅನೇಕ ಪ್ರಕಾರಗಳು ಅವರಿಗೆ ಋಣಿಯಾಗಿವೆ. ತಮ್ಮ ಇಂಗ್ಲಿಷ್ ಗೀತಗಳಿಂದ 'ಶ್ರೀ'ಯವರು ಭಾವಗೀತ ಯುಗಕ್ಕೆ ನಾಂದಿ ಹಾಡಿದರು ; 'ಅಶ್ವತ್ಥಾಮನ್', 'ಪಾರಸಿಕರು' ನಾಟಕಗಳಿಂದ ರುದ್ರನಾಟಕವನ್ನು ಹುಟ್ಟುಹಾಕಿದರು ; ಅಂತೆಯೆ ತಮ್ಮ ಸಾಹಿತ್ಯಚರಿತ್ರೆ ಮತ್ತು ಇತರ ಬರಹಗಳಿಂದ ವಿಮರ್ಶೆಗೆ ಮಾರ್ಗದರ್ಶಕರಾದರು.

'ಕನ್ನಡ ಕೈಪಿಡಿ'ಯ ದ್ವಿತೀಯ ಸಂಪುಟ ತನಿಯಾಗಿ 'ಶ್ರೀ'ಯವರ ಕನ್ನಡ ಸಾಹಿತ್ಯ ಚರಿತ್ರೆಯಾಗಿದೆ. ೧೯೪೭ರಲ್ಲಿ ಮೊದಲ ಮುದ್ರಣವನ್ನು ಕಂಡ ಈ ಸಾಹಿತ ಚರಿತ್ರೆ ಅಪೂರ್ಣವಾಗಿದ್ದು, ನಾಗಚಂದ್ರನಲ್ಲಿಗೇ ನಿಂತುಹೋಗಿದೆ. ಇದರ ಗಾತ್ರ, ಮೂಲತಃ ಸುಮಾರು ಇನ್ನೂರು ಪುಟಗಳಷ್ಟು.[1]

'ಕನ್ನಡ ಕೈಪಿಡಿ'ಯ ಉದ್ದೇಶವನ್ನು. ಅದರ ರಚನಾಮಂಡಳಿಯ ಅಧ್ಯಕ್ಷರಾದ 'ಶ್ರೀ'ಯವರೆ ಹೀಗೆ ವಿವರಿಸಿದ್ದಾರೆ : "ಕನ್ನಡ ಭಾಷೆ ಮತ್ತು ಸಾಹಿತ್ಯ – ಇವುಗಳ ವಿಷಯದಲ್ಲಿ ಇದುವರೆಗೆ ತಿಳಿವಳಿಕೆಗೆ ಬಂದಿರುವ ಮುಖ್ಯಾಂಶಗಳನ್ನು ಸಂಕ್ಷೇಪವಾಗಿ ಸೂಚಿಸಬೇಕೆಂಬುದಾಗಿಯೂ, ಪ್ರೌಢ ವಿಚಾರಗಳಿಗಾಗಲಿ ಇನ್ನೂ ಚರ್ಚಾಸ್ಪದವಾಗಿರತಕ್ಕ ಅಂಶಗಳಿಗಾಗಲಿ ಸಾಧಾರಣವಾಗಿ ಪ್ರವೇಶ ಮಾಡಬೇಕಾದದ್ದಿಲ್ಲವೆಂಬುದಾಗಿಯೂ, ಬಿ. ಎ. ಪರೀಕ್ಷೆಯಲ್ಲಿ

---

೧. ಇಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಹೊರತಂದಿರುವ ಅದರ ದ್ವಿತೀಯ ಆವೃತ್ತಿಯನ್ನು (೧೯೬೦) ಗಮನಿಸಿ, ಉದ್ಧೃತಿಗಳನ್ನೂ ಪುಟ ಸಂಖ್ಯೆಯ ಉಲ್ಲೇಖಗಳನ್ನೂ ಕೊಡಲಾಗಿದೆ.

ಉತ್ತೀರ್ಣನಾಗುವ ವಿದ್ಯಾರ್ಥಿ ತಿಳಿದಿರಬೇಕಾದಷ್ಟು ಅಂಶಗಳು ಇರಬೇಕೆಂಬು ದಾಗಿಯೂ ... "[2]

ಈ ಹೇಳಿಕೆಗೆ ಪೂರಕವಾಗಿ, ತಮ್ಮ ಸಾಹಿತ್ಯಚರಿತ್ರೆಯ ಪೀಠಿಕೆಯಲ್ಲಿ 'ಶ್ರೀ' ಯವರು ಹೇಳಿಕೊಂಡಿರುವ ಮಾತುಗಳನ್ನೂ ಗಮನಿಸಬೇಕು : "ಇದರಲ್ಲಿ ದೊಡ್ಡ ಗ್ರಂಥದಲ್ಲಿ ಹೇಳಬಹುದಾದ ಕವಿಗಳನ್ನೆಲ್ಲಾ ಹೇಳಲಾಗುವುದಿಲ್ಲ. ಕಾವ್ಯ, ಸಾಹಿತ್ಯ, ಎಂಬ ಶಬ್ದಗಳ ಶ್ಲಾಘ್ಯವಾದ ಅರ್ಥದ ಮೇಲೆ ದೃಷ್ಟಿಯಿಟ್ಟು, ವಿದ್ಯಾರ್ಥಿಗಳ ಪ್ರಥಮ ಪರಿಚಯಕ್ಕಾಗಿ, ಪ್ರಸಿದ್ಧರಾಗಿಯೂ, ಬೇರೆಬೇರೆ ಮತಗಳಿಗೆ ಪ್ರತಿನಿಧಿ ಗಳಾಗಿಯೂ, ಯಾವುದಾದರೂ ಒಂದು ಕಾರಣದಿಂದ ಗಣ್ಯರಾಗಿಯೂ ಇರುವ ಕವಿಗಳನ್ನು ಮಾತ್ರ ಆಯ್ದುಕೊಂಡು, ಒಟ್ಟಿನ ಮೇಲೆ ಕನ್ನಡ ಸಾಹಿತ್ಯದ ಬೆಳವಣಿಗೆ, ವಿಭಾಗಗಳು, ಸ್ವರೂಪ, ಯೋಗ್ಯತೆ ಇವುಗಳನ್ನು ಸ್ಪಷ್ಟಪಡಿಸಬೇಕೆಂದು ಪ್ರಯತ್ನ ಪಟ್ಟಿರುತ್ತದೆ. ಕಾವ್ಯವಿಮರ್ಶೆಯ ಭಾಗದಲ್ಲಿ ವ್ಯವಸ್ಥೆಯಾಗಿ ಎಲ್ಲರೂ ಒಪ್ಪಬಹು ದಾದ ಅಭಿಪ್ರಾಯಗಳು ಪ್ರಚಾರದಲ್ಲಿಲ್ಲವಾದದ್ದರಿಂದಲೂ, ಹೊಸದಾಗಿ ಸಿಕ್ಕಿರುವ ನಿಕ್ಷೇಪವನ್ನು ಕನ್ನಡಿಗರು ಇನ್ನೂ ಆಶ್ಚರ್ಯಪಟ್ಟು ಹೊಗಳಿಕೊಳ್ಳುವ ಸಂಭ್ರಮ ದಲ್ಲಿಯೇ ಇರುವುದರಿಂದಲೂ, ಪೂರ್ವದ ಸಂಪ್ರದಾಯವಾದ ಸಂಸ್ಕೃತ ಕಾವ್ಯಲಕ್ಷಣ ರುಚಿಗೂ, ಈ ಕಾಲದ ಇಂಗ್ಲಿಷ್ ಕಾವ್ಯಾಭ್ಯಾಸ ಬಲದಿಂದ ಉಂಟಾಗಿರುವ ಹೊಸ ರುಚಿಗೂ ಬಹಳ ತಾರತಮ್ಯವಿರುವುದರಿಂದಲೂ, ಆ ಭಾಗಕ್ಕೆ ಇಲ್ಲಿ ಹೆಚ್ಚಾಗಿ ಪ್ರವೇಶ ಮಾಡುವುದು ಸೂಕ್ತವಾಗಿ ಕಾಣಿಸಲಿಲ್ಲ." (ಪ್ರ. ೪೫೪)

ವಿದ್ಯಾರ್ಥಿಗಳನ್ನು ಕಣ್ಣ ಮುಂದಿರಿಸಿಕೊಂಡ ಈ ಸಾಹಿತ್ಯಚರಿತ್ರೆ ಕೆಲವು ಪರಿಮಿತಿಗಳನ್ನು ತನಗೆ ತಾನೆ ವಿಧಿಸಿಕೊಂಡಿರುವುದು ಇದರಿಂದ ಸ್ಪಷ್ಟವಾಗುತ್ತದೆ; ಆ ಪರಿಮಿತಿಗಳು ಈ ರಚನೆಯ ಸ್ವರೂಪವನ್ನು ನಿರ್ಧರಿಸಿರುವುದು ಸಹಜವಾದ್ದ ರಿಂದ, ಇದರ ಬಗೆಗೆ ಏಳಬಹುದಾದ ಯಾವುದೇ ಆಕ್ಷೇಪಣೆಗೆ ಸಮಾಧಾನವೊದಗಿಸು ತ್ತದೆ 'ಶ್ರೀ'ಯವರ ಮೇಲಿನ ಹೇಳಿಕೆ. ಆದರೆ ತಾನು ಹಾಕಿಕೊಂಡ ಮಿತಿಯನ್ನು 'ಶ್ರೀ'ಯವರ ಸಾಹಿತ್ಯಚರಿತ್ರೆ ಎಷ್ಟೋ ಕಡೆ ಮೀರಿದೆ ಎಂಬುದನ್ನು ಮರೆಯ ಬಾರದು. ಒಟ್ಟಿನಲ್ಲಿ ತನ್ನ ಸೀಮಿತ ಉದ್ದೇಶವನ್ನು ಅದು ಯಶಸ್ವಿಯಾಗಿ ಸಾಧಿಸಿದೆ ; ವಿದ್ಯಾರ್ಥಿಗಳಿಗೆ ಮಾತ್ರವಲ್ಲ, ಜನಸಾಮಾನ್ಯರಿಗೂ ಬಹಳ ಉಪಾದೇಯವಾಗಿದೆ; ಕನ್ನಡ ಸಾಹಿತ್ಯಕ್ಕೆ ಅದೊಂದು ಪ್ರಶಸ್ತವಾದ ಪ್ರವೇಶ.

'ಶ್ರೀ'ಯವರ ಸಾಹಿತ್ಯ ಚರಿತ್ರೆ ಒಂದರ್ಥದಲ್ಲಿ ಮೊಟ್ಟಮೊದಲನೆಯ ಕನ್ನಡ ಸಾಹಿತ್ಯಚರಿತ್ರೆ ಎನ್ನಬಹುದು. ಅದಕ್ಕೆ ಮುನ್ನ, ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿ ದಂತೆ ಪ್ರಕಟವಾಗಿದ್ದ ಕಿಟ್ಟೆಲ್ ಮತ್ತು ಬಿ. ಎಲ್. ರೈಸರ ಲೇಖನಗಳು ಹಾಗೂ

೨. ಕನ್ನಡ ಕೈಪಿಡಿಯ ಮೊದಲ ಸಂಪುಟದ ಮುನ್ನುಡಿ.

ಇ. ಪಿ. ರೈಸರ ಒಂದು ಪುಸ್ತಕ ಇಂಗ್ಲಿಷಿನಲ್ಲಿದ್ದುವು ; ಆರ್. ನರಸಿಂಹಾಚಾರ್ಯರ 'ಕವಿಚರಿತೆ' ಮುಖ್ಯವಾಗಿ ಸಾಹಿತ್ಯಚರಿತ್ರೆಯಾಗಿರದೆ. ಅದರ ಆಕರಗ್ರಂಥವೂ ಗುದ್ದಲಿಗೆಲಸವೂ ಆಗಿತ್ತಷ್ಟೆ.[3]

ವಿಮರ್ಶೆಯ ಭಾಗಕ್ಕೆ ತಮ್ಮ ಸಾಹಿತ್ಯಚರಿತ್ರೆಯಲ್ಲಿ ಹೆಚ್ಚು ಒತ್ತು ಕೊಟ್ಟಿಲ್ಲವೆಂದು 'ಶ್ರೀ'ಯವರು ಹೇಳಿಕೊಂಡಿದ್ದರೂ, ಅವರ ಈ ಕೃತಿಯಲ್ಲಿ ವಿಮರ್ಶೆಯಿಲ್ಲದಿಲ್ಲ. ಆದರೆ ಅದು ಪ್ರಧಾನವಾಗಿ 'ರಸವಿಮರ್ಶೆ' ; ಗುಣಗ್ರಾಹಿಯಾದ ವಿಮರ್ಶೆ. ಅದರಲ್ಲಿ ಭಾವುಕತೆ, ಉತ್ಸಾಹಗಳು ಹೆಚ್ಚು. "ಹೊಸದಾಗಿ ಸಿಕ್ಕಿರುವ ನಿಕ್ಷೇಪವನ್ನು ಕನ್ನಡಿಗರು ಆಶ್ಚರ್ಯಪಟ್ಟು ಹೊಗಳಿಕೊಳ್ಳುವ ಸಂಭ್ರಮದ" ದಿನಗಳಲ್ಲಿ ತಮ್ಮ ಸಾಹಿತ್ಯಚರಿತ್ರೆಯನ್ನು ರಚಿಸಿದ 'ಶ್ರೀ'ಯವರು ಆ ಕಾಲಧರ್ಮದಿಂದ ತಪ್ಪಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಆಗತಾನೆ ಬೆಳಕಿಗೆ ಬಂದಿದ್ದ ಕನ್ನಡ ಸಾಹಿತ್ಯ ಪರಂಪರೆಯ ಹಿರಿಮೆಗರಿಮೆ ಶ್ರೀಮಂತಿಕೆಗಳನ್ನು ಜನತೆಗೆ ಪರಿಚಯಿಸಬೇಕು, ಅದರಲ್ಲಿ ಅವರು ಆಸಕ್ತಿ ಅಭಿರುಚಿ ಅಭಿಮಾನಗಳನ್ನು ತಳೆಯುವಂತೆ ಮಾಡಬೇಕು ಎಂಬುದು 'ಶ್ರೀ'ಯವರ ಮುಖ್ಯ ಧ್ಯೇಯವಾಗಿತ್ತು. ಆದ್ದರಿಂದಲೆ ಅವರು ಸಾಹಿತ್ಯಕೃತಿಗಳ ಗುಣಗಳನ್ನು ಅನಾವರಣ ಮಾಡುವುದರತ್ತ ಹೆಚ್ಚು ಲಕ್ಷ್ಯ ಕೊಟ್ಟರು. ಎಂದಮಾತ್ರಕ್ಕೆ ಅವರು ದೋಷಗಳನ್ನೂ ನ್ಯೂನತೆಗಳನ್ನೂ ಗುರುತಿಸಿಲ್ಲವೆಂದಾಗಲಿ, ಆ ಸಾಮರ್ಥ್ಯ ಅವರಿಗಿರಲಿಲ್ಲವೆಂದಾಗಲಿ ಅರ್ಥವಲ್ಲ.[4]

ಅಂತೂ 'ಶ್ರೀ'ಯವರ ಸಾಹಿತ್ಯಚರಿತ್ರೆಯನ್ನು ವಿವೇಚಿಸುವಾಗ, ಅದರ ರಚನೆಯ ಚಾರಿತ್ರಿಕ ಹಿನ್ನೆಲೆಯನ್ನು ನೆನಪಿನಲ್ಲಿಡಬೇಕು. ಆ ಹಿನ್ನೆಲೆಯಲ್ಲಿ ಅರಿವು, ಆಸ್ವಾದನಗಳಿಗೆ ಅವಕಾಶವಿತ್ತೇ ಹೊರತು ಅಷ್ಟಾಗಿ ಮೌಲ್ಯಮಾಪನಕ್ಕಲ್ಲ. 'ಶ್ರೀ'ಯವರ ಸಾಹಿತ್ಯಚರಿತ್ರೆ ವಿಶಿಷ್ಟವಾಗಿ ಪರಿಣಮಿಸಿರುವುದಕ್ಕೂ ಇದೇ ಕಾರಣ.

ಈ ಸಾಹಿತ್ಯಚರಿತ್ರೆಯ ಒಂದು ಪ್ರಮುಖ ಲಕ್ಷಣವೆಂದರೆ, ಕವಿವಾಣಿಯನ್ನೆ ಅಧಿಕವಾಗಿ ಬಳಸಿಕೊಂಡ ನಿರೂಪಣೆ. ಆಯಾ ಕವಿಯ ವೈಯಕ್ತಿಕ ಸಂಗತಿಗಳನ್ನು ಕವಿಯ ಮಾತುಗಳಲ್ಲೆ ತಿಳಿಸುವುದಲ್ಲದೆ, ಆಯಾ ಕೃತಿಯ ರಸವತ್ತಾದ ಅಥವಾ ಗಮನಾರ್ಹವಾದ ಸ್ಥಾನಗಳನ್ನು, ವಿಪುಲವಾಗಿ ಉಂಡುಂಡೆಯಾಗಿ ಪದ್ಯೋದ್ಧರಣ

೩. ಈ ಪೂರ್ವಸೂರಿಗಳಿಗೆ 'ಶ್ರೀ'ಯವರು ತಮ್ಮ ಕೃತಜ್ಞತೆಯನ್ನು ಸೂಚಿಸಿದ್ದಾರೆ (ಪುಟ ೪೫೪). ಅವರ ಸಾಹಿತ್ಯ ಚರಿತ್ರೆಗೆ 'ಕವಿಚರಿತೆ' ಸ್ವಲ್ಪಮಟ್ಟಿಗೆ ಮಾದರಿಯಾಗಿದೆ– ಕಾವ್ಯಗಳಿಂದ ಪದ್ಯಗಳನ್ನು ಅಖಂಡವಾಗಿ, ಅವಿಚ್ಛಿನ್ನವಾಗಿ ಉದ್ಧರಿಸುವ ವಿಧಾನದಲ್ಲಿ.

೪. ಸಾಹಿತ್ಯಚರಿತ್ರೆಯೆಂದರೆ 'ಗುಣದೋಷವಿಮರ್ಶೆ' ಎಂದು 'ಶ್ರೀ' ಅವರೇ ಒಂದೆಡೆ ಹೇಳುತ್ತಾರೆ (ಪುಟ ೪೪೯). ಆದ್ದರಿಂದ ಸಾಹಿತ್ಯಚರಿತ್ರೆಯ ಸಮರ್ಪಕ ಕಲ್ಪನೆ ಅವರಿಗಿತ್ತು ಎನ್ನಲು ಅಡ್ಡಿಯಿಲ್ಲ.

ಮಾಡುವುದರ ಮೂಲಕ ನಿರ್ದೇಶಿಸುತ್ತಾರೆ 'ಶ್ರೀ'ಯವರು. ಇಂಥ ಕಡೆ ಅವರ ನುಡಿಗಳು ಕೇವಲ ಕೊಂಡಿಗಳಂತೆ ಬರುತ್ತವೆ. ಈ ಪ್ರವೃತ್ತಿಯಿಂದ ಅವರ ವಿಮರ್ಶೆ ಬಹಳ ಕಡೆ 'ವರ್ಣನಾತ್ಮಕ' ಸ್ವರೂಪವನ್ನು ಪಡೆದುಕೊಳ್ಳುತ್ತದೆಯೆನ್ನಬೇಕು. ಒಟ್ಟಿನಲ್ಲಿ ಕಾವ್ಯಗಳ ಅತ್ಯುತ್ತಮ ಭಾಗಗಳ ಸಂಕಲನವೂ ಆಗಿದೆ, ವ್ಯಾಖ್ಯಾನವೂ ಆಗಿದೆ 'ಶ್ರೀ'ಯವರ ಗ್ರಂಥ. ಆದರಲ್ಲಿ ಸಾಹಿತ್ಯ, ಸಾಹಿತ್ಯಚರಿತ್ರೆ ಎರಡೂ ಉಂಟು. ಅವರ ಉದ್ದೇಶದ ಚೌಕಟ್ಟಿನಲ್ಲಿ ಇದು ಸಹಜವೇ.

೨

'ಶ್ರೀ'ಯವರ ಸಾಹಿತ್ಯಚರಿತ್ರೆಯಲ್ಲಿ ನಾಲ್ಕು ವಿಭಾಗಗಳಿವೆ: ಪೀಠಿಕೆ; ಸಾಹಿತ್ಯಚರಿತ್ರೆಯ ವಿಷಯಗಳು; ಆರಂಭಕಾಲ (೧೦ನೆಯ ಶತಮಾನದವರೆಗೆ); ಜೈನಕವಿಗಳು.

ಪೀಠಿಕೆಯ ಪ್ರಾರಂಭದಲ್ಲೆ 'ಶ್ರೀ'ಯವರು ಹೇಳುತ್ತಾರೆ: "ಕನ್ನಡ ಸಾಹಿತ್ಯದ ಚರಿತ್ರೆಯನ್ನು ನಿಸ್ಸಂದೇಹವಾಗಿಯೂ ಎಲ್ಲಾ ಭಾಗಗಳಲ್ಲಿ ಸಂಪೂರ್ಣವಾಗಿಯೂ ಬರೆಯಲು ಇನ್ನೂ ಸಾಧ್ಯವಾಗಿಲ್ಲ" (೪೪೯). ಕಾವ್ಯಗಳೆಲ್ಲ ಇನ್ನೂ ಉಪಲಬ್ಧವಾಗ ದಿರುವುದು, ಮುದ್ರಿತವಾಗದಿರುವುದು ಮುಂತಾದ ಕಾರಣಗಳನ್ನು ಅವರು ಪ್ರಸ್ತಾಪಿಸುತ್ತಾರೆ. ಪರಿಸ್ಥಿತಿ ಈಗ ಉತ್ತಮವಾಗಿದ್ದರೂ, 'ಶ್ರೀ'ಯವರ ಮಾತು ಇಂದಿಗೂ ನಿಲ್ಲುವಂಥದು.

'ಸಾಹಿತ್ಯಚರಿತ್ರೆಯ ವಿಷಯಗಳು' ಎಂಬ ಅಧ್ಯಾಯ ತುಂಬ ಬೆಲೆಯುಳ್ಳದ್ದು. ಅನ್ಯತ್ರ ಸಿಗದ ಕೆಲವು ವಿಷಯಗಳು ಇಲ್ಲಿ ಉಕ್ತವಾಗಿವೆ. ಮೊದಲನೆಯದಾಗಿ, ಸಾಹಿತ್ಯದ ಲಕ್ಷಣವನ್ನು ಕುರಿತು 'ಶ್ರೀ'ಯವರು ವಿಚಾರಮಾಡಿದ್ದಾರೆ; ಯಾವ ಬಗೆಯ ಗ್ರಂಥಗಳು ಸಾಹಿತ್ಯವೆನಿಸುತ್ತವೆ ಎಂಬುದನ್ನು ನಿಷ್ಕರ್ಷಿಸಿದ್ದಾರೆ. "ಒಂದು ಭಾಷೆಯಲ್ಲಿ ಬರೆದ ಬರವಣಿಗೆಯೆಲ್ಲಾ ಸಾಹಿತ್ಯವೆಂಬ ಹೆಸರಿಗೆ ಅರ್ಹವೇ? ಎಂದು ವಿಚಾರ ಮಾಡಿದರೆ, ಕೇವಲ ಜ್ಞಾನಪ್ರಸಾರಣೆಗಾಗಿ, ಪಾಂಡಿತ್ಯ ಪ್ರದರ್ಶನಕ್ಕಾಗಿ ಬರೆದ ಗ್ರಂಥಗಳಿಗಿಂತಲೂ, ವಿಷಯವೇನೇ ಆಗಿರಲಿ, ಸರಸ್ವತೀ ಪ್ರಸಾದವನ್ನು ಪಡೆದು, ರಸೋತ್ಪಾದನ ಶಕ್ತಿ ಕಲ್ಪನಾಶಕ್ತಿಗಳಿಂದ ಕೂಡಿ, ತನ್ನದೇ ಒಂದು ಪ್ರತಿಭೆಯೂ, ರೀತಿಯೂ, ವ್ಯಕ್ತಿತ್ವವೂ ತನ್ನ ಕಾವ್ಯದಲ್ಲಿ ಉಕ್ಕುವಂತೆ ಮಾಡಿ, ಓದುವವರ ಹೃದಯವನ್ನು ಹೊಕ್ಕು, ಅಲ್ಲಿ ಸೌಂದರ್ಯದ, ಆನಂದದ ಅನುಭವಗಳ ನ್ನುಂಟುಮಾಡಬಲ್ಲ ಕವಿಗಳ ಗ್ರಂಥಗಳೇ ಸಾಹಿತ್ಯವೆನಿಸಿಕೊಳ್ಳುವುದಕ್ಕೆ ಯೋಗ್ಯ ವಾದುವುಗಳೆಂದು ಹೇಳಬೇಕಾಗುತ್ತದೆ. ಇಂಥಾ ಕವಿಗಳು ಮಹಾಕವಿಗಳೇ ಆಗಿರ ಬೇಕೆಂಬ ನಿಯಮವಿಲ್ಲ; ಇಂಥಾ ಕಾವ್ಯಗಳು ಉತ್ಕೃಷ್ಟ ಕಾವ್ಯಗಳೇ ಆಗಿರಬೇಕೆಂಬ ನಿರ್ಬಂಧವಿಲ್ಲ. ಕವಿ ನಿಜವಾಗಿಯೂ ಕವಿಯಾಗಿದ್ದರೆ ಸರಿ; ಕಾವ್ಯ ನಿಜವಾಗಿಯೂ

ಕಾವ್ಯಜಾತಿಗೆ ಸೇರಿದ್ದರೆ ಸಾಕು. ಆದರೆ, ಶುಷ್ಕಪಾಂಡಿತ್ಯವೂ ಭಾಷಾಡಂಬರವೂ ಸಾಧಾರಣ ಭಾವಗಳೂ, ಬರಿಯ ತಿಳಿವಳಿಕೆಯ ಸಂಗತಿಗಳೂ, ಎಷ್ಟೇ ದೊಡ್ಡದಾದ ಗ್ರಂಥವನ್ನೂ ಸಾಹಿತ್ಯವೆನ್ನಿಸಲಾರವು" (೪೫೬). ಆದರೆ ಲಕ್ಷಣಗ್ರಂಥಗಳು, ಶಾಸ್ತ್ರ ಗ್ರಂಥಗಳು ಮತ್ತು ಶಾಸನಗಳು ಸಾಹಿತ್ಯಚರಿತ್ರೆಯಲ್ಲಿ ಸ್ವಲ್ಪಮಟ್ಟಿಗೆ ಸ್ಥಾನ ಪಡೆಯುತ್ತವೆಂದು ಹೇಳುತ್ತಾರೆ 'ಶ್ರೀ'.

"ಸಾಹಿತ್ಯಚರಿತ್ರೆಗೆ ಮುಖ್ಯವಾಗಿ ಬೇಕಾದುದು ಕಾಲ" ಎನ್ನುವ 'ಶ್ರೀ' ಯವರು ಕವಿಗಳ ಕಾಲ ನಿರ್ಣಯಕ್ಕೆ ಆರು ಸಾಧನಗಳನ್ನು ತಿಳಿಸುತ್ತಾರೆ : (೧) ಗ್ರಂಥ ಸಮಾಪ್ತಿಯ ಕಾಲವನ್ನು ಕವಿ ತಾನೇ ಹೇಳಿರುವುದು, (೨) ಶಾಸನಗಳು, (೩) ಪೂರ್ವ ಕವಿಪಂಕ್ತಿಯಲ್ಲಿ ಕವಿಯ ಹೆಸರನ್ನು ಹೇಳಿರುವುದು, (೪) ಉದ್ಧರಣ, ಅನುಕರಣ, (೫) ಐತಿಹ್ಯಗಳು, (೬) ಕಾವ್ಯದ ಮತ, ವಿಷಯ, ರೂಪ, ಶೈಲಿ ಮುಂತಾದುವು. ಇವುಗಳಿಗೆಲ್ಲ ನಿದರ್ಶನಗಳನ್ನು ಲೇಖಕರು ಕೊಟ್ಟಿದ್ದಾರೆ ಮಾತ್ರವಲ್ಲದೆ, ಯಾವ ಸಾಧನೆಗಳು ಸಬಲ, ಯಾವುವು ದುರ್ಬಲ ಎಂಬುದನ್ನೂ ಹೇಳಿದ್ದಾರೆ. "೫, ೬ನೆಯ ಸಾಧನಗಳು ಮಿಕ್ಕ ಆಧಾರಗಳಿಗೆ ಹೊಂದಿಕೆಯಾದಾಗ ಮಾತ್ರ ಉಪಯೋಗಿಸತಕ್ಕು ವಾಗಿವೆ." (೪೬೮).

ಕನ್ನಡ ಸಾಹಿತ್ಯದ ಅನೇಕ ವಿಭಾಗಕ್ರಮಗಳನ್ನು 'ಶ್ರೀ'ಯವರು ಉಲ್ಲೇಖಿಸಿ. ತಮ್ಮ ವಿಭಜನಕ್ರಮವನ್ನು ಹೀಗೆ ತಿಳಿಸುತ್ತಾರೆ : (೧) ಆರಂಭಕಾಲ ; ೧೦ನೆಯ ಶತಮಾನದವರೆಗೆ. (೨) ಮತಪ್ರಾಬಲ್ಯಕಾಲ : ೧೦ನೆಯ ಶತಮಾನದಿಂದ. ಜೈನಕವಿ ಗಳು : ೧೦ನೆಯ ಶತಮಾನದಿಂದ. ವೀರಶೈವ ಕವಿಗಳು : ೧೨ನೆಯ ಶತಮಾನದಿಂದ. ಬ್ರಾಹ್ಮಣ ಕವಿಗಳು : (ಮುಖ್ಯವಾಗಿ) ೧೫ನೆಯ ಶತಮಾನದಿಂದ. (೩) ನವೀನ ಕಾಲ : ೧೯ನೆಯ ಶತಮಾನದಿಂದ. 'ಶ್ರೀ'ಯವರ ಈ ಕ್ರಮ ಈಗ ಹಳೆಯದಾಗಿ ಕಾಣಿಸಿದರೂ, ವಿಚಾರಯೋಗ್ಯವಾಗಿದೆ. ಮತ, ಧರ್ಮಗಳೆ ಪ್ರಾಚೀನ ಕನ್ನಡ ವಾಙ್ಮಯಕ್ಕೆ ಪ್ರೇರಕ ಶಕ್ತಿಗಳೆಂಬುದನ್ನು ಮರೆಯುವಂತಿಲ್ಲ.

'ಆರಂಭಕಾಲ' (೧೦ನೆಯ ಶತಮಾನದವರೆಗೆ) ಎಂಬ ಅಧ್ಯಾಯದಲ್ಲಿ ಪಂಪ ಪೂರ್ವ ಸಾಹಿತ್ಯದ ಒಂದು ಹಕ್ಕಿ ನೋಟವನ್ನು 'ಶ್ರೀ'ಯವರು ಒದಗಿಸಿದ್ದಾರೆ ಮಾತ್ರವಲ್ಲದೆ, ಕನ್ನಡ ಸಾಹಿತ್ಯದ ಹಿನ್ನೆಲೆಯನ್ನು ಸಮರ್ಥವಾಗಿ ಕಟ್ಟಿಕೊಟ್ಟಿದ್ದಾರೆ ; ಅಮೂಲ್ಯವಾದ ಹಲವು ವಿಚಾರಗಳು ನಮಗಿಲ್ಲಿ ಕಂಡುಬರುತ್ತವೆ.

ಆರನೆಯ ಶತಮಾನಕ್ಕಿಂತ ಹಿಂದೆ ಕನ್ನಡ ಸಾಹಿತ್ಯವಿದ್ದಿರಲಾರದು ಎಂದು 'ಶ್ರೀ'ಯವರ ತರ್ಕ ; ಅದಕ್ಕೆ ಅನೇಕ ಆಧಾರಗಳನ್ನವರು ಮುಂದಿಡುತ್ತಾರೆ. "ಅಂತೂ, ೬ನೆಯ ಶತಮಾನಕ್ಕೆ ಹಿಂದೆ ಕನ್ನಡದಲ್ಲಿ ಬರೆದ ಶಾಸನಗಳಾಗಲಿ, ಗ್ರಂಥವಾಗಲಿ, ಯಾವ ಲೇಖನವೂ ದೊರೆತಿಲ್ಲ. ಮೇಲೆ ಸೂಚಿಸಿರುವ ಕವಿಗಳು ('ಕವಿರಾಜಮಾರ್ಗ'ದಲ್ಲಿ ಹೆಸರಿಸಿದವರು) ಇವಕ್ಕೆ ಮುಂಚೆ ಇದ್ದರೆಂದು ಹೇಳುವುದಕ್ಕೆ

ಆಧಾರವಿಲ್ಲ. ಆ ಕಾಲದಿಂದ ಒಬ್ಬೊಬ್ಬರು ಕವಿಗಳು ಕನ್ನಡದಲ್ಲಿ ಕವಿತ್ವ ಮಾಡುವುದಕ್ಕೆ ಆರಂಭಿಸಿದರೆಂದೂ. ಅವರ ಗ್ರಂಥಗಳು ಅಷ್ಟು ದೊಡ್ಡವಾಗಿಯೂ ಪ್ರೌಢವಾಗಿಯೂ ಇರಲಿಲ್ಲವೆಂದೂ, ನೃಪತುಂಗನು ಕವಿಶಿಕ್ಷಣಕ್ಕಾಗಿ ಸಂಸ್ಕೃತದಿಂದ ದಂಡಿಯ ಅಲಂಕಾರವನ್ನು ಕನ್ನಡಕ್ಕೆ ಪರಿವರ್ತಿಸಿದನೆಂದೂ, ಪಂಪನ ಕಾವ್ಯಗಳು ಪ್ರೌಢಗ್ರಂಥಗಳಿಗೆ ಆದರ್ಶಗಳಾದದ್ದರಿಂದ ಪಂಪನಿಗೆ ಕನ್ನಡಕ್ಕೆ ಆದಿಕವಿ ಎಂಬ ಹೆಸರು ಬಂದಿತೆಂದೂ ಊಹಿಸಬಹುದಾಗಿದೆ" (೪೭೩). ಭಾಷಾದೃಷ್ಟಿಯಿಂದಲೂ ಇದೇ ಅನುಮಾನ ಹುಟ್ಟುತ್ತದೆ ಎನ್ನುತ್ತಾರೆ 'ಶ್ರೀ'.

ಮುಂದೆ, ಸಂಸ್ಕೃತ ಭಾಷೆ ಸಾಹಿತ್ಯಗಳನ್ನು ಅವಲಂಬಿಸಿ, ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ನಿರ್ಣಯಿಸಲು ಯತ್ನಿಸುತ್ತಾರೆ : "ಕನ್ನಡ ಸಾಹಿತ್ಯಕ್ಕೆ ಸಂಸ್ಕೃತ ಸಾಹಿತ್ಯವೇ ಪ್ರೇರಕ, ಪೋಷಕ, ಗುರು. ಈ ಸಂಸ್ಕೃತ ಸಾಹಿತ್ಯದ ಮತ್ತು ಭಾಷೆಯ ಪ್ರಾಬಲ್ಯವನ್ನು ಯೋಚಿಸಿದರೂ, ಸುಮಾರು ೬ನೆಯ ಶತಮಾನಕ್ಕೆ ಹಿಂದೆ ಕನ್ನಡದಲ್ಲಿ ಗ್ರಂಥಗಳು ಹುಟ್ಟಿರಲಾರದೆಂಬ ಅನುಮಾನ ಬಲವಾಗುತ್ತದೆ. ನೃಪತುಂಗನ ಕಾಲಕ್ಕೆ ಸಂಸ್ಕೃತ ಸಾಹಿತ್ಯವು ಪರಮಪದವನ್ನು ಮುಟ್ಟಿ ಕೆಳಮುಖವಾಗಿ ತಿರುಗಿದ್ದಿತು. ಭಾರತ, ಭಾಗವತ, ಹರಿವಂಶ, ರಾಮಾಯಣ, ಪುರಾಣಗಳು ಪ್ರಸಿದ್ಧಿಯಾಗಿದ್ದವು; ಕಾಳಿದಾಸ, ಭಾರವಿ, ಮಾಘ, ಭವಭೂತಿ, ಭಟ್ಟನಾರಾಯಣ. ಭರ್ತೃಹರಿ, ಬಾಣ, ಸುಬಂಧು ಮುಂತಾದ ಕವಿಗಳೂ; ಭರತ, ದಂಡಿ, ವಾಮನ ಮುಂತಾದ ಆಲಂಕಾರಿಕರೂ ಸಾಮಾನ್ಯವಾಗಿ ವಿದ್ಯಾವಂತರೆಲ್ಲರಿಗೂ ತಿಳಿದವರಾಗಿದ್ದರು" (೪೭೪).

"ಕನ್ನಡ ಸಾಹಿತ್ಯಕ್ಕೆ ಸಂಸ್ಕೃತ ಸಾಹಿತ್ಯವೇ ಪ್ರೇರಕ, ಪೋಷಕ, ಗುರು" ಎಂಬ 'ಶ್ರೀ'ಯವರ ಸೂತ್ರಪ್ರಾಯವಾದ ಉಕ್ತಿ ಪ್ರಸಿದ್ಧವಾದುದು ; ಯಥಾರ್ಥವಾದದೂ ಹೌದು.

ಭಾವ, ರೀತಿ. ವಸ್ತುಗಳಲ್ಲಿ ಮಾತ್ರವಲ್ಲದೆ ರೂಪದಲ್ಲಿಯೂ ಸಂಸ್ಕೃತ ಕವಿಗಳೆ ಕನ್ನಡ ಕವಿಗಳಿಗೆ ಮೇಲ್ಪಂಕ್ತಿ ಎಂದು ಹೇಳುತ್ತಾರೆ 'ಶ್ರೀ'. ಕನ್ನಡದಲ್ಲಿ ಬೌದ್ಧ ಸಾಹಿತ್ಯವಿತ್ತೆ ? 'ಶ್ರೀ'ಯವರ ಉತ್ತರವಿದು : "ಬ್ರಾಹ್ಮಣರು ದೇಶಭಾಷೆಯಲ್ಲಿ ಮತ ಪ್ರಚಾರಣೆಯನ್ನು ಮಾಡಲಿಲ್ಲ ; ಸಂಸ್ಕೃತವನ್ನೇ ಉಪಯೋಗಿಸಿದರು. ಬೌದ್ಧರು ಮಾಡಿದ್ದರೂ ಮಾಡಿದ್ದಿರಬಹುದು ; ಆದರೆ ಆ ಕಾಲದಲ್ಲಿ ಪ್ರಾಕೃತವೇ ಹೆಚ್ಚು ಪ್ರಚಾರದಲ್ಲಿದ್ದದ್ದರಿಂದ ಅದರಲ್ಲಿಯೇ ಬರೆದಿರಬಹುದು ; ಕನ್ನಡದಲ್ಲಿ ಬರೆದಿದ್ದರೆ ೮-೯ನೆಯ ಶತಮಾನದ ಹೊತ್ತಿಗೆ ಅವರು ಕ್ಷೀಣದಶೆಗೆ ಬಂದು ಅವರ ಮಠಗಳೆಲ್ಲಾ ನಾಶವಾದದ್ದರಿಂದ ಅವರ ಗ್ರಂಥಗಳು ನಾಶವಾಗಿರಬೇಕು" (೪೭೬).

ಕನ್ನಡ ಸಾಹಿತ್ಯದ ಉಗಮದ ಬಗ್ಗೆ ಇದು 'ಶ್ರೀ'ಯವರ ತೀರ್ಮಾನ: "ಒಟ್ಟಿನ ಮೇಲೆ, ಕ್ರಿ. ಶ. ೬-೭ನೆಯ ಶತಮಾನದವರೆಗೆ ಕನ್ನಡ ಜನರಲ್ಲಿ ಸಂಸ್ಕೃತ ವಿದ್ಯೆಯೂ, ಮತಜ್ಞಾನವೂ, ಇತಿಹಾಸ ಪುರಾಣ ಪುಣ್ಯಕಥೆಗಳೂ, ಶಾಸ್ತ್ರಗಳೂ, ಪ್ರಾಕೃತ ಸಂಸ್ಕೃತ ಶಬ್ದಗಳಿಂದ ಭಾಷಾ ಚೈತನ್ಯವೂ ಹೆಚ್ಚುತ್ತ ಬಂದು ಬಳಿಕ ಕನ್ನಡ ಕವಿತ್ವವೂ ಆರಂಭವಾಯಿತೆಂದು ಹೇಳಬಹುದು" (೪೭೬). ಈ ಗಡುವು ಸರಿಯಾಗಿದೆ. ಇದನ್ನು ಇನ್ನೂ ಹಿಂದಕ್ಕೊಯ್ಯುವುದು ಈ ಹೊತ್ತಿಗೂ ಶಕ್ಯವಿಲ್ಲ.

ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, 'ಶ್ರೀ'ಯವರ ವಸ್ತುನಿಷ್ಠ ಸಮಾಲೋಚನೆ. ಅವರ ಉತ್ಕಟ ಕನ್ನಡ ಪ್ರೇಮ, ಕನ್ನಡ ಸಾಹಿತ್ಯದ ಆರಂಭವನ್ನು ಬಹಳ ಹಿಂದಕ್ಕೆ ತೆಗೆದುಕೊಂಡು ಹೋಗಲು ಹವಣಿಸುವುದಿಲ್ಲ – ಇತರ ಕೆಲವರು ವಿದ್ವಾಂಸರಲ್ಲಿ ಕಂಡು ಬರುವಂತೆ. ("ಕಡೆಗೆ ಉಳಿಯುವುದು ಅಭಿಮಾನವಲ್ಲ, ಸತ್ಯ" ಎಂಬುದು 'ಶ್ರೀ'ಯವರದೇ ಸೂಕ್ತಿ).

"ಆರ್ಯರು ದಕ್ಷಿಣ ದೇಶದಲ್ಲಿ ನೆಲಸುವುದಕ್ಕೆ ಮುಂಚೆ ಸಂಸ್ಕೃತ ಸಾಹಿತ್ಯದ ಗಂಧವೇ ಇಲ್ಲದ ಕಾಲದಲ್ಲಿ, ದ್ರಾವಿಡ ಜನರಲ್ಲಿ ಕವಿತ್ವವೇ ಇರಲಿಲ್ಲವೇ?" (೪೭೬) ಎಂದು ಪ್ರಶ್ನೆಹಾಕಿಕೊಂಡು, ಜನಪದ ಸಾಹಿತ್ಯದ ಅಸ್ತಿತ್ವದತ್ತ ಗಮನ ಸೆಳೆಯುತ್ತಾರೆ 'ಶ್ರೀ'. 'ಒನಕೆವಾಡು' ಮುಂತಾದ ಹಾಡುಗಬ್ಬಗಳನ್ನು ಕುರಿತು ಅವರು ಹೇಳುತ್ತಾರೆ: "ಇವು ಉಳಿಯಲಿಲ್ಲ; ಇವು ಇದ್ದುದಕ್ಕೆ ನಿದರ್ಶನ ಮಾತ್ರ ಉಳಿದಿದೆ. ಯಾವುದೆಂದರೆ, ಸಂಸ್ಕೃತ ಪ್ರಾಕೃತಗಳಲ್ಲಿಲ್ಲದೆ, ದ್ರಾವಿಡ ಭಾಷೆಗಳಲ್ಲಿ ಮಾತ್ರ ಇರುವ, ಎರವಲಲ್ಲದ, ದೇಶ್ಯ ಛಂದಸ್ಸು" (೪೭೮).

ಕನ್ನಡ ಸಾಹಿತ್ಯದ ಆರಂಭವನ್ನು ಕುರಿತು ಮತ್ತೆ 'ಶ್ರೀ'ಯವರು ಹೇಳುತ್ತಾರೆ: "ಸು. ೬–೭ನೆಯ ಶತಮಾನಗಳವರೆಗೆ ಸಂಸ್ಕೃತ ಮತ, ನಾಗರಿಕತೆ, ಮತ್ತು ಸಾಹಿತ್ಯಜ್ಞಾನ ಇವು ಕನ್ನಡ ಜನರಲ್ಲಿ ವ್ಯಾಪಿಸಿ ಅವರ ಭಾಷೆ ಪುಷ್ಟಿಯಾಗಿ, ಕಾವ್ಯಕರ್ಮಕ್ಕೆ ಸಾಧ್ಯವಾಯಿತೆಂದೂ. ಆರಂಭವಾದಾಗ ಸಂಸ್ಕೃತದ ಸಂಸ್ಕಾರಬಲವೇ ಸರ್ವವ್ಯಾಪಿಯಾಗಿತ್ತೆಂದೂ, ಬಹುಶಃ ಅಚ್ಚಗನ್ನಡದಲ್ಲಿ, ಕನ್ನಡ ಛಂದಸ್ಸಿನಲ್ಲಿ ಕವಿತ್ವವಿದ್ದು ನಶಿಸಿಹೋಗಿ ಆ ಕಾಲದ ಗ್ರಂಥಗಳಲ್ಲಿ ತನ್ನ ಕೆಲವು ಚಿಹ್ನೆಗಳನ್ನು ಸೇರಿಸಿ ಹಾಡಿನ ರೂಪದಲ್ಲಿ ಜನಸಾಮಾನ್ಯರಲ್ಲಿ ಬಳಕೆಯಲ್ಲಿರುತ್ತಾ ವೀರಶೈವರ ಪ್ರೋತ್ಸಾಹದಲ್ಲಿ ಮತ್ತೆ ತಲೆಯೆತ್ತಿತೆಂದೂ ಊಹಿಸಬಹುದಾಗಿದೆ" (೪೮೦).

ಸುಮಾರು ೭ ರಿಂದ ೧೦ನೆಯ ಶತಮಾನದವರೆಗಿನ ಅವಧಿಯ ಮುಖ್ಯ ಕವಿಗಳೆಂದರೆ ಶ್ರೀವರ್ಧದೇವ, ದುರ್ವಿನೀತ, ಶ್ರೀವಿಜಯ, ನೃಪತುಂಗ, ಅಸಗ,

ಗುಣನಂದಿ ಮತ್ತು ಗುಣವರ್ಮ.[5] ಈ ಕವಿಗಳ ಬಗ್ಗೆ ವಿವಿಧ ಮೂಲಗಳಿಂದ ತಿಳಿದು ಬಂದಿರುವ ಅಂಶಗಳನ್ನು 'ಶ್ರೀ'ಯವರು ಕ್ರೋಡೀಕರಿಸಿದ್ದಾರೆ.

"ಕೆಲವರು ಶ್ರೀವಿಜಯನೇ ನೃಪತುಂಗನ ಹೆಸರಿನಲ್ಲಿ ಕವಿರಾಜಮಾರ್ಗವನ್ನು ಬರೆದನೆಂದು ಊಹಿಸುತ್ತಾರೆ" (೪೮೨) ಎಂದಿರುವ 'ಶ್ರೀ'ಯವರು, "ಈತನ ಗ್ರಂಥದಲ್ಲಿ ಹೇಳಿರುವ ಅಲಂಕಾರಶಾಸ್ತ್ರ ವಿಷಯಕ್ಕಿಂತಲೂ, ಚರಿತ್ರಕಾರನಿಗೆ ಆ ಕಾಲದ ಕನ್ನಡದ ಸ್ಥಿತಿಯನ್ನು ಕುರಿತು ಈತನು ಹೇಳಿರುವ ಅಂಶಗಳು ಹೆಚ್ಚು ಬೆಲೆಯುಳ್ಳುವಾಗಿವೆ" (೪೮೩) ಎಂದು ಹೇಳಿರುವುದು ಸಮಂಜಸವಾಗಿದೆ.

ಗುಣವರ್ಮನ ವಿಷಯವನ್ನು ಹೇಳುತ್ತಾ 'ಶ್ರೀ'ಯವರು "ತನ್ನ ಪೋಷಕನಾದ ರಾಜನನ್ನು ಪ್ರಸಿದ್ಧ ಪುರುಷರಿಗೆ ಹೋಲಿಸಿ ಒಂದು ಲೌಕಿಕ ಕಾವ್ಯವನ್ನೂ ತೀರ್ಥಕರಾದಿಗಳ ಪುರಾಣವನ್ನು ಹೇಳಿ ಒಂದು ಧಾರ್ಮಿಕ ಕಾವ್ಯವನ್ನೂ ಬರೆಯುವ ಪದ್ಧತಿಗೆ ನಾವು ತಿಳಿದಮಟ್ಟಿಗೆ ಗುಣವರ್ಮನೇ ಮೊದಲು" (೪೮೫) ಎಂದಿದ್ದಾರೆ.

೧೦ನೆಯ ಶತಮಾನದ ಸಾಹಿತ್ಯದ ಹಿಂದಿನ ಸಿದ್ಧತೆಯ ಚಿತ್ರವನ್ನು 'ಶ್ರೀ'ಯವರು ಕೊಡುವುದು ಹೀಗೆ: "ಅಂತೂ ೧೦ನೆಯ ಶತಮಾನದ ಹೊತ್ತಿಗೆ ಕನ್ನಡದಲ್ಲಿ ಸಾಹಿತ್ಯದ ದಾರಿ ಸವೆದು, ಪ್ರೌಢಕವಿಗಳ ವಿಜಯಯಾತ್ರೆಗೆ ಸಕಲ ಸನ್ನಾಹವೂ ನಡೆದಿತ್ತು. ಭಾಷೆ ಪ್ರಾಕೃತ ಸಂಸ್ಕೃತ ಶಬ್ದಗಳಿಂದ ತುಂಬಿ, ಗ್ರಾಮ್ಯ, ದೇಶಿರೂಪಗಳನ್ನು ಬಿಟ್ಟು ಗ್ರಂಥಾರ್ಹವಾದ ಹಳಗನ್ನಡವಾಗಿತ್ತು. ಸಂಸ್ಕೃತದಿಂದಲೂ, ಪ್ರಾಕೃತದಿಂದಲೂ, ಕನ್ನಡದಿಂದಲೂ ಉಚಿತವಾದ ವೃತ್ತಗಳು ಒದಗಿದ್ದುವು. ಉತ್ತಮವಾದ ಸಂಸ್ಕೃತ ಕಾವ್ಯಗಳನ್ನೂ, ಅಲಂಕಾರಗ್ರಂಥಗಳನ್ನೂ ಅಭ್ಯಾಸಮಾಡಿ, ಉಭಯಕವಿಗಳಾಗಬಲ್ಲ ವಿದ್ವಾಂಸರನೇಕರು ಕನ್ನಡ ದೇಶದಲ್ಲಿ ರಾಜಸಭೆಗಳನ್ನು ಅಲಂಕರಿಸಿದರು. ಉತ್ತರದಲ್ಲಿ ರಾಷ್ಟ್ರಕೂಟ ಚಾಳುಕ್ಯರೂ, ದಕ್ಷಿಣದಲ್ಲಿ ಗಂಗರೂ ಪ್ರಬಲರಾಗಿ ದೇಶಭಾಷೆಗಳಲ್ಲಿ ಗ್ರಂಥಗಳನ್ನು ಬರೆಸಿ ತಮ್ಮ ಕೀರ್ತಿಯನ್ನು ಸ್ಥಿರವಾಗಿ ನಿಲ್ಲಿಸುವ ಉತ್ಸಾಹವುಳ್ಳವರಾಗಿದ್ದರು. ಕೊಪಣ, ಶ್ರವಣಬೆಳಗೊಳ ಮುಂತಾದ ಜೈನಕ್ಷೇತ್ರಗಳಲ್ಲಿಯೂ ರಾಜರ ಆಸ್ಥಾನಗಳಲ್ಲಿಯೂ ಇದ್ದ ಯೋಗಿಗಳೂ ಗುರುಗಳೂ ತಮ್ಮ ಮತಬೋಧನೆಗಾಗಿ ಕನ್ನಡದಲ್ಲಿ ಕಾವ್ಯನಿರ್ಮಾಣಕ್ಕೆ ಪ್ರೇರಕರಾದರು. ಕವಿತಾಮಾರ್ಗವನ್ನು ಕವಿರಾಜಮಾರ್ಗವೂ ಗುಣಗಾಂಕಿಯವೂ ತೋರಿಕೊಟ್ಟುವು. ಶ್ರೀವರ್ಧ, ಶ್ರೀವಿಜಯ, ಗುಣವರ್ಮ ಮುಂತಾದ ಕವಿಗಳು ಶ್ರೇಷ್ಠವಾದ ಕಾವ್ಯಗಳನ್ನು ಗದ್ಯದಲ್ಲಿಯೂ ಪದ್ಯದಲ್ಲಿಯೂ ಬರೆದು, ಲೌಕಿಕ ಧಾರ್ಮಿಕ ಶಾಸ್ತ್ರಿಕ

೫. 'ಶ್ರೀ'ಯವರು ಸಾಹಿತ್ಯಚರಿತ್ರೆ ಬರೆಯುವಾಗ 'ವಡ್ಡಾರಾಧನೆ' ಇನ್ನೂ ಸಿಕ್ಕಿರಲಿಲ್ಲವಾದ್ದರಿಂದ ಅದರ ಉಲ್ಲೇಖವಿಲ್ಲ.

ವಿಷಯಗಳನ್ನು ಕನ್ನಡದಲ್ಲಿ ಸಾಧ್ಯವಾಗುವಂತೆ ಮಾಡಿದರು. ಈ ಮತಬೋಧಕರ, ಲಾಕ್ಷಣಿಕರ, ಕವಿಗಳ ಕೃಷಿಯಿಂದ ಕನ್ನಡ ಸಾಹಿತ್ಯದ ಭೂಮಿ ಸಾರವತ್ತಾಗಿ, ಕಡೆಗೆ ಪೊನ್ನ, ಪಂಪ, ರನ್ನ ಎಂಬ ಕವಿರತ್ನತ್ರಯದ ಕಾವ್ಯಗಳಲ್ಲಿ ಉತ್ಕೃಷ್ಟವಾದ ಫಲವನ್ನು ಕೊಡುವಂತಾಯಿತು" (೪೮೯).

೩

'ಜೈನಕವಿಗಳು' ಎಂಬ ಅಧ್ಯಾಯದಲ್ಲಿ, ರಾಷ್ಟ್ರಕೂಟ-ಚಾಳುಕ್ಯ-ಗಂಗರ ಕಾಲ (೯೪೧-೧೧೦೦), ಕಳಚುರ್ಯ-ಹೊಯ್ಸಳರ ಕಾಲ (೧೧೦೦-೧೩೫೦), ವಿಜಯನಗರ ರಾಜರ ಕಾಲ (೧೩೫೦-೧೫೭೫). ಮೈಸೂರು ರಾಜರ ಕಾಲ (೧೫೭೫-೧೮೦೦) ಎಂದು ವಿಭಾಗಮಾಡಿಕೊಂಡು, ಆಯಾ ಕಾಲದಲ್ಲಿ ಬರುವ ಜೈನಕವಿಗಳನ್ನು ಕಾಲನಿರ್ದೇಶ ಸಹಿತ ಪಟ್ಟಿಮಾಡಿದ್ದಾರೆ 'ಶ್ರೀ'. ಒಟ್ಟು ೪೫ ಮಂದಿಯನ್ನು ಪ್ರಮುಖರೆಂದು ಹೆಸರಿಸಲಾಗಿದೆ. (ಕವಿಚರಿತಕಾರರಲ್ಲಿ ಈ ಸಂಖ್ಯೆ ೧೭೫ ಎನ್ನಲಾಗಿದೆ).

ರಾಷ್ಟ್ರಕೂಟ-ಚಾಳುಕ್ಯ-ಗಂಗರ ಕಾಲದಲ್ಲಿ ಸಮಾವಿಷ್ಟವಾಗುವ ಹತ್ತನೆಯ ಶತಮಾನದಲ್ಲಿ 'ಚಿನ್ನದ ಮೊದಲು ಬೆಳೆ' ಬಂತೆಂದು ಹೇಳುತ್ತಾರೆ 'ಶ್ರೀ'. ಈ ಶತಮಾನದ ಕವಿಗಳ ಬಗೆಗೆ ಅವರ ಗಮನಾರ್ಹವಾದ ಹೇಳಿಕೆಯಿದು : "ಹತ್ತನೆಯ ಶತಮಾನದಲ್ಲಿ ಕನ್ನಡದ ಸಾಹಿತ್ಯವು ಇಬ್ಬರು-ಮೂವರು ಮಹಾಕವಿಗಳಿಂದ ಕವಿತಾ ಸಾಮ್ರಾಜ್ಯದ ತಳಹದಿಯನ್ನು ಭದ್ರವಾಗಿ ಹಾಕಿತು. ಉತ್ತರ ಕರ್ನಾಟಕದಲ್ಲಿ ಚಾಳುಕ್ಯ ರಾಷ್ಟ್ರಕೂಟರ ಆಶ್ರಯದಲ್ಲಿ ಪಂಪ ಪೊನ್ನರೂ, ದಕ್ಷಿಣ ಕರ್ನಾಟಕದಲ್ಲಿ ಗಂಗರ ಆಶ್ರಯದಲ್ಲಿ ಚಾವುಂಡರಾಯ ನಾಗವರ್ಮರೂ, ಉಭಯರ ಆಶ್ರಯದಲ್ಲಿ ರನ್ನನೂ ಧಾರ್ಮಿಕ, ಲೌಕಿಕ, ಶೃಂಗಾರಕಾವ್ಯಗಳನ್ನೂ, ಲಕ್ಷಣಗ್ರಂಥಗಳನ್ನೂ ರಚಿಸಿ ಮುಂದಿನ ಕವಿಗಳಿಗೆ ಆದರ್ಶಪ್ರಾಯರಾದರು. ಹಿಂದಿನ ಕಾವ್ಯಗಳ ಸಾರವೆಲ್ಲಾ ಇವರ ಕಾವ್ಯಗಳಲ್ಲಿ ಸೇರಿಹೋಯಿತು. ಚಾವುಂಡರಾಯನ ತೀರ್ಥಂಕರರ, ಜೈನರ ಇತಿಹಾಸಗಳ, ಕಥಾಸಾರಾಂಶವನ್ನೆಲ್ಲಾ ಗದ್ಯದಲ್ಲಿ ಸಂಗ್ರಹಿಸಿದನು. ನಾಗವರ್ಮನು ಸಂಸ್ಕೃತ ಮತ್ತು ಕನ್ನಡ ಛಂದಸ್ಸುಗಳನ್ನು ವಿವರಿಸಿ ಪ್ರದರ್ಶಿಸಿದನು. 'ರತ್ನತ್ರಯ'ರೆಂದು ಪ್ರಸಿದ್ಧರಾದ ಪಂಪ ಪೊನ್ನ ರನ್ನರು ಶಾಂತಿರಸ ಪ್ರಧಾನವಾದ ತೀರ್ಥಂಕರ ಚರಿತ್ರೆಗಳನ್ನೂ, ವೀರರಸ ಪ್ರಧಾನವಾದ ಭಾರತ-ರಾಮಾಯಣ ಕಥೆಗಳನ್ನೂ, ಉತ್ತಮವಾದ ಚಂಪೂಕಾವ್ಯಗಳಲ್ಲಿ ಎರಕಹೊಯ್ದು ದಿವ್ಯವಿಗ್ರಹಗಳನ್ನಾಗಿ ಮಾಡಿ ನಿಲ್ಲಿಸಿದರು. ನಾಗವರ್ಮನು ಬಾಣನ ಕಾದಂಬರಿಯನ್ನು ಕನ್ನಡಿಸಿ ಅದ್ಭುತರಸ, ಶೃಂಗಾರರಸಗಳು ತುಂಬಿರುವ ಪ್ರೇಮಕಥೆಗೆ ಮೇಲುಪಂಕ್ತಿಯನ್ನು ಹಾಕಿದನು. ಅಂದಿನಿಂದ ಇಂದಿನ ವರೆಗೂ, ಸುಮಾರು ಸಾವಿರ ವರ್ಷಗಳ ಕಾಲ. ಧರ್ಮಕಥೆ,

ವೀರಕಥೆ, ಪ್ರೇಮಕಥೆಗಳನ್ನು ಬರೆಯುತಕ್ಕವರಿಗೆಲ್ಲಾ ಪಂಪ ರನ್ನ ನಾಗವರ್ಮರು 'ಗುರುತಾಪ್ರತೀತಿ'ಯನ್ನು ಕೈಕೊಂಡವರಾಗಿದ್ದಾರೆ" (೪೯೪).

ಮೊದಲು ಪಂಪಕವಿ. "ಈತನನ್ನು ಹೆತ್ತು ಕನ್ನಡಮಾತೆ ಮಹಾಕವಿಮಾತೆ ಯಾದಳು. ಈತನ ಕಾವ್ಯಗಳು ಹಿಂದಿನ ಕಾವ್ಯಗಳನ್ನೆಲ್ಲಾ 'ಇಕ್ಕಿ ಮೆಟ್ಟಿದುವು' ; ಮುಂದಿನ ಕಾವ್ಯಗಳಿಗೆಲ್ಲಾ ಬಟ್ಟೆದೋರಿದುವು" ಎಂದು ಕೈವಾರಿಸಿದ್ದಾರೆ 'ಶ್ರೀ'. ಪಂಪ-ಅರಿಕೇಸರಿಯರ ಸಂಬಂಧವನ್ನು "ರಾಜನ ಕ್ಷತ್ರರಕ್ತವೂ, ಕವಿಯ ಬ್ರಾಹ್ಮಣ ರಕ್ತವೂ ಒಟ್ಟಿಗೇ ಕುದಿದವು" ಎಂಬ ಮಾತು ಬೆಳಗುತ್ತದೆ. "ಭಾರತದಲ್ಲಿ ಬನವಾಸಿ ದೇಶವನ್ನು ಮನಸ್ಸು ಕರಗುವಂತೆ ವರ್ಣಿಸಿರುವುದನ್ನು ನೋಡಿದರೆ, ಅಲ್ಲಿಯೇ ಹುಡುಗನಾಗಿ ಬೆಳೆದಂತೆ ತೋರುತ್ತದೆ" (೪೯೭) ಎಂಬುದು 'ಶ್ರೀ'ಯವರ ಊಹೆ. ತನ್ನ ಬಗೆಗೆ ಪಂಪ ಬರೆದುಕೊಂಡಿರುವ ಪದ್ಯಗಳನ್ನು ಉದ್ಧರಿಸಿ, ಉದ್ಗರಿಸುತ್ತಾರೆ ಲೇಖಕರು : "ಇಷ್ಟು ಪದ್ಯಗಳಲ್ಲಿಯೇ ಪಂಪನ ಗಂಭೀರಮೂರ್ತಿ ನಮ್ಮ ಕಣ್ಣೆದುರಿಗೆ ಎದ್ದು ನಿಲ್ಲುತ್ತದೆಯಲ್ಲವೆ ? ಕರ್ನಾಟಕದ ಸ್ವರ್ಣಯುಗಕ್ಕೆ ತಕ್ಕ ಆತ್ಮಜ್ಯೋತಿ, ನಡೆ, ನುಡಿ, ಅಪಾರ, ಕೆಚ್ಚು !" (೫೦೦) "ಗೆಲ್ಲಲಿ ಪಂಪ ! ಆತನ ಬೆಳಕಿನಲ್ಲಿ ಬೆಳಗಲಿ ಕನ್ನಡ !" ಎಂಬ ಭಾವೋದ್ಗಾರ ಒಂದೆಡೆ ಬಂದಿದೆ.

ಇನ್ನು 'ಆದಿಪುರಾಣದ ವಿಮರ್ಶೆ'. (ಇದು ಲೇಖಕರದೇ ಮಾತು. 'ವಿಮರ್ಶೆ' ಶಬ್ದವನ್ನು ಇಲ್ಲಿ ಲಕ್ಷಿಸಬೇಕು). ಲೌಕಿಕ ಕೃತಿಯಾದ ಪಂಪಭಾರತ ಆಗಮಿಕ ಕೃತಿ ಯಾದ ಆದಿಪುರಾಣಕ್ಕಿಂತ ಉತ್ತಮವಾದ ಕಾವ್ಯವೆಂದು ಸಾಮಾನ್ಯವಾದ ತಿಳಿವಳಿಕೆ. ಅದಕ್ಕೆ ವ್ಯತಿರಿಕ್ತವಾದ 'ಶ್ರೀ'ಯವರ ಈ ಹೇಳಿಕೆ ಮಹತ್ವದ್ದು : "ಪಂಪನ ಧರ್ಮ ಶ್ರದ್ಧೆಯಿಂದಲೂ ಭಕ್ತಿ ಜ್ಞಾನ ವೈರಾಗ್ಯ ಭಾವನೆಗಳಿಂದಲೂ ಕವಿತಾವೇಶದ ಪ್ರಥಮ ಸ್ಫೂರ್ತಿಯಿಂದಲೂ ಪ್ರಜ್ವಲಿಸುವ ಈ ಕಾವ್ಯವು ಕಡೆಗೆ ಆತನ ಭಾರತಕ್ಕೆ ಒಂದುಂ ಕೈ ಮೇಲೆಂದು ಹೇಳಿದರೂ ಹೇಳಬಹುದಾಗಿದೆ" (೫೦೪).[6] (ಆದರೆ "ಕವಿತಾವೇಶದ ಪ್ರಥಮ ಸ್ಫೂರ್ತಿ"ಯಿಂದ ಯಾವುದೇ ಕಾವ್ಯ ಮೇಲಾಗುತ್ತದೆ ಎಂಬುದುಂ ಚರ್ಚಾಸ್ಪದ.)

ಪುರುದೇವನ ಪರಿನಿಷ್ಕ್ರಮಣವನ್ನು ಕುರಿತು ಹೇಳುತ್ತಾರೆ 'ಶ್ರೀ' : "ಈಗ ಭೋಗದಿಂದ ವೈರಾಗ್ಯಕ್ಕೆ ತಿರುಗಿ ಪಂಪನ ಕವಿತೆ ಪರಮೌನ್ನತ್ಯವನ್ನೇರುವುದು" (೫೧೫). ಭರತನ ದಿಗ್ವಿಜಯ ಭಾಗದಲ್ಲಿ ಬರುವ "ವನವಿಹಾರ ವರ್ಣನೆಯೂ, ಅದ್ಭುತ ಯುದ್ಧ ವರ್ಣನೆಗಳೂ ಪಂಪನಿಗೊಬ್ಬನಿಗೇ ಸಾಧ್ಯವಾದುವು" (೫೨೦) ಎಂಬುದುಂ 'ಶ್ರೀ'ಯವರ ಉಕ್ತಿ.

---

೬. ಕುವೆಂಪು ಅವರದೂ ಇದೇ ನಿಲುವು. ನೋಡಿ: ಎಲ್. ಗುಂಡಪ್ಪನವರ 'ಆದಿಪುರಾಣ ಸಂಗ್ರಹ'ದ ಮುನ್ನುಡಿ, ಪು. ii.

ಈಗ 'ವಿಕ್ರಮಾರ್ಜುನ ವಿಜಯ'ದ ವಿಮರ್ಶೆಯನ್ನು ನೋಡಬಹುದು. ಇದ್ದೊಂದು ಗಣ್ಯವಾದ ಹೇಳಿಕೆ: ಪಂಪ "ಭಾರತ ಕಥೆಯನ್ನು ಮುಖ್ಯ ಕಥೆ ಎದ್ದು ನಿಲ್ಲುವಂತೆ ಸ್ವಾರಸ್ಯವಾಗಿ ಸಿಂಹಾವಲೋಕನ ಕ್ರಮದಿಂದ ಸಂಕ್ಷೇಪಿಸಬಲ್ಲನು; ಆದರ ಅತಿರಥ ಮಹಾರಥರನ್ನು ತನ್ನ ಕಲ್ಪನಾಶಕ್ತಿಯಿಂದ ಸ್ಪಷ್ಟವಾಗಿ ಗುಣಾವಗುಣ ಮಿಶ್ರಿತರಾದ ಲೌಕಿಕ ಮನುಷ್ಯರಂತೆ ಚಿತ್ರಿಸಬಲ್ಲನು; ಅವರಲ್ಲಿ ಮೆಚ್ಚಿಕೆಯನ್ನೂ, ಸಂತಾಪವನ್ನೂ, ಸಹಾನುಭೂತಿಯನ್ನೂ ಹುಟ್ಟಿಸಬಲ್ಲನು; ತನ್ನ ರೀತಿಯ, ಪ್ರತಿಭೆಯ, ಸಂಸಾರಾನುಭವದ, ಉದಾತ್ತ ಧ್ಯೇಯಗಳ ಚಮತ್ಕಾರ, ಸೌಂದರ್ಯ, ಸತ್ತ್ವ, ಗಾಂಭೀರ್ಯಗಳನ್ನೆಲ್ಲಾ ತನ್ನ ಕಾವ್ಯಕ್ಕೆ ಧಾರೆಯೆರೆಯಬಲ್ಲನು ... ಆದರೂ ಮಹಾಭಾರತದ ಉಜ್ವಲ ಜ್ವಾಲೆಗೆ ಸ್ವಲ್ಪ ಮಂಕು ಮುಚ್ಚದೆ ಹೋಗಲಿಲ್ಲ. ಸ್ವೇಚ್ಛೆಯಾಗಿ ಪಂಪನು ಭಾರತವನ್ನು ವ್ಯತ್ಯಾಸಪಡಿಸದೆ ಹೋದರೂ. ಕಥಾವಸ್ತುವಿನಲ್ಲಿ, ಪಾತ್ರರಚನೆಯಲ್ಲಿ, ಸೂಕ್ತಿಮಾಲೆಗಳಲ್ಲಿ, ವ್ಯಾಸಮಹರ್ಷಿಗಳ ಹಿಂದೆಯೇ ಪಂಪನು ನಮ್ರನಾಗಿ ನಡೆದಿದ್ದರೂ, ಒಂದು ವೇಳೆ ತನ್ನ ಕೆಲವು ವ್ಯತ್ಯಾಸಗಳಿಂದ, ರಚನಾ ಕೌಶಲ್ಯದಿಂದ ಮೂಲಗ್ರಂಥಕ್ಕೆ ಒಂದು ಕಳೆಯನ್ನು ಏರಿಸಿದ್ದಾನೆಂದು ಹೇಳಬಹುದಾದರೂ, ಎಲ್ಲಕ್ಕೂ ಬಹು ಮುಖ್ಯವಾದ ಅಂಶದಲ್ಲಿ, ಮಹಾಭಾರತವೆಂಬ ವೇದಕ್ಕೆ ಬೃಹದ್ದೇವತೆಯಾದ ಶ್ರೀಕೃಷ್ಣನ ವಿಷಯದಲ್ಲಿ, ಆತನ ದಿವ್ಯಾವತಾರ, ದಿವ್ಯೋಪದೇಶ, ದಿವ್ಯಲೀಲೆಗಳ ವಿಷಯದಲ್ಲಿ, ಆದಿತೀರ್ಥೇಶ್ವರನಲ್ಲಿ ಪಂಪನಿಗಿದ್ದ ಅನನ್ಯ ಶರಣಭಾವ ವಿಲ್ಲದೆ ಇದ ದ್ದರಿಂದ, ತನ್ನ ಜೈನ ಶ್ರದ್ಧೆಗೂ ಪೂರ್ವಿಕರ ವೈದಿಕ ಸಂಸ್ಕಾರಕ್ಕೂ ಹೋರಾಟ ಹುಟ್ಟಿ, ಒಳಗೆಯೇ ಪಂಪನ ಮನಸ್ಸು ಎರಡು ಕವಲಾಗಿ ಒಡೆದು, ಆತನ ಕವಿದೃಷ್ಟಿಯನ್ನೂ, ಆತನ ಉತ್ಸಾಹಧ್ವನಿಯನ್ನೂ ಸ್ವಲ್ಪಮಟ್ಟಿಗೆ ಕುಗ್ಗಿಸಿತೆಂದು ಹೇಳಬೇಕಾದ ನಿರ್ಬಂಧ ಒದಗಿದೆ" (೫೨೫-೨೬). ಪಂಪನ ಪ್ರತಿಭೆ, ಪರಿಮಿತಿ ಎರಡನ್ನೂ ಇಲ್ಲಿ 'ಶ್ರೀ'ಯವರು ಚೆನ್ನಾಗಿ ಗುರುತಿಸಿದ್ದಾರೆ. ತನ್ನ ತೊಡಕಿನಿಂದ ಬಿಡಿಸಿಕೊಂಡು ಇಷ್ಟರಮಟ್ಟಿಗಾದರೂ ಶ್ರೇಷ್ಠವಾದ ಕಾವ್ಯವನ್ನು ಪಂಪ ಕೊಟ್ಟುದಕ್ಕಾಗಿ ಅವರಿಗೆ ಆಶ್ಚರ್ಯ. "ಏನು ಕವಿತೆ! ಏನು ಕಾವ್ಯ!" ಎಂಬುದು ಅವರ ಆವೇಶದ ನುಡಿ.

ಪಂಪಭಾರತದಲ್ಲಿ ಕೆಲವೆಡೆ ಕಾಣುವ "ಶಿವಭಕ್ತಿ ಕೇವಲ ಭಾರತಕಥೆಯಿಂದಲೇ ಬಂದುದಲ್ಲ; ರಾಜನ ಇಷ್ಟದೇವತೆಯ ನಿರ್ದೇಶನಕ್ಕಾಗಿಯೇ ಅಲ್ಲ: ಪಂಪನ ಮನೆತನದ ಉಪಾಸನಾಫಲವೂ ಆಗಿರಬೇಕು" (೫೨೭) ಎಂದು 'ಶ್ರೀ'ಯವರ ಊಹೆ. "ಉತ್ತಮವಾದ ವೈದಿಕ, ಶೈವ, ಜೈನಭಕ್ತಿಗಳನ್ನೂ, ಭಾವಗಳನ್ನೂ ಸಮತಾದೃಷ್ಟಿಯಿಂದ ಆ ಕಾಲದ ಉದಾತ್ತ ಚರಿತರ ಮನಸ್ಸಿಗೆ ಹಿತವಾಗುವಂತೆ" ಪಂಪನು ಸಮನ್ವಯ ಮಾಡಿರುವನೆಂಬುದು ಅವರ ಅಭಿಮತ.

ಭಾರತ ಕಥೆಯನ್ನು ಪಂಪ ಹೇಗೆ ಸಂಗ್ರಹಿಸಿದ್ದಾನೆಂಬುದನ್ನು 'ಶ್ರೀ'ಯವರು ಪೃಥಕ್ಕರಿಸಿ, "ಆ ಕಾಲದ ಅಭಿರುಚಿಗೆ ತಕ್ಕಂತೆ ಶೃಂಗಾರ ವರ್ಣನೆ, ಸಂಕಲನ ಯುದ್ಧವರ್ಣನೆ ಮುಂತಾದ ಕೆಲವು ಭಾಗಗಳ ವಿಳಂಬವನ್ನು ಬಿಟ್ಟರೆ ಭಾರತ ರಥಕ್ಕೆ ಹೂಡಿದ ಪಂಪನ ಪ್ರತಿಭೆ ಉಸಿರಾಡುವುದಕ್ಕೆ ವಿರಾಮವಿಲ್ಲದೆ ಮೊದಲಿಂದ ಕಡೆಯವರೆಗೂ ಒಂದೇ ನಾಗಾಲೋಟದಿಂದ ಓಡುತ್ತದೆ" (೫೬೨) ಎನ್ನುತ್ತಾರೆ. ಮತ್ತೆ ಈ ಶ್ಲಾಘನೆ : "ಪಂಪನ ದಿವ್ಯಶಕ್ತಿಯನ್ನು ವರ್ಣಿಸುವವನು ಏನು ವರ್ಣಿಸುವನು ?"

ಪಂಪನ ಶಕ್ತಿಗೆ ಅನೇಕ ಪ್ರಸಂಗಗಳನ್ನು ನಿದರ್ಶಿಸಿದ್ದಾರೆ 'ಶ್ರೀ'. ಶಿಶುಪಾಲನ ಕೋಪಕ್ಕೆ ಸಂಬಂಧಿಸಿದ ಎಂಟು ಪದ್ಯಗಳನ್ನು (vi. ೪೨–೪೯) ಪೂರ್ಣವಾಗಿ ಉದ್ಧರಿಸಿದ್ದಾರೆ. "ಅಂತೂ ಅರಿಕೇಸರಿ ಈಶ್ವರ, ವಿಷ್ಣು, ಅರ್ಜುನ, ರಾಮ – ಸರ್ವವೂ ಅವನೇ ! ಅಭೇದವಾದ !" (೫೪೮) ಎಂದು ಅಚ್ಚರಿಪಟ್ಟು, "ಅರಿಕೇಸರಿಯು ದಾಕ್ಷಿಣ್ಯದಲ್ಲಿ ಭಾರತದ ಕವಿ ಜಾರಿದನು : (ಕಣ್ಣು ಬಿಟ್ಟುಕೊಂಡೇ ಜಾರಿರುವನು)" ಎಂದು ಟೀಕಿಸಿದ್ದಾರೆ. "ಉಂಡದ್ದು ಬಂತು ಸುಭದ್ರೆಗೆ : ನಮೆದದ್ದು ಬಂತು ದ್ರೌಪದಿಗೆ – ನ್ಯಾಯ !" ಎಂಬ ಕಟಕಿಯೂ ಉಂಟು.

ಕರ್ಣಭೇದನಕ್ಕೆ ಸಂಬಂಧಿಸಿದ ಭಾಗವನ್ನು ಕುರಿತು 'ಶ್ರೀ' ಹೇಳುತ್ತಾರೆ : "ಇದಲ್ಲವೆ ಮಹಾಕವಿಯ ಬರವಣಿಗೆ ! ತಿಳಿಯಾದ ಕನ್ನಡ ಶೈಲಿ, ಗಂಭೀರ ಭಾವ ಪ್ರವಾಹ, ಒಂದು ಮಾತು ಹೆಚ್ಚಿಲ್ಲದ ವಾಕ್ಸಂಯಮ, ಸ್ವಾಭಾವಿಕತೆಯನ್ನು ಸ್ಪಷ್ಟ ವಾಗಿ ಕಂಡ ಕಲ್ಪನಾದೃಶ್ಯ; ಮೈತ್ರಿಯು, ಸ್ವಾಮಿಭಕ್ತಿಯು, ಧರ್ಮನಿಷ್ಠೆಯು, ಸ್ವಾರ್ಥತ್ಯಾಗದ ಪರಾಕಾಷ್ಠೆ – ಈ ಪಂಪನ ಕರ್ಣನ ಮುಂದೆ ವಿಕ್ರಮಾರ್ಜುನನೇನು ? ಕಡೆಗೆ ಕೃಷ್ಣನೂ ಏನು ?" (೫೫೮).

ಪಂಪನ ದುರ್ಯೋಧನ ಪಾತ್ರವನ್ನು ಕುರಿತ 'ಶ್ರೀ'ಯವರ ಉಕ್ತಿ : "ಮಹಾಕವಿಗಳ ಕೈಯಲ್ಲಿ ಆಗುವುದೇ ಹೀಗೆ – ಭಗವಂತನಿಗೂ ಹೀಗೆಯೇ ಎಂದು ತಿಳಿದವರು ಹೇಳುತ್ತಾರೆ – ಪಾಪಿಗಳಲ್ಲಿ ಗುಣಾನ್ವೇಷಣ, ಕನಿಕರ, ದಯೆ" (೫೬೨). "ಭಾರತದ ಸಾರಾಂಶವನ್ನು ಹೇಳುವಾಗಲೂ ಮೊದಲು ದುರ್ಯೋಧನ, ಆಮೇಲೆ ಕರ್ಣ. (ಕೃಷ್ಣನ ಹೆಸರೇ ಇಲ್ಲ !)" ಎಂಬುದನ್ನು ಗಮನಿಸಿದ್ದಾರೆ 'ಶ್ರೀ'.

ಪೊನ್ನನನ್ನು ಕುರಿತು ಬರೆಯುವಾಗ, ಪಂಪನ ವಿಷಯದಲ್ಲಿ ಅವನಿಗಿದ್ದ ಸ್ಪರ್ಧಾಭಾವನೆಯನ್ನು ಎರಡು ಕಡೆ ಎತ್ತಿಹೇಳಿದ್ದಾರೆ 'ಶ್ರೀ'. ಚಾವುಂಡರಾಯ ಪುರಾಣದಲ್ಲಿ ಬರುವ ಆದಿಪುರಾಣದ ಭಾಗ "ಪಂಪನ ಗ್ರಂಥದ ಸಾರಾಂಶದಂತೆ ಕಾಣುತ್ತದೆ; ಪದಸರಣಿ ಅದನ್ನು ಹಿಂಬಾಲಿಸುವಂತೆ ತೋರುತ್ತದೆ" (೫೮೯) ಎಂದಿದ್ದಾರೆ. ಅವರ ಸೂಕ್ಷ್ಮದೃಷ್ಟಿಗೆ ಇಂಥ ಮಾತುಗಳು ಸಾಕ್ಷಿ.

ನಾಗವರ್ಮನ 'ಕಾದಂಬರಿ' ಬಾಣಕೃತಿಯ "ಅಕ್ಷರಶಃ ಭಾಷಾಂತರವಲ್ಲ" ಎಂದಿರುವುದು ಸರಿ. ಉದಾಹರಣೆಯಾಗಿ ಬಾಣ ಕಾದಂಬರಿಯ ಒಂದು ಭಾಗವನ್ನು ಕೊಟ್ಟು, ನಾಗವರ್ಮನ ಅನುವಾದವನ್ನೂ ಕಾಣಿಸಿದ್ದಾರೆ 'ಶ್ರೀ'. ಇದು 'ಕರ್ನಾಟಕ ಕಾದಂಬರಿ'ಯ ಸಮಂಜಸವಾದ ವಿಮರ್ಶೆ : "ಅತಿ ಲಂಬಿಸಿದ ವರ್ಣನಾಭಾಗಗಳನ್ನು ಬಿಟ್ಟು, ಎಲ್ಲ ಸಂಗ್ರಹಿಸಿ, ಭಾವರಸಗಳನ್ನು ಪ್ರುಷ್ಟೀಕರಿಸಿ, ವಾಕ್ಯಗಳನ್ನು ಪದ್ಯದ ಹದಕ್ಕವಳಡಿಸಿ, ಕಥೆಯನ್ನು ಸಾಧ್ಯವಾದ ಮಟ್ಟಿಗೆ ಎದ್ದು ಕಾಣುವಂತೆ ಮಾಡಿ. ಪಾತ್ರಗಳ ವಿಮರ್ಶನವನ್ನು ಮನಸ್ಸಿಗೊತ್ತಿ. ಸಂಸ್ಕೃತ ಸಮಾಸಗಳಲ್ಲಿ ಪ್ರೌಢಿಮೆಯನ್ನು ತೋರಿದರೂ ಕನ್ನಡದ ಅಂದವನ್ನು ಕೆಡಿಸದೆ – ಎಲ್ಲಕ್ಕೂ ಹೆಚ್ಚಾಗಿ ಛಂದಸ್ಸಿನ ಕವಿತಾವರಣಕ್ಕೆ ತಿರುಗಿಸಿ ಅಪೂರ್ವಕಾಂತಿಯನ್ನು ಕೊಟ್ಟು, ನಾಗವರ್ಮನು ಕನ್ನಡದ ಮೊದಲನೆಯ ಪ್ರಣಯ ಕಾವ್ಯವನ್ನು ಕನ್ನಡಿಗರಿಗೆ ಕೊಟ್ಟಿದ್ದಾನೆ (೫೯೮)" ಇನ್ನೊಂದೆಡೆ ಈ ಹೇಳಿಕೆಯಿದೆ : "... ಕನ್ನಡದ ಸೌಲಭ್ಯದಲ್ಲಿ ಕಾದಂಬರಿ ನಾಗವರ್ಮನ ನುಡಿಪಡಗಿನಲ್ಲಿ ನಿರ್ದೋಷವೂ ಶ್ರೇಷ್ಠವೂ ಆಗಿದೆ" (೬೦೦).

ಮುಂದೆ ರನ್ನ ಕಾಣಿಸಿಕೊಳ್ಳುತ್ತಾನೆ: 'ಶ್ರೀ'ಯವರ ಲೆಕ್ಕಣಿ ಇನ್ನೊಮ್ಮೆ ಗರಿಗಟ್ಟಿಕೊಳ್ಳುತ್ತದೆ. "ಜೈನಕವಿಗಳಲ್ಲಿ ಒಟ್ಟಿನಮೇಲೆ ಈ ಇಬ್ಬರ – ಪಂಪ. ರನ್ನರ – ಭುಜ ಸಮಕ್ಕೆ ಬರುವವರಿನ್ನು ಯಾರು ? ನಾಗಚಂದ್ರನೆ ? ಜನ್ನನೆ ? ರತ್ನಾಕರನೆ ?" (೬೧೩) ಎಂದು ಅವರು ಸವಾಲು ಹಾಕುತ್ತಾರೆ. (ನಾಗಚಂದ್ರಾದಿಗಳನ್ನು ಇಲ್ಲಿ ಎಳೆದು ತರಬೇಕಾಗಿರಲಿಲ್ಲ).

'ಗದಾಯುದ್ಧ'ವನ್ನು ಕುರಿತು "ನಾಟಕವಾಗಿ ಬರೆದ ಗ್ರಂಥ ಚಂಪುವಾಗಿ ಮಾರ್ಪಟ್ಟಿರಬಹುದು" (೬೧೨) ಎಂದು ಅಭಿಪ್ರಾಯಿಸುತ್ತಾರೆ 'ಶ್ರೀ'. ಪಂಪನಿಂದ ಉಪಕೃತನಾಗಿಯೂ ರನ್ನ ಮೆರೆದಿರುವ ಸಾಧನೆಯನ್ನು ಅವರು ಹೀಗೆ ತಿಳಿಸುತ್ತಾರೆ : "ಸಾಹಸಭೀಮ ಎಂಬುದು ಪಂಪನ ಮಾತು : ಆತನ ವಿಕ್ರಮಾರ್ಜುನ ವಿಜಯದ ಗದಾಯುದ್ಧದ ಭಾಗವನ್ನು ತಳಹದಿಯಾಗಿಟ್ಟುಕೊಂಡು. ಆತನ ಸ್ಫೂರ್ತಿಯನ್ನೂ, ವಾಗ್ಪೋರಣೆಯನ್ನೂ ಹೃದಯದಲ್ಲಿ ತುಂಬಿಕೊಂಡು. ಆತನು ಶ್ರುತಿ ಎತ್ತಿದ ಚರಣಗಳನ್ನು ಆಲಾಪನೆ ಮಾಡುತ್ತ, ತನ್ನ ಸರಸ್ವತೀ ಪ್ರಸನ್ನ ಶಕ್ತಿ ಉಕ್ಕಿ. ರನ್ನನು ಕನ್ನಡ ಸಾಹಿತ್ಯದ ಅತ್ಯುತ್ಕೃಷ್ಟವೆಂದು ಹೇಳಬಹುದಾದ ಕಾವ್ಯವನ್ನು ನಿರ್ಮಿಸಿದ್ದಾನೆ. ವಸ್ತುವಿನ್ಯಾಸ, ಸಂಭಾಷಣೆಯ ನಾಟಕೀಯತೆ, ರಸಪ್ರವಾಹ, ಗಂಡುತನದ ಮಹಾಶೈಲಿ, ಮಿತವರ್ಣನೆ. ಸಂಸ್ಕೃತ-ಕನ್ನಡದ ಹಿತಮೈತ್ರೀ ಸಮ್ಮೇಳನ – ಇವು ಅತಿ ರಮಣೀಯವಾಗಿವೆ. ಗ್ರಂಥದಲ್ಲಿ ಅತಿ ಲಂಬಿಸುವುದಾಗಲಿ, ಬರಿಯ ವಾಗಾಡಂಬರವಾಗಲಿ, ಶುಷ್ಕ ಭಾಗಗಳಾಗಲಿ ಇಲ್ಲ" (೬೧೨). ಆದರೆ 'ಗದಾಯುದ್ಧ'ದ ಚಾರಿತ್ರಿಕಾಂಶಗಳ ತೊಡಕನ್ನು 'ಶ್ರೀ' ಗುರುತಿಸಿದ್ದಾರೆ. ಪುನಃ ಅವರ ಪ್ರಶಂಸೆ : "ಪಂಪನು ಕಗ್ಗಲ್ಲಿನಿಂದ ಅದ್ಭುತ ವಿಗ್ರಹವನ್ನು ಕಡೆದು ಮಹೋನ್ನತಿಯನ್ನೂ ಶಕ್ತಿಯನ್ನೂ

ತೋರಿಸಿದರೆ, ರನ್ನನು ಸಣ್ಣ ವಿಗ್ರಹವನ್ನು ಸುಂದರವಾದ ಸೂಕ್ಷ್ಮಕಲಾಕರ್ಮದಲ್ಲಿ ತೋರಿ, ಉನ್ನತಿಯನ್ನೂ ಶಕ್ತಿಯನ್ನೂ ಬಿಡದೆ, ಪಂಪನಿಗೆ ಸರಿತೂಕವಾಗಿ, ಕಡೆಗೆ ಒಂದು ಕೈ ಮೇಲೋ ಎಂಬಂತೆ ಸಾಹಸಭೀಮವಿಜಯದಲ್ಲಿ ಕಾಣುವನು" (೬೧೩). ರನ್ನನನ್ನು ಕುರಿತ 'ಶ್ರೀ' ಅವರ ವಿಮರ್ಶೆಯಲ್ಲಿ ಉತ್ಪ್ರೇಕ್ಷೆಯಿರುವುದನ್ನು ಯಾರೂ ಕಂಡುಕೊಳ್ಳಬಹುದು. ಪಂಪನ ಮಾರ್ಮಿಕತೆಗಿಂತ ರನ್ನನ ಅಬ್ಬರವೆ ನವೋದಯ ಕಾಲದಲ್ಲಿ ಹೆಚ್ಚು ಆಕರ್ಷಕವಾಗಿದ್ದಂತೆ ತೋರುತ್ತದೆ.

"ಸಾಹಸ ಭೀಮವಿಜಯದಲ್ಲಿ ಎಲ್ಲಕ್ಕೂ ಆಶ್ಚರ್ಯಕರವಾದ ವಿಶೇಷವೆಂದರೆ ದುರ್ಯೋಧನ ಪಾತ್ರದಲ್ಲಿ ರನ್ನನ ಸಹಾನುಭೂತಿ : ನೀತಿದೃಷ್ಟಿಯಿಂದಲ್ಲ, ಕರುಣ ದೃಷ್ಟಿಯಿಂದ" (೬೧೫) ಎನ್ನುವ 'ಶ್ರೀ'ಯವರು, "ತನ್ನ ದುರ್ಯೋಧನನ ಗುಣ ವಿಮರ್ಶೆಯಲ್ಲಿ ಭೀಮನನ್ನು ಇಳಿಸಿಲ್ಲ: ಆದರೆ ದುರ್ಯೋಧನನ್ನು ಏರಿಸಿರುವನು" ಎಂದು ಹೇಳುವುದು ಯುಕ್ತವಾಗಿದೆ. 'ಮಹಾನುಭಾವ'ನಾದ ದುರ್ಯೋಧನನೆ ಈ ಕಾವ್ಯದ ನಿಜವಾದ ನಾಯಕ ಎಂದು ಅವರ ಗ್ರಹಿಕೆ. "ಮುಡಿದ ದ್ರೌಪದಿಯ ಶೃಂಗಾರವರ್ಣನೆ – ಇದು ಇಲ್ಲಿ ಬೇಕೆ ?" ಎಂಬ ಆಕ್ಷೇಪಣೆಯೂ ಒಂದು ಕಡೆ ಉಂಟು.

'ಅಜಿತಪುರಾಣ'ದ ಬಗೆಗೆ 'ಶ್ರೀ' ಹೇಳುತ್ತಾರೆ : "ಮತಪ್ರಕ್ರಿಯೆಗಳಿಂದಲೂ, ಪುರಾಣ ಪ್ರತಿಪಾದನಕ್ರಮದಿಂದಲೂ, ಕವಿಗೆ ಪ್ರತಿಭಾಪ್ರದರ್ಶನಕ್ಕೆ ಅವಕಾಶ ಹೆಚ್ಚು ಸಿಕ್ಕಿಲ್ಲ : ಆದರೂ ವೈರಾಗ್ಯವನ್ನು ಬೋಧಿಸುವ ಭಾಗದಲ್ಲಿ ಕೆಲವು ಪದ್ಯಗಳು ಕನ್ನಡ ಸಾಹಿತ್ಯದಲ್ಲಿ ಎಣೆಯಿಲ್ಲದುವು ಎಂದು ಹೇಳಬಹುದು "(೬೦೭). "ಒಟ್ಟಿನ ಮೇಲೆ ಈ ಗ್ರಂಥದಲ್ಲಿ ಕವಿಗಿಂತಲೂ ಶಾಸ್ತ್ರಜ್ಞನು ಹೆಚ್ಚು ಕಾಣಿಸಿಕೊಳ್ಳುವನು" (೬೦೮) ಎಂಬುದು ದಿಟ.

೧೧ನೆಯ ಶತಮಾನದ ಕವಿಗಳಾಗಿ ಶ್ರೀಧರಾಚಾರ್ಯ ಮತ್ತು ಶಾಂತಿನಾಥ ರನ್ನು 'ಶ್ರೀ' ಉಲ್ಲೇಖಿಸಿದ್ದಾರೆ.

೪

ಮುಂದೆ ಕಳಚುರ್ಯ-ಹೊಯ್ಸಳರ ಕಾಲವನ್ನೆತ್ತಿಕೊಂಡು, "೧೨ನೆಯ ಶತಮಾನದಲ್ಲಿ ಕನ್ನಡದ ಎರಡನೆಯ, ಬೆಳ್ಳಿಯ ಬೆಳೆ ಬಂದಿತು ಜೈನಸಾಹಿತ್ಯದಲ್ಲಿ" (೬೨೭) ಎನ್ನುತ್ತಾರೆ 'ಶ್ರೀ'. ("ಈ ಶತಮಾನದ ನಡುವಣ ಭಾಗದಲ್ಲಿ ಆರಂಭವಾದ ವೀರಶೈವ ಸಾಹಿತ್ಯವನ್ನು ಗಮನಿಸಿದರೆ, ಅದೂ ಒಂದು ಹಸನಾದ ಚಿನ್ನದ ಬೆಳೆಯೇ ಆಗುವುದು" ಎಂದೂ ಅವರ ಹೇಳಿಕೆ. ಆದರೆ ಈ ಚಿನ್ನದ ಬೆಳೆಯನ್ನು ವಿಮರ್ಶಿಸಲು ಅವರಿಗೆ ಅವಕಾಶವಾಗಿಲ್ಲ.) "ಒಟ್ಟಿನ ಮೇಲೆ ಈ ಕಾಲದ ಸಾಹಿತ್ಯ ಪಂಪ

ಯುಗದ ಸಾಹಿತ್ಯದ ಶಿಕ್ಷಾನುಸಾರಿ ಎಂದು ಹೇಳಬಹುದು : ಎರಡನೆಯ ಪಂಕ್ತಿಯ, ಅನುಕರಣ ಸಾಹಿತ್ಯ" ಎಂಬುದು ಅವರ ನಿಲುವು.

ನಾಗಚಂದ್ರನನ್ನು ಈ ಯುಗದ ಆಚಾರ್ಯಕವಿ ಎಂದು ಕರೆಯುವ 'ಶ್ರೀ', ಅವನ ಕೃತಿಗಳ ಮಿತಿಯನ್ನು ಹೀಗೆ ಗುರುತಿಸುತ್ತಾರೆ: "ಈತನ ಗ್ರಂಥಗಳಲ್ಲಿ ಕ್ಷಾತ್ರಕ್ಕಿಂತಲೂ ಭಕ್ತಿ ವೈರಾಗ್ಯಗಳು ಹೆಚ್ಚಾಗಿ ಹರಿಯುತ್ತವೆ. ಮಲ್ಲಿನಾಥ ಪುರಾಣ, ರಾಮಚಂದ್ರಚರಿತ ಪುರಾಣಗಳು – ಪುರಾಣಗಳು: ರಾಮಾಯಣದಲ್ಲಿ ಬರಬಹುದಾಗಿದ್ದ ಮನುಷ್ಯಲೋಕ ಜೀವನ ಅಷ್ಟೊಂದು ಕಾಂತಿಯಿಂದ ಪ್ರತಿಬಿಂಬಿಸಿಲ್ಲ. ಜೀವನವೆಲ್ಲಾ ಶಾಂತರಸದ ಮಂಜಿನ ಮೂಲಕ ಈತನ ಕಣ್ಣಿಗೆ ಕಾಣಿಸುತ್ತದೆ" (೬೨೮).

'ಮಲ್ಲಿನಾಥ ಪುರಾಣ'ದಲ್ಲಿ ಬರುವ ಜಿನಸ್ತುತಿ "ಅಭಿನವ ಪಂಪನ ಆತ್ಮಸಾರ" ಎನ್ನುತ್ತಾರೆ 'ಶ್ರೀ' : ಅಲ್ಲಿಂದ ಮುಂದಿನದು ಎಲ್ಲ ಜಿನಪುರಾಣಗಳಲ್ಲೂ ಇರುವಂಥ 'ಮಗ್ಗ' ಎಂದು ಟೀಕಿಸುತ್ತಾರೆ. (ಜಿನಾಷ್ಟಕ ಪೂರ್ತಿ ಉದ್ಧೃತವಾಗಿದೆ).

'ಮಲ್ಲಿನಾಥ ಪುರಾಣ'ಕ್ಕೂ ಪಂಪರಾಮಾಯಣಕ್ಕೂ ಇರುವ ಅಂತರವನ್ನು 'ಶ್ರೀ' ಹೀಗೆ ಸಮರ್ಪಕವಾಗಿ ಹೇಳುತ್ತಾರೆ: "ಮೊದಲನೆಯದು ಗೀತಗುಣವುಳ್ಳದ್ದಾದರೆ (Lyric), ಇದು ಮಹಾಕಾವ್ಯಗುಣವುಳ್ಳದ್ದಾಗಿದೆ (Lyric), ಮತ್ತು ಜಿನಪುರಾಣವೂ ಆಗಿದೆ (Religious Epic). ಜೈನಸಂಪ್ರದಾಯದಂತೆ ರಾಮಾಯಣ ಕಥೆ ಉತ್ಕೃಷ್ಟವಾಗಿ ಇದರಲ್ಲಿ ಪ್ರತಿಪಾದನೆಯಾಗಿದೆ" (೬೪೦).

ವೈದಿಕ-ಜೈನ ಸಂಪ್ರದಾಯಗಳ ಮುಖ್ಯ ಭೇದಗಳನ್ನು 'ಶ್ರೀ'ಯವರು ಪಟ್ಟಿಹಾಕಿ, ಹೀಗೆ ಹೇಳುತ್ತಾರೆ : "ಈ ವ್ಯತ್ಯಾಸಗಳನ್ನು ಮಾಡಿ ಜೈನಸಿದ್ಧಾಂತಿಗಳು ತಮ್ಮ ಧಾರ್ಮಿಕ ದೃಷ್ಟಿಯಿಂದಲೂ, ಚಾರಿತ್ರಿಕ ದೃಷ್ಟಿಯಿಂದಲೂ ವಾಸ್ತವ ದೃಷ್ಟಿಯಿಂದಲೂ ವಾಲ್ಮೀಕಿ ರಾಮಾಯಣವನ್ನು ತಿದ್ದಿದಂತಿವೆ. ಆ ವೈದಿಕ ರಾಮಾಯಣದ ಮೂಲಗಳನ್ನು ಹುಡುಕುವುದು ಇಲ್ಲಿ ಅಪ್ರಕೃತ. ರಾಮಾಯಣದ ಪುರಾತನ ಸಂಶೋಧಕರಿಗೆ ವೈದಿಕ ಬೌದ್ಧ ಜೈನ ಸಂಪ್ರದಾಯಗಳೂ, ಗ್ರೀಕ್‌ಸಂಪರ್ಕಗಳೂ ವಿಚಾರ ಕ್ಷೇತ್ರಗಳು" (೬೪೭).

ಕನ್ನಡಕ್ಕೆ ದುರಂತ ದೃಷ್ಟಿಯನ್ನು ಪ್ರವೇಶಗೊಳಿಸಿದ್ದು 'ಶ್ರೀ'ಯವರ ಒಂದು ಘನವಾದ ಕೊಡುಗೆ. ನಾಗಚಂದ್ರನ ರಾವಣನನ್ನು ಅವರು ದುರಂತ ಪಾತ್ರವೆಂದು ಪರಿಗಣಿಸುತ್ತಾರೆ. (ಪಂಪನ ಕರ್ಣನನ್ನು ಮತ್ತು ಪಂಪ ರನ್ನರ ದುರ್ಯೋಧನನನ್ನು ಕೂಡ ಅವರು ಇದೇ ದೃಷ್ಟಿಯಿಂದ ಕಂಡಿದ್ದಾರೆ). ಉಪರಂಭೆಯ ಪ್ರಕರಣವನ್ನು ಕುರಿತ ಈ ಹೇಳಿಕೆಯನ್ನು ನೋಡಬಹುದು : "ಮಹಾಕಾವ್ಯಗಳಲ್ಲಿ ಸಮಯ ಬಂದಾಗ ಹೀಗೆ ಮಧ್ಯೆ ಉಪಾಖ್ಯಾನ ರೀತಿಯಲ್ಲಿ ಪೂರ್ವಚರಿತ್ರೆಯನ್ನು ತಿಳಿಸುವುದು ಮಹಾಕವಿಗಳ ಕ್ರಮ. ಇಲ್ಲಿ ರಾವಣನ, ಮಹಾನುಭಾವತೆ ಎದ್ದು ಕಾಣುವುದು.

ಇಂತಹವನೂ ಕರ್ಮಕ್ಕೆ – ಮಾನವೀಯ ನಿಸರ್ಗ ಪಾಪವಾಸನೆಗೆ – ಹೊರಗಲ್ಲ ವೆಂಬುದೇ ಸಂಸಾರದ ರುದ್ರನಾಟಕದ ಮರ್ಮ. ಒಳಗೆ ಕರ್ಮವಿಪಾಕ – ಹೊರಗೆ ವಿಧಿವಿಲಾಸ – ಈ ಕೂಟ ಹೋರಾಟದಲ್ಲಿ ಉದಾತ್ತನೂ ನೀಚನಾಗಿ 'ಪಾತಕಿ' ಯಾಗುವನು – ಕೆಳಗೆ ಬೀಳುವನು. ಹೊರಗೆ ನೋಡಿ ಶಪಿಸುವರು ಹಲವರು – ಒಳಗೆ ನೋಡಿ ಮರುಗುವರು ಕೆಲವರು – ಎರಡನ್ನೂ ಸಮತೂಕ ಮಾಡುವರು ಉದಾರ ಹೃದಯರೂ, ಪ್ರಾಜ್ಞರೂ ಆದ ಮಹಾಕವಿಗಳು – ಪಂಪ ರನ್ನ ನಾಗಚಂದ್ರ ನಂತಹವರು" (೬೬೦).

ರಾವಣನ ಪರಿವರ್ತನೆಗೆ ಸಂಬಂಧಿಸಿದ ಪದ್ಯಗಳನ್ನು 'ಶ್ರೀ'ಯವರು ಉದ್ಧರಿಸಿ, ಹೇಳುತ್ತಾರೆ: "ಇಂಥ ಬರವಣಿಗೆ ಕನ್ನಡ ಸಾಹಿತ್ಯದಲ್ಲಿ ಅಪೂರ್ವ; ಪದ, ಅರ್ಥ, ಭಾವ, ರಸ, ಮನುಷ್ಯ ಹೃದಯಜ್ಞಾನ, ಔದಾರ್ಯ, ಶೀತೆಯ. ರಾವಣನ ಉದಾತ್ತ ಚಿತ್ರ – ಎಲ್ಲಕ್ಕೂ ಮೇಲೆ ಧರ್ಮದೃಷ್ಟಿ; ಒಂದು ನುಡಿ. ಬಿಡದ ಹಾಗೆ, ಒಂದು ನುಡಿ ಸೇರಿಸದ ಹಾಗೆ ಕನ್ನಡದ ಸಂಸ್ಕೃತದ ಶಬ್ದವಿನ್ಯಾಸ. ಸರಳ, ಗಂಭೀರ, ನಾಟಕೀಯ ಶೈಲಿ, ವೃತ್ತ ಕಂದ ವಚನಗಳ ಸಮಕಟ್ಟು! ಎಲ್ಲಾ ಹದಿಮೂರೇ ಪದ್ಯ! ನಮ್ಮ ಕವಿಗಳು ಸಾಮಾನ್ಯವಾಗಿ – ಉತ್ತಮ ಕವಿಗಳು ಕೂಡ – 'ಕಯ್ಯಿಂದ ಬಿತ್ತು, ಚೀಲವೆಲ್ಲಾ ಬಿತ್ತಬೇಡ' ಎಂಬ ಗ್ರೀಕ್ ಬುದ್ಧಿವಾದ ವನ್ನು ಮರೆಯುತ್ತಾರೆ. ಒಳಕಟ್ಟು, ಕಟ್ಟಡ, ಭಾವ ಚೆನ್ನಾಗಿಯೇ ಇರುತ್ತವೆ – ಆದರೆ ಕಾಡಿನೊಳಗಣ ಗುಪ್ತಗಾಮಿನಿಯಂತೆ, ತೆರೆದು, ಸೋಸಿ, ಸಂಗ್ರಹಿಸ ಬೇಕಾಗುತ್ತದೆ. ಇಂತಹ ಕಾವ್ಯಸ್ಥಾನಗಳಲ್ಲಿ ನಮ್ಮವರು ಯಾರಿಗೂ ಕಡಿಮೆಯಲ್ಲ: ಇಂತಹ ಕಾವ್ಯಘಟ್ಟಗಳೇ ನಮಗೆ ಹೆರರ ಗೌರವವನ್ನು ತರತಕ್ಕುವು: ಉತ್ತಮ ಕವಿಗಳಲ್ಲಿ ಕೂಡ ಇರುವ ಚರ್ವಿತ ಚರ್ವಣಗಳಲ್ಲ, ಶಬ್ದಜಾಲವಲ್ಲ, ಅತಿಯಾದ ಉಕ್ತಿ ಚಮತ್ಕಾರಗಳಲ್ಲ, ಸಂಪ್ರದಾಯದ ಸಂಕೋಲೆಗಳಲ್ಲ, ಅಗ್ಗದ ನೀತಿಯಲ್ಲ: ಇಲ್ಲಿ ಅವರು ಕಾಲಧರ್ಮವನ್ನನುಸರಿಸುತ್ತಾರೆ; ಕಾವ್ಯಸನಾತನಧರ್ಮವನ್ನಲ್ಲ" (೬೬೫). ಇಲ್ಲಿ ಬಹುಪಾಲು ಕನ್ನಡ ಸಾಹಿತ್ಯದ ದೌರ್ಬಲ್ಯವನ್ನು 'ಶ್ರೀ' ಸೂಚಿಸಿರುವುದು ಗಮನಾರ್ಹ.

೫

'ಶ್ರೀ'ಯವರು ಪ್ರತಿಭಾನ್ವಿತ ಸೃಜನಶೀಲ ಲೇಖಕರು. ಆದುದರಿಂದ, ಅವರ ಸಾಹಿತ್ಯಚರಿತೆಯ ಬರವಣಿಗೆ ಕವಿಮನೋಧರ್ಮದಿಂದ ದೀಪ್ತವಾಗಿದೆ; ಎಷ್ಟೋ ಕಡೆ ಉಪಮೆ ರೂಪಕಗಳಿಂದ ಕೂಡಿ ಹೃದ್ಯವಾಗಿದೆ. ಅದರಲ್ಲಿ ಯಾಂತ್ರಿಕತೆಯಿಲ್ಲ. ಜೀವಸ್ಪಂದನವಿದೆ. ನಿದರ್ಶನಾರ್ಥವಾಗಿ, ಕೆಲವು ಭಾಗಗಳನ್ನಿಲ್ಲಿ ಎತ್ತಿ ಕೊಡ ಬಹುದು:

"ನಮ್ಮ ಸಾಹಿತ್ಯವನ್ನು, ನಮ್ಮ ಕನ್ನಡನಾಡಿನ ಏರುತಗ್ಗಿನ ಘಟ್ಟಗಳಲ್ಲಿ ನುಗ್ಗಿ ಬರುವ ಕಾವೇರೀ ನದಿಗೆ ಹೋಲಿಸಬಹುದು. ಅದರಂತೆಯೇ, ನಮ್ಮ ಸಾಹಿತ್ಯದ ಮೂಲವೂ ಕಾಡಿನಲ್ಲಿ ಅಡಗಿಹೋಗಿದೆ. ಆ ಬಳಿಕ ಉಪನದಿಗಳು ಒಂದೊಂದಾಗಿ ಸೇರುವಂತೆ, ಜೈನ ಸಾಹಿತ್ಯ ಪ್ರವಾಹವೂ, ವೀರಶೈವ ಸಾಹಿತ್ಯ ಪ್ರವಾಹವೂ, ಬ್ರಾಹ್ಮಣ ಸಾಹಿತ್ಯ ಪ್ರವಾಹವೂ, ಒಂದಾದ ಮೇಲೊಂದು, ಒಂದರ ಕೂಡ ಮತ್ತೊಂದು ಬಂದು ಮಿಳಿತವಾಗಿ, ಮೂರು ಬಣ್ಣದ ನೀರುಳ್ಳ ದೊಡ್ಡ ಹೊಳೆಯಾಗಿದೆ. ಕಡೆಗೆ ಈಗ ಇಂಗ್ಲಿಷ್‌ಸಾಹಿತ್ಯ ವೃಷ್ಟಿಯಿಂದ ಹುಚ್ಚು ಹೊಳೆಯಾಗಿ ಮೊರೆಯುತ್ತ, ಬಂಡೆಗಳ ನಡುವೆ ನೂರು ಕವಲಾಗಿ ಒಡೆಯುತ್ತ ಜನ್ಮಭೂಮಿಯ ಘಟ್ಟಗಳನ್ನು ತೊರೆದು ದಿವ್ಯವೇಗದೊಡನೆ ಕೆಳಕ್ಕೆ ಧುಮುಕಿ, ಸ್ವತಂತ್ರವಾಗಿ, ವಿಸ್ತಾರವಾಗಿ, ಬಯಲುನಾಡಿನಲ್ಲಿ ಪೈರ ಸಮೃದ್ಧಿಯನ್ನು ಪಡೆದು ವಿಹಾರ ಮಾಡಲು ತವಕಿಸುತ್ತಿದೆ" (೪೭೧).

"ಆ ಆರಂಭಕಾಲದ ಗ್ರಂಥಗಳಲ್ಲಿ, ಸಿಕ್ಕಿರುವ ಒಂದು ಗ್ರಂಥವನ್ನು, ಅದರಲ್ಲಿರುವ ಕೆಲವು ಉದಾಹರಣೆಗಳ ಮುರುಕುಗಳನ್ನು, ಬಿಟ್ಟರೆ ಮಿಕ್ಕುವೆಲ್ಲವೂ ಮುಳುಗಿಯೇ ಹೋದುವೆ? ... ಚರಿತ್ರಕಾರರೂ, ಕಾವ್ಯರಸಿಕರೂ, ಬಹಳ ಕುತೂಹಲದಿಂದ ಈ ಕತ್ತಲೆಯ ತೆರೆ ಎದ್ದೀತೆ ಎಂದು ಅತ್ತಕಡೆಯೇ ಕಣ್ಣಾಗಿರುವರು" (೪೯೦).

"ಆದಿಪುರಾಣದಲ್ಲಿ ಮಾಣಿಕ್ಯಜಿನೇಂದ್ರ ಬಿಂಬವನ್ನು ಕಡೆದು, ದಿವ್ಯಚೈತ್ಯವನ್ನು ಕಟ್ಟಿ ಪಂಪನ ಕೈ ಸೋಲಲಿಲ್ಲ: ಒಡನೆಯೇ ಮಹಾಭಾರತದ ಗಾಂಡೀವವನ್ನು ಬಾಗಿಸಿ, ಕನ್ನಡ ಕಲಿಗಳ ಕ್ಷಾತ್ರತೇಜಸ್ಸನ್ನೂ, ಕನ್ನಡ ರಾಯರ ಸದ್ಗುಣಾವಳಿಗಳನ್ನೂ, ಕನ್ನಡನಾಡಿನ ಅಂದಚೆಂದಗಳನ್ನೂ ಅದರಲ್ಲಿ ಹೂಡಿ, ತಿಳಿಯಾದ, ಎಲ್ಲರೂ ತಿಳಿಯಬಹುದಾದ, ತಿರುಳುಗನ್ನಡದ ಭಾರತ ಭೂಮಿಯ ಅತ್ಯುತ್ತಮವಾದ ಇತಿಹಾಸವನ್ನು ಕನ್ನಡಿಗರಿಗೆ ಕಾಣಿಕೆಯಾಗಿ ಒಪ್ಪಿಸಿದನು. ಜಿನಪಾದಪದ್ಮವನ್ನು ಹೃದಯದಲ್ಲಿಟ್ಟು, ಸಂಸಾರ ಸಮುದ್ರದ ಹುಚ್ಚು ತೆರೆಗಳನ್ನು ಅಡಗಿಸಿ, ಮುಕ್ತಿ ಸೋಪಾನವನ್ನು ಏಕಮನಸ್ಕನಾಗಿ ಹತ್ತಿದನು – ಅಲ್ಲ: ಇಲ್ಲ, ಧರ್ಮಸಾಮ್ರಾಜ್ಯದಿಂದ ಒಂದು ಮೆಟ್ಟಲಿಳಿದು, ಸಂಸಾರಸಾರವನ್ನು ಗಂಭೀರ ಧ್ವನಿಯಿಂದ ಲೋಕಕ್ಕೆ ಸಾರಿದನು" (೩೨೪).

"... ಕೆಲವು ಕಡೆ ಭಾರತದ ಮೇಲ್ಮಟ್ಟದಿಂದ ಕರ್ನಾಟಕದ ಹತ್ತನೆಯ ಶತಮಾನಕ್ಕೆ ನಮ್ಮನ್ನು ಕೆಡವಬಹುದು : ಚಾಳುಕ್ಯರಾಜರ ವಂಶಾವಳಿಯೂ ಇರಿವ ಬೆಡಂಗನ ಸಾಹಸಾವಳಿಗಳೂ ವೀರಕಥೆಯ ಅದ್ಭುತರಸದಿಂದ ಪ್ರಾಕ್ತನ ಚರಿತ್ರಾನ್ವೇಷಿಗಳ ಗದ್ಯ ಕಸಕ್ಕೆ ಇಳಿಯಬಹುದು" (೬೧೨).

"ಗದಾಯುದ್ಧದ ಯೌವನದ ಉತ್ಸಾಹವೂ ಕಳಕಳಿಯೂ ಕವಿತಾವೇಶವೂ ಇದರಲ್ಲಿ ಮುಳುಗುವ ಸೂರ್ಯನ ಕಾಂತಿಯಂತೆ ತಂಪುಗೊಂಡಿವೆ" (೬೦೮).

'ಶ್ರೀ'ಯವರ ಹಾಸ್ಯದೃಷ್ಟಿಯೂ ಅಲ್ಲಲ್ಲಿ ಮಿಂಚುತ್ತದೆ. ಉದಾಹರಣೆಗೆ: "ಪೊನ್ನನೆಂದು ಹೆತ್ತ ತಾಯಿ ಕರೆದರೆ ಕಾವ್ಯಗೌರವವು ಪುನ್ನಮಾರ್ಯನೆಂದು ಕೂಗುತ್ತದೆ; ಬೊಮ್ಮನು ಕಮಲಭವನಾಗಿ ಮಾರ್ಪಡುತ್ತಾನೆ; ಸುಮನೋಬಾಣನಿಗೆ ಬಿರುದಿನಲ್ಲೇ ಪರ್ಯವಸಾನ ..." (೪೫೭).

೬

ಮೊದಲೇ ಹೇಳಿದಂತೆ, 'ಶ್ರೀ'ಯವರ ಬರವಣಿಗೆಯಲ್ಲಿ ಮೌಲ್ಯನಿರ್ಣಯಕ್ಕಿಂತ ಮೆಚ್ಚುಗೆಯ ಪಾಲು ಅಧಿಕ. ಆದರೆ ಕೃತಿಗಳ ದೌರ್ಬಲ್ಯಗಳಿಗೆ ಅವರು ಕಣ್ಣು ಮುಚ್ಚಿಕೊಂಡಿಲ್ಲವೆಂಬುದನ್ನು ಮರೆಯಬಾರದು. ಆಧುನಿಕ ದೃಷ್ಟಿಕೋನ ಧೋರಣೆಗಳಿಂದ ಕೃತಿಗಳನ್ನು ನಿಷ್ಠುರ ವಿಮರ್ಶೆಗೆ ಗುರಿಮಾಡುವುದು ಪೊತ್ತದಲ್ಲಿ ಅವರ ಉದ್ದೇಶವಾಗಿರಲಿಲ್ಲ; ಅವರ ಬರಹದ ಕಾಲವೂ ಅದಕ್ಕೆ ಪಕ್ವವಾಗಿರಲಿಲ್ಲ.

'ಶ್ರೀ'ಯವರ ಸಾಹಿತ್ಯಚರಿತ್ರೆಯ ತರುವಾಯ ಅನೇಕ ಸಾಹಿತ್ಯಚರಿತ್ರೆಗಳು ಕನ್ನಡದಲ್ಲಿ ಬಂದಿವೆ, ಬರುತ್ತಿವೆ. ಸಹಜವಾಗಿಯೆ ಅವು ಸಾಮಗ್ರಿ, ಸಮಾಲೋಚನೆ ಎರಡರ ದೃಷ್ಟಿಯಿಂದಲೂ ಮುಂದೆ ಹೋಗಿವೆ. ಎಷ್ಟೋಕಡೆ 'ಶ್ರೀ'ಯವರು ಸಾಹಿತ್ಯಚರಿತ್ರೆಯ ರೂಪರೇಖೆಗಳನ್ನಷ್ಟೆ ಕೊಟ್ಟಿದ್ದರೆ, ಈಚಿನ ಚರಿತ್ರೆಗಳು ಅವುಗಳನ್ನು ಪೂರ್ಣಗೊಳಿಸಿವೆ.

ಕವಿಗೂ ವಾಚಕರಿಗೂ ನಡುವೆ ಸಾಹಿತ್ಯಚರಿತ್ರಕಾರ ಹೆಚ್ಚಾಗಿ ಅಡ್ಡ ನಿಲ್ಲಬಾರದು, ವಾಚಕರಿಗೆ ಕಾವ್ಯದ ನೇರವಾದ ಸಂಪರ್ಕವಿರಬೇಕು ಎಂಬುದು 'ಶ್ರೀ'ಯವರ ಭಾವನೆಯಾಗಿದ್ದಂತೆ ತೋರುತ್ತದೆ. ಆದ್ದರಿಂದಲೇ ಅವರು ಕಾವ್ಯಗಳಿಂದ ಸಮೃದ್ಧವಾಗಿ ಪದ್ಯಗಳನ್ನು ಉದ್ಧರಿಸುವುದು. ಇದರಿಂದ ಪ್ರಯೋಜನವೂ ಉಂಟು; ಅನನುಕೂಲವೂ ಉಂಟು. ಈಚಿನ ಸಾಹಿತ್ಯಚರಿತ್ರೆಗಳಲ್ಲಿ ಈ ಪ್ರವೃತ್ತಿ ಕನಿಷ್ಠ ಪ್ರಮಾಣದಲ್ಲಿ ಕಂಡುಬರುತ್ತದೆ.

ಆದರೆ ಒಂದು ಸಂಗತಿಯನ್ನು ಅಗತ್ಯವಾಗಿ ಗಮನಿಸಬೇಕು. ಈಚಿನ ಸಾಹಿತ್ಯಚರಿತ್ರೆಗಳೆಲ್ಲ ಒಂದಲ್ಲ ಒಂದು ರೀತಿಯಲ್ಲಿ, ಅಷ್ಟೊ ಇಷ್ಟೊ ಪ್ರಮಾಣದಲ್ಲಿ 'ಶ್ರೀ'ಯವರ ಸಾಹಿತ್ಯಚರಿತ್ರೆಗೆ ಋಣಿಯಾಗಿವೆ. 'ಶ್ರೀ'ಯವರ ಕೆಲವು ಹೇಳಿಕೆಗಳನ್ನು ನಾವಿಂದು ಒಪ್ಪದಿರಬಹುದು: ಆದರೂ ಅದು ತಿರಸ್ಕಾರಕ್ಕಾಗಲಿ, ಅವಜೆ ಗಾಗಲಿ ಪಕ್ಕಾಗುವುದಿಲ್ಲ. ಅವರ ಎಷ್ಟೋ ವಿಚಾರಗಳನ್ನು ಈಗಲೂ ಬದಲಿಸುವುದಾಗಲಿ, ಕದಲಿಸುವುದಾಗಲಿ ಸಾಧ್ಯವಿಲ್ಲ ಎಂಬುದೂ ಗಮನಾರ್ಹ.

'ಶ್ರೀ'ಯವರ ವಿಮರ್ಶೆ ನವೋದಯ ವಿಮರ್ಶೆಯ ಮೇಲೆ ತನ್ನ ಮುದ್ರೆಯೊತ್ತಿತ್ತೆಂಬುದನ್ನೂ ಇಲ್ಲಿ ಲಕ್ಷಿಸಬೇಕು. ಅವರ ಸಾಹಿತ್ಯಚರಿತ್ರೆಯ ಭಾಷೆ, ಪರಿಭಾಷೆಗಳು ಬಹುಕಾಲ ಕನ್ನಡ ವಿಮರ್ಶೆಯ ವಲಯದಲ್ಲಿ ಉಳಿದುಬಂದುವು. ಈ ಪ್ರಭಾವ ಈ ಹೊತ್ತಿಗೂ ಪೂರ್ತಿ ಅಳಿದಿಲ್ಲವೆನ್ನಬೇಕು. (ಆದರೆ 'ಶ್ರೀ'ಯವರ ದೀರ್ಘವಾಕ್ಯರಚನೆಯ ಪ್ರವೃತ್ತಿ ಇಂದಿಗೆ ಹಳೆಯದಾಗಿ ತೋರುತ್ತದೆ).

ಹಲವು ಗುಣಗಳ ವರ್ಣರಂಜಿತ ಮೇಳ 'ಶ್ರೀ'ಯವರ ಸಾಹಿತ್ಯಚರಿತ್ರೆ. ಅದನ್ನು ಕುರಿತು ಮುನ್ನುಡಿಯಲ್ಲಿ ಕುವೆಂಪು ಅವರು ಆಡಿರುವ ಈ ಮಾತುಗಳಲ್ಲಿ ಸಾಕಷ್ಟು ತಥ್ಯವುಂಟು: "ಶ್ರೀ ಬಿ. ಎಂ. ಶ್ರೀಕಂಠಯ್ಯನವರಿಗಿದ್ದ ವಿದ್ವತ್ತು, ಪರಿಶ್ರಮ, ಸಹೃದಯತೆ, ತೋಲನ ಸಾಮರ್ಥ್ಯ, ಸೂಕ್ಷ್ಮದೃಷ್ಟಿ, ಉಕ್ತಿ ಗಾಂಭೀರ್ಯ, ಒಮ್ಮೊಮ್ಮೆ ದಾಕ್ಷಿಣ್ಯಪರವಾದರೂ ಒಟ್ಟಿನಲ್ಲಿ ನಿಷ್ಪಕ್ಷಪಾತವಾದ ಋಜುಮತಿ ಮತ್ತು ಪ್ರಥಮ ವರ್ಗದ ವಿಮರ್ಶಕನಿಗೆ ಸಹಜವಾದ ಸವಿನಯ ಅಧಿಕಾರವಾಣಿ ಇವುಗಳ ಪ್ರಯೋಜನ ಕನ್ನಡನಾಡಿಗೆ ಸಂಪೂರ್ಣವಾಗಿ ಲಭಿಸಿ, 'ಕನ್ನಡ ಸಾಹಿತ್ಯಚರಿತ್ರೆ' ಅವರ ಕೈಯಿಂದಲೇ ಸಮಗ್ರವಾಗಿ ರಚಿತವಾಗಿದ್ದರೆ, ಸಾಹಿತ್ಯದ ಚರಿತ್ರೆ ಮಾತ್ರವಲ್ಲದೆ ಅದೆಂತಹ ರಸವಿಮರ್ಶೆಯ ಜೇನುಣಿಸು ಕನ್ನಡಿಗರಿಗೆ ಲಭಿಸುತ್ತಿದ್ದಿತು ಎಂಬುದಕ್ಕೆ ಪ್ರಕಟವಾಗಿರುವ ಈ ಗ್ರಂಥಭಾಗವೆ ಸಾಕ್ಷಿಯಾಗಿದೆ."

'ಶ್ರೀ'ಯವರ ಕೃತಿಯ ಅಸಮಗ್ರತೆಗಾಗಿ ವಿಷಾದಿಸಿ, ಈಗಿರುವಷ್ಟು ಭಾಗದ ಮಹತ್ವ ಕೇವಲ ಐತಿಹಾಸಿಕವಲ್ಲ ಎಂದು ಒತ್ತಿ ಹೇಳಬೇಕಾಗಿದೆ.

# ಕನ್ನಡ ಛಂದಸ್ಸಿಗೆ 'ಶ್ರೀ' ಅವರ ಕೊಡುಗೆ

– ಟಿ. ವಿ. ವೆಂಕಟಾಚಲಶಾಸ್ತ್ರಿ

ಹೊಸಗನ್ನಡ ಛಂದಸ್ಸಿನ ಕ್ಷೇತ್ರದಲ್ಲಿ 'ಶ್ರೀ'ಯವರ ಸಾಧನೆಗಳನ್ನು ನಮ್ಮ ವಿದ್ವಾಂಸರು ಹೇಗೆ ಗುರುತಿಸಿದ್ದಾರೆ ಎಂಬುದನ್ನು ಈ ಮುಂದಿನ ಕೆಲವು ಉಲ್ಲೇಖಗಳಿಂದ ತಿಳಿಯಬಹುದಾಗಿದೆ :

(೧) ಟಿ. ಎಸ್. ವೆಂಕಣ್ಣಯ್ಯನವರು[1], 'ಕಿರಿಯ ಕಾಣಿಕೆ'ಯ ಮುನ್ನುಡಿಯಲ್ಲಿ : "... ಈ ಕವನಗಳು ಒಟ್ಟಿನಲ್ಲಿ ಹೊಸದಾರಿಯವು. ಈ ಕವಿಗಳು ಕಾವ್ಯಕ್ಕೆ ಬೇಕಾದ ವಸ್ತುಗಳನ್ನು ಆರಿಸುವುದರಲ್ಲಿಯೂ ಪದ್ಯರಚನೆಯಲ್ಲಿಯೂ ಪ್ರಾಚೀನ ಸಂಪ್ರದಾಯಕ್ಕೆ ಕಟ್ಟುಬಿದ್ದಿಲ್ಲ. ಆದರೆ ಈ ಹೊಸದಾರಿಯನ್ನು ಅವರೇ ಕಲ್ಪಿಸಿಕೊಂಡಿಲ್ಲ. ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು, ಡಿ. ವಿ. ಗುಂಡಪ್ಪನವರು, ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಮೊದಲಾದ ಹಿರಿಯರಿಗೆ ಈ ಹೊಸದಾರಿಯಲ್ಲಿ ನಡೆದು ಈ ಕವಿಗಳಿಗೆ ಮಾರ್ಗದರ್ಶಕರಾದ ಗೌರವವು ಸಲ್ಲುತ್ತದೆ. ಅವರುಗಳು, ಮುಖ್ಯವಾಗಿ ಶ್ರೀ ಬಿ. ಎಂ. ಶ್ರೀಕಂಠಯ್ಯನವರು, ಹಾಕಿಕೊಟ್ಟಿರುವ ಮೇಲ್ಪಂಕ್ತಿಯನ್ನೇ ಅನುಸರಿಸುತ್ತಾರೆ."

(೨) ತೀ. ನಂ. ಶ್ರೀಕಂಠಯ್ಯನವರು[2], 'ಇಂಗ್ಲಿಷ್ ಗೀತಗಳು' ಕೃತಿಗೆ ಬರೆದ ಪ್ರಸ್ತಾವನೆಯಲ್ಲಿ : "ಎಲ್ಲಕ್ಕೂ ಮಿಗಿಲಾಗಿ 'ಶ್ರೀ'ಯವರಿಂದ ಕನ್ನಡಕ್ಕೆ ಆದ ಪರಮೋಪಕಾರವೆಂದರೆ, ಇಂಗ್ಲಿಷ್ ಗೀತಗಳಲ್ಲಿ ಛಂದಸ್ಸಿನ ಹೊಸದೊಂದು ಹೆದ್ದಾರಿಯನ್ನೇ ತೆರೆದದ್ದು ; ಕನ್ನಡ ಕಾವ್ಯದ ಚರಿತ್ರೆಯಲ್ಲಿ ಅವರ ಹೆಸರು ಚಿರಸ್ಮರಣೀಯವಾಗಿ ನಿಲ್ಲುವುದು ಮುಖ್ಯವಾಗಿ ಇವರಿಂದ ..."

(೩) ಡಿ. ಎಲ್. ನರಸಿಂಹಾಚಾರ್ಯರು[3], 'ಇಂದಿನ ಕನ್ನಡ ಕವಿತೆ' ಎಂಬ ಉಪನ್ಯಾಸದಲ್ಲಿ : "ಕನ್ನಡವನ್ನೂ ಇಂಗ್ಲಿಷನ್ನೂ ಕಲಿತ ಸವ್ಯಸಾಚಿಗಳಾದ 'ಶ್ರೀ' ಅವರು ಕನ್ನಡದ ಹೊಸ ಕಾವ್ಯಕ್ಕೆ ಪ್ರೇರಕರಾದರು. ಅವರು ರಚಿಸಿದ 'ಇಂಗ್ಲಿಷ್ ಗೀತಗಳು' ಕಾವ್ಯಮಾರ್ಗವನ್ನು ತೋರಿಸಿದ್ದೊಂದೇ ಅಲ್ಲದೆ ಹೊಸ ಕನ್ನಡ

ಛಂದಸ್ಸನ್ನೂ ಧಾಟಿಯನ್ನೂ ಕಾಣಿಸಿತು. ಹೊಸ ಚೈತನ್ಯ ಹರಿಯುವುದಕ್ಕೆ ಹೊಸ ಪಾತ್ರವನ್ನು ನಿರ್ಮಿಸಿತು. ಹೊಸ ಕನ್ನಡದ ಬಗೆಬಗೆಯ ಮಟ್ಟುಗಳಿಗೆ ಅವರು ನಿರ್ಮಾಪಕರಾಗಿದ್ದಾರೆ. ಅವರು ತೋಡಿದ ನಾಲೆ ಇಂದು ತುಂಬು ಹೊನಲಾಗಿದೆ."

(೪) ಕ. ವೆಂ. ರಾಘವಾಚಾರ್ಯರು[4], 'ಶ್ರೀಯವರ ಜೀವನ ಪರಿಚಯ' ಎಂಬ ಬರಹದಲ್ಲಿ : "ಶ್ರೀಮಾನ್ ಶ್ರೀಕಂಠಯ್ಯನವರು ೧೯೨೬ನೆಯ ಇಸವಿಯಲ್ಲಿ ಪ್ರಕಟವಾದ ತಮ್ಮ ಇಂಗ್ಲಿಷ್ ಗೀತಗಳು ಕವನ ಸಂಗ್ರಹದಿಂದ ಹೊರಗಿನ ಜನರಿಗೆ ಮೊದಲು ಪರಿಚಯವಾಗಿ, ಒಮ್ಮೆಯೇ ಕನ್ನಡಿಗರೆಲ್ಲರ ಪ್ರೀತಿ ಮನ್ನಣೆಗಳನ್ನು ಪಡೆದರು. ಅದರಲ್ಲಿ ಬಳಸಿರುವ ಹೊಸ ಛಂದಸ್ಸುಗಳೂ ಮಾಡಿರುವ ಪ್ರಯೋಗ ಪರೀಕ್ಷೆಗಳೂ ಹಲವು ತರುಣ ಕವಿಗಳಿಗೆ ಮಾರ್ಗದರ್ಶಕವಾದುವು."

(೫) ಎಸ್. ಅನಂತನಾರಾಯಣ ಅವರು[5], 'ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ' ಎಂಬ ಕೃತಿಯಲ್ಲಿ : "ಇಂಗ್ಲಿಷ್ ಗೀತಗಳ ಹೊಸತನವಿರುವುದು ನಿಜವಾಗಿ ಅದರ ಹೊಸ ಛಂದಸ್ಸಿನಲ್ಲಿ ಎಂದು ಹೇಳಬಹುದು."

ಇಂತಹ ಉಲ್ಲೇಖಗಳನ್ನು ಇನ್ನೂ ಸಂಗ್ರಹಿಸುವುದು ಸಾಧ್ಯವಿದೆ. ಈ ಮಾತುಗಳು ಅಸಮೀಕ್ಷ್ಯಕಾರಿತ್ವದ ಅಡ್ಡೇಟಿನ ಮಾತುಗಳಲ್ಲ, ತಾಳಿಕೆಯಾದ ಮಾತುಗಳು ಎನ್ನುವುದನ್ನು ಈಚಿನ ತರುಣ ವಿದ್ವಾಂಸರ ವಿಮರ್ಶೋಕ್ತಿಗಳು ಸಹ ಸಾಧಾರವಾಗಿ ಸಮರ್ಥಿಸಿವೆ. "ಹೊಸಗನ್ನಡ ಛಂದಶ್ಶಾಸ್ತ್ರಕ್ಕೆ ಇಂಗ್ಲಿಷ್ ಗೀತಗಳು ಒಂದು ಭದ್ರವಾದ ತಳಕಟ್ಟು" ಎಂದು ಕೆ. ಶಿವರಾಮ ಐತಾಳರೂ[6] "೧೯೨೧ರಲ್ಲಿ ಬಿ. ಎಂ. ಶ್ರೀಯವರ ಇಂಗ್ಲಿಷ್ ಗೀತಗಳ ಮೊದಲ ಆವೃತ್ತಿ ಪ್ರಕಟವಾಯಿತು. ಇದರೊಂದಿಗೆ ಹೊಸ ಛಂದಸ್ಸಿನ ಇತಿಹಾಸ ಅಧಿಕೃತವಾಗಿ ಪ್ರಾರಂಭವಾಯಿತು" ಎಂದು ಕೆ. ಜಿ. ನಾರಾಯಣ ಪ್ರಸಾದರೂ[7] ಸಾಧಾರವಾದ ಪ್ರಶಸ್ತಿ ವಾಕ್ಯಗಳನ್ನು ಬರೆದಿರುವುದನ್ನಿಲ್ಲಿ ನೆನೆಯಬಹುದು. ಎಲ್. ಎಸ್. ಶೇಷಗಿರಿರಾವ್ ಅವರು[8] ಆಡಿರುವ ಇನ್ನೂ ಒಂದು ಮಾತನ್ನು ಇಲ್ಲಿ ಜೊತೆಗೂಡಿಸಬಹುದು : "ಶ್ರೀಯವರನ್ನು ಕವಿಗಳ ಕವಿ ಎನ್ನಬಹುದು, ಆಧುನಿಕ ಯುಗದಲ್ಲಿ ಕವಿರಾಜಮಾರ್ಗವನ್ನು ತೋರಿಸಿಕೊಟ್ಟವರು ಎಂದು. 'ಇಂಗ್ಲಿಷ್ ಗೀತಗಳಲ್ಲಿ' ವಸ್ತುವೈವಿಧ್ಯ ಮಾತ್ರವಲ್ಲ, ಪ್ರಯೋಗಗಳ ಗಣಿಯೇ ಕನ್ನಡ ಕವಿಗಳ ಮುಂದೆ ತೆರೆಯಿತು."

೨

ಶ್ರೀಯವರ ಛಂದಸ್ಸಿನ ಪ್ರಯೋಗಗಳನ್ನು, ಸಮಾನ ಗುಣಲಕ್ಷಣಗಳಿದ್ದರೂ ಇಲ್ಲಿ ಕವಿತೆಗಳವು, ನಾಟಕಗಳವು ಎಂಬುದಾಗಿ ವಿಭಾಗಗಳನ್ನು ಮಾಡಿಕೊಂಡು ಪರಿಶೀಲಿಸಬಹುದಾಗಿದೆ. ಅವರ ಕವಿತೆಗಳ ಸಂಕಲನಗಳು ಎರಡು : 'ಇಂಗ್ಲಿಷ್

ಗೀತಗಳು', 'ಹೊಂಗನಸುಗಳು'. ನಾಟಕಗಳು ಎರಡು: 'ಅಶ್ವತ್ಥಾಮನ್', 'ಪಾರಸಿಕರು' ('ಗದಾಯುದ್ಧ ನಾಟಕಂ' ರನ್ನಕೃತಿಯ ನಾಟಕರೂಪವಾದ್ದರಿಂದ ಇಲ್ಲಿಗೆ ಪ್ರಸ್ತುತವಲ್ಲ).

ಶ್ರೀಯವರು ಹೊಸಗನ್ನಡ ಛಂದಸ್ಸಿನ ಪರಿಕಾರರಲ್ಲಿ ಪ್ರಮುಖರಾಗಿ, ತಮ್ಮ ಪ್ರಭಾವವನ್ನು ಈಚಿನ ಕವಿಗಳ ಮೇಲೆ ಬೀರುವುದರ ಮೊದಲೇ, ೨-೩ ದಶಕಗಳಿಗೂ ಹಿಂದಿನಿಂದಲೇ ಕವಿತೆಯ ಭಾಷೆ ಭಾವ ವಸ್ತು ಎಂಬವುಗಳಲ್ಲಿ ಹೊಸತನ ಮೊಳಪು ಹಾಕಿತ್ತು. ಆದರೆ ಅವಕ್ಕೆ ರೂಪಕೊಟ್ಟ ಬಂಧಗಳು ಮಾತ್ರ ಹಳೆಯ ಬಂಧಗಳ ಇಡಿಯಾದ ಇಲ್ಲವೆ ಬಿಡಿಯಾದ ರೂಪಾಂತರಗಳೋ ಮಾದರಿಗಳೋ ಆಗಿದ್ದು ಕೊಂಡು, ಸಂಪ್ರದಾಯದ ದಾರಿ ಬಿಟ್ಟಿರಲಿಲ್ಲ. ವಸ್ತು, ಭಾವ ಮತ್ತು ಭಾಷೆಗಳ ದೃಷ್ಟಿಯಿಂದ ಹೊಸ ಕವಿತೆಯ ಹುಟ್ಟಿಗೆ ಕಾರಣರೆಂದು ಗಣ್ಯರಾಗಿರುವ ಎಸ್. ಜಿ. ನರಸಿಂಹಾಚಾರ್ಯರು ಸಹ ಬಳಸಿದ ಛಂದಸ್ಸುಗಳು ನಡುಗನ್ನಡದಲ್ಲಿ ಪ್ರಚುರವಾಗಿದ್ದ ಚೌಪದಿ, ಷಟ್ಪದಿ, ಸಾಂಗತ್ಯಗಳು. ಕನ್ನಡ ಕವಿತೆ ಬೆಳೆಯಬೇಕಾದ ದಾರಿಯನ್ನು ಸ್ವತಂತ್ರವಾಗಿ ಆಲೋಚಿಸಿದ ಮೊದಲಿಗರಲ್ಲಿ ಒಬ್ಬರಾದ ಹಟ್ಟಿಯಂಗಡಿ ನಾರಾಯಣರಾಯರು ಸಹ ರಗಳೆ ಚೌಪದಿಗಳ ಕಟ್ಟನ್ನು ದಾಟಿಲ್ಲ, ಆದಿಪ್ರಾಸದ ಮೋಹ ತೊರೆಯಲಿಲ್ಲ. ಕನ್ನಡದ ಸುಧಾರಣೆಗಳನ್ನು ತೀವ್ರವಾಗಿ ಚಿಂತಿಸಿದ ಪಂಜೆ ಮಂಗೇಶರಾಯರು ಬಳಸಿದ ಪದ್ಯದ ಧಾಟಿಗಳು ಕೂಡ ಬಲುಮಟ್ಟಿಗೆ ಗೋವಿನ ಕಥೆಯ ಮಟ್ಟು, ಚೌಪದಿ ಷಟ್ಪದಿಗಳೇ; ಇವರೂ ಪ್ರಾಸದ ಕಟ್ಟಳೆಗಳನ್ನು ಒಪ್ಪಿಕೊಂಡವರೇ. ಕನ್ನಡಕ್ಕೆ ಮೊದಲ ಸಲ ಸಾನೆಟ್ ಪರಿಚಯಿಸಿದ ಪ್ರಾಸಮೋಹವನ್ನು ತೊರೆಯಿಸಿದ ಗೋವಿಂದ ಪೈಗಳು ಬಳಸಿದ ಬಂಧಗಳೂ ಬಲುಮಟ್ಟಿಗೆ ಈ ತೆರನಾದವೇ. ಡಿ. ವಿ. ಜಿ., ಕಂದಗಳ ಸಮೃದ್ಧಿಯಿರಲಿ ದ್ವಿಪದಿ ಷಟ್ಪದಿ ಸೀಸಪದ್ಯಗಳನ್ನೇ ವಿಶೇಷವಾಗಿ ಬಳಸಿದರು. ಆದರೆ ಇವರೆಲ್ಲರ ರಚನೆಗಳಲ್ಲಿಯೂ ಛಂದಸ್ಸಿನ ದೃಷ್ಟಿಯಿಂದ ನಾವೀನ್ಯ ಮತ್ತು ಪ್ರಗತಿಪರ ದೃಷ್ಟಿ, ಸೂಕ್ಷ್ಮವಾಗಿ ಪರಿಶೀಲಿಸಿದರೆ, ಗೋಚರವಾಗದಿರದು ಎನ್ನುವುದು ನನ್ನ ಗ್ರಹಿಕೆ. ಈ ಬಗ್ಗೆ ವಿಶೇಷ ಅಧ್ಯಯನದ ಅಗತ್ಯವಿದೆ. 'ಕವಿತಾವರ್ಧನ' ಎಂಬ ತಮ್ಮ ಒಂದು ಪ್ರಬಂಧದಲ್ಲಿ, 'ಕನ್ನಡ ಕವಿತೆಯ ಭವಿತವ್ಯ'ವನ್ನು ಸಮಾಲೋಚಿಸುತ್ತ ೧೯೧೮ರಷ್ಟು ಹಿಂದೆಯೇ, ಹಟ್ಟಿಯಂಗಡಿ ನಾರಾಯಣ ರಾಯರು[೨] ಇಂಗ್ಲಿಷ್ ಮಾರ್ಗಗಳ ಅನುಸರಣದಿಂದ ಕವಿಗಳು ಛಂದಸ್ಸಿನಲ್ಲಿ ಹೊಸ ಮಾದರಿಗಳನ್ನು ಕಲ್ಪಿಸಬಹುದೆಂದು ಸೂಚಿಸಿದರು. ಇದು ಸಹಜವಾಗಿಯೇ ಆ ದಿಕ್ಕಿನಲ್ಲಿ ನಡೆಯುತ್ತಿದ್ದ ಆಲೋಚನೆ ಪ್ರಯೋಗಗಳ ಒಂದು ಅಭಿವ್ಯಕ್ತಿಯೆಂದು ಹೇಳಬಹುದು. ಆದ್ದರಿಂದ ಈ ದಿಕ್ಕಿನಲ್ಲಿ ಅಧ್ಯಯನ ಅವಶ್ಯವಿದೆಯೆಂದು ಹೇಳ ಬೇಕಾಗಿದೆ.

ಈ ಸ್ಥಿತಿಯಲ್ಲಿ ಶ್ರೀಯವರು ಕನ್ನಡ ಛಂದಸ್ಸಿಗೆ ಕೊಟ್ಟ ಚಾಲನೆ ಅನನ್ಯವಾದುದು, ಅನುಕರಣೀಯವಾದುದು. ಅದರ ಮೌಲ್ಯಮಾಪನವಲ್ಲಿ. ಛಂದಸ್ಸಿನ ವಿಷಯವಾಗಿ ಅಂದಿನ ಕವಿ-ಸಹೃದಯರ ಇಷ್ಟಾನಿಷ್ಟಗಳು ಹೇಗಿದ್ದುವೆಂದು ತಿಳಿಯುವುದು ಸಹಾಯವಾದುದು. ಆರ್. ನರಸಿಂಹಾಚಾರ್ಯರು. ಎಸ್. ಜಿ. ಗೋವಿಂದರಾಜಯ್ಯಂಗಾರರು. ಮೈಸೂರು ಸೀತಾರಾಮಶಾಸ್ತ್ರಿಗಳು. ಆರ್. ತಾತಾಚಾರ್ಯರು ಮುಂತಾದವರ ಸಾಂಪ್ರದಾಯಿಕ ಬಂಧಗಳ ಕವಿತ್ವವನ್ನು ಪ್ರಕಟವಾಗಿ, ಸೂಚ್ಯವಾಗಿ ಮೆಚ್ಚುವವರೂ. ಅನುಕರಿಸುವವರೂ. ಆದರ್ಶವೆಂದು ಸಾರುವವರೂ, ಹಾಗೆಯೇ ಹೊಸ ಛಂದಸ್ಸಿನ ಕವಿತೆಗಳನ್ನು ಪ್ರಾಸಪರಿತ್ಯಾಗ ಮೊದಲಾದ ಕಾರಣಗಳಿಗಾಗಿ ಹೀಗಳೆಯುವವರೂ, ಸುಮಾರು ೧೯೩೦-೩೫ರ ವರೆಗೆ ಕಂಡು ಬರುತ್ತಾರೆ. ಇವರು ತಮ್ಮ ಅಭಿಪ್ರಾಯಗಳನ್ನು ಬರಹಗಳ ಮೂಲಕ, ಉಪನ್ಯಾಸಗಳ ಮೂಲಕ ಪ್ರಕಟಿಸಿದ್ದಾರೆ.[10] ಇಂಥವರ ಭಾಷಣ ಲೇಖನಗಳಲ್ಲಿ ಶ್ರೀಯವರ ಹೆಸರನ್ನೂ, ಪ್ರಯೋಗಗಳನ್ನೂ ನೇರವಾಗಿ ಎತ್ತಿರುವ ಸಂದರ್ಭಗಳು ಇರಬಹುದಾದರೂ ನನಗೆ ಅವು ತಿಳಿದಿಲ್ಲ. ಈ ವೇಳೆಗಾಗಲೇ ಅವರ, ಮಾಸ್ತಿ, ಡಿ. ವಿ. ಜಿ., ಪೈ ಮತ್ತು ವಿ. ಸೀ. ಮುಂತಾದವರ ಪದ್ಯಸಂಕಲನಗಳು ಪ್ರಕಟವಾಗಿದ್ದುವು. ಇದೇ ವೇಳೆಗೆ ಶ್ರೀಯವರು, ಎ. ವೆಂಕಟಸುಬ್ಬಯ್ಯನವರು, ಸೇಡಿಯಾಪು ಕೃಷ್ಣಭಟ್ಟ ಈ ಕೆಲವರು ಕನ್ನಡ ಛಂದಸ್ಸಿನ ಬಗೆಗೆ ಹೊಸದೃಷ್ಟಿಯ ಸ್ವತಂತ್ರವಾದ ಆಲೋಚನೆಗಳಿಗೆ ತೊಡಗಿದ್ದರೆಂಬುದು ಇವರ ಭಾಷಣಗಳಿಂದಲೂ ಲೇಖನಗಳಿಂದಲೂ ವ್ಯಕ್ತಪಟ್ಟಿದೆ. ಹೀಗೆಯೇ ಟಿ. ಎಸ್. ವೆಂಕಣ್ಣಯ್ಯ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮೊದಲಾದ ಹಿರಿಯರು ತಮ್ಮ ಕಾಲದ ಕಿರಿಯರ ಕವಿತಾ ಸಂಕಲನಗಳಿಗೆ ಮುನ್ನುಡಿ ಬರೆಯುವಾಗ (ಉದಾಹರಣೆಗೆ 'ತಳಿರು'. 'ಹಣತೆ' ಇತ್ಯಾದಿ) ಆಡಿರುವ ಉತ್ತೇಜನಕರವಾದ ಹಾಗೂ ಪರಿಸ್ಥಿತಿ ವಿಮರ್ಶಕವಾದ ಮಾತುಗಳನ್ನು ಗಮನಿಸಿದರೆ, ಈ ಶತಮಾನದ ೨-೩ನೆಯ ದಶಕಗಳು ನಾನಾ ಕಾರಣಗಳಿಂದ ಹೊಸಗನ್ನಡ ಕವಿತೆಯ ಸಂಧಿಕಾಲವೆಂಬುದು ನಿಶ್ಚಯವಾಗುತ್ತದೆ.

ಈ ಸಂಬಂಧದಲ್ಲಿ ಎರಡು ಉಲ್ಲೇಖಗಳನ್ನಿಲ್ಲಿ ಉದ್ಧರಿಸಬಹುದು :

(೧) ೧೮ನೆಯ ಕನ್ನಡ ಸಾಹಿತ್ಯ ಸಮ್ಮೇಳನದ (೨೮-೧೨-೧೯೩೨) ಅಧ್ಯಕ್ಷ ಭಾಷಣ ಮಾಡುತ್ತಾ ಡಿ. ವಿ. ಜಿ. ಅವರು[11] ಹೇಳಿರುವುದು : "ನೂತನ ಕವಿತ್ವದ ವಿಷಯದಲ್ಲಿ ಯಾವ ದೃಷ್ಟಿಯಿಂದಲೂ ನಿಷ್ಕರ್ಷೆಯಾದ ಅಭಿಪ್ರಾಯವನ್ನು ಹೇಳಲು ಇನ್ನೂ ತಕ್ಕಷ್ಟು ಕಾಲವಾಗಿಲ್ಲ. ನಾವು ಇನ್ನೂ ಮಾರ್ಗಾನ್ವೇಷಿಗಳಾಗಿದ್ದೇವೆ. ಹೊಸ ವಸ್ತು, ಹೊಸ ರೀತಿ, ಹೊಸ ಶೈಲಿಗಳನ್ನು ಕಲ್ಪಿಸಲು ಪೀಠಿಕಾರೂಪದ ಪ್ರಯತ್ನಗಳನ್ನು ನಡೆಸುತ್ತಿದೇವೆ."

(೨) ಕನ್ನಡ ಛಂದಸ್ಸನ್ನು ಕುರಿತು ಶ್ರೀಯವರು[12] ನೀಡಿದ ಮೂರು ಉಪನ್ಯಾಸಗಳ ವರದಿಯಲ್ಲಿ, ಕೊನೆಯ ಉಪನ್ಯಾಸದಲ್ಲಿ ಅವರು ಹೇಳಿರುವುದು : "ದ್ರಾವಿಡ ಭಾಷೆಯ ಓಟವು ಸಂಸ್ಕೃತ ಭಾಷೆಯ ಓಟಕ್ಕಿಂತ ಬೇರೆಯಾಗಿರುವುದರಿಂದಲೂ ಕನ್ನಡವು ಹಳಗನ್ನಡದಿಂದ ನಡುಗನ್ನಡಕ್ಕೂ ಹೊಸಗನ್ನಡಕ್ಕೂ ಮಾರ್ಪಟ್ಟಿದ್ದರಿಂದಲೂ ಪದ್ಯದಲ್ಲಿ ಭಾವ ರಸ ಕಥನ ವರ್ಣನಾದಿಗಳಿಗೆ ಹೊಂದಿಕೆಯಾದ ಬೇರೆ ಬೇರೆ ಪದ್ಯಜಾತಿಗಳು ಬೇಕಾದ್ದರಿಂದಲೂ ಹಿಂದೆ ಅಡಗಿದ್ದ ಅಚ್ಚ ಕನ್ನಡ ಛಂದಸ್ಸು ಮುಂದಕ್ಕೆ ಬಂತು ; ಅಷ್ಟೇ ಅಲ್ಲ, ಅದರ ಆಧಾರದ ಮೇಲೆ, ಆ ತಾನವನ್ನೂ ಓಟವನ್ನೂ ಬಿಟ್ಟುಹೋಗದೆ, ಈಗ ಹೊಸ ಪದ್ಯಜಾತಿಗಳೂ ಕಲ್ಪಿಸಲ್ಪಡುತ್ತಿವೆ."

ಈಗಾಗಲೇ ಶ್ರೀಯವರ ಛಂದಃಪ್ರಯೋಗಗಳನ್ನು ಕುರಿತವರು ವಿಮರ್ಶಿಸಿರುವ ಹಾಗೆ ಅವರ ಕವಿತೆಗಳಲ್ಲಿ ಮಾತ್ರಾಬಂಧಗಳೇ ಹೆಚ್ಚು. ಅವರ ಕಾಲದವರೆಲ್ಲ ಹೆಚ್ಚಾಗಿ ಬಳಸಿದವೂ ಇವೇ. ೩, ೪, ೫ ಮತ್ತು ೬ ಮಾತ್ರೆಗಳ, ವಿರಳವಾಗಿ ೭ (೩+೪) ಮತ್ತು ೮ (೩+೫) ಮಾತ್ರೆಗಳ ಗಣಗಳಿಂದ ಕಟ್ಟಿದ ಬಂಧಗಳನ್ನು ಶ್ರೀಯವರು ರಚಿಸಿದ್ದಾರೆ. ಈ ಬಂಧಗಳೊಂದೊಂದರಲ್ಲೂ ಒಂದಕ್ಕಿಂತ ಹೆಚ್ಚಾದ ಸಂಖ್ಯೆಯ ನುಡಿಗಳಿರುತ್ತವೆ. ಈ ನುಡಿಗಳು ಪಾದರಚನೆಯ ದೃಷ್ಟಿಯಿಂದ ಸಮ, ಅರ್ಧಸಮ ಮತ್ತು ವಿಷಮ ಎಂಬ ರೀತಿಯಲ್ಲಿರುತ್ತವೆ ; ಬಹುಶಃ ೨-೩ ಪಾದಗಳ ಕೆಳಮಿತಿಯಿಂದ ಹಿಡಿದು ೮-೯ ಪಾದಗಳ ಮೇಲು ಮಿತಿಯವರೆಗೆ ವ್ಯಾಪ್ತಿಯುಳ್ಳವಾಗಿರುತ್ತವೆ. ಇದು ಕವಿತೆಗಳಿಗೆ ಅನ್ವಯಿಸುವ ಮಾತು ; ನಾಟಕಗಳಲ್ಲಿ ಪಾದಗಳ ಕಟ್ಟಳೆ ಅವುಗಳ ಗೀತಭಾಗಗಳಿಗೆ ಮಾತ್ರ ಅನ್ವಯಿಸುತ್ತದೆ. ಪಾದಗಳ ದೀರ್ಘತೆ ಹಾಗೂ ಸಂಖ್ಯೆಯ ಪ್ರಮಾಣಗಳಲ್ಲಿ, ಗಣಗಳ ಮಿತಿ ಹಾಗೂ ಸಂಯೋಜನೆಗಳಲ್ಲಿ ಲಯಗತಿ ಎಡರುವ, ತೊಡರುವ ವಿಪರ್ಯಾಸಗಳಿಲ್ಲದಂತಹ ಸ್ವಾತಂತ್ರ್ಯ ಕೌಶಲಗಳಿವೆ ; ಸ್ವಯಂಸ್ಫೂರ್ತವಾದ ಸಂಚಾರಗಳೂ ಲಹರಿಗಳೂ ಇವೆ. ಹಾಗೆಯೇ ಉದ್ದೇಶಪೂರ್ವಕವಾದ, ಪ್ರಯೋಗನಿಮಿತ್ತವಾದ ಕುಸುರಿಯೂ ಕೃತಕತೆಯೂ ಸಾಕಷ್ಟು ಪ್ರಮಾಣದಲ್ಲಿಯೇ ಗೋಚರಿಸುತ್ತವೆ.

ಶ್ರೀಯವರ ಪ್ರಯೋಗಗಳ ವ್ಯಾಪ್ತಿಯೇನು ? ಅವರು ಸಾಂಪ್ರದಾಯಿಕ ಛಂದಸ್ಸುಗಳಲ್ಲಿ ಕಂದ ಬಿಟ್ಟು (ಶೀರ್ಷಿಕಾ ಪುಟ, 'ಇಂಗ್ಲಿಷ್ ಗೀತಗಳು') ವರ್ಣವೃತ್ತಗಳನ್ನು ಮುಟ್ಟಿಲ್ಲ. ಶ್ಲೋಕ ಛಂದಸ್ಸಿನ ಬಗ್ಗೆ ಮೆಚ್ಚಿಕೆಯಿದ್ದೂ (ಕನ್ನಡ ಛಂದಸ್ಸಿನ ಚರಿತ್ರೆ, 'ಕನ್ನಡ ಕೈಪಿಡಿ') ಅದರಲ್ಲಿ ಒಂದೇ ಒಂದು ಪದ್ಯ ಬರೆದಿಲ್ಲ. ರಗಳೆಗಳ ಗೊಡವೆಗೆ ಹೋಗಿಲ್ಲ ; ಆದರೆ ಸದೃಶ ಬಂಧಗಳನ್ನೇನೋ ಸಮೃದ್ಧವಾಗಿ ರಚಿಸಿದ್ದಾರೆ. ಶುದ್ಧ ಅಂಶಬಂಧಗಳಾವುವನ್ನೂ ನೇರವಾಗಿ ಬಳಸಿಲ್ಲ ; ಆದರೆ ಆ ಜಾಯಮಾನದ ಸದೃಶ ಬಂಧಗಳನ್ನೇನೋ ಒಂದೆರಡು ರಚಿಸಿದ್ದಾರೆ. ಮಾತ್ರಾ

ಬಂಧಗಳಲ್ಲಿ ಕುಸುಮ ಮತ್ತು ಭಾಮಿನೀ ಷಟ್ಪದಿಗಳನ್ನು ಮಾದರಿಗೋ ಎನ್ನುವಂತೆ ರಚಿಸಿದ್ದರೂ ಉಳಿದವುಗಳನ್ನು ಹಚ್ಚಿಕೊಂಡಿಲ್ಲ; ತಮ್ಮ ಕಾಲದ, ಇನ್ನೂ ಈಚಿನ ಕಾಲದ ಬಹುಪಾಲು ಕವಿಗಳನ್ನು ಆಕರ್ಷಿಸಿದ ವಾರ್ಧಕ ಷಟ್ಪದಿ ಶ್ರೀಯವರ ಮನ ಸೆಳೆಯಲು ಸಮರ್ಥವಾಗಲಿಲ್ಲ. ಸೊಗಸುವುದೆಂದು ಮಾತ್ರಾಚೌಪದಿಯನ್ನೇನೋ ಮನ್ನಿಸಿದ್ದಾರೆ, ಪರೋಕ್ಷವಾಗಿ. ಇಂಗ್ಲಿಷಿನ ಸಾನೆಟ್ಟನ್ನು ಏಕೋ ಹತ್ತಿರ ಬರಗೊಟ್ಟಿಲ್ಲ; ಆದರೆ ಬ್ಲ್ಯಾಂಕ್‌ವರ್ಸಿಗೆ ಹತ್ತಿರವಾದ ಸರಳರಗಳೆಯನ್ನು ತಮ್ಮ ನಾಟಕಗಳಲ್ಲಿಯೂ ಓಡ್‌ಗೆ ಸದೃಶವಾದ ಪ್ರಗಾಥವನ್ನು ಕವಿತೆಗಳ ಗುಂಪಿನಲ್ಲಿಯೂ ಪುರಸ್ಕರಿಸಿದ್ದಾರೆ. ಇವೆಲ್ಲ ನಿಜವೇ. ಆದರೂ ಪದ್ಯಬಂಧಗಳ ಲಯಗತಿ, ಗಣ ಸಂಯೋಜನೆ, ಪಾದರಚನೆ, ನುಡಿಗಡಣಿಕೆ ಮೊದಲಾದುವುಗಳಲ್ಲಿ ನಮ್ಮ ಭಾಷೆಯ ಹಳೆಯ ಹಾಗೂ ಹೊಸ ಛಂದಸ್ಸುಗಳ ಗುಣಲಕ್ಷಣಗಳು ಸಂಸ್ಕೃತ ಇಂಗ್ಲಿಷ್ ಗ್ರೀಕ್ ತಮಿಳು ಈ ಮೊದಲಾದ ಭಾಷೆಗಳಲ್ಲಿಯ ಹಳೆಯ ಹಾಗೂ ಹೊಸ ಛಂದಸ್ಸುಗಳ ಗುಣಲಕ್ಷಣಗಳೂ ಯಥೋಚಿತವಾಗಿ ಪ್ರತಿಬಿಂಬಿಸುವಂತೆಯೂ ಪ್ರತಿಧ್ವನಿಸು ವಂತೆಯೂ ಮಾಡಿದ್ದಾರೆ, ಶ್ರೀಯವರು.

೩

**ಸಾಂಪ್ರದಾಯಿಕ ಬಂಧಗಳು**

ಇವನ್ನು 'ಇಂಗ್ಲಿಷ್ ಗೀತಗಳು' ಸಂಕಲನದಲ್ಲಿಯೇ ಗಮನಿಸಬೇಕು, ಮೊದಲು. 'ಹೊಳೆಕರೆ' (ಪ. ೫) ಆದಿಪ್ರಾಸವನ್ನೂ ಕಾಯ್ದುಕೊಂಡ ಶುದ್ಧ ಕುಸುಮ ಷಟ್ಪದಿ.[13] 'ವಸಂತ ಕಾಲದೊಲುಂಮೆ' (ಪ. ೨೭) ಹ್ರಸ್ವಪಾದಗಳಿಗೆ ಮಾತ್ರ ಆದಿ ಪ್ರಾಸವಿಟ್ಟ ಒಂದು ವೈಲಕ್ಷಣ್ಯ ಹೊರತಾಗಿ ತಾನೂ ಒಂದು ಕುಸುಮಷಟ್ಪದಿಯೇ (ಪದ್ಯದ ಮುದ್ರಣದ ರೀತಿ ಗೌಣವಾದ ಸಂಗತಿ). 'ಹೇಳದಿರು ಹೋರಾಡಿ ಫಲವಿಲ್ಲ ವೆಂದು' (ಪ. ೫೪) ಆದ್ಯಂತ ಪ್ರಾಸವಿಟ್ಟ ನಡುಗನ್ನಡದ ದ್ವಿಪದಿಯೇ ಸರಿ (ಯುಗ್ಮ ವನ್ನು ಒಟ್ಟಿಗೆ ಗಣಿಸಿ ಚೌಪದಿಯೆಂದು ಬೇಕಾದರೂ ತಿಳಿಯಬಹುದು). ಹೀಗೆಯೇ 'ಕಾರಿ ಹೆಗ್ಗಡೆಯ ಮಗಳು' (ಪ. ೩೭) ಸಮಗ್ರವಾಗಿ 'ಗೋವಿನ ಹಾಡು' ಮಟ್ಟಿನ ಒಂದು ರಚನೆ. ಇಲ್ಲಿ ಪ್ರಾಸ ಐಚ್ಛಿಕ, ಇಲ್ಲವೆ ಯುಗ್ಮನಿಷ್ಠ. ಈ ಛಂದಸ್ಸಿನಲ್ಲಿ ಅವರಿಗಿದ್ದ ಒಲವು, ಆ ಮಾದರಿಯನ್ನು ಬಲುಮಟ್ಟಿಗೆ ಹತ್ತಿರದಿಂದ ಅನುಸರಿಸು ವುದರಲ್ಲಿ ಕಂಡುಬರುತ್ತದೆ. ಛಂದಸ್ಸು ಅಲ್ಪ ಸ್ವಲ್ಪ ರೂಕ್ಷ, ಸ್ನಿಗ್ಧ; ಇಲ್ಲಿ ಮೃದು, ನಿಯುತ; ಅಷ್ಟೆ. ಒಟ್ಟು ಪದ್ಯಸಂಖ್ಯೆಯನ್ನು ಲಕ್ಷಿಸಿದರೆ, ಈ ತೆರನ ಬಂಧಗಳ ಪ್ರಮಾಣ ಅತ್ಯಲ್ಪ.

ಇನ್ನು 'ಹೊಂಗನಸುಗಳು' ಸಂಕಲನ: 'ಅರಮನೆಯ ಒಸಗೆ...' (ಪ. ೯) ಐಚ್ಛಿಕವಾಗಿ ಆದ್ಯಂತ ಪ್ರಾಸಗಳನ್ನು ಪಾಲಿಸಿದ ೭ ಪಾದಯುಗ್ಮಗಳ ಲಲಿತ ರಗಳೆ.

'ಶಿಲಪ್ಪದಿಗಾರಂ' (ಪ. ೧೩) ತಮಿಳು ಅಂಶಗಣರಚನೆಯ ಸೌಲಭ್ಯವನ್ನು ಪಡೆದುಕೊಂಡ ಮಂದಾನಿಲ ರಗಳೆಗೆ ಸದೃಶವಾದ ಪದ್ಯ. 'ಧರ್ಮಯುದ್ಧ' (ಪ. ೧೨) ೮ ಭಾಮಿನೀಷಟ್ಪದಿಗಳ ಕವಿತೆ. ಪ್ರಾಚೀನ ಷಟ್ಪದಿಕಾರರಂತೆ ಪಾದಗಳನ್ನು ಹರಿಯಬಿಡದೆ ಲಘು ವಾಕ್ಯೋಪವಾಕ್ಯಗಳನ್ನು ಕೋದು. ಯತಿಸ್ಥಾನಗಳನ್ನು ನಿರ್ಮಿಸಿ, ಪದ್ಯವನ್ನು ರೂಪಿಸಿರುವುದು ಇಲ್ಲಿಯ ವಿಶೇಷ. ೧೯೪೩ ರಷ್ಟು ಈಚೆಗೆ ಇಂಥ ಬಂಧಗಳನ್ನು ಶ್ರೀಯವರು ರಚಿಸಿದ್ದು ಕುತೂಹಲಕರವಾಗಿದೆ. 'ಹಾರೈಕೆ'ಯ (ಪ. ೧೪) ಕುಜಿಲ್ ಧಾಟಿಯ ೧೦ ದ್ವಿಪದಿಗಳು, ನಮ್ಮ ಹಳೆಯ ಛಂದಸ್ಸನ್ನು ಹೋಲುವಂಥವು. ಇಲ್ಲಿ ತಮಿಳು ಅಂಶಗಣರಚನೆಯ ಸೌಲಭ್ಯವನ್ನು ಹೆಚ್ಚಾಗಿ ಬಳಸಿರುವಂತೆ ಕಾಣುತ್ತದೆ. 'ಶ್ರೇಯಃ ಪ್ರಾರ್ಥನೆ' ಎಂಬುದು 'ಕಾಯೌ ಶ್ರೀ ಗೌರಿ'। 'ಕರುಣಾಲಹರಿ' ಎಂಬ ಸಂಗೀತ ಕೃತಿಯೊಂದರ ಅನುಕರಣೆಯಿರುವಂತಿದೆ.

ಶ್ರೀಯವರ ಈಚಿನ ಕಾಲದ ಈ ಕೆಲವು ರಚನೆಗಳು, ೧೯೪೧ – ೪೫ರ ಅವಧಿಯವು, ಹಳೆಯ ಛಂದಸ್ಸಿನಲ್ಲಿರಲು ಕಾರಣವೇನು ? ಹಳೆಯ ಛಂದಸ್ಸುಗಳ ಮೋಹ ಶ್ರೀಯವರನ್ನು ಬಿಡದೆ ಕಾಡಿತೇ ? ಅವುಗಳಲ್ಲಿ ತಮ್ಮ ಕೈ ಹೇಗೆ ನಡೆಯುವುದೆಂದು ಪರೀಕ್ಷಿಸಲು ಅವರು ಹೀಗೆ ಮಾಡಿದರೇ ? ಹೊಸತರ ನಡುವೆ ಹಳೆಯವು, ವಿರಳವಾಗಿ ರಚಿತವಾಗುವುದಾದರೆ ತಪ್ಪಲ್ಲ ಎಂದೋ, ಅವುಗಳಲ್ಲಿಯೂ ರುಚಿಯುಂಟು ಕಳೆಯುಂಟು ಎಂದು ತೋರಿಸಲೆಂದೋ, ಹೊಸ ಭಾಷೆ ಹಳೆಯ ಛಂದಸ್ಸಿನಲ್ಲಿ ಹೇಗೆ ಹೊಂದಿ ನಡೆಯುವುದೋ ನೋಡೋಣವೆಂದೋ. ಇವಕ್ಕೆ ಶ್ರೀಯವರು ಕೈಹಾಕಿರಬಹುದು. ಅಂತೂ ಈ ಕೆಲವು ರಚನೆಗಳಲ್ಲಿ 'ಶ್ರೀ'ಮುದ್ರೆ ಅಂಕಿತಗೊಂಡಿರುವುದು ಭಾವ ಭಾಷೆಗಳೆರಡರಲ್ಲಿಯೂ ಸುಲಭವೇದ್ಯ.

**ಸ್ವನಿಯಂತ್ರಿತ ಬಂಧಗಳು – ೧**

ಇವು ಯಾವಾಗಲೂ ಪರಿಶೀಲನೆಗೆ ತೊಡಕಾದವು. ಗಣಗಳ ಸಂಖ್ಯೆ ರಚನೆಗಳೂ ಪಾದಗಳ ಸಂಖ್ಯೆ ದೀರ್ಘತೆಯ ಪ್ರಮಾಣಗಳೂ ಕಟ್ಟಳೆಗೆ ಅನುಸಾರವಾಗಿ ಇರಬಹುದು, ಇಲ್ಲದೆಯೂ ಇರಬಹುದು. ಅಲ್ಲೆಲ್ಲ ವೈವಿಧ್ಯ ವೈಚಿತ್ರ್ಯಗಳು ಕವಿ ಸ್ವಾತಂತ್ರ್ಯ ಹಾಗೂ ಕೌಶಲದ ಫಲವಾದವು. ಆದರೆ ಶ್ರೀಯವರ ಪ್ರಯೋಗಗಳಲ್ಲಿ ದಿಗ್ಭ್ರಮೆಗೊಳಿಸುವ ಮಟ್ಟಿಗೆ ಅವೇನೂ ಕಂಡುಬರುವುದಿಲ್ಲ. ಇದಕ್ಕೆ ಅವರು ತಮ್ಮ ಕವಿತೆಗಳನ್ನು ಕಟ್ಟಿದ ಕಾಲ, ಹೊಸ ಛಂದಸ್ಸಿನ ಪ್ರಯೋಗ ಪರೀಕ್ಷೆಗಳ ಕಾಲವಾಗಿದ್ದುದು ಒಂದು ಕಾರಣವಾದರೆ, ಅವರು ತಾವೇ ಹೇಳಿಕೊಂಡಿರುವಂತೆ 'ಕನ್ನಡದ ಜಾಯಮಾನವನ್ನು ಮೀರದೆ' ಪದ್ಯರಚನೆ ಮಾಡುವ ಒಂದು ನಿರ್ಬಂಧವನ್ನು ಹಾಕಿಕೊಂಡಿದ್ದುದು ಇನ್ನೊಂದು ಕಾರಣ. ಇದನ್ನು ಸ್ವಲ್ಪ ವಿಶದವಾಗಿ ನೋಡೋಣ.

ಗಣರಚನೆ ಪಾದರಚನೆಗಳಲ್ಲಿ ಹಳೆಯ ಬಂಧಗಳ ಕಟ್ಟುಕಟ್ಟಳೆಗಳನ್ನು ಯಥೋಚಿತವಾಗಿ ಬಳಸಿದುದು : (i) ಅಂಶಗಣನಿಷ್ಠವಾದವು (ii) ಮಾತ್ರಾಗಣ ನಿಷ್ಠವಾದವು.

(i) ಅಂಶಗಣನಿಷ್ಠವಾದವು : 'ಇಂಗ್ಲಿಷ್ ಗೀತಗಳು' ಸಂಕಲನದಲ್ಲಿ ಮೂರು ರಚನೆಗಳಿವೆ. ಅವು ಯಾವುವೆಂದರೆ, 'ವಸಂತ', 'ಸರ್ ಜಾನ್ ಮೂರನ್ನು ಹೂಳಿದ್ದು' ಮತ್ತು 'ಬ್ಲೆನ್ ಹೀಮ್ ಕದನ' ಎಂಬವು (ಪ. ೪, ೧೧, ೧೭). ಇವುಗಳಿಂದ ಒಂದೊಂದು ನುಡಿ ತೆಗೆದು. ಇವುಗಳ ಸ್ವರೂಪವನ್ನು ಪರಿಶೀಲಿಸೋಣ.

'ವಸಂತ' ದ ಒಂದು ನುಡಿ :

(೧) ವಸಂತ. ಬಂದ ‖ ಋತುಗಳ. ರಾಜ ತಾ. ಬಂದ
ಚಿಗುರನು. ತಂದ ‖ ಹೆಣ್ಗಳ. ಕುಣಿಸುತ. ನಿಂದ
ಚಳಿಯನು. ಕೊಂದ ‖ ಹಕ್ಕಿಗ. ಳುಲಿಗಳೆ. ಚೆಂದ
ಕೂವೂ, ಜಗ್ ಜಗ್, ಪುವ್ವೀ, ಟೂವಿಟ್ಟವೂ !

ಪದ್ಯದ ಪಾದರಚನೆ. ಪ್ರಾಸವಿನ್ಯಾಸ ನ್ಯಾಶ್ ಕವಿಯ ಮೂಲಕವಿತೆ 'Spring'ನಲ್ಲಿ ಇರುವಂತೆಯೇ. ಆದರೆ ಗಣರಚನೆ ನಮ್ಮದು. ವಿ. ಬ್ರ. (ಯತಿ) ವಿ. ವಿ. ಬ್ರ. ಇದು ಇಲ್ಲಿಯ ರಚನೆ. ಕೊನೆಯ ಪಾದ ರಚನೆ ಸ್ವಲ್ಪ ಭಿನ್ನ. ಪದ್ಯ ಅಂಶಗಣ ಬದ್ಧವಾದುದು ಎನ್ನುವುದು 'ರಾಜ ತಾ', 'ಕುಣಿಸುತ' ಈ ಗಣಗಳನ್ನು ಪರಸ್ಪರ ವಾಗಿ ಹೋಲಿಸಿದಾಗ ತಿಳಿಯುತ್ತದೆ. ಮಾತ್ರಾವಸೌಲ್ಯ ಕ್ರಮವಾಗಿ ೫, ೪ : ಆದರೆ ಎರಡು ವಿಷ್ಣುಗಳು. ಉಳಿದ ನುಡಿಗಳಲ್ಲಿಯೂ ಇಂಥವೇ ರಚನೆಗಳಿವೆ.

'ಸರ್ ಜಾನ್ ಮೂರನ್ನು ಹೂಳಿದ್ದು' ಕವಿತೆಯ ಒಂದು ನುಡಿ ;

(೨) ಒಡಲ ಪೆ. ಟ್ಟಿಗೆಯಲಿ. ಒಪ್ಪವಾ. ದಲು ಇಲ್ಲ
ಬಟ್ಟೆ ಯ. ಪ್ಪಟಿಯಲಿ. ಸುತ್ತಲು. ಇಲ್ಲ,
ನಿದ್ದೆ ಹೋ. ಗುವ ವೀರ. ನಂದದಿ. ಬದ್ದಿದ್ದ
ಯುದ್ಧದ. ನಿಲುವಂಗಿ. ಮುಚ್ಚಿ ಪ್ಯ. ಮೆಲ್ಲ.

ಮೂಲಕವಿತೆಯೂ ಅನುವಾದವೂ ಚತುಷ್ಪದೀ ರೂಪವಾದವು : ಗಣರಚನೆ ನಮ್ಮದು. ಪ್ರಸ್ತಾರ ವಿ. ವಿ. ವಿ. ವಿ. । ವಿ. ವಿ. ವಿ. ಬ್ರ ‖ ವಿ. ವಿ. ವಿ. ವಿ. । ವಿ. ವಿ. ವಿ. ಬ್ರ ‖ ೨-೪ನೆಯ ಪಾದಗಳಲ್ಲಿ ಒಂದು ಅಧಿಕ ವಿಷ್ಣುಗಣ ಸೇರಿರು ವುದನ್ನು ಬಿಟ್ಟರೆ ರಚನೆ ಸಾಂಗತ್ಯವನ್ನು ಹೋಲುತ್ತದೆ. "ಬೇಗ ಒಂ. ದೆರಡು. ಪ್ರಾರ್ಥನೆ. ಯನು ಹೇಳಿ" ಎಂಬ ಪಾದದಲ್ಲಿ (೪ನೆಯ ನುಡಿ) ಬ್ರಹ್ಮದ ಪರ್ಯಾಯವನ್ನು ಗಮನಿಸಬಹುದು. ಉಳಿದ ನುಡಿಗಳಲ್ಲಿಯೂ ಪ್ರಸ್ತಾರ ಮೇಲಿನಂತೆಯೇ.

'ಬ್ಲೆನ್ ಹೀವ್ ಕದನ'ದಿಂದ ಒಂದು ನುಡಿ :

(೩) ಶಮ್ಮಯ್ಯ. ಗುಡಿಸಲ್ಲ. ಮಾಡಿಕೊಂಡಿದ್ದನು
ಆ ಹೊಳೆ. ಯಂಚಿನ. ಲಾಗ
ಸೂರೆ ಹೊಡೆದು. ಬಿಡ. ನೆಲಸವಸುಟ್ಟರ
ತಲೆಯ ತ.ಪ್ಪಿಸಿಕೊಂಡು. ಬೇಗ
ಹೆಂಡತಿ. ಮಕ್ಕಳ. ಕಟ್ಟಿಕೊಂ.ಡೋಡಿದ
ನಿಂತಲ್ಲಿ. ನಿಲ್ಲದೆ. ನೆಲೆಗಾಣ. ದಲೆದು.

ಪಾದರಚನೆ ಮೂಲಕವಿತೆಯಲ್ಲಿರುವಂತೆಯೇ. ಗಣರಚನೆ ನಮ್ಮದು. ಮೊದಲ ೪ ಪಾದಗಳ ಪ್ರಸ್ತಾರ ಸಾಂಗತ್ಯ ಛಂದಸ್ಸಿನ ಪ್ರಸ್ತಾರದ ಹಾಗೆಯೇ. ಮುಂದಿನ ಎರಡು ಪಾದಗಳ ಲಕ್ಷಣ ವಿ. ವಿ. ವಿ. ವಿ. । ವಿ. ವಿ. ವಿ. ಬ್ರ. ಈ ರಚನೆ ಹಿಂದಿನ ಲಕ್ಷ್ಯದಲ್ಲಿ ನಾವು ನೋಡಿರುವುದೇ. ಗಣಪರ್ಯಾಯಗಳು ಇಲ್ಲಿಯೂ ಉಂಟು (೧ನೆಯ ನುಡಿ).

(ii) ಮಾತ್ರಾಗಣನಿಷ್ಪವಾದವು : ತಕ್ಕಮಟ್ಟಿಗೆ .ಅಧಿಕ ಸಂಖ್ಯೆಯ ರಚನೆಗಳು ಈ ಗುಂಪಿನವು. ಪ್ರಸ್ತಾರದ ವೈಚಿತ್ರ್ಯಗಳೂ ವಿಪುಲ. ಹಳೆಯ ಛಂದಸ್ಸಿನ ಕಟ್ಟುಕಟ್ಟಳೆಗಳನ್ನು ಇಟ್ಟುಕೊಂಡವು ಇವು. ಕೆಲವು ಲಕ್ಷ್ಯಗಳನ್ನು ನೋಡೋಣ :

'ಕಾಣಿಕೆ' ಪದ್ಯದ ಒಂದು ನುಡಿ :

(೪) ಮೊದಲು. ತಾಯಿ ಹಾಲ. ಕುಡಿದು
ಲಲ್ಲೆ. ಯಿಂದ. ತೊದಲಿ. ನುಡಿದು
ಕೆಳೆಯ. ರೊಡನೆ. ಬೆಳೆದು. ಬಂದ
ಮಾತ. ದಾವು.ದು –
ನಲ್ಲೆ. ಯೊಲವ. ತೆರೆದು. ತಂದ
ಮಾತ.ದಾವು.ದು –

೩ನೆಯ ಪಾದವನ್ನು ದೀರ್ಘ-ಹ್ರಸ್ವ ಖಂಡಗಳಾಗಿ ವಿಭಜಿಸಿ, ಪುನರಾವರ್ತಿಸಿರುವ ಭೋಗಷಟ್ಪದಿಯ ಅರ್ಧವೆಂದು ಆ ಭಾಗದವರೆಗೆ ಈಗಾಗಲೇ ತಿಳಿಯಲಾಗಿದೆ. ಪ್ರಸ್ತಾರ ೪×೩ (೩ ಪಾದಗಳಲ್ಲಿ) । ೨×೩. ಗ॥ ೪×೩ । ೨×೩. ಗ. ಡಿ.ವಿ.ಜಿ, 'ಖಂಡಭೋಗಷಟ್ಪದಿ' ಎಂದು ಕರೆದಿದ್ದಾರೆ. ಆದರೆ ಶ್ರೀಯವರು ತಾವು ಸೂಚಿಸಿದ್ದಂತೆ ತಿಳಿಯುವ Burn's Stanza ಮಾದರಿಯಲ್ಲಿಯೂ ಪದ್ಯವಿರುವುದು ನಿಜ ; ಪ್ರಾಸವಿನ್ಯಾಸವೂ (ಎ ಎ ಬಿಸಿ ಬಿಸಿ) ಅಲ್ಲಿಯ ಹಾಗೆಯೇ.

ಕುಸುಮಷಟ್ಪದಿಯ ರಚನೆ ಸೌಲಭ್ಯದಿಂದಾಗಿಯೂ ರುಚಿಯಿಂದಾಗಿಯೂ ಶ್ರೀಯವರಿಗೆ ಇಷ್ಟವಾಗಿರುವಂತಿದೆ. ಅದರ ಗುಣರಚನೆಯಲ್ಲಿ ಅಂತಹ ವ್ಯತ್ಯಾಸ

ವೇನನ್ನೂ ಮಾಡಿಕೊಳ್ಳದೆ ಪಾದ ಸಂಘಟನೆಗಳಲ್ಲಿ ಮಾತ್ರ ಕುಶಲ ಸಂಯೋಜನೆ ನಡಸಿರುವುದುಂ ಕಾಣುತ್ತದೆ. ಉದಾಹರಣೆಗೆ ಕೆಲವನ್ನು ನೋಡಬಹುದು :

(೫) ಅಡವಿಮರ. ದಡಿಯಲ್ಲಿ
ನನ್ನೊಡನೆ. ಕೆಡೆದಲ್ಲಿ
ಇನಿಯ : ಹಕ್ಕಿಯ : ಕೊರಲ
ತನ್ನ : ಕೊರಲಲಿ : ತಂದು. ನಲಿವನಾ. ರೈ-
ಇತ್ತ ಬಾ. ಇತ್ತ ಬಾ. ಇತ್ತ ಬಾ. ರೈ
ಎತ್ತನೋ.ಡಿಲ್ಲೆಲ್ಲ
ಮತ್ತೆ ಹಗೆ. ಯೊಂದಿಲ್ಲ
ಕೊರೆವ ಚಳಿ. ಬಿರುಗಾಳಿ· ಯಲ್ಲದಿ. ಲ್ಲೈ ॥

ಈ ನುಡಿಯಲ್ಲಿ ೩ನೆಯ ಚಿಕ್ಕ ಪಾದವನ್ನೂ ೫ನೆಯ ದೊಡ್ಡ ಪಾದವನ್ನೂ ತೆಗೆದರೆ ರಚನೆ ಕುಸುಮಷಟ್ಪದಿಗೆ ಸದೃಶವಾದುದು. ಮೂಲಕವಿತೆಯ ಪಾದ ವಿನ್ಯಾಸವನ್ನು ಅನುಸರಿಸಲು ಹೊರಟದ್ದು ಕಾರಣವಾಗಿ, ಅನುವಾದದಲ್ಲಿ ಹೀಗಾಗಿದೆ.

'ಮುಪ್ಪು ಯೌವನ'ವೆಂಬ ಅದರ ಮುಂದಿನ ಕವಿತೆಯಲ್ಲಿ ಅಂತ್ಯಪ್ರಾಸ ರೂಢಿಸಿದ ಕೊನೆಯೆರಡು ನುಡಿಗಳು ನೇರವಾಗಿ ಕುಸುಮಷಟ್ಪದಿಗಳೇ. ಮೊದಲಿನೆರಡು ನುಡಿಗಳು ಪಾದರಚನೆಯ ದೃಷ್ಟಿಯಿಂದ ಭಿನ್ನವಾದವು. 'ಕನಕಾಂಗಿ' ಎಂಬ ೨೪ ನುಡಿಗಳ ಸುದೀರ್ಘ ಕವಿತೆಯನ್ನು ಕೆಲವರು 'ಕುಸುಮ ಚೌಪದಿ'ಯೆಂದುಂ ಹೇಳುವುದನ್ನು ಒಪ್ಪಬಹುದು. ಷಟ್ಪದೀರೂಪವನ್ನು ಚೌಪದೀರೂಪವಾಗಿ ವಿನ್ಯಾಸಗೊಳಿಸಿರುವುದರ ಹೊರತು ಗಣವಿನ್ಯಾಸದಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಪ್ರಾಸವಿನ್ಯಾಸ ಮೂಲಕವಿತೆಯ ಜಾಡು ಹಿಡಿಯದೆ, ಯುಗ್ಮನಿಷ್ಠ ಆದಿಪ್ರಾಸವನ್ನು ಒಲಿದಿರುವುದು ಒಂದು ವಿಶೇಷ. ಚೌಪದಿಯಾದರೂ ಪಾದರಚನೆಯಲ್ಲಿ ಮೂಲಕವಿತೆಯನ್ನು ಯಥಾ ರೀತಿಯಾಗಿ ಅನುಸರಿಸಿದೆ ಎನ್ನುವುದನ್ನು ಹೇಳಬೇಕು.

ನಡುಗನ್ನಡ ಕಾಲದ ದ್ವಿಪದಿಗಳ ಹಾಗೂ ಮಾತ್ರಾಚೌಪದಿಗಳ ರಚನೆಗಳು ತಾಳಮಾತ್ರಾಲಯದ ಧಾಟಿಗೆ ಚೆನ್ನಾಗಿ ಒಗ್ಗಿರುವಂಥವು. ಶ್ರೀಯವರು ಅಂಥ ರಚನೆಗಳನ್ನು ಕೆಲವೆಡೆ ತಂದಿದ್ದಾರೆ. ಮಾತ್ರಾಚೌಪದಿಗಳ ಸಾದೃಶ್ಯಗಳನ್ನು ನೋಡೋಣ. ಇವು ಪಂಚಮಾತ್ರಕಗಳೆಂಬುದು ತಿಳಿದಿದೆ. ಪ್ರಸ್ತಾರ ೫. ೫. ೫. ೩. 'ನಿನ್ನೊಳೆನಗೊಲವಿಲ್ಲ' ಕವಿತೆಯಲ್ಲಿ ೩ನೆಯ ಪಾದದ ಕೊನೆಗೆ ೫ ಮಾತ್ರೆಗಳ ಪೂರ್ಣಗಣವೊಂದು ಬಂದಿರುವುದರ ಹೊರತು ನುಡಿಗಳ ನಡೆ ಮಾತ್ರಾಚೌಪದಿಗಳ ಹಾಗೆಯೇ. 'ಅರೆ ಯಾವುದಿಲ್ಲಿ' ಕವಿತೆಯಲ್ಲಿ ಆದ್ಯಂತದ ಕೆಲವು ಹ್ರಸ್ವಪಾದಗಳನ್ನು

ಬಿಟ್ಟರೆ ನಡುವೆ ಇರುವ ಎರಡು ನುಡಿಗಳು ಎರಡು ಮಾತ್ರಾಚೌಪದಿಗಳೇ. 'ಮನಸ್ತಾಪ'ದಲ್ಲಿ ಇವೇ ಮಾತ್ರಾಚೌಪದಿಗಳು ಒಂದೊಂದು ದ್ವಿಪದಿಯಿಂದ ವರ್ಧಿಸಿ ಆರು ಪಾದಗಳ ಒಂದೊಂದು ನುಡಿಯಾಗಿದೆ, ಅಷ್ಟೆ. ಮುಂದುವರಿದರೆ, 'ಹೇಳದಿರು ಹೋರಾಡಿ ಫಲವಿಲ್ಲವೆಂದು' ಕವಿತೆ ನೇರವಾಗಿ ೪ ಮಾತ್ರಾಚೌಪದಿಗಳಿಂದ ಕಟ್ಟಿದ ನುಡಿಗಳನ್ನುಳ್ಳದ್ದೇ ಆಗಿದೆ. 'ಜೀವ'ದ ಮೊದಲೆರಡು ನುಡಿಗಳೂ ಹೀಗೆಯೇ. ಇಲ್ಲಿ ಕೊನೆಯ ಒಂದು ನುಡಿಯನ್ನು 'ಮಾತ್ರಾಸಾಂಗತ್ಯ'ವೆಂದು ಬೇಕಾದರೆ ಕರೆಯಬಹುದು (೫. ೫. ೫. ೫। ೫. ೫. ೪॥ ಉಳಿದರ್ಧವೂ ಹೀಗೆಯೇ). ಇಷ್ಟು ರಚನೆಗಳನ್ನೂ ಪ್ರತಿನಿಧಿಸುವಂತೆ ಒಂದು ಉದಾಹರಣೆಯನ್ನು ಎತ್ತಿಕೊಡಬಹುದು.

'ಹೇಳದಿರು ಹೋರಾಡಿ ಫಲವಿಲ್ಲವೆಂದು' ಕವಿತೆಯ ಒಂದು ನುಡಿ :

(೬) ತೆರೆ ಬಳಲಿ. ಹೊಯ್ದು ಹೊ.ಯ್ದುರುಳುರುಳಿ. ಚೆಲ್ಲಿ
ಬೆರಳು ನೆಲ.ವನು ಕೊಳದೆ. ಕುದಿಯುತಿಹು.ದಿಲ್ಲಿ –
ಬಲು ಹಿಂದೆ. ಕೊರಕಲಲಿ. ಕೋವಿನಲಿ. ತೂರಿ
ಉಲಿಯದೆಯೆ. ಬಾರದೇ. ಕಡಲಲೆಯ. ಬೀರಿ !

ಇದೊಂದು ಆದ್ಯಂತ ಯುಗ್ಮ ಪ್ರಾಸನಿಷ್ಠ ಮಾತ್ರಾಚೌಪದಿಯೇ ಆದರೂ ಪಾದಯುಗ್ಮಗಳನ್ನಷ್ಟೇ ಗಣಿಸಿ ದ್ವಿಪದಿಯೆಂದೂ ತಿಳಿಯಬಹುದು. ಹೊಸಗನ್ನಡ ಕವಿತೆಯ ಜಾಯಮಾನಕ್ಕೆ ಒಗಿದ ಮಾತ್ರಾಬಂಧಗಳು ಇವು. ನಿರ್ವಹಣೆಯಲ್ಲಿ ಸೌಲಭ್ಯ ಮಿಗಿಲು.

ಈಗ 'ಹೊಂಗನಸುಗಳು' ಸಂಕಲನದ ಕಡೆಗೆ ಹೊರಳೋಣ. 'ಶ್ರೀಕೃಷ್ಣರಾಜ ರಜತಮಹೋತ್ಸವ ಪ್ರಗಾಥ'ದ ೪ನೆಯ ಖಂಡದ ಮೊದಲೆರಡು ನುಡಿಗಳೂ 'ಬಾನ್ ಕೊಂಡ ಕೃಷ್ಣನ್' ಎಂಬುದರ ಕೆಲವು ಪಾದಯುಗ್ಮಗಳೂ ಮಾತ್ರಾಚೌಪದಿಯ ನುಡಿಗಳು, ಅವುಗಳ ಭಾಗಗಳು. ಅಷ್ಟೇಕೆ ? 'ಶುಕ್ರಗೀತೆ'ಯ ಪ್ರಸಿದ್ಧ ಫಲಶ್ರುತಿಯ ಭಾಗ ಮೊದಲೆರಡು ಪಾದಗಳ ಹೊರತಾಗಿ (ಇವನ್ನೂ ತಕ್ಕ ಹೊಂದಿಕೆ ದೀರ್ಘೀಕರಣಗಳಿಂದ ಲಕ್ಷಣಕ್ಕೆ ಅನುಗುಣವಾಗಿ ಪ್ರಸ್ತಾಪಿಸಬಹುದು) ಉಳಿದ ನುಡಿಗಳು ನ್ಯೂನಚತುರ್ಥಪಾದದ ಮಾತ್ರಾಚೌಪದಿಯ ನುಡಿಗಳೇ ಸೇರಿದ ಭಾಗ ಎಂದು ತಿಳಿಯಬಹುದು. ಹಾಗೆಯೇ 'ಮೈಸೂರು ಮಕ್ಕಳು' ಕವಿತೆಯ ನಿಡು ಸಾಲುಗಳೆಲ್ಲ ಸೀಸಪದ್ಯದ ಪಾದಗಳ ರಚನೆಯನ್ನು ಅನುಸರಿಸಿದವು ; ಎಂದರೆ ಅವು ೬ ಪಂಚಮಾತ್ರಾ ಗಣಗಳು + ೨ ತ್ರಿಮಾತ್ರಾಗಣಗಳಿಂದಾದವು. ವೃತ್ತದ ಇಕ್ಕಟ್ಟಿನ ಗಡಿ ದಾಟಿ ಇಲ್ಲಿ ಸ್ವಾತಂತ್ರ್ಯದ ಹೆಬ್ಬಯಲಲ್ಲಿ ಈ ಬಂಧ ಸುಳಿಯುವಂತಾದುದು ಹರ್ಷದಾಯಕವಾಗಿದೆ. ಪ್ರಗಾಥದ ಭಾವೋನ್ಮೇಷ ವಸ್ತು ವಿಸ್ತಾರಗಳಿಗೆ ಸೀಸಪದ್ಯ ಸೊಗಸಾಗಿ ಹೊಂದಬಲ್ಲುದು ಎನ್ನುವುದನ್ನು ತೋರಿಸಿ ಕೊಟ್ಟಂತಾಗಿದೆ.

೪

## ಸ್ವನಿಯಂತ್ರಿತ ಬಂಧಗಳು – ೨

ಈ ವಿಭಾಗದ ಬಂಧಗಳನ್ನೆಲ್ಲ ಸೋದಾಹರಣವಾಗಿ, ವಿವರವಿಶದವಾಗಿ ನಿರೂಪಿಸುವುದು ಇಲ್ಲಿ ಸಾಧ್ಯವಿಲ್ಲ. ಕೆಲವು ಸಾಮಾನ್ಯ ಸಂಗತಿಗಳನ್ನಷ್ಟೇ ಗುರುತಿಸಿ, ತೃಪ್ತಿಪಟ್ಟುಕೊಳ್ಳಬೇಕಾಗಿದೆ. ಶ್ರೀಯವರ ಕವಿತೆಗಳು, ಬಹುಮಟ್ಟಿಗೆ ೩, ೪, ೫ ಮತ್ತು ೬ ಮಾತ್ರೆಗಳ ತನಿಲಯದ, ೩-೪, ೩-೫ರ ಮಿಶ್ರಲಯದ ರಚನೆಗಳೇ ಆಗಿವೆ. ಗಣಸಂಖ್ಯೆ ಸಂಯೋಜನೆಗಳು ಸೊಗಸು ಸಮತೋಲನಗಳಿಗೆ ಭಂಗ ಬಾರದಂತೆ ಅನಿರ್ದಿಷ್ಟವಾಗಿರುತ್ತವೆ, ವ್ಯತ್ಯಾಸಗೊಳ್ಳುತ್ತಿರುತ್ತವೆ. ಪಾದಗಳ ರಚನೆಯೂ ಹೀಗೆಯೇ. ಅವುಗಳ ಸಂಖ್ಯೆ ದೀರ್ಘತೆಯ ಪ್ರಮಾಣ ಎರಡೂ ಸೊಗಸು ಸಮತೋಲನಗಳಿಗಾಗಿ ಉಚಿತರೀತಿಯಲ್ಲಿ, ವಿವಿಧವಾಗಿ ವಿನ್ಯಾಸಗೊಳ್ಳುತ್ತವೆ. ಪಾದಗಳ ಹಾಗೂ ನುಡಿಗಳ ಕಟ್ಟನ್ನು ಮೊದಲಬಾರಿಗೆ ಮೀರಿ ಹೊಸ ರೀತಿಯ ನುಡಿಗಳ ರಚನೆಗೆ ಶ್ರೀಯವರು ಮಾರ್ಗದರ್ಶಕರಾದರೆಂದು ತಿಳಿದಿದೆ. ಹೀಗೆ ಮೀರಲು, ಹೊಸ ಮಾರ್ಗಗಳನ್ನು ಹೂಡಲು ಅವರಿಗೆ ಮುಖ್ಯ ಪ್ರೇರಣೆ ದೊರೆತುದಂ ಇಂಗ್ಲಿಷ್ ಭಾಷೆಯ ಕವಿಗಳ ಕವಿತೆಗಳಲ್ಲಿ ಕಂಡುಬರುವ ಮಾದರಿಗಳಿಂದಲೇ. ಅವರು ತಮ್ಮ ಬಹುಪಾಲು ಅನುವಾದಿತ ಕವಿತೆಗಳಲ್ಲಿ, ಪಾದಗಳ ಸಂಖ್ಯೆ ದೀರ್ಘತೆಯ ಪ್ರಮಾಣಗಳನ್ನೂ ನುಡಿಗಳ ಸಂಖ್ಯೆ ಕಟ್ಟಡಗಳನ್ನೂ ತಾವು ಅನುಸರಿಸಿದ ಮೂಲ ಕವಿತೆಗಳಲ್ಲಿ, ಹೇಗೆ ಅವು ಕಂಡುಬರುತ್ತವೆಯೋ ಹಾಗೆಯೇ ಇಟ್ಟುಕೊಂಡಿರುವಂತೆ ತೋರುತ್ತದೆ. ಗಣವಿನ್ಯಾಸದಲ್ಲಿ, ಅಲ್ಲಿಯ ರಚನೆ ಸ್ವರಾಘಾತ ನಿಯಮವನ್ನು ಹಿಡಿದದ್ದು; ಇಲ್ಲಿಯದು ವಿಭಿನ್ನ ಮಾತ್ರಾಲಯಗಳನ್ನು ಅನುಸರಿಸಿದ್ದು. ಇದರಿಂದಾಗಿ ಗಣಗಳ ಸಂಖ್ಯೆ, ಸ್ವರೂಪ, ನಾದಗುಣ, ಯತಿವಿರಾಮ ಮೊದಲಾದವುಗಳಲ್ಲಿ ಪ್ರತ್ಯೇಕತೆಯುಂಟು. ಇನ್ನು ಪ್ರಾಸದ ವಿಷಯ : ಆದಿಪ್ರಾಸದ ವಿಷಯದಲ್ಲಿ ಶ್ರೀಯವರಿಗೆ, ಪಂಜೆಯವರು, ಎಸ್. ಜಿ. ನರಸಿಂಹಾಚಾರ್, ಎಚ್. ನಾರಾಯಣರಾಯರು ಮೊದಲಾದವರಿಗೆ ಇದ್ದಂತೆ ವೀರವ್ರತವೇನೂ ಇರಲಿಲ್ಲ. ಐಚ್ಛಿಕವಾಗಿ ಅವರು ಅದನ್ನು ಒಪ್ಪಿದ್ದಾರೆ. ತೀರ ಮೊದಲಿನ ಕವಿತೆಯೆಂದು (೧೯೧೪) ಈಗ ಗುರುತಿಸಿರುವ, 'ಭರತಮಾತೆಯ ವಾಕ್ಯ'ದಲ್ಲಿ ಆದಿಪ್ರಾಸನಿಷ್ಠೆ ಸ್ಫುಟವಾಗಿ ತೋರಿದೆ; ಎರಡು ನುಡಿಗಳಲ್ಲಿ ಮಾತ್ರ ಅದರ ಉಲ್ಲಂಘನೆಯಿದೆ. ಶ್ರೀಯವರ ಕವಿತೆಗಳಲ್ಲಿ ನುಡಿಗಳು ಅಂತ್ಯಪ್ರಾಸದ ವಿವಿಧ ವಿನ್ಯಾಸಗಳಿಂದ ಸೊಗಸುವುದೇ ಸಾಮಾನ್ಯ. ಈ ವಿನ್ಯಾಸಗಳನ್ನು ಅವರು 'ಇಂಗ್ಲಿಷ್ ಗೀತಗಳು' ಸಂಕಲನದ ಮಟ್ಟಿಗೆ ಮೂಲ ಕವಿತೆಗಳಲ್ಲಿ ಅವು ರೂಪಗೊಂಡಿರುವಂತೆಯೇ ರೂಪಗೊಳಿಸಿರುವ ಹಾಗೆ ಬಹುಮಟ್ಟಿಗೆ ತೋರುತ್ತದೆ. ಇದೇನೂ ಕಡಿಮೆಯಾದ ಸಾಧನೆಯಲ್ಲ,

ಹೊಸಗನ್ನಡ ಛಂದಸ್ಸಿನ ಪ್ರಮುಖ ಲಕ್ಷಣಗಳಲ್ಲಿಯೇ ಸೇರುವ ಪಾದಾಂತರಾಳ ಮತ್ತು ಪಾದಾಂತ ಸ್ಥಾನಗಳ ಮುಡಿ ಪದ್ಮಗಣಗಳೂ ಪ್ಲುತ ಕಂಪಿತಗಳೂ ಹ್ರಸ್ವೀಕರಣ-ದೀರ್ಘೀಕರಣಗಳೂ ಗಣಪರಿವೃತ್ತಿಯೂ ಮೌನ ಅನಾಗತಗಳೂ ಇತರ ಇಂತಹ ಲಕ್ಷಣಗಳೂ ಶ್ರೀಯವರ ಕವಿತೆಗಳಲ್ಲಿ ಯಥೇಷ್ಟವಾದ ಪ್ರಮಾಣದಲ್ಲಿಯೇ ಕಾಣಲು ಸಿಗುತ್ತವೆ, ವಾಚನದಲ್ಲಿ ಅನುಭವಕ್ಕೆ ಬರುತ್ತವೆ.

ಶ್ರೀಯವರ ಕವಿತೆಗಳನ್ನು ಮುಖ್ಯ ಲಯಗಳಿಗೆ ಅನುಸಾರವಾಗಿ ಹೀಗೆ ವಿಂಗಡಿಸಬಹುದು.

(i) ತ್ರಿಮಾತ್ರಾಲಯದವು : ಮುದ್ದಿನ ಕುರಿಮರಿ. ಬಡವನ ಹುರುಡು. ಮಾದ ಮಾದಿ, ಇರುಳ ದೇವಿ, ಕನಸು ಬೇಕು ಕನಸು, ವೀರಜನ್ಮ (ಇಂಗ್ಲಿಷ್ ಗೀತಗಳು).

(ii) ಚತುರ್ಮಾತ್ರಾಲಯದವು : ಸುಂದರಿ ಕಮಲೆ, ಬಿಂಕದ ಸಿಂಗಾರಿ, ಪದುಮ, ನಿರಾಶೆ (ಇಂಗ್ಲಿಷ್ ಗೀತಗಳು).

(iii) ಪಂಚಮಾತ್ರಾಲಯಂದವು : ಮಳೆಬಿಲ್ಲು. ವೀರಗಲ್ಲು. ರಾವುತರ ಧಾಳಿ, ಇಂಗ್ಲೆಂಡ್ ನಾವಿಕರು. ಆಳೌ ಬ್ರಿಟಾನಿಯಾ. ಇಂಗ್ಲೆಂಡ್. ದೇಶಸೇವಕ. ನನ್ನ ಪ್ರೇಮದ ಹುಡುಗಿ, ಪ್ರೇಮ ರಹಸ್ಯ. ಬೇಡ ಬಿಡು ನಾವಲೆವುದಿನ್ನು. ಹೆದರುವೆನು ನಾನಿನ್ನ ಬಿನ್ನಾಣಕೆಲೆ ಹೆಣ್ಣೆ, ಒಂದು ಮಾತನು ಲೋಕ ಹೊಲೆಗೆಡಿಸಿ ಕೊಂಡಿಹುದು, ಪ್ರೇಮದ ಸಂಕಟ, ಅರೆ ಯಾವುದಿಲ್ಲಿ ? ಹೊಯ್ ಹೊಯ್ ಹೊಯ್. ನೆಮ್ಮುಗೆಯ ನಾಡು. ಎರಡು ಮನಸ್ಸು. ಕವಿಶಿಷ್ಯ, ಸುಖಜೀವನ. ಜೀವ. ಪ್ರಾರ್ಥನೆ. ಬಂದರು ದಾಟುವುದು (ಇಂಗ್ಲಿಷ್ ಗೀತಗಳು); ಕನ್ನಡ ತಾಯ ನೋಟ. ಕನ್ನಡದ ಬಾವುಟ. ಬಾನ್ ಕೊಂಡ ಕೃಷ್ಣನ್. ಶ್ರೀ ಜಯನ ಬೆಳಕು, ಶುಕ್ರಗೀತೆ (ಹೊಂಗನಸುಗಳು).

(iv) ೩-೪ ಮಾತ್ರೆಗಳ ಮಿಶ್ರಲಯದವು : ಬಾನಾಡಿ, ರಾಯಲ್ ಜಾರ್ಜು ಮುಳುಗಿ ಹೋದದ್ದು. ಮೇಲು ನೋಟಕೆ ಮರೆಯಲಾರಳು. ಮುದಿಯ ರಾಮಗೌಡ, ಒಂದು ಮುತ್ತು, ಬಿಟ್ಟ ಹೆಣ್ಣು. ದುಃಖಸೇತು. ಅಳಿನಿ, ಗಾನ ಮೊಲುಪಿನ ಕೊರಲು ಕುಗ್ಗಲು. ಕಳೆದ ಹಿಂದಿನ ದಿನಗಳು, ನನ್ನ ಮೇರಿ. ಹಳೆಯ ಪಳಕೆಯ ಮುಖಗಳು (ಇಂಗ್ಲಿಷ್ ಗೀತಗಳು) ; ಭರತಮಾತೆಯ ನುಡಿ (ಹೊಂಗನಸುಗಳು).

(v) ೩-೫ ಮಾತ್ರೆಗಳ ಮಿಶ್ರಲಯದವು : ಚೋಳ ಕನ್ನೆಯರು. ದುಃಖ ಸಮಯ, ಪೆಡಸು ದಾರಿ.

(vi) ವಿಭಿನ್ನ ಲಯದವು : ಕಾಳಿಗದ ಪದ (ಇಂಗ್ಲಿಷ್ ಗೀತಗಳು) ; ಶ್ರೀಕೃಷ್ಣರಾಜ ಕಜಿತಮಹೋತ್ಸವ ಪ್ರಗಾಥ (ಹೊಂಗನಸುಗಳು).

(vii) ೬ ಮಾತ್ರೆಗಳ ಲಯದಲ್ಲಿ ಕಟ್ಟಿದ ಗೀತಭಾಗಗಳನ್ನು 'ಅಶ್ವತ್ಥಾಮನ್' ಮತ್ತು 'ಪಾರಸಿಕರು' ನಾಟಕಗಳ ಮೇಳಗೀತಗಳಲ್ಲಿ ಕೆಲವೆಡೆ ಕಾಣಬಹುದು.

ಕೆಲವು ವೈಚಿತ್ರ್ಯಗಳನ್ನು ಮುಂದೆ ಗುರುತಿಸಬಹುದು. ಗಣರಚನೆ ಲಯಗತಿ ಇವು ಕರ್ತೃವಿನಿಷ್ಟದಂತೆ ವಾಚಕನ ಇಷ್ಟದಂತೆ ಸ್ವಲ್ಪ ಬೇರೆಯಾಗಿಯೂ ಇರುವುದು ಸಾಧ್ಯ.

'ಮುಪ್ಪು ಯೌವನದ' ಒಂದು ನುಡಿ

(೭) ಎಲೆ : ಮುಪ್ಪೆ. ಸಾರತ್ತ
ಯೌವನವೆ. ಬಾರಿತ್ತ
    ಬರುವಳದೊ. ಚಿಕ್ಕವಳು. ನನ್ನ ಚೆಲು.ವೆ
ಮುಪ್ಪೆ : ನಡೆ. ನಡೆ : ಒಲ್ಲೆ
ಮುದಿಕುರುಬ. ನಿಲ್ಲಲ್ಲೆ
    ಬಂದಳದೊ. ಚಿಕ್ಕವಳು. ನನ್ನ ಚೆಲು.ವೆ ॥

ಮುಖ್ಯಲಯ ೫ ಮಾತ್ರೆಗಳದು, ಆದರೆ ೨ : ೩, ೩ : ೨ರ ಪರಿವೃತ್ತಿಗಳು ಬಂದಿವೆ. ೩,೬ ನೆಯ ಪಾದಗಳ ಕೊನೆಯಲ್ಲಿ ಮುಡಿಯುಂಟು. ಬಂಧ ಕುಸುಮಷಟ್ಪದಿಗೆ ಸದೃಶ.

'ಕಾಳಿಗದ ಪದ' ದಿಂದ ಒಂದು ನುಡಿ :

(೮) ಕಾಳಿ. ಹರೆ. ಕೊಂಬು. ಗಳ
    ಎಳೆ. ಪೊಳಗಿ. ಪS + ಳಿ
ನಾಡು. ಗಳ. ಕುಳ. ಗಳನು
    ಕೂಡಿ. ಕೊಳ. ಪೇS + ಳಿ ॥

ಸಂಕೀರ್ಣಲಯದ ರಚನೆಯಿದು. ತಕ್ಕ ಭಾವಾನುಸಾರಿ ವಾಚನದಿಂದ ೩, ೫, ೬, ೩–೪ ಈ ಲಯಗಳನ್ನು ಹಿಡಿದು ಸಾಗುವ ಸ್ಥಿತಿಸ್ಥಾಪಕ ಗುಣವನ್ನು ಹೊಂದಿದೆ. (ಪದ್ಯದ ೪ನೆಯ ನುಡಿಯಲ್ಲಿ ೩–೪ರ ಲಯವನ್ನು ಕಾಣಬಹುದು.) ಮೇಲಿನ ಪ್ರಸ್ತಾರದಲ್ಲಿ ದೀರ್ಘೀಕರಣ, ಪ್ಲುತ, ಮುಡಿ ಇವುಗಳಿಂದ ಕೂಡಿದ ತ್ರಿಮಾತ್ರಾ ಲಯಗತಿಗಳನ್ನು ಗಮನಿಸಬಹುದು.

'ರಾಯಲ್ ಜಾರ್ಜ್ ಮುಳುಗಿ ಹೋದದ್ದು' ಕವಿತೆಯ ಒಂದು ನುಡಿ :

(೯) ಎತ್ತಿ. ಮೇಲಕೆ. ಹಡಗ. ನು !
ನಮ್ಮ. ಹಗೆಯದೆ. ನಡುಗ. ನು !
ಕುಡಿತ. ಮರೆತದಿ. ಬಿಡದೆ. ಇಂಗ್ಲೆಂಡ್.
ಸಲಿಸು. ಕಂಬನಿ. ಕಡವ. ನು ।

ಈ ನುಡಿಯು ನಡೆ ೩-೪ರ ಮಿಶ್ರಲಯದ್ದು. ೩ನೆಯ ಪಾದದ ಕೊನೆಗೆ ೪ ಮಾತ್ರೆಗಳ ಒಂದು ಪೂರ್ಣಗಣವೇ ಬಂದಿದೆ; ಉಳಿದ ಪಾದಗಳಲ್ಲಿ ಮುಡಿಗೆ ಆ ಬೆಲೆ ಸಲ್ಲುತ್ತದೆ.

'ಇಂಗ್ಲೆಂಡ್ ನಾವಿಕರು' ಕವಿತೆಯ ಒಂದು ನುಡಿಯ ಭಾಗ :

(೧೦) ನಿಮ್ಮ ಪಿತೃ.ಗಳು ಧೀರ.ರು – ತೆರೆತೆರೆಗೆ
ಹೊಮ್ಮುವರು. ಹುರಿಗೊಳಿಸ. ಲು
ಹಡಗಿ : ನಟ್ಟವೆ : ಅವರು. ಕಾದಿ: ಹೆಸರಾದ: ಕಣ
ಕಡಲ : ಸುಳಿ. ಹೊಳೆದ ಕು. ೪

ಇಲ್ಲಿಯದು ೫ ಮಾತ್ರೆಗಳ ಲಯ. ಗಣಪರಿವೃತ್ತಿಗಳುಂಟು. ಮೊದಲೆರಡು ಪಾದಗಳ ರಚನೆ 'ಅರ್ಜುನ ಜೋಗಿ ಹಾಡು' ಮಟ್ಟಿನಲ್ಲಿ ಕಂಡುಬರುವ ಏಕಾಕ್ಷರ ಸಂಘಟನೆಯ ಪಾದಾಂತರಾಳದ ಮುಡಿ, ಪ್ರತ್ಯೇಕ ಮೀಟುಗಣದ

ಮಣಿಪುರಕೆ. ಬಂದುವಾ.ಗ – ಗಿಣಿಗಳು
ದಣಿದು ಮಲ. ಗಿದುವು ಬೇ.ಗ

ಎಂಬಂತಹ ರಚನೆಗೆ ಸದೃಶವಾದುದು.

'ಇಂಗ್ಲೆಂಡ್' ಕವಿತೆಯಲ್ಲಿ ಒಂದು ನುಡಿ :

(೧೧) ಬಳುಕುವೆವೆ. ಭಕ್ತಿಯಲಿ. ನಾವು
ಇಂಗ್ಲೆಂಡ್. ನನ್ನಿಂಗ್ಲೆಂಡ್
ಕೊಳು : ಕೊಲಿಸು. ನಿನ್ನವರು. ನಾವು
ನನ್ನ ಇಂಗ್ಲೆ.ಂಡ್

ಪದ್ಯದ ನಡೆ ಪಂಚಮಾತ್ರೆಗಳದು. ಪ್ರಸ್ತಾರ ಮೇಲುನೋಟಕ್ಕೆ ತೊಡಕಿನದು. ಆದರೆ ಮೇಲೆ ತೋರಿಸಿರುವಂತೆ ೫. ೫. ಪ। ೫ (೪+ಮೌನ). ೫ (ತ್ವರಿತೋಚ್ಚಾರದಿಂದ ಹ್ರಸ್ವೀಕರಣಗೊಂಡ ಷಣ್ಮಾತ್ರಾಗಣ) । ೨ : ೩. ೫. ಪ। ೫. ಮು.

'ಬಡವನ ಹುರುಡು' ಪದ್ಯದ ಒಂದು ನುಡಿ :

(೧೨) ಏನೆ. ಇರಲಿ. ಏನೆ. ಇರಲಿ
ಥಳಕು. ಪಳುಕಗಳೇನೆ. ಇರಲಿ
ಯಾರು. ಸಾಜ. ಅವನೆ. ರಾಜ
ಭಂಗ. ಬಡತನ. ಏನೆ. ಇರಲಿ !

ಈ ನುಡಿ ತ್ರಿಮಾತ್ರಾಲಯದ್ದು. ಇದರಲ್ಲಿ ೨ನೆಯ ಮತ್ತು ೪ನೆಯ ಪಾದಗಳ ೨ನೆಯ ಗಣ ತ್ವರಿತೋಚ್ಚಾರದಿಂದ ಕುಗ್ಗುವ ಹ್ರಸ್ವೀಕೃತಗಣ. ಈ ತೆರನ ಗಣಗಳು ಬೇರೆ ನುಡಿಗಳಲ್ಲಿಯೂ ಅಲ್ಲಲ್ಲಿ ಬಂದಿವೆ. ಭಾವದ ಗತಿಗೆ ಹೊಂದಿಕೊಳ್ಳುವುದರಲ್ಲಿ ಅವುಗಳ ಸಾರ್ಥಕ್ಯವಿದೆ. ಶ್ರೀಯವರಿಗೆ ಈ ಪ್ರಯೋಗಕ್ಕೆ ಪ್ರೇರಣೆ ಇಂಗ್ಲಿಷ್

ಮೂಲದಲ್ಲಿಯೇ ದೊರೆತಿರುವಂತಿದೆ. ಮೂಲದ ಕವಿತೆ ಬರ್ನ್ಸ್ ಕವಿಯ A Man's a Man for A' that ಎಂಬುದರಲ್ಲಿ, ಪ್ರತಿ ನುಡಿಯಲ್ಲಿಯೂ ವರ್ಣಲೋಪ ಚಿಹ್ನೆ(ತೇಲುಗೆರೆ)ಗಳನ್ನು ಸಮೃದ್ಧವಾಗಿ ಬಳಸಿ. ಗಣಗಳನ್ನು ಕಟ್ಟುವ ಪದಗಳ ಉಚ್ಚಾರ ಕಾಲವನ್ನು ಕುಗ್ಗಿಸಿರುವುದು ಕಾಣುತ್ತದೆ. ಅದನ್ನು ಕಂಡಾಗ ಶ್ರೀಯವರಿಗೆ ಈ ಅಪೂರ್ವ ಪ್ರಯೋಗವನ್ನು ಮಾತ್ರಾಲಯದಲ್ಲಿಯೂ ಏಕೆ ತರಬಾರದು ಎನ್ನಿಸಿದ್ದರೆ ಆಶ್ಚರ್ಯವೇನಿಲ್ಲ.

ಮೇಲಿನ ನುಡಿಗೆ ಮೂಲವಾದ ನುಡಿಯನ್ನು ಉದ್ಧರಿಸಿ ನೋಡಬಹುದು :

For a' that, an' a' that,
Their tinsel show an' a' that,
The honest man, tho' e'er sae poor,
is king o' men for a' that'.

'ಬಿಂಕದ ಸಿಂಗಾರಿ'ಯ ಒಂದು ನುಡಿ :

(೧೩) ಹೇಳಲೆ. ಹಕ್ಕಿ. ಚೆಲುವನು. ಸಿಕ್ಕ
ನನಗೆ ಮ.ದುವೆಯೆಂ.ದು
ಆಳಿ. ಬ್ಬಿಬ್ಬರು. ಕೇರಿಯ. ಸುತ್ತಿ
ಹೆಗಲಲಿ. ಹೊತ್ತಂ.ದು ॥

ಈ ನಾಲ್ಕು ಮಾತ್ರೆಗಳ ಲಯದ ನುಡಿಯಲ್ಲಿ 'ಹಕ್ಕಿ', 'ಸಿಕ್ಕಿ' ಪದ್ಮಗಣಗಳು : ೨-೪ನೆಯ ಪಾದಗಳ ಅಂತ್ಯಾಕ್ಷರಗಳು 'ಮುಡಿ'ಗಳು. ಹೊಸಗನ್ನಡ ಛಂದಸ್ಸಿನಲ್ಲಿ ಈ ಬಗೆಯ ಪಾದ ಸಂಘಟನೆ, ಗಣರಚನೆಗಳು ತುಂಬ ಪ್ರಚುರವಾದವು ಎಂಬುದು ತಿಳಿದೇ ಇದೆ.

'ಮುದಿಯ ರಾಮಗೌಡ' ಕವಿತೆಯ ಒಂದು ನುಡಿ :

(೧೪) ಕುರಿಗ.ಳಿಲ್ಲಾ. ರೊಪ್ಪ.ದಲ್ಲಿ.ದನಗ.ಳಿಲ್ಲಾ. ತೊಟ್ಟಿ.ಯಲ್ಲಿ
ಜನಗ.ಳಿಲ್ಲಾ. ಹಟ್ಟಿ.ಯಲ್ಲಿ. ಬಳಲಿ. ಕೆಡೆದರು. ತೆಪ್ಪ.ಗೆ
ಗಂಡ. ಗೊರಕೆ. ಹೊಯ್ಯು.ತಿಹನು. ನಿದ್ದೆ. ಕವಿದು. ಮಗ್ಗು.ಲಲ್ಲಿ
ನನಗೊ.'ಹೊಟ್ಟೆ'ಯ. ದುಃಖ.ವೆಲ್ಲಾ. ಕಣ್ಣ. ಹನಿಯಲಿ. ಸುರಿವು.ದು ॥

ಇಲ್ಲಿ ಮೂಲ ಶ್ರುತಿ ೩-೪ರ ಮಿಶ್ರಲಯದ್ದು. ಚತುರ್ಮಾತ್ರಾಗಣಗಳು ಹಲವೆಡೆ ಒಂದು ಮಾತ್ರಾಕಾಲದ ದೀರ್ಘೀಕರಣದಿಂದ ಸಿದ್ಧವಾಗುವುದು ಇಲ್ಲಿ ಬಹು ಸ್ವಾರಸ್ಯಕರವಾದ ಸಂಗತಿ. ಇಂತಹ ಕಡೆ ಭಾವದ ಚೆಲವು ಒಗ್ಗುವುದನ್ನು ಕಾಣಬಹುದು.

'ದುಃಖಸೇತು'ವಿನ ಒಂದು ನುಡಿ :

(೧೫) ಅ]ನಾಥೆ ಇವ.ಳಿನ್ನೊಬ್ಬ
ಳೀಜನ್ಮ. ರೋಸಿ
ವೇಧೆಯನು. ತಾಳದೆಯೆ
ಮುಳುಗಿದಳು. ಹೊಳೆಗೆ ॥

ಈ ಪಂಚಮಾತ್ರಾಲಯದ ನುಡಿಯಲ್ಲಿ ಗಮನಿಸಬೇಕಾದ್ದು ಮೊದಲನೆಯ ಪಾದದ ಮೊದಲನೆಯ ಗಣವನ್ನು. ಅಲ್ಲಿ ಎಡಮೊಗದ ಕಂಸದೊಳಗೆ ಗುರುತಿಸಿರುವ ಆದ್ಯಕ್ಷರ ತಾಳವನ್ನೆತ್ತಿಕೊಡುವ, 'ಅನಾಗತ' ಎಂಬುದಾಗಿ ರೂಢಿಯಲ್ಲಿ ಹೇಳುವ, ಅಕ್ಷರ. ಪ್ರಸ್ತಾರದಲ್ಲಿ ಅದನ್ನು ಎಣಿಕೆಗೆ ಗಣಿಸುವುದಿಲ್ಲ. ಇಂಗ್ಲಿಷ್ ಛಂದಸ್ಸಿನ Anacrusis (Catch, Hypermetrical Syllable) ಎಂಬ ಪ್ರಕ್ರಿಯೆಯ ಹಾಗೆ ಇದು.

'ಚೋಳಕನ್ನೆಯರು' ಕವಿತೆಯ ಒಂದು ನುಡಿಯ ಭಾಗ :

(೧೬) ಕೆರೆಯ. ನೀರುರುಳಿ. ಹರಿವ. ಕಾಲುಹೊಳೆ
ಕೊರಕ.ಲಲ್ಲಿ ಸುಳಿ.ದಾಡು.ತ
ಗರುಕೆ.ಕಲ್ಲ ಬಳಿ. ಹೊರಳಿ. ನರಳುವುದು
ಮೆರೆವ. ಕನ್ನೆಯರ. ನೆನೆಯು.ತ

೩-೪ರ ಈ ಮಿಶ್ರಲಯ ಹೊಸ ಛಂದಸ್ಸಿನಲ್ಲಿ ವಿರಳವಾದ್ದು. ಗಮಕದ ಗತಿ ಚೆಲುವಾದ್ದು. ಈಗಾಗಲೇ ಗಮನಿಸಿರುವಂತೆ ಪದ್ದಳಿಯ ರಗಳೆಯ ಒಂದೊಂದು ಪ್ರಯೋಗದಲ್ಲಿ ಇದು ಹಿಂದೆ ಕಂಡುಬಂದಿದೆ. ಶ್ರೀಯವರು ಅದರಿಂದ ಪ್ರೇರಿತ ರಾಗಿದ್ದರೂ ಇರಬಹುದು.

'ಇರುಳ ದೇವಿ' ಕವಿತೆಯ ಒಂದು ನುಡಿ :

(೧೭) ಬೇಗ. ಪಡುವ. ತೆರೆಯ. ತುಳಿದು
ಇರುಳ. ದೇವಿ. ಬಾ
ಮಬ್ಬು. ಗವಿಯೊ.ಳೊಬ್ಬ.ಳಿದ್ದು
ಹಗಲು. ಸಮೆಯ.ದಾಗ. ಹೆಣೆದ
ಸೊಗದ. ಭಯದ. ಕನಸ. ಬೀರಿ
ಉಬ್ಬಿ.ಸುತ್ತ. ಬೆದರಿ.ಸುತ್ತ
ಬಾs. ಬೇಗ. ಬಾ.

ಈ ತ್ರಿಮಾತ್ರಾಲಯದ ನುಡಿಯಲ್ಲಿ ಕೊನೆಯ ಪಾದದ ಮೊದಲನೆಯ ಅಕ್ಷರ, ಒಂದೇ ಅಕ್ಷರವಾಗಿಯೂ ಒಂದು ಗಣದ ಸ್ಥಾನದಲ್ಲಿ ನಿಲ್ಲುತ್ತದೆ ; ಅಲ್ಲದೆ ಆ ಗುರ್ವಕ್ಷರ ೩ ಮಾತ್ರೆಗಳ ಪ್ಲುತದ ಬೆಲೆಗೆ ಹಿಗ್ಗುತ್ತದೆ.

ಇವೆಲ್ಲ 'ಇಂಗ್ಲಿಷ್ ಗೀತಗಳು' ಸಂಕಲನದಿಂದ ಎತ್ತಿದ ಲಕ್ಷ್ಯಗಳು. ಕೆಲವನ್ನು ತೀ. ನಂ. ಶ್ರೀ. ಮೊದಲಾದವರು ಈಗಾಗಲೇ ಗುರುತಿಸಿದ್ದಾರೆ. ಆದರೆ ಇನ್ನೂ

ಕೆಲವು ಸ್ವಾರಸ್ಯಕರವಾದ ವೈಚಿತ್ರ್ಯಗಳನ್ನು ಗುರುತಿಸುವುದು ಸಾಧ್ಯವಿದೆ ಎನ್ನುವುದರಲ್ಲಿ ಸಂಶಯವಿಲ್ಲ. ಇದು ಹೊಸಗನ್ನಡ ಛಂದಸ್ಸಿನ ಸ್ವರೂಪ ವಿಶದಪಡುವುದನ್ನು ಅವಲಂಬಿಸಿದೆ. ಭಾವೋನ್ಮೀಲನವಾದ ಪ್ರಸರಣಗಳ ದೃಷ್ಟಿಯಿಂದ ಮೂಲದ ಕವಿತೆಗಳ ಛಂದಸ್ಸಿನ ಪ್ರಯೋಗಗಳನ್ನೂ ಈ ಅನುವಾದಗೊಂಡ ಕವಿತೆಗಳ ಪ್ರಯೋಗಗಳನ್ನೂ ಪ್ರತ್ಯೇಕವಾಗಿ ವಿಶ್ಲೇಷಿಸುವ ಹಾಗೂ ನುಡಿದು ಪರೀಕ್ಷಿಸುವ ಅಗತ್ಯವಿದೆ.

ಈಗ 'ಹೊಂಗನಸುಗಳು' ಸಂಕಲನದ ಬಗೆಗೆ ಕೆಲವು ಮಾತುಗಳು. ಇಲ್ಲಿರುವ ಕವಿತೆಗಳು ಶ್ರೀಯವರ ಸ್ವಂತ ರಚನೆಗಳು, ಅನುವಾದಿತಗಳಲ್ಲ. ಕೆಲವು ಪ್ರಾಸ್ತಾವಿಕ ಕವಿತೆಗಳನ್ನು ಬಿಟ್ಟರೆ, ಶೋಕಗೀತೆ 'ಬಾನ್ ಕೊಂಡ ಕೃಷ್ಣನ್' ಬಿಟ್ಟರೆ, ಉಳಿದುವೆಲ್ಲ ಪ್ರಗಾಥಗಳು ಇಲ್ಲಿ. ಚೆಲುವಾದ, ಗಂಭೀರವಾದ ಪ್ರಗಾಥಗಳನ್ನು ಹುಟ್ಟು ಹಾಕಿ ಈಚಿನ ಕವಿಗಳಿಗೆ ಸ್ಫೂರ್ತಿ ಮಾರ್ಗದರ್ಶನಗಳನ್ನು ನೀಡಿದವರು ಶ್ರೀಯವರು. "ಕನ್ನಡಕ್ಕೆ ಓಡ್ ಬಂದುದು ಇಂಗ್ಲಿಷ್‌ನಿಂದ. ಇದನ್ನು ತಂದವರು ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು. ಇಂಗ್ಲಿಷಿನಿಂದ ತಂದ ಓಡ್‌ಗೆ ಸಂಸ್ಕೃತದಿಂದ 'ಪ್ರಗಾಥ' ಎಂಬ ಹೆಸರನ್ನು ತಂದು ಇಟ್ಟವರು 'ಶ್ರೀ'ಯವರೇ" ಎಂಬುದಾಗಿ ಎಸ್. ಅನಂತನಾರಾಯಣ ಅವರು[14] ಅಭಿಪ್ರಾಯಪಟ್ಟಿರುವುದನ್ನಿಲ್ಲಿ ನೆನೆಯಬಹುದು. ಪಿಂಡಾರಿಕ್ ಪ್ರಗಾಥಗಳೊಂದಿಗೆ ಹೋಲಿಸಬಹುದಾದವು ಇವು ಎಂದೂ ಅವರು ಗುರುತಿಸಿದ್ದಾರೆ.

'ಶ್ರೀ ಕೃಷ್ಣರಾಜ ರಜತಮಹೋತ್ಸವ ಪ್ರಗಾಥ' (೧೯೨೭), 'ಕನ್ನಡ ತಾಯಿ ನೋಟ' (೧೯೩೬), 'ಶುಕ್ರಗೀತೆ' (೧೯೪೧) ಇವು ರಚಿತವಾದುದು ಪರ್ವಸಂದರ್ಭಗಳಲ್ಲಿ. ಛಂದಸ್ಸಿನ ದೃಷ್ಟಿಯಿಂದ ಇವು 'ಅನಿಯತ ಪ್ರಗಾಥ'ಗಳ ಗುಂಪಿಗೆ ಸೇರತಕ್ಕವು; ಶುದ್ಧವಾದವು. 'ಕನ್ನಡದ ಬಾವುಟ' (೧೯೩೮) 'ಶ್ರೀ ಜಯನ ಬೆಳಕು' (೧೯೪೦), ಇವೂ ಒಂದರ್ಥದಲ್ಲಿ ಅನಿಯತ ಪ್ರಗಾಥಗಳೇ. ವಿವಿಧ ವಸ್ತುಖಂಡಗಳಲ್ಲಿ ವಿಸ್ತಾರವಿಲಂಬ ಶೈಲಿಯ ಪಾದಗಳೊಂದಿಗೆ ಅನತಿ ದೀರ್ಘ ಹಾಗೂ ಅತಿ ಹ್ರಸ್ವಪ್ರಮಾಣದ ದ್ರುತಗತಿಯ ಪಾದಗಳು ಭಾವದ ಬಾಗು ಬಳುಕುಗಳಿಗೆ ತಕ್ಕಂತೆ ವಿನ್ಯಾಸಗೊಂಡಿರುತ್ತವೆ, ಇಲ್ಲಿ ; ಆ ಪಾದಗಳನ್ನು ಕಟ್ಟುವ ಗಣಗಳು, ಭಾವದ ಬಾಗು ಬಳುಕುಗಳಿಗೆ ತಕ್ಕಂತೆಯೇ ವಿಭಿನ್ನ ಮಾತ್ರಾಲಯಗಳಲ್ಲಿ ರೂಪಗೊಂಡಿರುತ್ತವೆ. "ಇಲ್ಲಿ ಛಂದಸ್ಸು ಕುಣಿಯುತ್ತದೆ, ಬೀಗುತ್ತದೆ, ಬಳುಕುತ್ತದೆ. ಪ್ರಾಸ ಅನುಪ್ರಾಸ, ಅಂತಃಪ್ರಾಸ, ಅಂತ್ಯಪ್ರಾಸಗಳು ಮೆರೆಯುತ್ತವೆ."[15] ನುಡಿಗಳ ಗಡಣೆಕೆಗೆ ಒಗ್ಗದ ಇಲ್ಲಿಯ ಛಂದೋರೂಪ ಅಖಂಡವಾಗಿದ್ದರೂ, ಮೇಲೆಮೇಲೆ ಬದಲಾಗುತ್ತ, ಬೇರೆಬೇರೆಯಾದ ಛಂದಸ್ಸುಗಳ ಲಕ್ಷಣಗಳನ್ನು ಬಿಡಿಯಾಗಿಯೋ ಇಡಿಯಾಗಿಯೋ ತೋರಿಸುತ್ತವೆ ಎನ್ನಬಹುದು. ಕೆಲವು ಪಾದಗಳನ್ನು ಇಲ್ಲಿ ಉದ್ಧರಿಸಬಹುದು :

'ಶ್ರೀಕೃಷ್ಣರಾಜ ರಜತಮಹೋತ್ಸವ ಪ್ರಗಾಥ'ದ ಖಂಡ ೩ರ ಸ್ವಲ್ಪಭಾಗ :

(೧೮, ಪಡುಗಡಲಿನ : ತೆರೆ. ಮುಪ್ಪಾಡುವ : ಕರೆ, ಮೊಳೆ: ಹಾಲಿಯಾಡುವ.
ಘಟ್ಟದೆ.ಡೆ
ಪಂಪನ. ರನ್ನನ. ಪುಟವಿಡಿಸಿದ : ಕಡೆ, ಹಂಪೆಯು. ತಾಂಡವ. ದಾಡಿದೆ.ಡೆ
ಹೊಯ್ಸಳ. ರೆತ್ತಲು. ಕಡೆಯಿಸಿ. ನಿಲಿಸಿದ, ಗುಡಿಗಳ. ಸೊಬಗಿನ.
ಕಣ್ಣಸೆ.ಳೆ
ಜಲಜಲ. ಸುಕ್ಕುವ. ಕಾಲುವೆ. ಬಯಲಲಿ. ಪಚ್ಚೆಯ. ಪಯಿರಿನ.
ತುಂಬಿದೆ.ಳೆ

ಮಂಗಳಮಯ. ತಾನೆತ್ತಲು. ನಾಡು
ಸಿಂಗರದಾ. ಸಿರಿಗನ್ನಡ. ನಾಡು.

ಮೂಲಶ್ರುತಿ ಚತುರ್ಮಾತ್ರಾಗಣಗಳದು. ಪ್ರಗಾಥದ ಲಕ್ಷಣವನ್ನು ಪೂರೈಸುವಂತೆ ನೀಳಪಾದಗಳೂ ಹ್ರಸ್ವಪಾದಗಳೂ ಅನಿಯತವಾಗಿ ಬೆರೆತು ಬಂದಿವೆ ಇಲ್ಲಿ. ೬:೨, ೨:೬ರ ಗಣಪರಿವೃತ್ತಿಗಳೂ ಪ್ರಾಸಾನುಪ್ರಾಸಗಳೂ ಉತ್ಸಾಹಗುಣ ಸಂವರ್ಧಕಗಳಾಗಿವೆ. ಇಲ್ಲಿಯ ೭ ಖಂಡಗಳಲ್ಲಿಯೂ ಭಾವದ ಬೆಡಗು ವಸ್ತುವಿನ ಲಕ್ಷಣ ಇವನ್ನು ಅನುಸರಿಸಿ ಪಾದಗಳ ಸಂಖ್ಯೆಯೂ ಹ್ರಸ್ವದೀರ್ಘತೆಗಳ ಪ್ರಮಾಣವೂ, ಹಾಗೆಯೇ ಲಯವೈಚಿತ್ರ್ಯಗಳೂ ವಿವಿಧವಾಗಿರುವುದನ್ನು ಗಮನಿಸಬಹುದು. ಭಾವಗೀತೆಯ ನಾದ ಸಾಂದ್ರತೆ, ಮಂದಾನಿಲ ರಗಳೆಯ ಚುರುಕುನಡೆ, ಮಾನೌಮಿಯ ಚೌಪದದ ಕಥನಗುಣ ಇವೆಲ್ಲ ಸೇರಿ ವಿವಿಧ ಧ್ವನಿಮೇಳದ ಒಂದು ಸಮೂಹಗಾನದಂತೆ ಶೋಭಿಸುವುದು ಪ್ರಗಾಥಗಳ ಸಾಮಾನ್ಯ ಲಕ್ಷಣವೆನ್ನಬಹುದು.

ಸಂಕಲನದ ಇತರ ಪ್ರಗಾಥಗಳು ಸಹ "ಬಹು ಗಂಭೀರವಾಗಿಯೂ ಉತ್ಸಾಹ ಪೂರಿತವಾಗಿಯೂ" ಇವೆ. ಪ್ರಮಾಣ ವೈವಿಧ್ಯದ ಪಾದರಚನೆಯೂ ಲಯ ವೈವಿಧ್ಯದ ಗಣ ಸಂಘಟನೆಗಳೂ ಯಶಸ್ವಿಯಾಗಿ ಪಡಿಮೂಡಿರುವುದನ್ನು 'ಕನ್ನಡ ತಾಯ ನೋಟ', 'ಶುಕ್ರಗೀತೆ'ಗಳಲ್ಲಿ ಕಾಣಬಹುದಾಗಿದೆ. 'ಬಾನ್ ಕೊಂಡ ಕೃಷ್ಣನ್' ಛಂದಸ್ಸಿನ ದೃಷ್ಟಿಯಿಂದ ಉಳಿದ ಪ್ರಗಾಥಗಳ ಹಾಗೆಯೇ ಆದರೂ, ಅದು ಬಹು ಭಾಗದಲ್ಲಿ 'ಶೋಕಗೀತೆ'ಯ ವಿಷಾದದ ಧ್ವನಿಯಿಂದ ತರಂಗಿತವಾಗಿರುವುದರಿಂದ ಅದನ್ನು ಪ್ರತ್ಯೇಕವಾಗಿ ಗಣಿಸಬೇಕಾಗುತ್ತದೆ. 'ಮೈಸೂರು ಮಕ್ಕಳು', 'ಕನ್ನಡದ ಬಾವುಟ', 'ಶ್ರೀಜಯನ ಬೆಳಕು' ಇವು ಪ್ರಗಾಥದ ಲಕ್ಷಣಗಳನ್ನು ಉಳ್ಳುವಾದರೂ ವೈಶಾಲ್ಯ ವೈಭವಗಳು ಅಲ್ಲಿ ಕಡಿಮೆಯೆಂದೇ ಹೇಳಬೇಕು.

೨೨

ಶ್ರೀಯವರ ನಾಟಕಗಳ ಛಂದಸ್ಸಿನ ಬಗೆಗೆ, ಸಂಕ್ಷೇಪವಾಗಿ ಸ್ವಲ್ಪ ವಿಚಾರ ಮಾಡಬಹುದು. 'ಅಶ್ವತ್ಥಾಮನ್' ಪದ್ಯನಾಟಕ, ಮೇಳಗೀತಗಳು ೩,೪,೫

ಮತ್ತು ೬ ಮಾತ್ರೆಗಳ ಬೇರೆ ಬೇರೆ ಲಯಗಳಲ್ಲಿ ಕಟ್ಟಿದ, ನುಡಿಕಟ್ಟುಗಳೂ ವಿವಿಧವಾಗಿರುವ ಶುದ್ಧ ಪದ್ಯಬಂಧಗಳೇ ಆಗಿವೆ. ಕೆಲವೊಮ್ಮೆ ಮೇಳ ಮತ್ತು ಪಾತ್ರಗಳ ಸಂವಾದಭಾಗವೆಲ್ಲ ಮೇಲುನೋಟಕ್ಕೆ ಗದ್ಯದಂತೆ ತೋರುವುದು. ಆದರೆ ಇವು ಪಂಚಮಾತ್ರಾಲಯದ ಗಣಗಳ ಗತಿಯಿಂದ ನಿಬದ್ಧವಾದ ದೀರ್ಘಪದ್ಯಪಾದಗಳೇ ಆಗಿರುವ, ರಚನೆಗಳು. ಈ ಗಣಗಳು ಪಾದದಲ್ಲಿ ೪ ಬಂದಾಗ, ಅವನ್ನು ಸರಳರಗಳೆಯ ಪಾದಗಳೆಂದೂ ತಿಳಿಯಬಹುದು. ಸಾಮಾನ್ಯವಾಗಿ ದೀರ್ಘತರ ಪಾದಗಳಲ್ಲಿ ೬ ಪಂಚಮಾತ್ರಾಗಣಗಳು (೫×೫. ಪ) ಬಂದಿರುತ್ತವೆ. ಒಂದೊಂದುಸಲ ವಿರಳವಾಗಿ (ಸಾಲು ೪೧೧, ೪೧೯) ಇನ್ನೂ ಒಂದು ಗಣ ಹೆಚ್ಚಾಗಿ ಬಂದಿರಲೂಬಹುದು. ಸಂವಾದಭಾಗಗಳಲ್ಲಿ ಆವಶ್ಯಕತೆಗೆ ತಕ್ಕಂತೆ ಗಣಗಳನ್ನು ಹಂಚುವುದಕ್ಕಾಗಿ ಪಾದಗಳನ್ನು – ಇವು ಸಾಮಾನ್ಯವಾಗಿ ಸರಳರಗಳೆಯ ಪಾದಗಳು – ಒಡೆದಿರುವುದನ್ನೂ ಕಾಣಬಹುದು. ಪಾದಗಳಲ್ಲಿ ಗಣಗಳ ವ್ಯಾಪ್ತಿ ೨-೩ ಗಣಗಳಷ್ಟು ಕನಿಷ್ಠವಾಗಿಯೂ ೬-೭ ಗಣಗಳಷ್ಟು ಗರಿಷ್ಠವಾಗಿಯೂ ಇರಬಹುದು. ಗಣ ರಚನೆಯಲ್ಲಿ ಹೊಸ ಛಂದಸ್ಸಿನ ಲಕ್ಷಣಗಳಿಗೆ ಅನುಸಾರವಾಗಿ ಈ ಹಿಂದೆ ಹೇಳಿದ ಮಂಡಿ, ಪದ್ಮಗಣ ಮುಂತಾದುವನ್ನೆಲ್ಲ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಪ್ರತ್ಯೇಕವಾಗಿ ಲಕ್ಷಿಸಬೇಕಾದ ಇನ್ನೊಂದು ಸಂಗತಿಯೆಂದರೆ, ಶ್ರೀಯವರು ಮೇಳಗೀತಗಳನ್ನೂ ಒಳಕೊಂಡು ಸಂವಾದಭಾಗಗಳಲ್ಲಿ ಪೂರ್ತಿಯಾಗಿ, ಯಥೋಚಿತ ಸ್ಥಾನಗಳಲ್ಲಿ ಪದಗಳ ಸಂಧಿರೂಪಗಳನ್ನು ಬಿಡಿಸಿ ವ್ಯಂಜನಾಂತಗೊಳಿಸಿ ನಾಟಕವನ್ನು ಮುದ್ರಣ ಮಾಡಿಸಿದ್ದರೂ ಪ್ರಸ್ತಾರ ಗಣನೆಗೆ ಸಂಧಿರೂಪಗಳನ್ನೇ ಪರಿಗಣಿಸಬೇಕು ಎನ್ನುವುದು: ಇದೊಂದು ವಿಲಕ್ಷಣ ಪರಿಸ್ಥಿತಿ.

ಮಾದರಿಗೆ ಕೆಲವು ಸಾಲುಗಳು :

ಸರಳರಗಳೆಯ ಸಾಲುಗಳು (ಇರುವ ರೀತಿ) :

(೧೯) ಎನ್ನೊಡೆಯ

ಅಮರರೊಳ್ ನನಗೆ ಪರಮಪ್ರೇಮಿ ಓ ರುದ್ರ
ನಿನ್ನಾತ್ಮಮ್ ಎನ್ನುಸಿರ್ ; ಜಯಘೇರಿ ನಿನ್ನ ದನಿ
ನಿನ್ನೊಳ್ ಆಲೋಚಿಸದೆ ನಾನ್ ತೊಡಗಿದುದುಮ್ ಉಂಟೆ ?

ಸರಳರಗಳೆಯ ಸಾಲುಗಳು (ಇರಬೇಕಾದ ರೀತಿ)

ಎನ್ನೊಡೆಯ.

ಅಮರರೊಳ್. ನನಗೆ ಪರ. ಮಪ್ರೇಮಿ. ಓ ರುದ್ರ
ನಿನ್ನಾತ್ಮ. ಮೆನ್ನುಸಿರ್ ; ಜಯಘೇರಿ. ನಿನ್ನ ದನಿ
ನಿನ್ನೊಳಾ. ಲೋಚಿಸದೆ. ನಾನ್ ತೊಡಗಿ. ದುದುಮುಂಟೆ ?

ಸಂವಾದಗಳಲ್ಲಿ ಗಣಗಳನ್ನು ಹಂಚಿಡುವುದು

(೨೦) ಕೃಷ್ಣನ್ :
ನೇರವೋ. ಈ ಬೇಂಟೆ ?
ರುದ್ರನ್ :
ನೇರಂ. ಆತನದೆ
ಈ ಕೆಲಸವಯ್ ; ಒಳಗಿರ್ಪನ್
ಕೃಷ್ಣನ್ :
ಏಕೆ ಕಯ್ಯಿಟ್ಟನೋ !
ಇಂತಪ್ಪ ಘೋರದೊಳ್ !
ರುದ್ರನ್ :
ಕ್ರೋಧಾತ್ಮಪರವಶನ್ !

ವಾಸ್ತವವಾಗಿ ಇಲ್ಲಿರುವುದು ಈ ಪ್ರಸ್ತಾರದ ಮೂರು ಪಾದಗಳು :

ನೇರವೋ. ಈ ಬೇಂಟೆ ? . ನೇರಮಾ. ತನದೆ (ಪ)
ಈ ಕೆಲಸ. ವೊಳಗಿರ್ಪ. ನೇಕೆ ಕ. ಯ್ಯಿಟ್ಟನೋ
ಇಂತಪ್ಪ. ಘೋರದೊಳ್ ! ಕ್ರೋಧಾತ್ಮ. ಪರವಶನ್!

ದೀರ್ಘತರ ಪ್ರಮಾಣದ ಸಾಲುಗಳು :

(೨೧) ನಾದಿಬಟಿ. ಪಸುಳೆಯನ್. ಬಾಳ್ವೊಸೆಗೆ. ಜುರ್ಜಿದನ್. ಬಿರ್ಜಿದನ್.
ಕೊಯ್ದನ್ (ಪ)
ಗೂಡಾರ. ಮುನ್ ಕಿಚ್ಚು. ಕಣ್ಪೊಸೆವ. ಕಲಿಗಳನ್. ಮೂದಲಿಸಿ.
ಪೊಯ್ದನ್ (ಪ)
ನಾನ್ ಅವನ. ಬಟಿಇರ್ದು. ಮರುಳ್ಗೆ ಧೂ. ಪಂದೋಱು. ತಾ ಮನಃ.
ಕ್ಷೋಭಂ (ಪ)
ತೆರೆ ಮುಸಗೆ. ಊಡಿದೆನ್. – ಆಹ ಧೃ. ಷ್ಟದ್ಯುಮ್ನ. ಗುರುವನಿಂ. ತಲ್ತಿ
ಕೊಟಿದು ಪು. ಣ್ಯಂಗೊಂಡೆ !

ಮೇಳಗೀತಗಳು, ಮಾತಂಗಳು, ಮೇಳದೊಂದಿಗೆ ಪಾತ್ರಗಳ ಸಂವಾದ, ಅಶ್ವತ್ಥಾಮನ ಮೊರೆ ಮೊದಲಾದ ಕೆಲವು ಭಾಗಗಳು ವಿವಿಧವೂ ಮನೋಜ್ಞವೂ ಆದ ಮಾತ್ರಾಛಂದಸ್ಸುಗಳಲ್ಲಿವೆ. ಇವುಗಳ ಭಾಷಾ ಸೌಷ್ಠವ, ಭಾವಸೌಂದರ್ಯಗಳು ಮಿಗಿಲಾದವು. ಆರಂಭದ ಮೇಳಗೀತ ಮೊದಲು ತ್ರಿಮಾತ್ರಾಲಯದ ೬ ಚತುಷ್ಪದಿಗಳಿಂದ ಕೂಡಿದ್ದು. ಬಳಿಕ ಕ್ರಮವಾಗಿ ಯಥೋಚಿತವಾಗಿ ಮಾತ್ರಾಚೌಪದಿಯ ಇಲ್ಲವೆ ಸರಳರಗಳೆಯ ಪಾದಬಂಧಗಳಲ್ಲಿ ಸಾಗಿ, ಸ್ವಲ್ಪ ಭಾಗ ಮುಂದೆ (ಸಾಲು ೧೬೫-೯೫) ಮಂದಾನಿಲರಗಳೆಯ ಧಾಟಿಯಲ್ಲಿ ಹರಿಯುತ್ತದೆ. ಅನಂತರ ಭಾರ್ಗವಿಯ ಮಾತಿನ ಸಾಲುಗಳ ಲಯವೂ ಒಟ್ಟಿನಲ್ಲಿ ಪಂಚಮಾತ್ರೆಗಳದೇ. ಅಶ್ವತ್ಥಾಮನ

ಮೊರೆಯು, ಸಾಲು ೩೩೦–೭೦ರ ಪದ್ಯಭಾಗ ಪಾದಾಂತದಲ್ಲಿ ಮುಡಿ ಪದ್ಮಗಣಗಳು ಮುಡಿಗಟ್ಟುವ, ಭಾವಾನುಸಾರಿಯಾಗಿ ಗಣಗಳ ಸಂಖ್ಯೆ ಬದಲಾಗುವ ಪಂಚ ಮಾತ್ರಾಲಯದ ಪಾದಗಳಿಂದ ಕೂಡಿದ್ದಾಗಿದೆ. ಸಾಲು ೪೮೮–೯೯ರ ನಡುವಿನ ಮೇಳಗೀತಗಳು ಷಣ್ಮಾತ್ರಾಲಯದ ಸುಂದರ ರಚನೆಗಳೆಂಬುದನ್ನು ಎಲ್ಲರೂ ಗಮನಿಸಿದ್ದಾರೆ. ಅಲ್ಲದೆ ಎರಡು ಮುರಿಗಳಲ್ಲಿಯೂ ೬–೬ ಪಾದಗಳಿರುವುದೂ ಕುತೂಹಲಕರವಾದುದು. ೪ : ೨, ೨ : ೪ರ ಗಣಪರಿವೃತ್ತಿಗಳಿಂದ ಸೊಗಸುವ, ಪಾದಕ್ಕೆ ೪ ಗಣಗಳು ಬರುವ ಈ ಗೀತಗಳ ಗೇಯಗುಣ ಮನೋಜ್ಞವಾದುದು. ಅನಂತರದ ಎರಡು ಮುರಿಗಳು ಮಂದಾನಿಲಲಯದ್ದು. ಆ ಮುಂದಿನ ಮೇಳಗೀತ (ಸಾಲು ೫೪೫-೭೬) ಸಹ ಇದೇ ಲಯದ್ದಾದರೂ, ಇಲ್ಲಿಯ ಗಣಯುಗ್ಮಗಳ ಲಘುಪಾದ ಗಳಿಂದಾಗಿ ಬಂಧದ ಉತ್ಸಾಹಗುಣಕ್ಕೆ ಗರಿಮೂಡಿದಂತಾಗಿದೆ. ಸಾಲು ೬೭೫ರ ಮುಂದಿನ ಕೆಲವು ಹ್ರಸ್ವಪಾದಗಳ ಮೇಳಗೀತಭಾಗ ಉತ್ಸಾಹಲಯದ್ದು ; ಚೆಲುವಾದ್ದು. ಸಾಲು ೮೫೨–೯೧೦ರ ನಡುವೆ ವಿಸ್ತಾರವಾಗಿ ಬರುವ ಮೇಳಗೀತಭಾಗದಲ್ಲಿ ಮಾತ್ರಾಲಯದ ಚೌಪದಿಯ ರಚನೆಯುಂಟು. ೧–೨ನೆಯ ಖಂಡಗಳನ್ನು ಮುಡಿ ಗಟ್ಟಿದ ಚತುಷ್ಪದಿಗಳೂ ಮೇಲಿನ ಧಾಟಿಯುವೇ ; ೩ ನೆಯ ಖಂಡದ ಲಘುಪಾದಗಳ ಹಾಗೂ ನಾಟಕದ ಕೊನೆಯ ಮೇಳವಾಕ್ಯಗಳ ರೀತಿಯೂ ಬಲುಮಟ್ಟಿಗೆ ಹೀಗೆಯೇ. ಪಾದದ ಕುರುಪು-ನಿಡುಪುಗಳು ಏಕತಾನದ ಬೇಸರವನ್ನು ಮುರಿಯುವ ಹಾಗೆಯೇ ವಿವಿಧ ಅಂತ್ಯಪ್ರಾಸ ವಿನ್ಯಾಸಗಳು ಲಯದ ಬೆಡಗನ್ನು ಬೆಳಸಿವೆ.

ಈ ನಾಟಕದ ಗೀತಗಳ ಹಾಗೂ ದೀರ್ಘ ಪದ್ಯಪಾದಗಳ ರಚನೆ ಶ್ರೀಯವರ ಸ್ವತಃ ಸಂಯೋಜನೆಗಳೇ ? ಇಲ್ಲ, ಗ್ರೀಕ್ ಮೂಲ ಮತ್ತು ಇಂಗ್ಲಿಷ್ ಅನುವಾದ ಗಳಲ್ಲಿ ತೋರಿಬರುವ ರಚನೆಗಳಿಗೆ ಅನುಸಾರವಾದುವೇ ? ಈ ವಿಷಯದಲ್ಲಿ, ತುಲನಾತ್ಮಕ ಪರಿಶೀಲನೆ ಅಗತ್ಯ. ಬಲುಮಟ್ಟಿಗೆ ಮಾದರಿಗಳು ಅಲ್ಲಿಯವನ್ನೇ ಅನುಸರಿಸಿರುವುದು ಶಕ್ಯ.

ಈ ಮೇಲಿನ ಮಾತುಗಳನ್ನೇ ಮುಖ್ಯ ವಿವರಗಳಲ್ಲಿ 'ಪಾರಸಿಕರು' ನಾಟಕಕ್ಕೆ ಸಹ ಹೇಳಬಹುದಾಗಿದೆ. ಇಲ್ಲಿಯೂ ಮೇಳಗೀತಗಳಲ್ಲಿ ವಿವಿಧ ಮಾತ್ರಾಲಯಗಳ ವಿನ್ಯಾಸ ಚೆಲ್ಲವರಿದಿರುವುದನ್ನು ಕಾಣಬಹುದು. ಇಡೀ ನಾಟಕ ಲಯಬದ್ಧ ಪಾದ ವಿನ್ಯಾಸಗಳಿಂದ, ಅವುಗಳ ಮಿಗಿಲಾದ ಗೀತಗುಣಗಳಿಂದ, ಗೀತನಾಟಕವೆಂದೇ ಇದನ್ನು ಕರೆಯುವಂತೆ ಮಾಡಿದೆ. ಸರಳರಗಳೆಯ ಪಾದರಚನೆ ಇಲ್ಲಿ 'ಅಶ್ವತ್ಥಾಮನ್' ನಾಟಕದಲ್ಲಿರುವುದಕ್ಕಿಂತ ಹೆಚ್ಚು. ಜೊತೆಗೆ ಮೇಳಗೀತಗಳ ಲಯ ವೈವಿಧ್ಯವೂ ಹೆಚ್ಚು. ಗಣಸಂಯೋಜನೆ, ಪಾದ ಮತ್ತು ಪ್ರಾಸವಿನ್ಯಾಸಗಳ ವೈಚಿತ್ರ್ಯಗಳನ್ನು ಅಧಿಕವಾಗಿ ಕಾಣುವುದು ಇಲ್ಲಿಯೇ. ಮಾತ್ರಾದ್ವಿಪದಿ ಚೌಪದಿಗಳ ಹಾಗೂ ವಿವಿಧ ರಗಳೆಗಳ ಲಯ ಪ್ರಾಸಾನುಪ್ರಾಸಗಳ ಸಂಯೋಜನೆಗಳ ಫಲವಾಗಿ, ಚುರುಕಿನ ಗತಿ

ಗಮಕಗಳ ಫಲವಾಗಿ, ನಾಟಕದ ಗೀತಗುಣವನ್ನು ಸಫಲಗೊಳಿಸಿದೆ. ವಸ್ತುವಿನ ವಿಸ್ತಾರ ಕಥನಕ್ಕೆ 'ಅಶ್ವತ್ಥಾಮನ್'ನಲ್ಲಿ ಬರುವ ಹಾಗೆಯೇ ದೀರ್ಘಪಾದಗಳು ೫೧೫ ಪ. ಗಳ ವಿನ್ಯಾಸದಲ್ಲಿ ಇಲ್ಲಿಯೂ ಸಾಗುತ್ತವೆ. ಲ್ಯೂಯಿ ಕ್ಯಾಂಪ್‌ಬೆಲ್ ಮೊದಲಾದ ಇಂಗ್ಲಿಷ್ ಅನುವಾದಕರ ಮಾದರಿಗಳನ್ನು ಹೋಲುವಂತೆ ಇಲ್ಲಿಯ ಗೀತಗಳ ಹಾಗೂ ಪದ್ಯಪಾದಗಳ ಮಾದರಿಗಳಿರುವುದು ಕಾಣುತ್ತದೆ. "ಈ ಹಾಡುಗಳಲ್ಲಿಯ ಪದ ಯೋಜನೆ, ಭಾವದ ಮಿಡಿತಕ್ಕೆ ಸಂವಾದಿಯಾಗಿ ಅದು ನುಡಿಯುವ ಬಗೆ, ದ್ರುತ ವಾಗಿಯೋ ವಿಲಂಬಿತವಾಗಿಯೋ ಅದು ಮುನ್ನಡೆಯುವ ರೀತಿ, ಭಾವಕ್ಕೆ ಪೋಷಕ ವಾಗಿ ಕೆಲಸಮಾಡುತ್ತದೆ. ತೀವ್ರತೆಯನ್ನು ಹೆಚ್ಚಿಸುತ್ತದೆ."

ಶುದ್ಧವಾಗಿ ಸರಳರಗಳೆಯ ಸಾಲುಗಳು ಸಾಗುವುದು ಹೀಗೆ :

(೨೨) ಆ ಯುವನ. ರನ್ ಮುರಿದು. ಅವರೂರ್ಗ. ಳನ್ ಕೊಳಲ್
ಪಡೆನೆರಪಿ. ತಾನತ್ತ. ಪೋಗೆ ಮಗ. + ನೆನೆಗಿತ್ತ
ತಪ್ಪದೆಯೆ. ಇರುಳಿರುಳ್. ಸುಳಿಯುವುದು. ಕನಸುಗಳ್.
ನಿನ್ನೆಯದು. ಚೆನ್ನಾಗಿ. ಕಾಣಿಸಿತು. ಹೆಣ್‌ಮಕ್ಕ –
ಳಿಬ್ಬರೆ. ನ್ನಿದಿರಿನಲಿ : ಹೊಳೆಹೊಳೆವ. ತೊಡಿಗೆಗಳು.

ದೀರ್ಘತರ ಪ್ರಮಾಣದ ಪಾದಗಳು ನಡೆಯುವುದು ಹೀಗೆ :

ಬೆಳ್‌ಗುದುರೆ. ಹಗಲು ಕಡೆ. ಗೆದ್ದು ಬಂ. ದಿಳಿಯಲ್ಲ. ಚೆಲ್ವಿನಲಿ. ಬೆಳಗೆ (ಪ)
ಪೆಲನರಿನ್. ಮೊದಲಿದ್ದು. ದೊಂದಾಪ್ರ್. – ಬಲ್ಲುಲಿಯ. ಸಲ್ಲುಲಿಯ. ಪಾಡು
ದೀವಿಕರೆ. ಯರೆಗಳಿನ್. ಪೊಳಗೆ ಮಾ. ರುಲಿಗಳ್ (ಪ). ಚೆಂದಿ ಎದೆ. ಗುಂದಿ
ಪೆಜ್ಜಾದ. ರೆಪ್ಪುಪರು. ಕೇಳ್ದುದನೆ ! ಓಡುವವ. ರಂತಲ್ಲ. ಗಂಭೀರ. ಘೋಷಂ
ತೆರೆತೆರೆಯೊ. ಳುನ್ಮತ್ತ. ಪೆಲನರಾ. ಜೀಯನ್, ಜಯಕೆ ಮುಂ. ದಾಗಿ
ತುಡುಕುತಿ. ರ್ಪವರಂತೆ ! ಉರಿದತ್ತ. ಅತ್ತಕಡೆ. ಎತ್ತಲುಂ. ಕದಳಿ.

ಇಲ್ಲಿಯೂ ೫ ಅಥವಾ ೬ ಪಂಚಮಾತ್ರಾಗಣಗಳ ಜೊತೆಗೆ ಸೊಗಸಾಗಿ ಕೂಡಿಬರುತ್ತವೆ. ಇನ್ನು ಮೇಳಗೀತಗಳ ಚೆಲುವು, ಛಂದಸ್ಸಿನ ಕುಣಿತಗಳನ್ನು ಪ್ರತ್ಯೇಕವಾಗಿಯೇ ಗಮನಿಸಬೇಕಾಗುತ್ತದೆ. ಕರುಣೆಯ ಕೂಳ್ಗುದಿಹ, ಒಳಗುದಿಯ ತೆರೆಮೊರೆತ ಇವನ್ನು ತಿಳಿಯಲು ಮೂಲವನ್ನೇ ನೋಡಬೇಕಾಗುತ್ತದೆ; ನೋಡುವುದೆಂದರೆ, ಇಲ್ಲಿ ಹಾಡುವುದೆಂದೇ ಅರ್ಥ.

ಈ ಎರಡೂ ನಾಟಕಗಳ ಛಂದಸ್ಸಿನ ಪ್ರಯೋಗಗಳನ್ನು ಪರಸ್ಪರವಾಗಿ ಹೋಲಿಸಿ, ಸಾದೃಶ್ಯ ವೈದೃಶ್ಯಗಳನ್ನೂ ವಿಶೇಷಾಂಶಗಳನ್ನೂ ಗುರುತಿಸುವುದು ಫಲಕಾರಿಯಾದುದು. ಇದಕ್ಕಿಂತ ಮುಖ್ಯವಾದುದು ಎಂದರೆ, ಗ್ರೀಕ್ ಮತ್ತು

ಇಂಗ್ಲಿಷ್ ಮೂಲಗಳೊಂದಿಗೆ ಇಲ್ಲಿಯ ರಚನೆಗಳನ್ನಿಟ್ಟು ಹೋಲಿಸುವುದು. ಪ್ರಸ್ತುತ ಪ್ರಬಂಧದಲ್ಲಿ ಅದು ಸಾಧ್ಯವಾಗಿಲ್ಲ.

೬

ಹೊಸಗನ್ನಡ ಛಂದಸ್ಸಿನಲ್ಲಿ ಶ್ರೀಯವರ ಸಾಧನೆಗಳೇನು ? ಕೆಲವು ಹೆಗ್ಗುರುತುಗಳು :

(i) ಶ್ರೀಯವರು ಹೊಸಗನ್ನಡ ಛಂದಸ್ಸಿನ ಅಧ್ವರ್ಯುಗಳು. ಗಣರಚನೆ, ಪಾದರಚನೆಗಳಲ್ಲಿ ಮೊದಲಸಲ ಹೊಸ ಪ್ರಯೋಗ ಪರೀಕ್ಷೆಗಳನ್ನು ಸಮಗ್ರವಾಗಿ ನಡೆಸಿದವರು, ಅವರು ಹೊಸಗನ್ನಡ ಛಂದಸ್ಸು ಎಂಬುದು ಒಂದು ಪ್ರಸ್ಥಾನವಾಗಲು ಅವರೇ ಮುಖ್ಯ ಕಾರಣಕರ್ತರು.

(ii) ಶ್ರೀಯವರು ಹಳೆಯ ಕನ್ನಡ ಛಂದಸ್ಸುಗಳನ್ನು ಅವುಗಳ ಯಥಾರೂಪದಲ್ಲಿ ಬಹು ವಿರಳವಾಗಿ ಮಾತ್ರ ಬಳಸಿದರು. ಅವುಗಳ ಕಟ್ಟು ಕಟ್ಟಳೆಗಳನ್ನು ಅಲ್ಪ ಸ್ವಲ್ಪ ಬದಲಾಯಿಸಿ ಸ್ವಲ್ಪ ಹೆಚ್ಚಾಗಿ ಅದನ್ನು ಬಳಸಿದರು. ಅವುಗಳ ಮುಖ್ಯ ಲಕ್ಷಣಾಂಶಗಳನ್ನು ಮಾತ್ರ ಅಂಗೀಕರಿಸಿ, ಹೊಸ ಲಕ್ಷಣಾಂಶಗಳನ್ನು ಧಾರಾಳವಾಗಿಯೇ ಹೂಡಿ ಹೊಸವಾಗಿಯೇ ತೋರುವ ಕನ್ನಡ ಛಂದಸ್ಸುಗಳನ್ನು ರೂಢಿಸಿದರು. ಈ ಕೊನೆಯ ರೀತಿಯಿಂದಲೇ ಹೊಸಗನ್ನಡ ಛಂದಸ್ಸಿನ ಸ್ವರೂಪ ವಿಶದಪಡುವುದು ಸಾಧ್ಯವಾಯಿತು.

(iii) ಗಣಗಳ ಸಂಖ್ಯೆ-ವಿನ್ಯಾಸ, ಪಾದಗಳ ಸಂಖ್ಯೆ-ವಿನ್ಯಾಸ, ನುಡಿಗಳ ವ್ಯವಸ್ಥೆ-ಪ್ರಕಾರ ಇವುಗಳಲ್ಲಿ ಸೊಗಸು ಸಮತೋಲನಗಳನ್ನು ಕೌಶಲದಿಂದ ಸಾಧಿಸುವ ವಿಪುಲ ವೈಚಿತ್ರ್ಯಗಳನ್ನು ಮೊದಲಸಲ ಪ್ರದರ್ಶಿಸಿದವರು ಶ್ರೀಯವರು. ಇದರಿಂದ ಬಂಧವೈವಿಧ್ಯ ಹೆಚ್ಚಿತು.

(iv) ಶ್ರೀಯವರು ಇಂಗ್ಲಿಷ್ ಛಂದಸ್ಸುಗಳ ಕೆಲವು ಲಕ್ಷಣಗಳನ್ನು ಅನುಸರಿಸಿದರೆ ಕನ್ನಡದಲ್ಲಿ ಪದ್ಯರಚನೆಯ ವಿಧಿ ವಿಧಾನಗಳನ್ನು ಇನ್ನೂ ಬೆಳಸಬಹುದೆಂದೂ ಕಾವ್ಯಾಸ್ವಾದವನ್ನು ಇನ್ನೂ ಹೆಚ್ಚಿಸಬಹುದೆಂದೂ ಇತರ ತಮ್ಮ ಕಾಲದ ಅನುವಾದಕರಿಗಿಂತ ಚೆನ್ನಾಗಿ ತೋರಿಸಿದರು : ಕನ್ನಡ ಇಂಗ್ಲಿಷ್ ಛಂದಸ್ಸುಗಳನ್ನು ಕಸಿಗೊಳಿಸಿ 'ಹೊಸಗನ್ನಡ ಛಂದಸ್ಸು' ಎಂಬುದನ್ನು ರೂಪಿಸಿದ ನವೋದಯ ಕಾಲದ ಕವಿಗಳಲ್ಲಿ ಅಗ್ರಗಣ್ಯರಾದರು.

(v) ಕನ್ನಡದಲ್ಲಿ ಅನಿಯತ ಪ್ರಗಾಥದ ಆರಂಭಕಾರರಾದವರು ಶ್ರೀಯವರು. ಅವರ ಮಾರ್ಗದಲ್ಲಿ ಈಚೆಯ ಕಾಲದ ಕನ್ನಡ ಕವಿಗಳು ಆ ಪ್ರಕಾರವನ್ನು ಬೆಳಸುವುದು ಇದರಿಂದ ಬಳಿಕ ಸಾಧ್ಯವಾಯಿತು.

(vi) ಪ್ರಾಚೀನ ಕನ್ನಡ ಭಾಷೆ ಛಂದಸ್ಸುಗಳನ್ನು ಶ್ರೀಯವರು ಪುನರುಜ್ಜೀವಿಸಿದ್ದು, ಈಚೆಯ ಕಾಲದ ಕನ್ನಡ ಕವಿಗಳಿಗೆ ಸ್ಫೂರ್ತಿಪ್ರದವೂ ಮಾರ್ಗದರ್ಶಕವೂ ಆಯಿತು.

**ಅಡಿ ಟಿಪ್ಪಣಿಗಳು**

೧. ಮುನ್ನುಡಿ, 'ಕಿರಿಯ ಕಾಣಿಕೆ', ೧೯೨೮, ಪುಟ ೨.

೨. ಪ್ರಸ್ತಾವನೆ, 'ಇಂಗ್ಲಿಷ್ ಗೀತಗಳು', ೧೯೬೬(೪), ಪುಟ ೨೯.

೩. ಇಂದಿನ ಕನ್ನಡ ಕವಿತೆ, 'ಪೀಠಿಕೆಗಳು ಲೇಖನಗಳು', ಮೈಸೂರು, ೧೯೭೧, ಪುಟ ೬೬೯.

೪. ಶ್ರೀಯವರ ಜೀವನ ಪರಿಚಯ, 'ಸಂದಾ ನೆನಪು', ಮೈಸೂರು, ೧೯೭೩, ಪುಟ ೧೩೧.

೫. 'ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ', ಬೆಂಗಳೂರು, ೧೯೭೬ (೨), ಪುಟ ೯೫.

೬. ಶ್ರೀಯವರು ರೂಪಿಸಿದ ಛಂದಸ್ಸು, ಬಿ. ಎಂ. ಶ್ರೀ. ಅವರ ಬದುಕು-ಬರಹ, ಬೆಂಗಳೂರು, ಪುಟ ೮೦.

೭. ಹೊಸಗನ್ನಡ ಕವಿತೆಯ ಛಂದಸ್ಸು : ಒಂದು ಅಧ್ಯಯನ (ಅಪ್ರಕಟಿತ ನಿಬಂಧ), ೧೯೮೧, ಪುಟ ೧೦೬೫, ೧೦೭೨.

೮. 'ಹೊಸಗನ್ನಡ ಸಾಹಿತ್ಯದ ಘಟ್ಟಗಳು, 'ಹೊಸಗನ್ನಡ ಸಾಹಿತ್ಯ', ಬೆಂಗಳೂರು, ೧೯೭೫, ಪುಟ ೪೭.

೯. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ೩–೪, ೧೯೧೯, ಪುಟ ೨೦–೨೮.

೧೦. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ೧೭–೪, ೧೯೩೩, ಪುಟ ೨೫೫ ; ಪುಟ ೩೨೧–೩೪.

೧೧. 'ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷರ ಭಾಷಣಗಳು', ಬೆಂಗಳೂರು, ೧೯೭೦, ಪುಟ ೩೬೯–೭೦.

೧೨. ಪ್ರಬುದ್ಧ ಕರ್ಣಾಟಕ, ೧೪–೩, ೧೯೩೩.

೧೩. ''ಇದು ಅವರ First attempt ... ಆ ಪುಸ್ತಕದಲ್ಲೆಲ್ಲಾ ಇದೊಂದೇ 'Orthodox metre' ನಲ್ಲಿ (ಇಲ್ಲಿ ಕುಸುಮಷಟ್ಪದಿ) ಬರೆದಿರುವುದು" ಎಂಬುದಾಗಿ ತೀ. ನಂ. ಶ್ರೀ. ಅವರು ಹೇಳಿರುವುದನ್ನು, ಗಮನಿಸಿದರೆ, ಶ್ರೀಯವರೂ ತಮ್ಮ ಕಾಲದ ಇತರರಂತೆಯೇ ಹೊಸ ಹಾದಿಯಲ್ಲಿ ನುಗ್ಗಲು ಇನ್ನೂ ಮನಸ್ಸು ಗಟ್ಟಿಮಾಡಿರಲಿಲ್ಲವೇನೋ ಎಂಬ ಶಂಕೆಯುಂಟಾಗುತ್ತದೆ (ಪ್ರಸ್ತಾವನೆ, 'ಇಂಗ್ಲಿಷ್ ಗೀತಗಳು', ೧೯೬೬. ಪುಟ ೧೫).

೧೪–೧೫. ಪ್ರಗಾಥ, 'ಉಪಾಯನ', ಬೆಂಗಳೂರು, ೧೯೭೭, ಪುಟ ೫–೧೩; ಅಲ್ಲದೆ ನೋಡಿ : 'ಕನ್ನಡ ಛಂದಃಸ್ವರೂಪ' ೧೯೭೮, ಪುಟ ೬೭೦–೭೩.

# ಬಿ. ಎಂ. ಶ್ರೀ. : ಜನಪದ ಸಾಹಿತ್ಯ

— ತೀ. ನಂ ಶಂಕರನಾರಾಯಣ

೧

ಕನ್ನಡನಾಡಿನಲ್ಲಿ ಕನ್ನಡ ಭಾಷೆಗೆ ಸರಿಯಾದ ಸ್ಥಾನಮಾನಗಳಿಲ್ಲದೆ, ಇಂಗ್ಲಿಷ್ ಮತ್ತು ಸಂಸ್ಕೃತ ಭಾಷೆಗಳು ಮೇಲುಗೈ ಸಾಧಿಸಿ, ಕನ್ನಡದ ಬೆಳವಣಿಗೆ ಕುಂಠಿತವಾಗಿದ್ದ ಈ ಶತಮಾನದ ಆರಂಭದ ದಶಕಗಳಲ್ಲಿ ಕನ್ನಡದ ಬೆಳವಣಿಗೆಗಾಗಿ ವಿಶೇಷವಾಗಿ ಶ್ರಮಿಸಿದ ಪ್ರಾತಃಸ್ಮರಣೀಯರಲ್ಲಿ ಮುಖ್ಯರಾದವರು ಆಚಾರ್ಯ ಬಿ. ಎಂ. ಶ್ರೀ. ಅವರು. ಕನ್ನಡನಾಡಿನ ಮೂಲೆ ಮೂಲೆಗಳಲ್ಲೂ ಸಂಚರಿಸಿ, ಕನ್ನಡಿಗರಲ್ಲಿ ಕನ್ನಡ ಭಾಷೆಯ ಅಭಿಮಾನವನ್ನು ಮೂಡಿಸಲು ಅವರು ಬಹುವಾಗಿ ಶ್ರಮಿಸಿದರು. ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳ ಮೂಲಕ ಅವರು ಕನ್ನಡ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಯ ಅಧ್ಯಯನಕ್ಕೆ ಭದ್ರವಾದ ಬುನಾದಿಯನ್ನು ಹಾಕಿದರು. ಶ್ರೇಷ್ಠಮಟ್ಟದ ಇಂಗ್ಲಿಷ್ ಪ್ರಾಧ್ಯಾಪಕರೆಂದು ಕೀರ್ತಿ ಗಳಿಸಿದ್ದ ಅವರು ೧೯೨೭ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಎಂ. ಎ. ತರಗತಿಗಳನ್ನು ಆರಂಭಿಸಿ, ಗೌರವ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. 'ಇಂಗ್ಲಿಷ್ ಗೀತೆಗಳು' ಸಂಕಲನದ ಪ್ರಕಟಣೆಯಿಂದ ಕನ್ನಡ ಕಾವ್ಯಕ್ಕೆ ಹೊಸ ತಿರುವನ್ನು ಕೊಟ್ಟರು. ಹೀಗೆ ಹಲವು ರೀತಿಯ ಸಾಹಿತ್ಯಕ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿ ಕೊಂಡಿದ್ದ ಅವರಲ್ಲಿ ನಾವು ಕಾಣುವುದು ಕನ್ನಡಭಾಷೆ, ಸಾಹಿತ್ಯ, ಇತಿಹಾಸ, ಸಂಸ್ಕೃತಿಗಳ ಬಗ್ಗೆ ತೀವ್ರವಾದ ಅಭಿಮಾನ ಹಾಗೂ ಈ ಕ್ಷೇತ್ರಗಳಲ್ಲಿ ಹೆಚ್ಚಿನ ಕೆಲಸ ನಡೆಯಬೇಕೆಂಬ ಕಾಳಜಿ. ಈ ಉದ್ದೇಶಕ್ಕೆ ನೆರವಾಗುವಂತಹ, ಪೂರಕವಾಗುವಂತಹ ವಿಷಯಗಳು ಅವರಿಗೆ ಪ್ರಿಯವಾಗಿದ್ದವು. ಇಂತಹ ವಿಷಯಗಳಲ್ಲಿ ಕನ್ನಡ ಜನಪದ ಸಾಹಿತ್ಯವೂ ಒಂದು ಎಂದು ಹೇಳಬಹುದು. ಅವರ ಸಾಹಿತ್ಯವನ್ನು ಸಮಗ್ರವಾಗಿ ಪರಿಶೀಲಿಸಿದರೆ ಜಾನಪದವಾಗಲಿ, ಅಥವಾ ಅದರ ಒಂದು ಭಾಗವೆಂದು ಈಗ ಪರಿಗಣಿತವಾಗುತ್ತಿರುವ ಜನಪದ ಸಾಹಿತ್ಯವಾಗಲಿ ಅವರ ವಿದ್ವತ್ತಿನ ಕ್ಷೇತ್ರವಾಗಿರು

ವಂತೆ ಕಾಣುವುದಿಲ್ಲ ; ಅದು ಅವರ ಆಸಕ್ತಿಯ ಕ್ಷೇತ್ರವಾಗಿತ್ತು. ಜನಪದ ಸಾಹಿತ್ಯಕ್ಕೆ ಸಂಬಂಧಿಸಿದ ಅವರ ಬರಹವೂ ತೀರ ಕಡಮೆ. ಕನ್ನಡದಲ್ಲಿ ಜನಪದ ಸಾಹಿತ್ಯದ ಸಂಗ್ರಹಕಾರ್ಯ ೧೯ನೆಯ ಶತಮಾನದ ಆರಂಭದಿಂದಲೇ ಶುರುವಾಯಿತು. ಡಾ॥ ಜೀ. ಶಂ. ಪ. ಅವರು ಕನ್ನಡ ಜಾನಪದ ಅಧ್ಯಯನದ ಇತಿಹಾಸವನ್ನು ನಾಲ್ಕು ಘಟ್ಟಗಳಾಗಿ ವರ್ಗೀಕರಿಸಿದ್ದಾರೆ.[1]

೧. ೧೮೦೦ – ೧೯೩೦ – ಆರಂಭಯುಗ
೨. ೧೯೩೧ – ೧೯೪೭ – ನವೋದಯಯುಗ
೩. ೧೯೪೭ – ೧೯೬೫ – ಪೂರಕಯುಗ
೪. ೧೯೬೬ ರಿಂದ ಈಚೆಗೆ – ವೈಜ್ಞಾನಿಕಯುಗ

ಆರಂಭಯುಗದಲ್ಲಿ ವಿದೇಶೀಯರಾದ ಅಬ್ಬೆಡುಬಾಯಿ, ಗ್ರೋವರ್ ಮೊದಲಾದವರು ತಮ್ಮ ಬರಹಗಳಲ್ಲಿ ಕರ್ನಾಟಕದ ಜನಪದ ಸಾಹಿತ್ಯ, ಸಂಪ್ರದಾಯಗಳ ಪ್ರಸ್ತಾಪ ಮಾಡಿದ್ದಾರೆ. ಕಿಟ್ಟೆಲ್ ಅವರು ತಮ್ಮ ಕನ್ನಡ-ಇಂಗ್ಲಿಷ್ ನಿಘಂಟಿನಲ್ಲಿ ಅನೇಕ ಕನ್ನಡ ಗಾದೆಗಳನ್ನು ಬಳಸಿಕೊಂಡಿದ್ದಾರೆ. ಫ್ಲೀಟ್ ಅವರು ಕನ್ನಡದ ಐತಿಹಾಸಿಕ ಲಾವಣಿಗಳನ್ನು ಪ್ರಕಟಿಸಿದರು. ಇದಿಷ್ಟು ೧೯ನೆಯ ಶತಮಾನದಲ್ಲಿ ನಡೆದ ಕೆಲಸ. ೧೯೨೪ರಲ್ಲಿ ಶ್ರೀ ನಡಿಕೇರಿಯಂಡ ಚಿನ್ನಪ್ಪ ಅವರ ಕೊಡಗಿನ ಜಾನಪದ ಸಂಗ್ರಹ 'ಪಟ್ಟೋಲೆ ಪಳಮೆ' ಪ್ರಕಟವಾಯಿತು. ೧೯೨೬ರಲ್ಲಿ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರು 'ಕನ್ನಡ ಲಾವಣಿ ಸಾಂಗತ್ಯ' ಎಂಬ ಲೇಖನವನ್ನು ಪ್ರಕಟಿಸಿ ಕನ್ನಡ ಜನಪದಗೀತೆಗಳ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಮೌಲ್ಯವನ್ನು ಸ್ಪಷ್ಟಪಡಿಸಿದರು. ಈ ಎಲ್ಲ ಪ್ರಯತ್ನಗಳ ಹಿಂದೆಯೂ ಜನಪದ ಸಾಹಿತ್ಯ ಸತ್ವಪೂರ್ಣವಾದುದೆಂಬ, ಅದು ನಾಗರಿಕತೆಯ ಕಾರಣದಿಂದ ನಶಿಸುತ್ತಿರುವುದರಿಂದ ಅದನ್ನು ಸಂಗ್ರಹಿಸಿ ಉಳಿಸಿಕೊಳ್ಳಬೇಕೆಂಬ ಕಾಳಜಿ ಕಂಡುಬರುತ್ತದೆ.

ನವೋದಯಯುಗದಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಕನ್ನಡದಲ್ಲಿಯೂ ರೊಮ್ಯಾಂಟಿಕ್ ಕಾವ್ಯರಚನೆ ಆರಂಭವಾಯಿತು. ಬಿ. ಎಂ. ಶ್ರೀ. ಈ ಕಾವ್ಯಪರಂಪರೆಯ ಮಾರ್ಗದರ್ಶಕರಾದರು. ಕನ್ನಡ ರೊಮ್ಯಾಂಟಿಕ್ ಕಾವ್ಯ ಇಂಗ್ಲಿಷ್ ರೊಮ್ಯಾಂಟಿಕ್ ಕಾವ್ಯದಂತೆಯೇ ಜನಸಾಮಾನ್ಯರ ಜೀವನ ಮತ್ತು ಭಾಷೆಗೆ ಹೆಚ್ಚು ಹತ್ತಿರವಾಯಿತು. ಹಳ್ಳಿಯ ಜನರ ಜೀವನವಾಗಲಿ ಸಾಹಿತ್ಯವಾಗಲೀ ತಿರಸ್ಕರಿಸುವಂತಹದಲ್ಲ ; ಅದರಲ್ಲಿ ಶಿಷ್ಟ ಕವಿಗಳು ಕಲಿಯುವಂತಹದು ಇದೆ, ಆದರಿಂದ ಶಿಷ್ಟಕಾವ್ಯ ತಾನು ಕಳೆದುಕೊಂಡಿರುವ ಸತ್ವವನ್ನು ಗಳಿಸಿಕೊಳ್ಳಬಹುದು

---

೧. ಡಾ॥ ಜಿ. ಶಂ. ಪರಮಶಿವಯ್ಯ, ಜಾನಪದ (ಮೈಸೂರು : ಸಾಹಿತ್ಯ ಸದನ. ೧೯೭೮) ಪುಟ. ೬೬–೬೭.

ಎಂಬ ವಿಚಾರ ಸರಣಿಯು ಪ್ರಭಾವವಿರುವುದನ್ನು ಗುರುತಿಸಬಹುದಾಗಿದೆ. ಮಾಸ್ತಿ, ಬಿ. ಎಂ. ಶ್ರೀ., ಬೇಂದ್ರೆ, ಮಧುರಚೆನ್ನ ಮೊದಲಾದ ಕನ್ನಡ ಸಾಹಿತಿಗಳು ಈ ಕಾಲಾವಧಿಯ ಜನಪದ ಸಾಹಿತ್ಯ ಸಂಗ್ರಹ, ವಿಮರ್ಶೆಗಳಿಗೆ ವಿಶೇಷವಾದ ಪ್ರೇರಣೆಯನ್ನೂ ಪ್ರೋತ್ಸಾಹವನ್ನೂ ಕೊಟ್ಟರು. ಇದರಿಂದಾಗಿ ಉತ್ಸಾಹದಿಂದ ಜನಪದಕಾವ್ಯದ ಸಂಗ್ರಹಕಾರ್ಯ ನಡೆಯಿತು. ಹಲಸಂಗಿಯ ಚನ್ನಮಲ್ಲಪ್ಪ, ರೇವಪ್ಪ, ಲಿಂಗಪ್ಪ ಅವರು ಸಂಗ್ರಹಿಸಿದ 'ಗರತಿಯ ಹಾಡು' (೧೯೩೧), 'ರೇವಪ್ಪನವರ ಮಲ್ಲಿಗೆ ದಂಡೆ' (೧೯೩೫), ಶ್ರೀ ಸಿಂಪಿಲಿಂಗಣ್ಣ ಮತ್ತು ಪಿ. ಧೂಲಾ ಅವರ 'ಜೀವನಸಂಗೀತ' (೧೯೩೩) – ಈ ಸಂಕಲನಗಳು ಉತ್ತರ ಕರ್ನಾಟಕದಿಂದಲೂ, ಶ್ರೀ ಅರ್ಚಕ ರಂಗಸ್ವಾಮಿ ಅವರ 'ಹುಟ್ಟಿದ ಹಳ್ಳಿ, ಹಳ್ಳಿಯ ಹಾಡು' (೧೯೩೩), ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮತ್ತು ಬಿ. ಎಸ್. ರಂಗಸ್ವಾಮಿ ಅವರ 'ಹಳ್ಳಿಯ ಹಾಡುಗಳು' (೧೯೩೮), ಶ್ರೀ ಮತಿಘಟ್ಟ ಕೃಷ್ಣಮೂರ್ತಿ ಮತ್ತು ಶ್ರೀ ಮುತ್ತುರಾಮಸ್ವಾಮಿ ಅವರು ಸಂಗ್ರಹಿಸಿ, ಶ್ರೀ ಎಲ್. ಗುಂಡಪ್ಪನವರು ಸಂಪಾದಿಸಿದ 'ನಾಡಪದಗಳು' (೧೯೪೩) – ಈ ಸಂಕಲನಗಳು ದಕ್ಷಿಣ ಕರ್ನಾಟಕದಿಂದಲೂ, ವಿ. ದೇ. ತೊರ್ಕೆಯವರ 'ಹಳ್ಳಿಯ ಹಾಡುಗಳು' ಉತ್ತರ ಕನ್ನಡ ಜಿಲ್ಲೆಯಿಂದಲೂ ಪ್ರಕಟವಾದವು.

ಪೂರಕಯುಗದಲ್ಲಿ ಜನಪದ ಸಾಹಿತ್ಯ ಸಂಗ್ರಹಕಾರ್ಯ ನಡೆಯುವುದು ಮಾತ್ರವಲ್ಲದೆ ಅದರ ಗಂಭೀರವಾದ ಅಧ್ಯಯನಗಳೂ ನಡೆದವು. ಆದರೆ ಇಲ್ಲಿಯೂ ಕೂಡ ನವೋದಯಯುಗದ ಪ್ರಭಾವಗಳು ಮುಂದುವರಿದಿವೆ. ಈ ಕಾಲಾವಧಿಯಲ್ಲಿ ಜನಪದ ಕಥೆ, ಗಾದೆ, ಒಗಟುಗಳ ಸಂಗ್ರಹಕಾರ್ಯವೂ ನಡೆದಿದೆ. ಡಾ॥ ಬಿ. ಎಸ್. ಗದ್ದಗಿಮಠರ ಜನಪದಗೀತೆಗಳ ಸಂಕಲನಗಳು ಹಾಗೂ ಕರ್ನಾಟಕ ವಿಶ್ವವಿದ್ಯಾನಿಲಯದ ಪಿಎಚ್‌ಡಿ ಗಳಿಸಿದ ಅವರ ಸಂಶೋಧನ ಗ್ರಂಥ 'ಕನ್ನಡ ಜನಪದ ಗೀತೆಗಳು', ಡಾ॥ ಜೀ. ಶಂ. ಪ. ಅವರು ದಕ್ಷಿಣ ಕರ್ನಾಟಕದ ವೃತ್ತಿ ಗಾಯಕ ಪರಂಪರೆಯ ಬಗ್ಗೆ ಪ್ರಕಟಿಸಿದ ಬರಹಗಳು, ಕ. ರಾ. ಕೃ. ಅವರ ಜನಪದ ಗೀತೆಗಳ, ಸಂಕಲನಗಳು, ಡಾ॥ ಜಿ. ಎಸ್. ಶಿವರುದ್ರಪ್ಪ, ಡಾ॥ ಪ್ರಭುಶಂಕರ ಮೊದಲಾದವರ ಪಿಎಚ್‌ಡಿ ನಿಬಂಧಗಳಲ್ಲಿ ಮಾಡಿದ ಜನಪದ ಗೀತೆಗಳ ಮೌಲ್ಯಮಾಪನ ಕಾರ್ಯ, ಕುತೂಹಲದ ಮಟ್ಟವನ್ನು ಮೀರಿ ನಿರಂತರವಾದ ಸಂಗ್ರಹಕಾರ್ಯ ಈ ಕಾಲಾವಧಿಯಲ್ಲಿ ನಡೆದಿದೆ. ವೈಜ್ಞಾನಿಕಯುಗದಲ್ಲಿ ಜಾನಪದ ತುಂಬ ವಿಸ್ತಾರವಾದ ಕ್ಷೇತ್ರವೆಂದೂ, ಅದರಲ್ಲಿ ಜನಪದ ಸಾಹಿತ್ಯ, ಭಾಷೆ, ಕಲೆ, ಸಂಪ್ರದಾಯ, ನಂಬಿಕೆ ಮೊದಲಾದ ಅನೇಕ ವಿಷಯಗಳು ಸೇರುತ್ತವೆಯೆಂದೂ ಜನಪದ ಜೀವನದ ಎಲ್ಲಾ ಅಂಶಗಳನ್ನೂ ಅದು ಒಳಗೊಳ್ಳುವುದೆಂಬ ಅಭಿಪ್ರಾಯ ರೂಪಗೊಂಡು, ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಶಿಕ್ಷಣದಲ್ಲಿ ಜಾನಪದವನ್ನು ಅಭ್ಯಾಸದ

ವಿಷಯವಾಗಿ ವ್ಯವಸ್ಥೆಗೊಳಿಸಲಾಯಿತು. ಇದರಿಂದಾಗಿ ಜಾನಪದದ ಬಗ್ಗೆ ಸಂಗ್ರಹ, ಸಂಶೋಧನೆ ನಡೆಸಲು ಹೆಚ್ಚಿನ ಪ್ರೋತ್ಸಾಹ ದೊರೆತಿದೆ.

೩

ಬಿ. ಎಂ. ಶ್ರೀಯವರು 'ಗರತಿಯ ಹಾಡು' ಮತ್ತು 'ನಾಡಪದಗಳು' ಈ ಸಂಕಲನಗಳಿಗೆ ಮುನ್ನುಡಿ ಬರೆಯುವಾಗ ಜನಪದ ಸಾಹಿತ್ಯಕ್ಕೆ ಸಂಬಂಧಿಸಿದಂತೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದ್ದಾರೆ. ಈ ಮುನ್ನುಡಿಗಳಲ್ಲಿ ಆಯಾ ಸಂಗ್ರಾಹಕರ ಪ್ರಯತ್ನಗಳ ಬಗ್ಗೆ ಮೆಚ್ಚುಗೆಯ ಮಾತುಗಳನ್ನಾಡಿದ್ದಾರೆ; ಅದರ ಜೊತೆಗೆ ಕನ್ನಡದಲ್ಲಿ ಜನಪದಕಾವ್ಯದ ಸಂಗ್ರಹ ಹಾಗೂ ಅಧ್ಯಯನದ ಬಗ್ಗೆ ಬೆಲೆಯುಳ್ಳ ಸಲಹೆಗಳನ್ನು ಕೊಟ್ಟಿದ್ದಾರೆ. ಹಾಗೆಯೇ ಜನಪದಕಾವ್ಯವನ್ನು ರೂಪಿಸಿದ ಸಂಸ್ಕೃತಿಯ ಬಗ್ಗೆ ಅವರ ತಿಳುವಳಿಕೆಯ ಪ್ರಬುದ್ಧತೆಯ ಪರಿಚಯವೂ ಆಗುತ್ತದೆ. 'ಗರತಿಯ ಹಾಡು' ಮತ್ತು 'ನಾಡಪದಗಳು' ಉತ್ತಮ ಕಾವ್ಯಮೌಲ್ಯದಿಂದ ಕೂಡಿರುವ ಜನಪದಗೀತೆಗಳನ್ನೊಳಗೊಂಡು, ಕ್ರಮವಾಗಿ ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದ ಅತ್ಯುತ್ತಮ ಜನಪದಗೀತ ಸಂಕಲನಗಳಾಗಿವೆ. ಪ್ರಾತಿನಿಧಿಕವಾದ ಈ ಎರಡು ಸಂಕಲನಗಳಿಗೆ ಬಿ. ಎಂ. ಶ್ರೀ. ಅವರು ಮುನ್ನುಡಿ ಬರೆದಿರುವುದು ಐತಿಹಾಸಿಕವಾಗಿ ಮಹತ್ವದ ಸಂಗತಿಯೂ ಆಗಿದೆ.

'ಗರತಿಯ ಹಾಡು' ಸಂಕಲನದ ಮುನ್ನುಡಿಯಲ್ಲಿ ಬಿ. ಎಂ. ಶ್ರೀ. ಅವರು ಮಧುರ ಕವಿ ಜನಪದ ಕಾವ್ಯವನ್ನು ಹೀಯಾಳಿಸಿ ಬರೆದಿರುವ ಪದ್ಯವನ್ನು ಉದ್ಧರಿಸಿ, ಆತನ ಧೋರಣೆ ಸರಿಯಲ್ಲವೆಂದು ಸ್ಪಷ್ಟಪಡಿಸಿದ್ದಾರೆ. ರೊಮ್ಯಾಂಟಿಕ್ ಕಾವ್ಯದ ಸಂಸ್ಕಾರ ಹೊಂದಿದ್ದ ಅವರು ಜನಸಾಮಾನ್ಯರ ಜೀವನ ಸಾಹಿತ್ಯಗಳ ಬಗ್ಗೆ ಉದಾರ ವಾದಿ ನಿಲುವನ್ನು ಹೊಂದಿದ್ದು ಈ ಮಾತುಗಳನ್ನಾಡಿದ್ದಾರೆ. "ಜನವಾಣಿ ಬೇರು, ಕವಿ ವಾಣಿ ಹೂವು".[2] ಸಾರವತ್ತಾದ ಈ ಮಾತು ಈಗಲೂ ಜನಪ್ರಿಯವಾಗಿದ್ದು ಗಾದೆಯಂತೆ ಬಳಕೆಯಾಗುತ್ತಿದೆ. "ಕುಟ್ಟುವಾಗ, ಬೀಸುವಾಗ ಮಗುವನ್ನು ತೂಗುವಾಗ, ಮದುವೆಗಾಗಿ ನಲಿಯುವಾಗ, ಸಾವಿಗಾಗಿ ಅಳುವಾಗ, ಭಾರವನ್ನೆತ್ತು ವಾಗ, ಬಂಡಿಯನ್ನು ಹೊಡೆಯುವಾಗ, ದೋಣಿಯನ್ನು ನಡೆಸುವಾಗ, ಕಾಳಗದ ಸಾಧನೆಗಳನ್ನು ಅಭ್ಯಾಸ ಮಾಡುವಾಗ, ಹೆಂಗಸರು, ಗಂಡಸರು ಈ ಹಾಡುಗಳನ್ನು ಕಟ್ಟುತ್ತಿದ್ದರು. ಹೀಗೆ ನೃತ್ಯದ ಉಲ್ಲಾಸವನ್ನು ಪ್ರಕಾಶಗೊಳಿಸುತ್ತಾ, ಉದ್ಯೋಗದ ಆಯಾಸವನ್ನು ಪರಿಹಾರಮಾಡುತ್ತಾ ಅಗ್ಗಿ ಹೇಳುವ ಉಸಿರಿಗೆ ತಕ್ಕಹಾಗೆ ರಾಗ ವನ್ನು ಹೊಂದಿಸುತ್ತಾ, ಜನರ ಸರ್ವಸಾಧಾರಣವಾದ ಮನೋಭಾವವನ್ನು ವಿಶದ

೨. ಬಿ. ಎಂ. ಶ್ರೀಕಂಠಯ್ಯ, ಶ್ರೀ ಸಾಹಿತ್ಯ (ಮೈಸೂರು: ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ, ೧೯೮೨), ಪುಟ. ೩೪೭

ಗೊಳಿಸುತ್ತಾ ಹುಟ್ಟಿದವು ಈ ಹಾಡುಗಳು ಮತ್ತು ಈ ಹಾಡಿನ ಮಾರಿಗಳು."[3] ಜನಪದಗೀತೆಗಳು ಹಳ್ಳಿಯ ಜನರ ಜೀವನದಲ್ಲಿ ಹೇಗೆ ಹಾಸುಹೊಕ್ಕಾಗಿವೆ. ಕೆಲಸದ ಆಯಾಸವನ್ನು ಮರೆಸಿ, ಹಳ್ಳಿಯ ಜನರಿಗೆ ಸಂತೋಷವನ್ನುಂಟುಮಾಡುವ ಸಾಧನಗಳಾಗಿವೆ ಎಂಬ ಅಂಶವನ್ನು ಬಿ. ಎಂ. ಶ್ರೀ. ಅರಿತಿದ್ದಾರೆ : ಹಳ್ಳಿಗರ ಜೀವನವಲ್ಲಿ ಸಾಹಿತ್ಯಕ್ಕೆ ಮತ್ತು ವೃತ್ತಿಗೆ ಇರುವ ಗಾಢವಾದ ಸಂಬಂಧಗಳನ್ನೂ ಗುರುತಿಸಿದ್ದಾರೆ.

ಈ ಬಗೆಯ ಹಾಡುಗಳು ಕನ್ನಡದಲ್ಲಿ ಮಾತ್ರವಲ್ಲದೆ ಜಗತ್ತಿನ ಎಲ್ಲಾ ಭಾಷೆಗಳಲ್ಲಿಯೂ ಉಂಟೆಂದೂ, ಇವುಗಳ ಛಂದಸ್ಸು, ಭಾಷೆ, ಭಾವಗಳು ಸರಳವಾಗಿದ್ದು ಮನಸ್ಸಿಗೆ ಬಹುಬೇಗ ತಲುಪಿ, ಜನರಿಗೆ ಪ್ರಿಯವಾಗುವುದೆಂದೂ ಹೇಳಿದ್ದಾರೆ. ಇವುಗಳ ಸಹಜತೆಯನ್ನು ಕುರಿತು "ಮಕ್ಕಳ ತೊದಲು, ಇನಿಯಳ ಅಲ್ಲೆ, ತೆಂಗಾಳಿಯ ತೀಟ, ಮಲ್ಲಿಗೆಯ ಕಂಪು, ಬೆಳುದಿಂಗಳ ತಂಪು ಮುಂತಾದ ಉಪಮಾನಗಳು ಕೃತಕ ಕವಿತ್ವಕ್ಕಿಂತಲೂ ಈ ಹಾಡುಗಳಿಗೆ ಚೆನ್ನಾಗಿ ಒಪ್ಪುತ್ತವೆ" ಎಂದು ಹೇಳಿ ಶಿಷ್ಟ ಕಾವ್ಯ ಜನಪದ ಕಾವ್ಯಗಳ ನಡುವಣ ವ್ಯತ್ಯಾಸವನ್ನೂ ಗುರುತಿಸಿದ್ದಾರೆ.[4] ಈ ಮುನ್ನುಡಿಯಲ್ಲಿ ಬಿ. ಎಂ. ಶ್ರೀ. ಅವರು ಯಾವುದೇ ಒಂದು ಸಾಹಿತ್ಯವೂ ಜನಸಾಮಾನ್ಯರ ಜೀವನವನ್ನು ಕೈಬಿಟ್ಟು ಅತಿಶಿಷ್ಟತೆಯ ಕಡೆಗೆ ಸಾಗಿದಾಗ ಅದು ಕೃತಕವಾಗುತ್ತದೆ, ಸತ್ವಹೀನವಾಗುತ್ತದೆ. ಅಂತಹ ಸಂದರ್ಭದಲ್ಲಿ ಅದು ಜನಪದ ಸಾಹಿತ್ಯದಿಂದ ಸತ್ವವನ್ನು ಪಡೆದುಕೊಳ್ಳುವುದು ಅನಿವಾರ್ಯವಾಗುತ್ತದೆ ಎಂಬ ಇನ್ನೊಂದು ಮುಖ್ಯವಾದ ಅಂಶವನ್ನು ಗುರುತಿಸಿದ್ದಾರೆ. ಶಿಷ್ಟಕವಿಗಳು ಜನಪದ ಭಾಷೆ, ಛಂದಸ್ಸು ಮೊದಲಾದವನ್ನು ಉಪಯೋಗಿಸಿಕೊಂಡು ತಮ್ಮ ಕಾವ್ಯ ಸತ್ವವನ್ನು ಹೆಚ್ಚಿಸಿಕೊಳ್ಳಬಹುದು ಎಂಬುದು ಬಿ. ಎಂ. ಶ್ರೀ ಅವರ ಆಶಯವಾಗಿತ್ತು. ಕನ್ನಡದಲ್ಲಿ ಬೇಂದ್ರೆ, ಕಂಬಾರ, ಇಮ್ರಾಪುರ ಹಾಗೂ ಕೆಲವರು ದಲಿತ ಮತ್ತು ಬಂಡಾಯ ಕವಿಗಳು ಜನಪದ ಸಾಹಿತ್ಯದ ಪ್ರಭಾವದಿಂದ ತಮ್ಮ ಕಾವ್ಯವನ್ನು ಶ್ರೀಮಂತಗೊಳಿಸಿದ್ದಾರೆ.

೪

'ನಾಡಪದಗಳು' ಹಾಸನ ಜಿಲ್ಲೆಯ ಜನಪದಗೀತೆಗಳನ್ನು ಒಳಗೊಂಡಿರುವ ಸಂಕಲನ.[5] ಇದು ಕೇವಲ ಸಂಗ್ರಹ ಮಾತ್ರ ಆಗಿರದೆ ಸುವ್ಯವಸ್ಥಿತವಾಗಿ ಸಂಪಾದಿತ

---

೩. ಅದೇ, ಪುಟ. ೩೪೮.

೪. ಅದೇ, ಪುಟ. ೩೪೮.

೫. ಈ ಸಂಕಲನದ ಸಂಪಾದಕರಲ್ಲೊಬ್ಬರಾದ ಶ್ರೀ ಮತಿಘಟ್ಟ ಕೃಷ್ಣಮೂರ್ತಿ ಅವರು ಕಳೆದ ಮೂರು ನಾಲ್ಕು ದಶಕಗಳಲ್ಲಿ ಹತ್ತು ಸಾವಿರಕ್ಕೂ ಮೇಲ್ಪಟ್ಟು ಪುಟದಷ್ಟು ಜನಪದ ಸಾಹಿತ್ಯವನ್ನು ಸಂಗ್ರಹಿಸಿದ್ದಾರೆ. ತಮ್ಮ ಜನಪದ ಸಾಹಿತ್ಯ ಭಂಡಾರದ ಮೂಲಕ ಸಾವಿರ ಪುಟಗಳ ೧೦ ಸಂಪುಟಗಳನ್ನು ಪ್ರಕಟಿಸುವ ಯೋಜನೆಯನ್ನು ಹೊಂದಿದ್ದು, ಈಗಾಗಲೇ

ವಾಗಿರುವ ಕೃತಿಯೂ ಆಗಿದೆ. ಕೋಲಾಟದ ಪದಗಳು, ತಿಂಗಳು ಮಾವನ ಪದಗಳು, ರಾಗಿಯ ಕಲ್ಲಿನ ಪದಗಳು. ಕಥೆ ಮತ್ತು ಶಾಸ್ತ್ರದ ಹಾಡುಗಳು, ಸಂಕೀರ್ಣ ಪದಗಳು, ಚರಿತ್ರೆಗೆ ಸಂಬಂಧಿಸಿದ ಪದಗಳು. ಬ್ರಾಹ್ಮಣರ ಹಾಡುಗಳು, ಬಸವನ ಅಷ್ಟಮಿಯ ಹಾಡುಗಳು – ಎಂಬ ಎಂಟು ವಿಭಾಗಗಳನ್ನು ಮಾಡಿಕೊಂಡು ಆಯಾ ವಿಭಾಗಕ್ಕೆ ಸೇರುವ ಹಾಡುಗಳನ್ನು ಸಂಕಲಿಸಿದ್ದಾರೆ. ಪ್ರತಿಯೊಂದು ವಿಭಾಗಕ್ಕೂ ಸೂಕ್ತವಾದ ಪೀಠಿಕೆ, ಹಾಗೂ ಟಿಪ್ಪಣಿಗಳನ್ನು ಕೊಟ್ಟಿದ್ದಾರೆ. "ಇದುವರೆಗೆ ನಾನು ನೋಡಿದ ಸಂಗ್ರಹಗಳಲ್ಲೆಲ್ಲಾ ಈಗಿನ ಈ ಸಂಗ್ರಹವೇ ಸರ್ವೋತ್ತಮವಾದುದು ಮತ್ತು ಅತ್ಯಂತ ಸ್ವಾರಸ್ಯವಾದುದ್ದು" ಎಂದು ಬಿ. ಎಂ. ಶ್ರೀ ಮುನ್ನುಡಿಯಲ್ಲಿ ಬರೆದಿದ್ದಾರೆ.[6] ಹೊಯ್ಸಳ ರಾಜಧಾನಿಯಾಗಿದ್ದ ಹಳೇಬೀಡಿನ ಪ್ರದೇಶದ ಈ ಸಂಕಲನದ ಬಗ್ಗೆ "ಇದರಲ್ಲಿ ಕೆಲವು ಚಾರಿತ್ರಿಕ ಲಾವಣಿಗಳು, ಅನೇಕ ಹೆಂಗಸರ ಹಾಡುಗಳು, ಎದೆ ಕರಗಿಸುವ ಕರುಣ ಕಥೆಗಳು, ಧಾರ್ಮಿಕ ಭಾವಗೀತೆಗಳೂ ಇವೆ. ಇವೆಲ್ಲಾ ಸಮಾಜ ಜೀವನ ಭಾವನೆ ಮತ್ತು ಸಂಸ್ಕೃತಿಗಳನ್ನು ಪ್ರತಿಬಿಂಬಿಸುತ್ತವೆ. ಈ ಕವನಗಳನ್ನು ಇಂಥ ಇತರ ಕವನಗಳನ್ನು ವಿಮರ್ಶಾತ್ಮಕವಾಗಿ ಅಭ್ಯಾಸ ಮಾಡಿದರೆ ಮೈಸೂರು ಚರಿತ್ರೆಯ ಮೇಲೆ ವಿಶೇಷ ಬೆಳಕು ಬೀಳುವುದು" ಎಂದು ಬಿ. ಎಂ. ಶ್ರೀ. ಹೇಳುತ್ತಾ, ಐತಿಹಾಸಿಕ ಕಥನ ಗೀತೆಗಳು ಮತ್ತು ಲಾವಣಿಗಳ ಐತಿಹಾಸಿಕ ಮಹತ್ವವನ್ನು ತಿಳಿಸಿ ಈ ಬಗ್ಗೆ ಅಧ್ಯಯನ ನಡೆಯಬೇಕಾಗಿರುವ ಅಗತ್ಯವನ್ನು ಒತ್ತಿಹೇಳಿದ್ದಾರೆ.[7]

---

'ಗೀತೆಗಳು' ಮತ್ತು 'ಗೃಹಿಣೀ ಗೀತೆಗಳು' ಎಂಬ ಎರಡು ಸಂಪುಟಗಳನ್ನು ಪ್ರಕಟಿಸಿರುವುದು ಗಮನಾರ್ಹ ಸಂಗತಿ. ಬಿ. ಎಂ. ಶ್ರೀ. ಅವರ ಶಿಷ್ಯರಾಗಿದ್ದ ಅವರು ಗುರುಗಳ ಆಶ್ರಯವನ್ನು ಈಡೇರಿಸುತ್ತಿದ್ದಾರೆ.

೬. ಬಿ. ಎಂ. ಶ್ರೀಕಂಠಯ್ಯ, ಶ್ರೀ ಸಾಹಿತ್ಯ, ಪುಟ. ೩೯೮.

೭. ಬಿ. ಎಂ. ಶ್ರೀ. ಅವರಿಗೆ ಜನಪದಸಾಹಿತ್ಯದ ಕೆಲವು ಆಶಯಗಳು (motifs) ಐತಿಹಾಸಿಕ ವ್ಯಕ್ತಿಗಳಿಗೆ ಆರೋಪಿತವಾಗಿ, ಐತಿಹಾಸಿಕ ಸತ್ಯ ನಿಸ್ಕೃಷ್ಟತೆಯನ್ನು ಗುರುತಿಸಲು ತೊಡಕನ್ನು ಉಂಟುಮಾಡಬಹುದೆಂಬ ಅನುಮಾನವೂ ಇತ್ತು. ಉದಾಹರಣೆಗೆ 'ಶ್ರೀ ಸಾಹಿತ್ಯ' ದಲ್ಲಿ ಪ್ರಕಟವಾಗಿರುವ "ತಮಿಳಿನ ಪುಱನಾನೂರಿನಲ್ಲಿ ಪೊಯ್ಸಳರು ?" ಎಂಬ ಲೇಖನದಲ್ಲಿ (ಪುಟ. ೩೬೭–೩೬೮) ತಮಿಳರು "ಒಂದು ಎರಡನೆಯ ಶತಮಾನದ್ದೆಂದು ಹೇಳುವ 'ಪುಱನಾನೂರು' ಎಂಬ ತಮಿಳಿನ ಗ್ರಂಥದಲ್ಲಿ ಎರಡು ಕವಿತೆಗಳು ಹೊಯ್ಸಳರ ರಾಜವಂಶವನ್ನು ಸೂಚಿಸುವಂತಿವೆ" ಎಂದು ಹೇಳಿ ಹೊಯ್ಸಳರ ಕಾಲಕ್ಕಿಂತ ಅನೇಕ ಶತಮಾನಗಳಷ್ಟು ಹಿಂದೆ ರಚಿತವಾದ 'ಪುಱನಾನೂರು' ಗ್ರಂಥದಲ್ಲಿ ಸಳನ ಜೀವನದ ವಿವರಗಳು ಹೇಗೆ ಬರಲು ಸಾಧ್ಯ ಎಂಬ ಪ್ರಶ್ನೆ ಹಾಕಿಕೊಂಡು ಈ ಬಗ್ಗೆ ಎಂಟು ವಿಷಯಗಳ ಬಗ್ಗೆ ವಿಚಾರ ಮಾಡಬೇಕೆಂದು ಹೇಳಿ "ಹೋಮಕುಂಡದಲ್ಲಿ ಹುಟ್ಟಿದ್ದು, ಹುಲಿಯನ್ನು ಇರಿದದ್ದು, ಹೊಲ ನಾಯಿಯನ್ನು ಅಟ್ಟಿಸಿಕೊಂಡು ಹೋದದ್ದು, ಹಾವು ತಲೆಯ ಮೇಲೆ ಆಡಿದ್ದು, ಕೊಪ್ಪರಿಗೆ ಸಿಕ್ಕದ್ದು ಮುಂತಾದ ನಾಡಕಥೆಗಳು ಜನಪದ ಕಥೆಗಳಾಗಿ ತೇಲುತ್ತಿದ್ದು, ಬೇರೆಬೇರೆ ಕಾಲದಲ್ಲಿ ಬೇರೆಬೇರೆ ರಾಜರುಗಳಿಗೆ ಅಂಟಿಕೊಂಡಿರಬಹುದೆ ? ಇವೇ ಮುಂತಾದ ವಿಚಾರಗಳನ್ನು ಚರಿತ್ರೆಯ ಶೋಧಕರು ವಿಮರ್ಶಿಸ

ಕನ್ನಡದಲ್ಲಿ ಐತಿಹಾಸಿಕ ವಿಷಯುಗಳನ್ನೊಳಗೊಂಡ ಕಥನ ಗೀತೆಗಳೂ ಲಾವಣಿಗಳೂ ಸಾಕಷ್ಟು ಸಂಗ್ರಹವಾಗಿವೆ ; ಇನ್ನೂ ಸಂಗ್ರಹವಾಗಬೇಕಾಗಿವೆ. ಈ ಸಂಗ್ರಹಕಾರ್ಯ ಪೂರ್ಣಗೊಂಡ ನಂತರ ಈ ಸಾಮಗ್ರಿಯನ್ನು ಕರ್ನಾಟಕದ ಇತಿಹಾಸ ರಚನೆಯಲ್ಲಿ ಬಳಸಿಕೊಳ್ಳಬಹುದು. ಈ ಕಥನ ಗೀತೆಗಳಿಂದ, ಲಾವಣಿಗಳಿಂದ ಮಾತ್ರ ಇತಿಹಾಸಕ್ಕೆ ಸಂಬಂಧಿಸಿದ ಎಲ್ಲಾ ವಿವರಗಳೂ ದೊರಕುವುದಿಲ್ಲ. ಆದರೆ ಇತಿಹಾಸ ರಚನೆಗೆ ಬಳಸಿಕೊಳ್ಳುವ ಇತರ ಆಕರಗಳ ಜೊತೆಗೆ ಈ ಆಕರವನ್ನೂ ಬಳಸಿಕೊಳ್ಳಬಹುದು. ಅಮೆರಿಕಾದ ಜಾನಪದ ವಿದ್ವಾಂಸರಾದ ಡಾ॥ ರಿಚರ್ಡ್ ಡಾರ್ಸನ್ ಅವರು ಅಮೆರಿಕಾದ ಜಾನಪದ ಆಕರವನ್ನು ಬಳಸಿಕೊಂಡು ಅದರ ಇತಿಹಾಸದ ರಚನೆ ಮಾಡಿರುವುದನ್ನು ಈ ಸಂದರ್ಭದಲ್ಲಿ ಗಮನಿಸಬಹುದಾಗಿದೆ.[7] ಕನ್ನಡ ಜಾನಪದದಲ್ಲಿ ಈ ಬಗೆಯ ಕಾರ್ಯ ನಡೆಯಬೇಕಾದ ಅಗತ್ಯವಿದೆ.

ಬಿ. ಎಂ. ಶ್ರೀ. ಅವರಿಗೆ ಜನಪದ ಜೀವನದ ವಿಚಾರವಾಗಿಯೂ ಕಳಕಳಿ ಇತ್ತು. "ಈಗ ನಾವು ಸಾಧಿಸಲು ಪ್ರಯತ್ನಿಸುತ್ತಿರುವ ಗ್ರಾಮಜೀವನದ ಪುನರುಜ್ಜೀವನದ ಸಾಧನೆಯಲ್ಲೂ ಇವುಗಳ ಪ್ರಾಮುಖ್ಯ ವಿಶೇಷ ಮಹತ್ವ ಜೀರುವುದೆಂದು ನಾನು ಭಾವಿಸುತ್ತೇನೆ. ಅಂತರಂಗ ಅಂತರಂಗವನ್ನು ತಟ್ಟಿ ಮಾರ್ದನಿಗೊಡುತ್ತದೆ. ನಮ್ಮ ಹಳ್ಳಿಗರ, ಗಂಡು ಹೆಣ್ಣುಗಳೆಲ್ಲರ ಜೀವನ ಸಾರವನ್ನೇ ಹೊರ ಪೊಮ್ಮಿಸುತ್ತಿರುವ ಈ ಹಾಡುಗಳು ಅವರನ್ನು ತಣಿಸಿ ಹುರಿದುಂಬಿಸುವಂತೆ ಮತ್ತೆ ಯಾವುದೂ ಹುರಿದುಂಬಿಸಲಾರವು. ಇವುಗಳನ್ನು ಆಧಾರವಾಗಿಟ್ಟುಕೊಂಡು ನವೀನ ಕಾಲಕ್ಕೆ ಉಪಯುಕ್ತವಾದ ಅನೇಕ ಶೋಧನೆಗಳನ್ನು ಮಾಡಬಹುದು. ಈಗ ಬಿಡುಪಿಲ್ಲದ ದುಡಿತ, ಬಡತನ, ನಿರಾಶೆ, ಎದೆ ಬಿರಿಸುವಂತಹ ಸತ್ವಹೀನತೆ ಇವುಗಳಲ್ಲಿ ಮುಳುಗಿಹೋಗಿರುವ ನಮ್ಮ ಜನಕ್ಕೆ ಆಟಪಾಟಗಳ ಮೂಲಕ ಬಹುಮಟ್ಟಿಗೆ ಹರ್ಷ ವಿಶ್ರಾಂತಿಗಳನ್ನುಂಟುಮಾಡಲು ಇವುಗಳನ್ನು ಬಳಸಿಕೊಳ್ಳಬಹುದು" ಎಂದು ಬಿ. ಎಂ. ಶ್ರೀ. ಮುನ್ನುಡಿಯಲ್ಲಿ ಹೇಳುವ ಮಾತುಗಳು ಗಮನಾರ್ಹವಾಗಿವೆ. ಈಚಿನ ವರ್ಷಗಳಲ್ಲಿ ಕೋಲಾಟ, ಬಯಲಾಟ, ಯಕ್ಷಗಾನಗಳು, ಕರಪಾಲಮೇಳ ಮೊದಲಾದ

---

ಬೇಕಾಗಿದೆ" ಎಂದು ಹೇಳಿದ್ದಾರೆ. "ಪುರನಾನೂರು ಸಂಗ್ರಹದ ಕವಿತೆಗಳೆಲ್ಲವೂ ಒಂದು ಕಾಲದ್ದಲ್ಲ, ಬೇರೆಬೇರೆ ಕಾಲದವು ಎಂದು ಊಹಿಸಿ. 'ಪುಱನಾನೂರು' ಎರಡನೆಯ ಶತಮಾನದಷ್ಟು ಹಳೆಯದಲ್ಲವೆಂದು ಸಂಶಯಪಡಬಹುದೆ?" ಎಂದೂ ಹೇಳುತ್ತಾರೆ. ಇಲ್ಲಿ ನಾವು ಗಮನಿಸಬೇಕಾದ ಸಂಗತಿಯೆಂದರೆ ಬಿ. ಎಂ. ಶ್ರೀ. ಜನಪದ ಸಾಹಿತ್ಯದ ಬಗ್ಗೆ ಅಂಥಾ ಒಲವು ಹೊಂದಿರದೆ, ಇತಿಹಾಸದ ಬಗ್ಗೆ ವಿಚಾರ ಮಾಡುವಾಗ ಜನಪದ ಸಾಹಿತ್ಯದ ಅಭಿಪ್ರಾಯಗಳು (motifs) ದಾರಿ ತಪ್ಪಿಸಲು ಸಾಧ್ಯ ಎಂಬ ಅಂಶವನ್ನು ಅರ್ಥಮಾಡಿಕೊಂಡಿದ್ದರು ಎಂಬುದು 'ಪುಱನಾನೂರಿ'ನ ಬಗ್ಗೆ ಬಿ. ಎಂ. ಶ್ರೀ. ಅವರ ಅನುಮಾನಗಳು ಸಮರ್ಥಕವಾಗಿವೆ ಎನಿಸುತ್ತದೆ.

೭. Richard M. Dorson. *American Folklore* (Bombay 1966)

ಮೇಳಗಳ ಮೂಲಕ ಹಾಗೂ ಲಾವಣಿಗಳ ಮೂಲಕ ಸಮಾಜ ಸುಧಾರಣೆಗೆ ಅಗತ್ಯವಾದ ಸಾಕ್ಷರತೆ, ಕುಟುಂಬ ಯೋಜನೆ ಮೊದಲಾದ ವಿಷಯಗಳನ್ನು ಜನರಿಗೆ ತಲಪಿಸುವ ಪ್ರಯತ್ನ ಅಲ್ಲಲ್ಲಿ ನಡೆಯುತ್ತಿದೆ. ಹಳ್ಳಿಯ ಜನರ ಆಟಗಳಿಗೆ, ಕ್ರೀಡೆಗಳಿಗೆ, ಕಲೆಗಳಿಗೆ ಈಚಿನ ವರ್ಷಗಳಲ್ಲಿ ಹೆಚ್ಚಿನ ಮನ್ನಣೆ ದೊರೆಯುತ್ತಿದೆ. ಹೀಗಾಗಿ ಬಿ. ಎಂ. ಶ್ರೀ. ಅವರ ಈ ಆಶಯ ತಕ್ಕಮಟ್ಟಿಗೆ ಕಾರ್ಯರೂಪಕ್ಕೆ ಬರುತ್ತಿದೆ ಎಂದು ಭಾವಿಸಬಹುದು.

೫

ಕನ್ನಡ ಛಂದಸ್ಸಿನ ಅಧ್ಯಯನಕ್ಕೆ ಬಿ. ಎಂ. ಶ್ರೀ. ಅವರ 'ಕನ್ನಡ ಛಂದಸ್ಸಿನ ಇತಿಹಾಸ' ಎಂಬ ಲೇಖನ ಬಹು ಮುಖ್ಯವಾದ ಆಧಾರವಾಗಿದೆ.[8] ಈ ಲೇಖನವನ್ನು ಒರೆಯುವುದರ ಮೂಲಕ ಬಿ. ಎಂ. ಶ್ರೀ. ಕನ್ನಡ ಛಂದಸ್ಸಿನ ಅಧ್ಯಯನಕ್ಕೆ ಭದ್ರವಾದ ಅಡಿಪಾಯ ಹಾಕಿದರು. ಅವರು ೧೯೩೬ರಲ್ಲಿಯೇ ಕನ್ನಡ ಮತ್ತು ತಮಿಳು ಛಂದಸ್ಸುಗಳಿಗಿರುವ ಸಂಬಂಧವನ್ನು ಗುರುತಿಸಿದ್ದರು. ತಮಿಳಿನ 'ಅಶೈ' ಸಾಮ್ಯದ ಮೇಲೆ ಕನ್ನಡದಲ್ಲಿ ಅಂಶಗಣ ಎಂಬ ಮಾತನ್ನು ಬಳಸಿ, ಅದರ ಲಕ್ಷಣವನ್ನೂ ಸ್ಪಷ್ಟಪಡಿಸಿದವರೂ ಅವರೇ. ಕರ್ನಾಟಕ ವಿಷಯ ಜಾತಿಗಳಲ್ಲಿ ಕೆಲವಕ್ಕೆ ಹೆಚ್ಚಿನ ಪ್ರಯೋಗಗಳು ದೊರಕುವುದಿಲ್ಲ. ಅವುಗಳನ್ನು ಹೇಗೆ ಹಾಡುತ್ತಿದ್ದರೂ ಎಂಬುದೂ ಕೂಡ ತಿಳಿಯುವುದಿಲ್ಲ. ಇವುಗಳನ್ನು ಅರ್ಥಮಾಡಿಕೊಳ್ಳುವುದಕ್ಕೆ ಕನ್ನಡ ಜನಪದ ಸಾಹಿತ್ಯ ನೆರವಾಗಬಹುದು ಎಂಬ ಆಸೆ ಅವರಿಗಿತ್ತು. "ಜನಪದ ಛಂದಸ್ಸನ್ನು ತಮಿಳು, ತೆಲುಗು, ಕೊಡಗು ಮುಂತಾದ ಭಾಷೆಯ ಛಂದಸ್ಸುಗಳೊಡನೆ ಹೋಲಿಸಿ, ದ್ರಾವಿಡ ಭಾಷೆಗಳ ಮೂಲ ಛಂದಸ್ಸಿನ ರಹಸ್ಯವನ್ನು ಅರಿಯಬಹುದು" ಎಂದು ಅವರು ಅಭಿಪ್ರಾಯಪಟ್ಟಿದ್ದರು.[9] ಅನಂತರ ಪ್ರಕಟವಾಗಿರುವ ಡಾ॥ ಡಿ. ಎಸ್. ಕರ್ಕಿ ಅವರ 'ಛಂದೋವಿಕಾಸ'[10], ಡಾ॥ ಟಿ. ವಿ, ವೆಂಕಟಾಚಲಶಾಸ್ತ್ರಿಗಳ 'ಕನ್ನಡ ಛಂದಃಸ್ವರೂಪ[11]' ಮತ್ತು ಡಾ॥ ಎಂ. ಚಿದಾನಂದಮೂರ್ತಿ ಅವರ ಲೇಖನಗಳಲ್ಲಿ[12] ಅಲ್ಲಲ್ಲಿ ಜನಪದ ಸಾಹಿತ್ಯದ ಛಂದಸ್ಸಿನ ಬಗ್ಗೆ ವಿಚಾರಮಾಡಲಾಗಿದೆ. ಮೈಸೂರು

೮. ಕನ್ನಡ ಕೈಪಿಡಿ, ಸಂಪುಟ ೧, (ಪುಟ ೧೦೫–೧೧೯) ; 'ಶ್ರೀಸಾಹಿತ್ಯ' ಪುಟ ೫೩೫–೫೭೯.

೯. ಶ್ರೀ ಸಾಹಿತ್ಯ, ೩೪೯. ('ಗರತಿಯ ಹಾಡಿ'ನ ಮುನ್ನುಡಿ)

೧೦. ಡಾ॥ ಡಿ. ಎಸ್. ಕರ್ಕಿ, ಕನ್ನಡ ಛಂದೋವಿಕಾಸ (ಧಾರವಾಡ), ೧೯೫೬.

೧೧. ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರಿ, ಕನ್ನಡ ಛಂದಃಸ್ವರೂಪ (ಮೈಸೂರು : ಡಿ. ವಿ. ಕೆ. ಮೂರ್ತಿ, ೧೯೭೮).

೧೨. ಡಾ॥ ಎಂ. ಚಿದಾನಂದಮೂರ್ತಿ, ಸಂಶೋಧನ ತರಂಗ (ಮೈಸೂರು : ಸರಸ ಸಾಹಿತ್ಯ ಪ್ರಕಾಶನ, ೧೯೬೬)

ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿರುವ 'ಕನ್ನಡ ಛಂದಸ್ಸಿನ ಚರಿತ್ರೆ'ಯಲ್ಲಿ ಈ ಬಗ್ಗೆ ಕೆಲಸ ನಡೆದಿದೆ.[13] ಕರ್ನಾಟಕ ವಿಷಯ ಜಾತಿಗಳಲ್ಲಿ ಏಳೆ ತ್ರಿಪದಿ ಮತ್ತು ಪಿರಿಯಕ್ಕರವನ್ನು ಬಿಟ್ಟರೆ ಉಳಿದವಕ್ಕೆ ಹೆಚ್ಚು ಪ್ರಯೋಗಗಳು ಸಿಕ್ಕುವುದಿಲ್ಲ. ಇವುಗಳ ಉಗಮವನ್ನು ಕಂಡುಕೊಳ್ಳಲು ಜನಪದ ಸಾಹಿತ್ಯ ನೆರವಾಗುವುದಾದರೂ ಅದು ಅಷ್ಟು ಸುಲಭದ ಕೆಲಸವಲ್ಲ ಎಂದು ಡಾ॥ ಎಂ. ಚಿದಾನಂದಮೂರ್ತಿ ಅವರು ಅಭಿಪ್ರಾಯಪಡುತ್ತಾರೆ.[14] ಶ್ರೀ ಮತಿಘಟ್ಟ ಕೃಷ್ಣಮೂರ್ತಿ ಅವರು ತ್ರಿಪದಿಯ ಎಂಟನೆಯ ಗಣವನ್ನು 'ತನಿಸೊಲ್ಲು' ಎಂದು ಕರೆದು, ಅದರ ಪುನರಾವರ್ತನೆಯಾಗುವಾಗ ಕಂಡುಬರುವ ವೈಶಿಷ್ಟ್ಯವನ್ನು ಗುರುತಿಸಿದ್ದಾರೆ. ಹಾಗೆಯೇ ತ್ರಿಪದಿಯ ಲಕ್ಷಣ ಒಂದೇ ರೀತಿ ಇದ್ದರೂ ಹಾಡುವ ಧಾಟಿಯಲ್ಲಿ ಅನೇಕ ಬಗೆಗಳಿವೆ ಎಂದು ಅವರು ಗುರುತಿಸಿದ್ದಾರೆ. "ತ್ರಿಪದಿಯನ್ನು ರಾಗಿ ಬೀಸುತ್ತಾ ಹೇಳುವ ಧಾಟಿಗೂ, ಹಚ್ಚೆ ಕುಕ್ಕುತ್ತಾ ಹೇಳುವ ಧಾಟಿಗೂ, ಒನಕೆ ಹಿಡಿದು ಕುಟ್ಟುತ್ತಾ ಹೇಳುವ ಧಾಟಿಗೂ, ಕಳೆ ಕೀಳುತ್ತಾ, ನೇಜಿ ಹೊಡೆಯುತ್ತಾ, ಹಂತಿ ಹೊಡೆಯುತ್ತಾ ಹೇಳುವ ಧಾಟಿಗೂ, ಅರೆ. ತಮ್ಮಟೆ, ಡೋಲು, ತಾಳ, ಗಂಟೆ ಮೊದಲಾದ ವಾದ್ಯಗಳೊಂದಿಗೆ ದೇವರನ್ನು ಮೆರೆಸುತ್ತಾ ಹೇಳುವ ಧಾಟಿಗೂ. ಮದುವೆ, ಮುಂಜಿಗಳಲ್ಲಿ, ಹಬ್ಬ ಹರಿದಿನಗಳಲ್ಲಿ, ಒಸಗೆ ಸೋಬಾನೆಗಳಲ್ಲಿ ಹೇಳುವ ಧಾಟಿಗೂ, ಕುಳಿತು ಕಥೆಯನ್ನು ಹೇಳುವ ಧಾಟಿಗೂ ಎಷ್ಟೋ ವ್ಯತ್ಯಾಸಗಳು ಕಂಡುಬರುತ್ತದೆ ... ತ್ರಿಪದಿಯಲ್ಲಿ ಅಕ್ಷರಗಳನ್ನು ಒಗ್ಗಿಸಿಕೊಳ್ಳುವುದಕ್ಕಾಗಲಿ, ಕುಗ್ಗಿಸಿಕೊಳ್ಳುವುದಕ್ಕಾಗಲಿ ಇರುವ ಅವಕಾಶದಿಂದ ಹಲವಾರು ಧಾಟಿಗಳು ಏರ್ಪಟ್ಟಿವೆ"[15] ಎಂಬ ಅವರ ಮಾತುಗಳು ಗಮನಾರ್ಹವಾಗಿದ್ದು, ಜನಪದಗೀತೆಗಳ ಛಂದೋರೂಪಗಳ ಹಾಡಿನ ಧಾಟಿಗಳನ್ನು ಅರ್ಥಮಾಡಿಕೊಳ್ಳುವಲ್ಲಿ ನೆರವಾಗುತ್ತವೆ.

ಕನ್ನಡದಲ್ಲಿ ವಡಿ ಕ್ವಚಿತ್ತಾಗಿ ಬಳಕೆಯಾಗಿದೆಯೆಂದೂ ಅದು ತೆಲುಗಿನ ಪ್ರಭಾವದಿಂದ ಕನ್ನಡದಲ್ಲಿ ಬಳಕೆಯಾಗಿದೆಯೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದರು. ಅವರು ಶಿಷ್ಟಕಾವ್ಯಗಳನ್ನು ಮಾತ್ರ ಆಧಾರವಾಗಿಟ್ಟುಕೊಂಡು ಈ ಅಭಿಪ್ರಾಯಕ್ಕೆ ಬಂದಿದ್ದರು. ಆದರೆ ಜನಪದಗೀತೆಗಳ ಅಭ್ಯಾಸಮಾಡಿದ ಶ್ರೀ ಕೆ. ಶಿವರಾಮ ಐತಾಳರು ಆ ಆಧಾರದ ಮೇಲೆ ಕನ್ನಡದಲ್ಲಿ ವಡಿಯ ಪ್ರಯೋಗ

---

೧೩. ಡಾ॥ ಹಾ. ಮಾ. ನಾಯಕ ಮತ್ತು ಡಾ ॥ ಸಿ. ಪಿ. ಕೃಷ್ಣಕುಮಾರ್ (ಸಂ), ಕನ್ನಡ ಛಂದಸ್ಸಿನ ಚರಿತ್ರೆ, (ಎರಡನೆಯ ಸಂಪುಟ) ಮೈಸೂರು ವಿಶ್ವವಿದ್ಯಾನಿಲಯ, ೧೯೮೦.

೧೪. ಅದೇ, ಪುಟ ೧೩.

೧೫. ಮತಿಘಟ್ಟ ಕೃಷ್ಣಮೂರ್ತಿ, 'ಜನಪದ ಛಂದಸ್ಸು : ತ್ರಿಪದಿಯನ್ನು ಕುರಿತ ಒಂದು ವಿವೇಚನೆ', ಪ್ರಬುದ್ಧ ಕರ್ನಾಟಕ, ೫೨–೧, ಪುಟ ೨೬–೨೭.

ಸಹಜವಾದುದೆಂದೂ ಅದು ಕನ್ನಡದಲ್ಲಿಯೇ ಸ್ವತಂತ್ರವಾಗಿ ರೂಪುಗೊಂಡಿರ ಬಹುದೆಂದೂ ಅನೇಕ ಉದಾಹರಣೆಗಳೊಡನೆ ಸಮರ್ಥಿಸುತ್ತಾರೆ. ಇದು ಮಹತ್ವದ ಸಂಶೋಧನೆಯಾಗಿದೆ. ಈ ಬಗೆಯ ಸಂಶೋಧನೆಗಳನ್ನು ಗಮನಿಸಿದಾಗ ಬಿ. ಎಂ. ಶ್ರೀ ಅವರ ಆಶಯಗಳು ಅಲ್ಪಸ್ವಲ್ಪವಾದರೂ ಈಡೇರುತ್ತಿದೆಯೆಂದು ತಿಳಿದುಬರುತ್ತದೆ. ಈ ಕ್ಷೇತ್ರದಲ್ಲಿ ನಡೆಯಬೇಕಾದ ಕೆಲಸ ಸಾಕಷ್ಟಿದೆ.

ಬಿ. ಎಂ. ಶ್ರೀ. ಅವರಿಗೆ ನೀಳ್ಗವನಗಳು ಪ್ರಿಯವಾಗಿದ್ದವು. ಅವರು 'ಕನ್ನಡ ತಾಯ್ ನೋಟ', 'ಶ್ರೀಕೃಷ್ಣರಾಜ ರಜತಮಹೋತ್ಸವ ಪ್ರಗಾಥ' 'ಶುಕ್ರಗೀತೆ' ಮೊದಲಾದ ನೀಳ್ಗವನಗಳನ್ನು ಬರೆದಿದ್ದಾರೆ. ಇಂಗ್ಲಿಷಿನ ಪ್ರಗಾಥಗಳ (Odes) ಪ್ರಭಾವ ಇವುಗಳ ಮೇಲಾಗಿದೆ. ಈ ಪ್ರಕಾರವನ್ನು ಬೆಳೆಸುವ ಸಲುವಾಗಿ ಅವರು ಚಿನ್ನದಪದಕವನ್ನೂ ವ್ಯವಸ್ಥೆಗೊಳಿಸಿದ್ದರು. ಇದರಿಂದ ಅನೇಕ ಕವಿಗಳು ನೀಳ್ಗವನಗಳನ್ನು. ಬರೆದು ಈ ಪದಕವನ್ನು ಗಳಿಸಿದ್ದಾರೆ. ಬಿ. ಎಂ. ಶ್ರೀ. ಅವರಿಗೆ ಜನಪದ ಕಥನಗೀತೆಗಳೂ ಪ್ರಿಯವಾಗಿದ್ದವು. 'ಕನ್ನಡ ಬಾವುಟ'ದ ಎರಡನೆಯ ಮುದ್ರಣದಲ್ಲಿ 'ಕೆರೆಗೆ ಹಾರ' ಕಥನಕವನವನ್ನು ಸೇರಿಸಿದ್ದಾರೆ. 'ಕನ್ನಡ ಬಾವುಟ' ದಲ್ಲಿ 'ನಾಡಪದಗಳು' ಎಂಬ ವಿಭಾಗವಲ್ಲಿ 'ಗರತಿಯ ಹಾಡು' ಎಂಬ ಶೀರ್ಷಿಕೆಯಲ್ಲಿ ಸೊಗಸಾದ ಜನಪದ ತ್ರಿಪದಿಗಳನ್ನು ಸಂಕಲಿಸಿದ್ದಾರೆ. ಹಾಗೆಯೇ ಗೋವಿನ ಹಾಡು ಮಾನವಮಿಯ ಪದ್ಯಗಳನ್ನೂ ಸೇರಿಸಿದ್ದಾರೆ. ಈ ಸಂಕಲನದಲ್ಲಿ ಜನಪದಗೀತೆ ಗಳಿಗೆ ಪ್ರಾತಿನಿಧ್ಯ ಕೊಟ್ಟಿದ್ದು ಐತಿಹಾಸಿಕವಾಗಿ ಮಹತ್ವದ ಸಂಗತಿಯಾಗಿದೆ.

ಬಿ. ಎಂ. ಶ್ರೀ. ಜನಪದ ಕಾವ್ಯದ ಸರಿಯಾದ ವಿಮರ್ಶೆಯಾಗಬೇಕೆಂದೂ ಅಪೇಕ್ಷಿಸಿದ್ದರು. 'ಗರತಿಯ ಹಾಡು' ಮುನ್ನುಡಿಯಲ್ಲಿ ಈ ಆಶಯವನ್ನು ವ್ಯಕ್ತ ಪಡಿಸಿದ್ದಾರೆ. "... ಕನ್ನಡ ಕವಿತೆ ತನ್ನ ಅಗಲವನ್ನೇ ಅಲ್ಲ, ಆಳವನ್ನು ಕೂಡ ಕಂಡುಕೊಳ್ಳುತ್ತಿರುವಾಗ ಸಂಸ್ಕೃತ, ಇಂಗ್ಲಿಷ್ ಸಾಹಿತ್ಯಗಳ, ಇತರ ಸಾಹಿತ್ಯಗಳ ಸರಿಯಾದ ಸಂಸ್ಕಾರದ ಜೊತೆಗೆ ಕನ್ನಡ ಪ್ರೌಢಾಭ್ಯಾಸಂಗದ ಜೊತೆಗೆ ಕನ್ನಡದ ಮತ್ತು ಇತರ ಜನಪದ ಸಾಹಿತ್ಯವನ್ನೂ ಪರಾಮರ್ಶಿಸುವುದೂ ಅತ್ಯಾವಶ್ಯಕವಾದ ಕರ್ತವ್ಯ" ಎಂದು ಅವರು ಹೇಳಿದ್ದಾರೆ.[16] ಬಿ. ಎಂ. ಶ್ರೀ. ಅವರ ಈ ಮುನ್ನುಡಿ ಪ್ರಕಟವಾಗುವ ಮೊದಲೇ ೧೯೨೭ರಲ್ಲಿಯೇ ಮಾಸ್ತಿಯವರು 'ಕನ್ನಡ ಲಾವಣಿ ಸಾಂಗತ್ಯ' ಎಂಬ ಲೇಖನವನ್ನು ಬರೆದು, ಜನಪದಗೀತೆಗಳ ಸಾಹಿತ್ಯಕ ಸೌಂದರ್ಯ ವನ್ನು ವಿಮರ್ಶಾತ್ಮಕವಾಗಿ ಪರಿಚಯ ಮಾಡಿಕೊಟ್ಟಿದ್ದರು. ಬೇಂದ್ರೆಯವರು ಈ ಗೀತೆಗಳ ಸ್ವಾರಸ್ಯವನ್ನು ತಿಳಿಸುವ ಪ್ರಯತ್ನವನ್ನು ಮಾಡಿದ್ದರು. ಅನಂತರ ಪ್ರೊ॥ ತೀ.ನಂ.ಶ್ರೀ., ಪ್ರೊ॥ ಡಿ.ಎಲ್.ಎನ್., ಡಾ॥ ಗೊರೂರು, ಡಾ॥ ಜಿ. ಎಸ್. ಶಿವರುದ್ರಪ್ಪ, ಡಾ॥ ಪ್ರಭುಶಂಕರ, ಪ್ರೊ॥ಸುಜನಾ, ಪ್ರೊ॥ ಸಿ.ಪಿ.ಕೆ. ಮೊದಲಾದ

---

೧೬. ಶ್ರೀ ಸಾಹಿತ್ಯ. ಪುಟ ೩೪೯.

ಹಲವರು ವಿಮರ್ಶಕರು ಜನಪದ ಕಾವ್ಯದ ವಿಮರ್ಶೆ ಮಾಡಿದ್ದಾರೆ. ಅಲ್ಲಿಂದೀಚೆಗೆ ಈ ಬಗೆಯ ವಿಮರ್ಶೆ ಹುಲುಸಾಗಿ ಬೆಳೆದಿದೆ ; ಹೇಳಿದ್ದನ್ನೇ ಹೇಳುವ ಪರಿಪಾಠವೂ ಅನಂತರ ಬೆಳೆದಿದೆ. ಈ ಸಂದರ್ಭದಲ್ಲಿ ಶ್ರೀ ಗಿರಡ್ಡಿಯವರ 'ಜನಪದ ಕಾವ್ಯ' ಎಂಬ ವಿಮರ್ಶಾ ಬರಹ ಜನಪದ ಕಾವ್ಯದ ಪರಿಮಿತಿಗಳನ್ನು ತೋರಿಸುವ ಬರಹವಾಗಿದ್ದು, ಮಹತ್ವಪೂರ್ಣವಾದದ್ದಾಗಿದೆ.[17] ಈ ಬಗೆಯ ಹೊಸ ದೃಷ್ಟಿಯಿಂದ ಜನಪದ ಕಾವ್ಯದ ಮೌಲ್ಯಮಾಪನ ಇನ್ನೂ ಹೆಚ್ಚಾಗಿ ನಡೆಯುವುದು ಅಗತ್ಯವಾಗಿದೆ.

'ನಾಡಪದಗಳು' ಸಂಕಲನಕ್ಕೆ ಮುನ್ನುಡಿ ಬರೆಯುತ್ತಾ ಜನಪದ ಸಾಹಿತ್ಯದ ಅಭ್ಯಾಸ ಭಾಷಾವಿಜ್ಞಾನದ ದೃಷ್ಟಿಯಿಂದಲೂ ನಡೆಯುವುದು ಅಗತ್ಯವೆಂದೂ ಹಾಗೆ ಅಭ್ಯಾಸಮಾಡಿ ಪ್ರಯೋಜನ ಪಡೆಯಬಹುದೆಂದೂ ಬಿ. ಎಂ. ಶ್ರೀ. ಹೇಳಿದ್ದಾರೆ. ಕನ್ನಡ ಭಾಷೆಯ ಸ್ವರೂಪವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ ಗ್ರಾಂಥಿಕ ಭಾಷೆಯಂತೆಯೇ ಆಡುಮಾತಿನ ಅಧ್ಯಯನವೂ ಅಗತ್ಯ ; ಹಾಗೆಯೇ ಶಿಷ್ಟ ಸಾಹಿತ್ಯದ ಭಾಷೆಯನ್ನು ಅಭ್ಯಾಸಮಾಡುವಂತೆಯೇ ಜನಪದ ಸಾಹಿತ್ಯದ ಭಾಷೆಯನ್ನು ಅಭ್ಯಾಸ ಮಾಡುವುದು ಅಗತ್ಯ. ಈ ಅಗತ್ಯವನ್ನು ತಿಳಿದಿದ್ದ ಕಿಟ್ಟೆಲ್ ಅವರು ತಮ್ಮ ಕನ್ನಡ-ಇಂಗ್ಲಿಷ್ ನಿಘಂಟಿನಲ್ಲಿ ಕನ್ನಡ ಗಾದೆಯ ಪ್ರಯೋಗಗಳನ್ನು ಬಳಸಿಕೊಂಡಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟಿನಲ್ಲಿ ಜನಪದ ಭಾಷೆಯ ಪದ, ವಾಕ್ಯ ಪ್ರಯೋಗಗಳನ್ನೂ, ಗಾದೆಗಳನ್ನೂ, ನುಡಿಗಟ್ಟುಗಳನ್ನೂ ಸೂಕ್ತವಾಗಿ ಬಳಸಿಕೊಳ್ಳಲಾಗಿದೆ. ಕರ್ನಾಟಕದ ವಿವಿಧ ಪ್ರದೇಶಗಳ, ಜಾತಿಗಳ, ಬುಡಕಟ್ಟುಗಳ ಜನಪದ ಭಾಷೆಯ ಸ್ವರೂಪದ ಬಗ್ಗೆ ಇನ್ನೂ ಹೆಚ್ಚಿನ ಕೆಲಸ ನಡೆಯಬೇಕಾಗಿದೆ.

೭

೧೯೬೬ ರಿಂದೀಚೆಗೆ ಜಾನಪದ ವಿಜ್ಞಾನ (Folkloristics) ಒಂದು ಪ್ರತ್ಯೇಕವಾದ ಅಧ್ಯಯನದ ಶಿಸ್ತಾಗಿ ರೂಪುಗೊಳ್ಳುತ್ತಿದೆ.[18] ೧೯೬೬ ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಎಂ. ಎ. ತರಗತಿಯಲ್ಲಿ ಕನ್ನಡ ಜನಪದ ಸಾಹಿತ್ಯ ಮತ್ತು ಜಾನಪದ ತತ್ತ್ವಗಳ ಒಂದು ಪತ್ರಿಕೆಯನ್ನು ಪಠ್ಯಕ್ರಮದಲ್ಲಿ ಸೇರಿಸಲಾಯಿತು;

---

೧೭. ಗಿರಡ್ಡಿ ಗೋವಿಂದರಾಜ, ಜನಪದ ಕಾವ್ಯ (ಧಾರವಾಡ : ಕರ್ನಾಟಕ ವಿಶ್ವವಿದ್ಯಾನಿಲಯ, ೧೯೭೧)

೧೮. ಹೆಚ್ಚಿನ ವಿವರಗಳಿಗೆ ನೋಡಿ, ಡಾ॥ ಜಿ. ಶಂ. ಪರಮಶಿವಯ್ಯ, ಜಾನಪದ ಕೆಲವು ಮುಖಗಳು (ಬೆಂಗಳೂರು : ಕರ್ನಾಟಕ ಸಹಕಾರಿ ಪ್ರಕಾಶನ, ೧೯೬೫) ; ಜಾನಪದ (ಮೈಸೂರು : ಸಾಹಿತ್ಯಸದನ, ೧೯೭೮).

೧೯೬೭ ರಲ್ಲಿ ಕನ್ನಡ ಜನಪದ ಸಾಹಿತ್ಯದ ಒಂದು ಪತ್ರಿಕೆಯನ್ನೂ, ಜಾನಪದ ತತ್ತ್ವಗಳ ಒಂದು ಪ್ರತ್ಯೇಕವಾದ ಪತ್ರಿಕೆಯನ್ನು ಐಚ್ಛಿಕ ವಿಷಯವಾಗಿ ಸೇರಿಸಲಾಯಿತು : ಈ ಎರಡು ಪತ್ರಿಕೆಗಳ ಜೊತೆಗೆ ೧೯೬೮-೬೯ರಿಂದ ಸಾಂಸ್ಕೃತಿಕ ಮಾನವ ವಿಜ್ಞಾನದ ಒಂದು ಪತ್ರಿಕೆಯನ್ನೂ ಸೇರಿಸಿ ಮೂರು ಪತ್ರಿಕೆಗಳನ್ನೂ ಐಚ್ಛಿಕ ವಿಷಯವನ್ನಾಗಿ ಅಳವಡಿಸಲಾಯಿತು. ೧೯೭೨-೭೩ ರಲ್ಲಿ ಜಾನಪದದಲ್ಲಿ ಸ್ನಾತಕೋತ್ತರ ಡಿಪ್ಲೊಮಾ ತರಗತಿಗಳನ್ನೂ, ೧೯೭೩-೭೪ ರಿಂದ ಸ್ವತಂತ್ರವಾದ ಜಾನಪದ ಎಂ. ಎ. ಶಿಕ್ಷಣವನ್ನೂ ಆರಂಭಿಸಲಾಯಿತು. ಜಾನಪದ ಗ್ರಂಥಗಳ ಪ್ರಕಟಣೆ, ಜಾನಪದ ವಿಚಾರಸಂಕಿರಣಗಳು ಮತ್ತು ಜಾನಪದ ಕಲಾಮೇಳಗಳು ನಡೆದಿವೆ.[19] ಮೈಸೂರು ವಿಶ್ವವಿದ್ಯಾನಿಲಯದ ಜಾನಪದ ಮ್ಯೂಸಿಯಂ ಭಾರತದ ಆ ಬಗೆಯ ಮ್ಯೂಸಿಯಂಗಳಲ್ಲಿ ಮೊದಲ ಸ್ಥಾನದಲ್ಲಿದೆ. ಈ ಎಲ್ಲ ಸಾಧನೆಗಳಿಗೆ ಡಾ॥ ದೇಜಗೌ, ಡಾ॥ ಹಾ. ಮಾ. ನಾಯಕ ಮತ್ತು ಡಾ॥ ಜೀಶಂಪ ಅವರು ಮುಖ್ಯ ಕಾರಣಕರ್ತರಾಗಿದ್ದಾರೆ. ಜಾನಪದ ಮ್ಯೂಸಿಯಂ ಬೆಳೆಸುವುದರಲ್ಲಿ ಶ್ರೀ ಪಿ. ಆರ್. ತಿಪ್ಪೇಸ್ವಾಮಿ ಹೆಚ್ಚು ದುಡಿದಿದ್ದಾರೆ. ಕರ್ನಾಟಕ ವಿಶ್ವವಿದ್ಯಾನಿಲಯ ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯಗಳಲ್ಲಿಯೂ ಸ್ನಾತಕೋತ್ತರ ಶಿಕ್ಷಣದಲ್ಲಿ ಜಾನಪದ ಅಧ್ಯಯನದ ವಿಷಯವಾಗಿದೆ. ಈ ವಿಶ್ವವಿದ್ಯಾನಿಲಯಗಳಲ್ಲಿಯೂ ಜಾನಪದ ಗ್ರಂಥಗಳ ಪ್ರಕಟಣೆ, ಜಾನಪದ ವಿಚಾರ ಸಂಕಿರಣಗಳು, ಜಾನಪದ ಕಲಾಮೇಳಗಳು ನಡೆದಿವೆ. ಈ ಮೂರೂ ವಿಶ್ವವಿದ್ಯಾನಿಲಯಗಳಲ್ಲಿ ಕೆಲವರು ಈಗಾಗಲೇ ಜಾನಪದ ವಿಷಯಗಳ ಬಗ್ಗೆ ಸಂಶೋಧನೆ ಮಾಡಿ ಪಿಎಚ್‌ಡಿ ಪಡೆದಿದ್ದಾರೆ ; ಇನ್ನೂ ಅನೇಕರು ಸಂಶೋಧನೆಯಲ್ಲಿ ತೊಡಗಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ ಜನಪದ ಕಲೆ ಹಾಗೂ ಸಾಹಿತ್ಯಕ್ಷೇತ್ರದಲ್ಲಿ ಒಳ್ಳೆಯ ಕೆಲಸ ಮಾಡಿದೆ ; ಜಾನಪದ ವಿಶ್ವಕೋಶ ಮತ್ತು ಜನಪದ ವೈದ್ಯದ ಯೋಜನೆಗಳನ್ನು ಹಾಕಿಕೊಂಡಿದೆ ; ಜಾನಪದ ಸಂಬಂಧವಾದ ಪಿಎಚ್‌ಡಿ ನಿಬಂಧಗಳನ್ನೂ ಪ್ರಕಟಿಸಿದೆ. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ. ಶ್ರೀ ಎಚ್. ಎಲ್. ನಾಗೇಗೌಡರ ಕರ್ನಾಟಕ ಜಾನಪದ ಟ್ರಸ್ಟ್ ಜಾನಪದ ಕ್ಷೇತ್ರದಲ್ಲಿ ಹಲವಾರು ಉಪಯುಕ್ತ ಕಾರ್ಯಗಳನ್ನು ಮಾಡುತ್ತಿವೆ.[20] ಕರ್ನಾಟಕ ಜಾನಪದ ಪರಿಷತ್ತು, ತರೀಕೆರೆ, ಮಂಗಳೂರು

---

೧೯. ಮೈಸೂರು ವಿಶ್ವವಿದ್ಯಾನಿಲಯದ ಬಿ. ಆರ್. ಪ್ರಾಜೆಕ್ಟ್ ಸ್ನಾತಕೋತ್ತರ ಕೇಂದ್ರದಲ್ಲಿಯೂ ಕನ್ನಡ ಎಂ.ಎ. ತರಗತಿಯಲ್ಲಿ ಜಾನಪದ ವಿಜ್ಞಾನ ಐಚ್ಛಿಕ ವಿಷಯವಾಗಿದೆ. ಈ ವಿಭಾಗ ಜಾನಪದ ವಿಚಾರ ಸಂಕಿರಣಗಳನ್ನೂ, ಕಲಾಮೇಳಗಳನ್ನೂ ನಡೆಸಿ ಉಪಯುಕ್ತ ಕಾರ್ಯ ಮಾಡುತ್ತಿದೆ.

೨೦. ಕ್ಷೇತ್ರಕಾರ್ಯಕರ್ತರ ಶಿಬಿರಗಳು, ಜನಪದ ಕಲಾವಿದರ ಸಮ್ಮೇಳನಗಳು, ಜಾನಪದ, ಸಾಕ್ಷ್ಯಚಿತ್ರಗಳ ನಿರ್ಮಾಣ, ಜನಪದ ಗೀತೆಗಳ ಕ್ಯಾಸೆಟ್‌ಗಳ ಬಿಡುಗಡೆ, ಜನಪದ ಕಲೆಗಳ ಆಟಗಳ ಸ್ಪರ್ಧೆಗಳ ಏರ್ಪಾಡು, ಜನಪದ ಕಲಾವಿದರಿಗೆ ಸನ್ಮಾನ ಮತ್ತು ಮಾಸಾಶನ ನೀಡಿಕೆ ಮೊದಲಾದ ಕಾರ್ಯಕ್ರಮಗಳು ತುಂಬ ಉಪಯುಕ್ತವಾಗಿವೆ.

ಮತ್ತು ನಾಗಮಂಗಲಗಳಲ್ಲಿ ನಡೆಸಿದ ಜಾನಪದ ಸಮ್ಮೇಳನಗಳಿಂದ ಜಾನಪದ ಅಧ್ಯಯನಕ್ಕೆ ಪ್ರಯೋಜನವಾಯಿತು. Folklore Fellows of India ಮೂಲಕ ನಡೆದಿರುವ ವಿಚಾರಗೋಷ್ಠಿಗಳು ಹಾಗೂ Journal of Indian Folkloristics ಜಾನಪದದ ವೈಜ್ಞಾನಿಕ ಅಧ್ಯಯನಕ್ಕೆ ಹೊಸ ಆಯಾಮವನ್ನು ತಂದುಕೊಟ್ಟಿವೆ. ಇಂದು ಜಾನಪದದ ಅಧ್ಯಯನ ಕೇವಲ ಜನಪದ ಸಾಹಿತ್ಯಕ್ಕೆ ಸೀಮಿತವಾಗದೆ ಜನಪದ ಜೀವನದ ವಿಸ್ತಾರವಾದ ಹಿನ್ನೆಲೆಯಲ್ಲಿ ನಡೆಯುತ್ತಿದೆ. ಜನಪದ ಸಾಹಿತ್ಯದಲ್ಲೂ ಮೊದಲಿಗೆ ಕಾವ್ಯಕ್ಕೆ ಸೀಮಿತವಾಗಿದ್ದ ಸಂಗ್ರಹ ಸಂಶೋಧನೆಗಳು ಪುರಾಣ, ಐತಿಹ್ಯ, ಕಥೆ, ಗಾದೆ, ಒಗಟು ಈ ಎಲ್ಲ ಕ್ಷೇತ್ರಗಳಿಗೂ ವ್ಯಾಪಿಸಿದೆ. ಜನಪದ ಭಾಷೆ, ಕಲೆ, ವೈದ್ಯ, ಮಂತ್ರ, ಮಾಟ, ಕಣಿ, ನಂಬಿಕೆ, ಸಂಪ್ರದಾಯ, ಹಬ್ಬ, ಜಾತ್ರೆ, ಸಂಗೀತ, ನೃತ್ಯನಾಟಕ, ಆಟ, ಕ್ರೀಡೆ, ಆಹಾರ, ಪಾನೀಯ ಮೊದಲಾದ ಅನೇಕ ವಿಷಯಗಳ ಬಗ್ಗೆ ಇಂದು ಅಧ್ಯಯನ ನಡೆಯುತ್ತಿದೆ.

ಈ ಬೆಳವಣಿಗೆಗಳ ಹಿನ್ನಲೆಯಲ್ಲಿ ನೋಡಿದಾಗ ಜನಪದ ಕಾವ್ಯಕ್ಕೆ ಮತ್ತು ಅದರಲ್ಲಿ ವ್ಯಕ್ತವಾಗುವ ಜನಪದ ಸಂಸ್ಕೃತಿಗೆ, ಜನಪದ ಕಾವ್ಯ ಛಂದಸ್ಸು, ಇತಿಹಾಸ, ಸಾಹಿತ್ಯವಿಮರ್ಶೆ, ಇತಿಹಾಸಗಳಿಗೆ ಹೇಗೆ ಪ್ರಯೋಜನಕ್ಕೆ ಬರುತ್ತದೆ ಎಂಬುದಕ್ಕೆ ಸೀಮಿತವಾಗಿತ್ತು ಎನಿಸಬಹುದು. ಆ ಕಾಲಕ್ಕೆ ಪ್ರಕಟವಾಗಿದ್ದ, ಜಾನಪದದ ವಿಶಾಲ ವ್ಯಾಪ್ತಿಯ ಹಿನ್ನೆಲೆಯಲ್ಲಿ ಬಂದ 'ಪಟ್ಟೋಲೆ ಪಳಮೆ', 'ಹುಟ್ಟಿದ ಹಳ್ಳಿ, ಹಳ್ಳಿಯ ಹಾಡು' ಸಂಕಲನಗಳ ಮಹತ್ವವನ್ನೂ ಬಿ. ಎಂ. ಶ್ರೀ. ಗಮನಿಸಿದಂತೆ ತೋರುವುದಿಲ್ಲ. ಆದರೆ ಆ ಕಾಲದಲ್ಲಿ ಕನ್ನಡದ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸಿದ ಆಚಾರ್ಯ ಬಿ. ಎಂ. ಶ್ರೀ. ಜನಪದ ಕಾವ್ಯದ ಬಗ್ಗೆ ಹೆಚ್ಚಿನ ಆಸಕ್ತಿಹೊಂದಿ, ಅದರ ಸಂಗ್ರಹ, ಸಂಶೋಧನೆ, ವಿಮರ್ಶೆಗಳನ್ನು ಪ್ರೋತ್ಸಾಹಿಸಿದರೆಂಬುದು ಐತಿಹಾಸಿಕವಾಗಿ ಮಹತ್ವದ ಕೆಲಸ ಎಂಬುದನ್ನು ನಾವು ಗುರುತಿಸಬೇಕು. ಕನ್ನಡ ಜಾನಪದ ಅಧ್ಯಯನದ ನವೋದಯ ಯುಗದಲ್ಲಿ ಅವರು ಜನಪದ ಕಾವ್ಯಕ್ಕೆ ಪ್ರಚಾರವನ್ನೂ ಪ್ರೋತ್ಸಾಹವನ್ನೂ ಕೊಟ್ಟು, ಜನಪದ ಜೀವನದ ಬಗ್ಗೆ ಕಳಕಳಿ ಹೊಂದಿದ್ದುದು ಅವರ ಉದಾರವಾದಿ ನಿಲುವಿಗೆ, ವಸ್ತುನಿಷ್ಠ ದೃಷ್ಟಿಗೆ ಸಾಕ್ಷಿಯಾಗಿದೆ. "ನನ್ನ ಸ್ವಂತಕ್ಕೆ ಹೇಳುವುದಾದರೆ ಚಿಕ್ಕಂದಿನಿಂದ ಮೊದಲುಗೊಂಡು, ಜೀವಾವಧಿ ನನ್ನಲ್ಲಿ ನೆಲಸಿದ ಅಷ್ಟೊಂದು ಕನಸುಗಳನ್ನು ನನ್ನ ವಿದ್ಯಾರ್ಥಿಗಳು ಗ್ರಹಿಸಿ, ಒಂದಲ್ಲ ಒಂದು ಬಗೆಯಲ್ಲಿ ನನಸಾಗಿಸಿ ಸಾಧಿಸುತ್ತಿರುವರೆಂಬುದು ನನಗೆ ಹೆಮ್ಮೆಯ ವಿಷಯ" ಎಂದು ಹೇಳಿದ್ದಾರೆ.[21] ವಿಶಾಲವಾದ ವ್ಯಾಪ್ತಿಯಲ್ಲಿ ಇಂದು ನಡೆಯುತ್ತಿರುವ ಕನ್ನಡ ಜಾನಪದ ಅಧ್ಯಯನ ಬಿ. ಎಂ. ಶ್ರೀ. ಅವರ ಕನಸುಗಳನ್ನು ಬಹುಮಟ್ಟಿಗೆ ನನಸಾಗಿಸಿದೆ ಎಂದು ಹೇಳಬಹುದು.

---

೨೧. ಶ್ರೀ ಸಾಹಿತ್ಯ, ಪುಟ ೩೯೮.

# ಬಿ. ಎಂ. ಶ್ರೀ. : ಲಿಪಿಸುಧಾರಣೆ

– ಎಂ. ವಿ. ಸೀತಾರಾಮಯ್ಯ

## ಈಗಿನ ಕನ್ನಡಲಿಪಿ

ಅನೇಕ ಶತಮಾನಗಳಿಂದ ಬೆಳೆದು ಬಂದಿರುವ ಲಿಪಿಯನ್ನು ಸುಧಾರಣೆ ಮಾಡಬೇಕಾದರೆ ಅದಕ್ಕೊಂದು ಪ್ರಬಲವಾದ ಕಾರಣ ಇರಬೇಕು. ಕನ್ನಡ ಲಿಪಿ ಕ್ರಿ. ಶ. ೩ನೆಯ ಶತಮಾನದ ಅಶೋಕನ ಶಾಸನಗಳ ಬ್ರಾಹ್ಮೀಲಿಪಿಯಿಂದ ಉಗಮ ಹೊಂದಿ ಅನೇಕ ಹಂತಗಳಲ್ಲಿ ವಿಕಾಸಹೊಂದಿ ಈಗಿನ ಸ್ವರೂಪವನ್ನು ಪಡೆದಿದೆ. ಪಾಶ್ಚಾತ್ಯಪಂಡಿತರು ೧೮ನೆಯ ಶತಮಾನದಲ್ಲಿ ಆಗ ಬರಹದಲ್ಲಿ ಬಳಕೆಯಲ್ಲಿದ್ದ ಕನ್ನಡ ಅಕ್ಷರಗಳ ಆಧಾರದ ಮೇಲೆಯೇ ಅಚ್ಚಿನ ಮೊಳೆಗಳನ್ನು ರೂಪಿಸಿ ಅಚ್ಚುಕೂಟವನ್ನು ಪ್ರಾರಂಭಮಾಡಿದರು. ಅಚ್ಚಿನ ಅಕ್ಷರಗಳಲ್ಲೂ ಕಾಲಕಾಲಕ್ಕೆ ಅಲ್ಪಸ್ವಲ್ಪ ಬದಲಾವಣೆ ಆಗಿ, ಈಗಿನ ಕನ್ನಡ ಲಿಪಿ ಸ್ವರೂಪಕ್ಕೆ ಬುನಾದಿ ಹಾಕಿತು. ೧೯ನೆಯ ಶತಮಾನದ ಮಧ್ಯಭಾಗದಿಂದ ಕನ್ನಡ ಅಚ್ಚಿನ ಲಿಪಿಯೂ ಕೈಬರಹದ ಲಿಪಿಯೂ ಬಲುಮಟ್ಟಿಗೆ ಏಕರೂಪವನ್ನು ಹೊಂದಿದೆ. ಕೈಬರಹದಲ್ಲಿ ವ್ಯಕ್ತಿಗತವಾಗಿ, ಪ್ರಾದೇಶಿಕವಾಗಿ, ಕಂಡುಬರುವ ವೈಲಕ್ಷಣ್ಯಗಳನ್ನು ನಾವು ಗಮನಿಸಬೇಕಾಗಿಲ್ಲ. ಅಚ್ಚಿನ ಲಿಪಿರೂಪ ಅಖಿಲ ಕರ್ನಾಟಕದಲ್ಲಿ ಒಂದೇ ಬಗೆಯಾಗಿದೆ.

## ಲಿಪಿಸುಧಾರಣೆಗೆ ಕಾರಣ

ಹೀಗೆ, ನೂರಾರು ವರ್ಷಕಾಲ ಕಾಲದ ಪರೀಕ್ಷೆಗೆ ಒಳಗಾಗಿ, ಅಚ್ಚಿನಲ್ಲಿ, ಕೈ ಬರಹವಲ್ಲಿ ಒಂದೇ ರೂಪವಲ್ಲಿ ಸ್ಥಾಯಿಯಾಗಿ ನೆಲೆನಿಂತು ಸರ್ವಜನರ ಮನ್ನಣೆ ಪಡೆದ ಸುಂದರವಾದ ಕನ್ನಡ ಅಕ್ಷರಗಳನ್ನು ಸುಧಾರಣೆ ಮಾಡಬೇಕೆಂದು ಬಿ. ಎಂ. ಶ್ರೀಕಂಠಯ್ಯನವರು ೧೯೩೭ನೆಯ ಇಸವಿಯಲ್ಲಿ ನಿಶ್ಚಯಮಾಡಿ ಕಾರ್ಯಪ್ರವೃತ್ತ ರಾದುದ್ದಕ್ಕೆ ಒಂದು ಪ್ರಬಲವಾದ ಕಾರಣ ಇರಬೇಕು. ಅದು ಅವರ ಮೆದುಳಿನಲ್ಲಿ ಎದ್ದ ಹುಚ್ಚು ಕೆರಳಿನ ಅಲೆಯಲ್ಲ ; ಖಂಡಿತ ಅಲ್ಲ. ಬಿದ್ದ ಸುಂದರ ಸ್ವಪ್ನವೂ ಅಲ್ಲ.

ಕನ್ನಡನಾಡಿನ, ಕನ್ನಡ ಜನತೆಯ, ಸರ್ವಾಂಗೀಣ ಪ್ರಗತಿಯನ್ನು ಬಯಸುತ್ತಿದ್ದ 'ಶ್ರೀ'ಯವರು ನಿಡುಂಗಾಲ ಆಳವಾಗಿ ಆಲೋಚನೆಮಾಡಿ ಕೈಗೊಂಡ ನಿರ್ಧಾರ. ತಾವು ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದ ಕಾಲದಲ್ಲಿ – ತಮ್ಮ ಇಚ್ಛೆಯಂತೆ ಏನು ಬೇಕಾದರೂ ಮಾಡಬಹುದಾಗಿದ್ದ ಕಾಲದಲ್ಲಿ – ಕೈಗೊಂಡ ಯೋಜನೆ ಅಲ್ಲ ಎಂಬುದನ್ನು ಗಮನಿಸಬೇಕು. ಆಗ ಉಪಾಧ್ಯಕ್ಷರಾಗಿದ್ದವರು ಶ್ರೀ ಡಿ. ವಿ. ಗುಂಡಪ್ಪನವರು. ಇವರಿಗೆ ಬಿ. ಎಂ. ಶ್ರೀ. ಅವರಲ್ಲಿ ಅಪಾರ ಗೌರವ. ಭೌತಶಾಸ್ತ್ರ ಪ್ರಾಧ್ಯಾಪಕರಾದ ಬಿ. ವೆಂಕಟೇಶಾಚಾರ್ ಆದಮೇಲೆ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಗೆ ಮೈಸೂರು ಅರಮನೆಯ ಪ್ರತಿನಿಧಿಯಾಗಿ ನೇಮಕಗೊಂಡಿದ್ದವರು, ಬಿ. ಎಂ. ಶ್ರೀ. ಅವರ ಸಲಹೆ-ಸೂಚನೆಯೆಂದರೆ ಡಿ. ವಿ. ಜಿ. ಅತ್ಯಂತ ಗೌರವದಿಂದ ಪುರಸ್ಕರಿಸುತ್ತಿದ್ದರು. ಅಕ್ಷರ ಸುಧಾರಣೆ ಆಗಬೇಕೆಂದು ಬಿ. ಎಂ. ಶ್ರೀ. ಮಾಡಿದ ಸಲಹೆಯನ್ನು ಕಾರ್ಯಗತ ಮಾಡುವ ಸದುದ್ದೇಶದಿಂದ ಆ ವರ್ಷ (೧೯೩೬) ನಡೆದ ವಸಂತ ಸಾಹಿತ್ಯೋತ್ಸವದ ಸಂದರ್ಭದಲ್ಲಿ 'ಅಕ್ಷರ ಸಂಸ್ಕರಣ ಸಮ್ಮೇಳನ'ವನ್ನು ವ್ಯವಸ್ಥೆ ಮಾಡಲಾಯಿತು. ಪೂರ್ವಭಾವಿಯಾಗಿ ಕರ್ನಾಟಕದ ಎಲ್ಲ ಕಡೆಯಲ್ಲಿ ಈ ವಿಚಾರದಲ್ಲಿ ಆಸಕ್ತಿ ಉಳ್ಳವರಿಂದ ಸಲಹೆ-ಸೂಚನೆಗಳನ್ನು ತರಸಿಕೊಂಡು, ಅವುಗಳನ್ನು ಕ್ರೋಢೀಕರಿಸಿ ಸಮ್ಮೇಳನದ ಮುಂದಿಡಲು ಒಂದು ಸಮಿತಿಯನ್ನು ರಚಿಸಲಾಯಿತು. ಎ. ಆರ್. ಕೃಷ್ಣಶಾಸ್ತ್ರಿಗಳು ಈ ಉಪಸಮಿತಿಯ ಸಂಚಾಲಕರಾಗಿದ್ದುಕೊಂಡು, ಸಮ್ಮೇಳನ ಯಶಸ್ವಿಯಾಗಿ ನಡೆಯಲು ಬಲುಮಟ್ಟಿಗೆ ಶ್ರಮಿಸಿದರು. ಈ ಸಮ್ಮೇಳನ ಶ್ರೀ ಚಾಮರಾಜೇಂದ್ರ ಸಂಸ್ಕೃತ ಪಾಠಶಾಲೆಯ ಸಭಾಂಗಣದಲ್ಲಿ ನಡೆಯಿತು. ಸಲಹೆ-ಸೂಚನೆಗಳನ್ನು ನೀಡಿದ್ದ ಅನೇಕ ಮಂದಿ ತಜ್ಞ ಪ್ರತಿನಿಧಿಗಳು-ಮುದ್ರಣಕಾರರು. ಬೆರಳಚ್ಚುಯಂತ್ರನಿರ್ಮಾಣ ಕಾರ್ಯದಲ್ಲಿ ಪ್ರಯೋಗ ನಡೆಸಿದ್ದವರು, ಸಮ್ಮೇಳನಕ್ಕೂ ಪೂರ್ವದಲ್ಲಿ ಅಕ್ಷರ ಸಂಸ್ಕರಣ ವಿಧಾನವನ್ನು ಸೂಚಿಸಿದ್ದವರು, ಭಾಷಾಭಿಮಾನಿಗಳು, ಮುಂತಾದವರು ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದ ಬಿ.ಎಂ.ಶ್ರೀ. ಅವರು ಉಪಸಮಿತಿ ಪರಿಶೀಲಿಸಿ ಪರ್ಯಾಲೋಚನೆಗೆ ಮುಂದಿಟ್ಟಿದ್ದ ಪ್ರತಿಯೊಂದು ಸಲಹೆ ಸೂಚನೆಯ ಸಾಧಕ-ಬಾಧಕಗಳನ್ನು ವಿವರಿಸಿದ ಮೇಲೆ ಸಮ್ಮೇಳನ ತೀರ್ಮಾನಗಳನ್ನು ಕೈಗೊಂಡಿತು. ತೀರ್ಮಾನಗಳನ್ನು ಒಳಗೊಂಡ ಸಂಕ್ಷಿಪ್ತ ವರದಿಯನ್ನು ಅನಂತರ ಪರಿಷತ್ ಪತ್ರಿಕೆಯಲ್ಲಿ ಪ್ರಕಟಿಸಲಾಯಿತು. ಆ ವರದಿಯ ತೀರ್ಮಾನಗಳನ್ನು ಕೆಳಗೆ ಎತ್ತಿಕೊಟ್ಟಿದೆ :

**ಅಕ್ಷರ ಸಂಸ್ಕರಣ : ಸಮ್ಮೇಳನದ ತೀರ್ಮಾನಗಳು**

ಕನ್ನಡ ಬರವಣಿಗೆಯಲ್ಲಿ ಈಗಿರುವ ಅಕ್ಷರ ಸಂಯೋಜನೆಯ ಕ್ರಮ ಹಲವು ದೃಷ್ಟಿಗಳಿಂದ, ಅದರಲ್ಲಿಯೂ, ಮುದ್ರಣ ದೃಷ್ಟಿಯಿಂದ; ಬಲುತೊಡಕಾದ್ದೆಂದೂ

ಯಾವ ರೀತಿಯಲ್ಲಾದರೂ ಕೊಂಚಮಟ್ಟಿಗಾದರೂ ತೊಡಕು ಬಿಡಿಸಿ ಸರಳಪಡಿಸ ಬೇಕೆಂದೂ ಹಲವರು ಅಭಿಪ್ರಾಯಪಟ್ಟು ಕರ್ನಾಟಕ ಸಾಹಿತ್ಯ ಪರಿಷತ್ತಿನ ಆಶ್ರಯ ದಲ್ಲಿ ಒಂದು ಸಮಿತಿಯನ್ನು ಏರ್ಪಡಿಸಿ ಆಗಬೇಕಾದ ಮಾರ್ಪಾಟುಗಳ ಪರ್ಯಾಲೋಚನೆಯನ್ನು ಆ ಸಮಿತಿಗೆ ವಹಿಸಿದರು. ಆ ಸಮಿತಿ ಚರ್ಚೆಗಳನ್ನು ನಡೆಸಿ ಬಲ್ಲವರಿಂದ ಸಲಹೆ-ಸೂಚನೆಗಳನ್ನು ತರಿಸಿಕೊಂಡು, ಒಂದು ಅಕ್ಷರ ಸಂಸ್ಕರಣ ಸಮ್ಮೇಳನವನ್ನು ನಡೆಸಿತು. ಆ ಸಮ್ಮೇಳನ ಕೆಲವು ತೀರ್ಮಾನಗಳಿಗೆ ಬಂತು. ಆ ತೀರ್ಮಾನಗಳು ಇವು :

೧. ಈಗ ರೂಢಿಯಲ್ಲಿರುವ ಕನ್ನಡ ಲಿಪಿಯಲ್ಲಿ ಸಂಸ್ಕರಣವು ಆವಶ್ಯಕ ವೆಂದು ಈ ಕನ್ನಡ ಅಕ್ಷರ ಸಂಸ್ಕರಣ ಸಮ್ಮೇಳನವು ಅಭಿಪ್ರಾಯಪಡುತ್ತದೆ.

೨. ರೋಮನ್ (ಇಂಗ್ಲಿಷ್) ಲಿಪಿಯನ್ನು ಕನ್ನಡಕ್ಕೆ ಸ್ವೀಕರಿಸುವುದು ಈ ಸಮ್ಮೇಳನಕ್ಕೆ ಯುಕ್ತವಾಗಿ ಕಾಣುವುದಿಲ್ಲ.

೩. ದೇವನಾಗರಿ ಲಿಪಿಯನ್ನೇ ಆಗಲಿ ಸ್ವೀಕರಿಸುವುದು ಯುಕ್ತವಾಗಿ ಕಾಣುವುದಿಲ್ಲ.

೪. ಈಗಿನ ಕನ್ನಡ ಲಿಪಿಯಲ್ಲಿಯೇ ಭಾರತೀಯ ಕ್ರಮವನ್ನು ತಳಹದಿಯಾಗಿ ಇಟ್ಟುಕೊಂಡು ಆವಶ್ಯಕವಾದ ಎಡೆಗಳಲ್ಲಿ ಇತರ ಕ್ರಮಗಳನ್ನು ಅನುಸರಿಸಿ ಸಂಸ್ಕರಣ ಮಾಡಿಕೊಳ್ಳತಕ್ಕದ್ದು.

೫. ಈಗ ಇರುವ ಅ, ಇ, ಉ, ಋ, ಎ, ಒ – ಈ ಹ್ರಸ್ವಸ್ವರಗಳನ್ನು ಇಟ್ಟುಕೊಂಡು ಅವಕ್ಕೆ ಪಕ್ಕದಲ್ಲಿ ದೀರ್ಘಚಿಹ್ನೆಯನ್ನು ಕೊಟ್ಟು ದೀರ್ಘಸ್ವರ ಗಳನ್ನಾಗಿ ಮಾಡಿಕೊಳ್ಳತಕ್ಕದ್ದು.

೬. ಐ, ಔಗಳೂ ಅನುಸ್ವಾರ ವಿಸರ್ಗಗಳೂ ಈಗಿನಂತೆಯೇ ಇರತಕ್ಕದ್ದು.

೭. ವರ್ಗೀಯ ವ್ಯಂಜನಗಳಲ್ಲಿ ಹತ್ತು ಮಹಾಪ್ರಾಣಗಳನ್ನು ತೆಗೆದುಹಾಕಿ ಅವುಗಳನ್ನು ಆಯಾ ಅಲ್ಪಪ್ರಾಣಗಳಿಗೆ ಮಹಾಪ್ರಾಣ ಚಿಹ್ನೆಯನ್ನು ಸೇರಿಸುವುದ ರಿಂದಲೇ ಸೂಚಿಸತಕ್ಕದ್ದು.

೮. ಹತ್ತು ಅಲ್ಪಪ್ರಾಣಗಳೂ ಐದು ಅನುನಾಸಿಕಗಳೂ ಈಗ ಇರು ವಂತೆಯೇ ಇರತಕ್ಕದ್ದು.

೯. ಯ, ರ, ಲ, ವ, ಶ, ಷ, ಸ, ಹ, ಳ ಇವಿಷ್ಟೂ ಈಗ ಇರುವಂತೆಯೇ ಇರತಕ್ಕದ್ದು.

೧೦. Anderson, Bank ಮುಂತಾದ ಇಂಗ್ಲಿಷ್ ಪದಗಳಲ್ಲಿ ಕಂಡುಬರುವ 'ಆ್ಯ', ಸ(Z), ಫ(F), ಷ್(Zh), ಈ ಜಾತಿಯ ಪರಭಾಷಾಧ್ವನಿಗಳನ್ನು ತೋರಿ

ಸಲು ಬೇಕಾಗಿರುವ ಹೊಸ ಚಿಹ್ನೆಗಳನ್ನೂ ಹಳಗನ್ನಡಕ್ಕೆ ಬೇಕಾದ ಱ, ೞ ಗಳನ್ನೂ ಬಾಲಬೋಧೆಯಲ್ಲಿ ಕಲಿಸುವ ವರ್ಣಮಾಲೆಯಲ್ಲಿ ಸೇರಿಸಬೇಕಾದುದಿಲ್ಲ.

೧೧. ಶುದ್ಧ ವ್ಯಂಜನಗಳಲ್ಲಿ ಒಂದೊಂದಕ್ಕೂ ಒಂದೊಂದೇ ರೂಪವನ್ನು ಇಟ್ಟುಕೊಳ್ಳತಕ್ಕದ್ದು ; ಎಂದರೆ ಈಗ ಇರತಕ್ಕ ಒತ್ತಕ್ಷರಗಳನ್ನು ಬಿಟ್ಟುಬಿಡತಕ್ಕದ್ದು. ಸಂಯುಕ್ತಾಕ್ಷರವನ್ನು ಬರೆಯುವಾಗ ಅದರ ಅಕ್ಷರಗಳನ್ನು ಉಚ್ಚಾರಣಕ್ರಮದಲ್ಲಿ ಸೇರಿಸಿ ಬರೆಯತಕ್ಕದ್ದು.

೧೨. ಈ ಮಾರ್ಗವನ್ನು ಅನುಸರಿಸಿದ ಸಂಸ್ಕರಣಗಳಲ್ಲಿ ಬೇಕಾಗುವ ಚಿಹ್ನೆಗಳಿಗೆ (ಅಕ್ಷರಗಳಿಗೆ) ಯಾವ ಯಾವ ರೂಪವಿರಬೇಕೆಂಬ ಅಂಶವನ್ನೂ, ಅಲಂಕಾರಾಕ್ಷರ ರೂಪಗಳನ್ನೂ, ಇಟ್ಯಾಲಿಕ್ ಮುಂತಾದ ಅಕ್ಷರ ರೂಪಗಳನ್ನೂ ಮುಂದೆ ಈ ಭಾಗದಲ್ಲಿ ಪರಿಶ್ರಮವುಳ್ಳ ವಿದ್ವಾಂಸರು ಪರಿಶೀಲಿಸಿ ನಿಶ್ಚಯಿಸತಕ್ಕದ್ದು.

ಮೇಲೆ ಸುಃಚಿಸಿದ ಕೆಲವು ಮಃರ್‌ಪಃಟುಗಳನ್‌ನು ಇಲ್‌ಲಿ ಬಳಕೆಗೆ ತಂದಿದೆ: ಮುಖ್‌ಯವಃಗಿ ಮಃಡಿರುವ ಮಃರಪಃಟುಗಳು ಮುಃರು: (i) ದಿಃರ್‌ಘ ಚಿಹ್‌ನೆಯನ್‌ನು ಎಲ್‌ಲ ಕಡೆಯುಃ ಒಂದೇ ರಿಃತಿ ಬರೆಯುವುದು – ಆ = ಅಃ. ಬಾ = ಬಃ. ಕೂ = ಕುಃ: (ii) ಒತ್‌ತಕ್‌ಷರವನ್‌ನು ಬಿಡಿಸಿ ಪಕ್‌ಕದಲ್‌ಲಿ ಬರೆಯುವುದು – ಕನ್ನಡ = ಕನ್‌ನಡ, ಶ್ರೀ = ಶರಿಃ: (iii) ಎಲ್‌ಲಃ ಮಹಃಪ್‌ರಃಣ ಚಿಹ್‌ನೆಗಳನ್‌ನುಃ ಅಲ್‌ಪಪ್‌ರಃಣ ಚಿಹ್‌ನೆಗಳ ಹೊಕ್‌ಕುಳು ಸಿಃಳಿಯೇ ಮಃಡಿ ಕೊಳ್‌ಳುವುದು – ಛ = ಚ : ಭ = ಭ, ಈ ಸಣ್‌ಣ ಮಃರ್‌ಪಃಟುಗಳನ್‌ನು ತಿಃಳ್‌ಮೆಯಿಂದಲುಃ ದುಃರದೃಷ್‌ಟಿಯಿಂದಲುಃ ನೋಃಡಿ ಎಲ್‌ಲರುಃ ಒಪ್‌ಪಿಕೊಂಡು ಆದಷ್‌ಟು ಬೇಗ ಬಳಕೆಗೆ ತಂದರೆ ಎಳೆಯ ಮಕ್‌ಕಳ ಹೊರೆ, ಅಚ್‌ಚುಕುಃಟಗಳ ತೊಡಕು ಅರ್‌ಧಕ್‌ಕರ್‌ಧ ಕಡಮೆಯಃಗುವುದೆಂದು ನಂಬಿದ್‌ದೇನೆ.

ಮೇಲ್ಕಂಡ ವರದಿಯ ಪೀಠಿಕಾ ವಾಕ್ಯಗಳಲ್ಲಿ ಅಕ್ಷರ ಸಂಸ್ಕರಣದ ಮುಖ್ಯ ಉದ್ದೇಶ. ಪ್ರಚಲಿತ "ಕನ್ನಡ ಬರವಣಿಗೆಯಲ್ಲಿ ಅಕ್ಷರ ಸಂಯೋಜನೆಯ ಕ್ರಮ ಹಲವು ದೃಷ್ಟಿಗಳಿಂದ, ಅದರಲ್ಲಿಯೂ ಮುದ್ರಣದೃಷ್ಟಿಯಿಂದ ಬಲುತೊಡಕಾದದ್ದೆಂದು ಕಂಡುಬಂದದ್ದರಿಂದ "ಯಾವ ರೀತಿಯಲ್ಲಾದರೂ ಕೊಂಚಮಟ್ಟಿಗಾದರೂ ತೊಡಕು ಬಿಡಿಸಿ ಸರಳಮಾಡುವುದೇ" ಆಗಿದೆ.

ಮೇಲಿನ ಉದ್ದೇಶ ನಿರೂಪಣೆಯಲ್ಲಿ ಮುಖ್ಯಸ್ಥಾನವನ್ನು ಮುದ್ರಣಕ್ಕೆ ಕೊಟ್ಟಿದೆ. ಆಧುನಿಕ ಮುದ್ರಣ ಕಲೆ ಇಂಗ್ಲಿಷ್ ಅಕ್ಷರ ಸಂಯೋಜನೆಗೆ ಅನುಗುಣವಾಗಿ ಆಧುನಿಕ ತಂತ್ರವಿಜ್ಞಾನದ ನೆರವು ಪಡೆದು Lino Type, Mono Type ಯಂತ್ರಗಳನ್ನು ಅಳವಡಿಸಿಕೊಂಡಿದೆ. ಇಂಗ್ಲಿಷ್ ವರ್ಣಮಾಲೆಯಲ್ಲಿ ಸ್ವರವ್ಯಂಜನಗಳು

ಸೇರಿ ಕೇವಲ ೨೬ ಅಕ್ಷರಗಳು ಮಾತ್ರ ಇವೆ. ಅಕ್ಷರ ಸಂಯೋಜನೆ (Spelling ಕಾಗುಣಿತ)ಯಲ್ಲಿ ಕನ್ನಡದ ವರ್ಣಮಾಲೆಯ ತೊಡಕುಗಳು ಇಲ್ಲದೆ ಅಕ್ಷರಗಳನ್ನು ಒಂದರ ಪಕ್ಕದಲ್ಲಿ ಒಂದನ್ನು ಬರೆದುಕೊಂಡು ಹೋಗುವುದರಿಂದ ಬೆರಳಚ್ಚು ಯಂತ್ರದ ಕೀಬೋರ್ಡು ನಿರ್ಮಾಣ ಬಹಳ ಸುಲಭವಾಗಿ ಪರಿಣಮಿಸಿತು. ಈಗ. ಕನ್ನಡ ವರ್ಣಮಾಲೆಯ ತೊಡಕುಗಳು ಒಡ್ಡಿದ ಸವಾಲನ್ನು ಒಂದು ಬಗೆಯಲ್ಲಿ ಎದುರಿಸಿ. ಬೆರಳಚ್ಚು ಯಂತ್ರ ನಿರ್ಮಾಣವಾಗಿದೆ : ಅಧಿಕಪ್ರಸಾರ ಹೊಂದಿರುವ ದಿನ ಪತ್ರಿಕೆಗಳೂ. ಅನುಕೂಲವಿರುವ ಖಾಸಗಿ ಮುದ್ರಣಕಾರರೂ ಈಗಿರುವ ಹಾಗೆಯೇ ಕನ್ನಡ ವರ್ಣಮಾಲೆಯನ್ನು ಅಳವಡಿಸಿಕೊಂಡು ಮಾನೋಟೈಪ್ ಯಂತ್ರಗಳನ್ನು ನಿರ್ಮಾಣಮಾಡಿಕೊಂಡಿದ್ದಾರೆ. ಕಾಲಕ್ರಮದಲ್ಲಿ ತಂತ್ರವಿಜ್ಞಾನಿಗಳ ನೆರವಿನಿಂದ ಲಿನೋಟೈಪ್ ಯಂತ್ರವನ್ನು ನಿರ್ಮಾಣ ಮಾಡುವುದೂ ಸಾಧ್ಯವಾಗಬಹುದು. ಹೀಗಿರುವಾಗ, ಲಿಪಿಸುಧಾರಣೆಯ ಅಗತ್ಯವಾದರೂ ಏನು ? 'ಶ್ರೀ'ಯವರ ಅಕ್ಷರ ಸಂಸ್ಕರಣ ಯಾವ ರೀತಿಯಲ್ಲಿ ನಮಗೆ ಉಪಯೋಗಕ್ಕೆ ಬರಬಲ್ಲದು ? ಎಂಬ ಪ್ರಶ್ನೆಗಳು ಏಳುವುದು ಸಹಜ.

ಈಗ ಬೆರಳಚ್ಚು ಯಂತ್ರವೂ, ಮಾನೋಟೈಪ್ ಯಂತ್ರವೂ ನಿರ್ಮಾಣವಾಗಿರುವುದು. ಹಾಗೂ ಅವು ಬಳಕೆಯಲ್ಲಿರುವುದು. ವಸ್ತುಸ್ಥಿತಿ. ಈಗಿನ ಕನ್ನಡ ವರ್ಣಮಾಲೆಗೆ ತಕ್ಕಂತೆ ಕನ್ನಡ ಬೆರಳಚ್ಚು ಯಂತ್ರ ನಿರ್ಮಾಣವಾಗಿರುವುದರಿಂದ ಇದು ಇಂಗ್ಲಿಷ್ ಟೈಪರೈಟರು ಕೊಡುವ ವೇಗವನ್ನು ಕೊಡಲು ಸಾಧ್ಯವಾಗದು. ಇದು ಕಲ್ಪನೆಯ ಮಾತಾಗಿರದೆ ಬೆರಳಚ್ಚು ಮಾಡುವವರ – ಇಂಗ್ಲಿಷ್ ಹಾಗೂ ಕನ್ನಡ ಬೆರಳಚ್ಚು ಯಂತ್ರಗಳೆರಡರಲ್ಲೂ ಟೈಪು ಮಾಡುವುದನ್ನು ಕಲಿತಿರುವವರ – ಅನುಭವದ ಮಾತಾಗಿದೆ. ಒತ್ತಕ್ಷರಗಳು. ಮಹಾಪ್ರಾಣಾಕ್ಷರಗಳ ಹೊಕ್ಕುಳು ಸೀಳು ಗೆರೆಯನ್ನು ಅಂಕಿಸುವುದು. ಮುಂತಾದವು ನಿಷ್ಕ್ರಿಯಕೀಲಿಗಳ (Dead Keys) ಅಳವಡಿಕೆಗೆ ಎಡೆಕೊಟ್ಟು, ಸಹಜವಾಗಿಯೇ ವೇಗ ಕುಂಠಿತವಾಗುತ್ತದೆ. ವೇಗಸಾಧನೆ ಆಗಬೇಕಾದಲ್ಲಿ 'ಶ್ರೀ'ಯವರ ಅಕ್ಷರಸಂಸ್ಕರಣ ವಿಧಾನದಲ್ಲಿ ಸೂಚಿಸಿರುವಂತೆ ಒತ್ತಕ್ಷರಗಳನ್ನು ಕೈಬಿಡುವುದರ ಜೊತೆಗೆ ಮಹಾಪ್ರಾಣಾಕ್ಷರಗಳ ಹೊಕ್ಕಳು ಸೀಳು ಗೀಟನ್ನು (ಅಥವಾ ಬೇರೊಂದು ಯಥೋಚಿತ ಚಿಹ್ನೆಯನ್ನು) ಅಕ್ಷರದ ಕೆಳಗೆ ಹಾಕದೆ, ಪಕ್ಕದಲ್ಲಿ ಹಾಕಬೇಕಾಗುತ್ತದೆ.

ಮೇಲೆ ಉದ್ಧರಿಸಿ ಕೊಟ್ಟಿರುವ ಅಕ್ಷರ ಸಂಸ್ಕರಣದ ಸುಬಂಧದ ತೀರ್ಮಾನಗಳ ವರದಿಯಲ್ಲಿ "ಹಲವು ದೃಷ್ಟಿಗಳಿಂದ" ಕನ್ನಡ ಅಕ್ಷರ ಸಂಯೋಜನೆ ತೊಡಕಾಗಿದೆ ಎಂದು ಮಗುಮ್ಮಾಗಿ ಹೇಳಿ, ಮುದ್ರಣದ ದೃಷ್ಟಿಯನ್ನು ಮಾತ್ರ ಪ್ರಮುಖವಾಗಿ ಹೇಳಿದೆ. ವಾಸ್ತವವಾಗಿ, ಅಕ್ಷರ ಸಮ್ಮೇಳನದ ಚರ್ಚೆಯ ವೇಳೆಯಲ್ಲಿ ಕನ್ನಡ ಅಕ್ಷರ ಸಂಯೋಜನೆ ಹೊಸದಾಗಿ ಅಕ್ಷರ ಕಲಿಯುವ ವಯಸ್ಕರಿಗೂ

ಮಕ್ಕಳಿಗೂ ಬಲುತೊಡಕು ಎಂಬ ಸಂಗತಿಯನ್ನೂ ಬಿ. ಎಂ. ಶ್ರೀಯವರು ಎತ್ತಿ ಹೇಳಿದ್ದರು. “ಎಳೆಯ ಮಕ್ಕಳ ಹೊರೆ ಕಡಿಮೆಯಾಗುವುದು” ಎಂಬ ಮಾತೂ ವರದಿಯ ಕೊನೆಯ ವಾಕ್ಯದಲ್ಲಿ ಉಕ್ತವಾಗಿದೆ. “ಹಲವು ದೃಷ್ಟಿ”ಗಳಲ್ಲಿ ಇದೂ ಮುಖ್ಯವೆ. ಈ ಸಂಬಂಧದಲ್ಲಿ, ಈಚೆಗೆ ಬಿ. ಎಂ. ಶ್ರೀ. ಶತಮಾನೋತ್ಸವ ಆಚರಣೆಯ ಸಂದರ್ಭದಲ್ಲಿ ಪ್ರಕಟವಾಗಿರುವ ಲೇಖನವೊಂದರ ಪ್ರಸಕ್ತಭಾಗವನ್ನು ಇಲ್ಲಿ ಉದ್ಧರಿಸಬಹುದಾಗಿದೆ. (ಶ್ರೀ. ರಾ. ವೆಂ. ಶ್ರೀನಿವಾಸ : ‘ಶ್ರೀ’ ಮತ್ತು ‘ಅಕ್ಷರ ಸಂಸ್ಕರಣ’; ಪುಸ್ತಕ ಪ್ರಪಂಚ, ಜನವರಿ ೧೯೬೪) :

“ಕನ್ನಡ ಬಾವುಟವನ್ನು ಏರಿಸಿ, ಹಾರಿಸಿ. ಶಾರದೆಯ ಉತ್ಸವವನ್ನು ನಾಡ ಮೂಲೆ ಮೂಲೆಗೂ ಕೊಂಡೊಯ್ದ ‘ಶ್ರೀ’ ಅವರಿಗೆ ಉತ್ಸಾಹಭಂಗ ಮಾಡುತ್ತಿದ್ದುದು, ಆಗ ಕನ್ನಡ ನಾಡಿನಲ್ಲಿ ಅಗಾಧ ರೂಪ ತಾಳಿದ್ದ ಅನಕ್ಷರತೆ. ಆ ಪೆಡಂಭೂತ ನಾಶವಾಗುವವರೆಗೆ ಈ ಉತ್ಸವಗಳ ಶ್ರಮ ಸಾರ್ಥಕವಾಗುವುದಿಲ್ಲ ಎಂದು ಮನಗಂಡ ಅವರು ಅಕ್ಷರ ಪ್ರಚಾರ ಕಾರ್ಯಕ್ಕೆ ಪ್ರಾಮುಖ್ಯತೆ ಕೊಟ್ಟರು. ಅವರೇ ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯ ಮೊದಲ ಅಧ್ಯಕ್ಷರೂ ಆದರು. ಅಕ್ಷರ ಪ್ರಚಾರ ಕಾರ್ಯವನ್ನು ಕೈಗೊಂಡಾಗ, ಶೀಘ್ರವಾಗಿ ಕಲಿಯುವವರ ದೃಷ್ಟಿಯಿಂದ, ಕಲಿಸುವವರ ದೃಷ್ಟಿಯಿಂದ ಕನ್ನಡ ಲಿಪಿಯಲ್ಲಿ ಕೆಲವು ಬದಲಾವಣೆಗಳು ಅಗತ್ಯ ಎಂಬುದು ಅವರಿಗೆ ಅರಿವಾಯಿತು. ಅನೇಕ ವರ್ಷಗಳ ಹಿಂದೆಯೇ ಅವರು ಈ ವಿಷಯವನ್ನು ಪರಿಶೀಲಿಸಿದ್ದರು. ಲಿಪಿಯಲ್ಲಿ ಸ್ವಲ್ಪಷ್ಟು ಬದಲಾವಣೆ ಮಾಡಿದರೆ ಈ ಕ್ಲಿಷ್ಟತೆಯನ್ನು ಹೋಗಲಾಡಿಸುವುದರ ಜೊತೆಗೆ ಬೆರಳಚ್ಚು ಯಂತ್ರ ತಯಾರಿಸಲೂ ಅನುಕೂಲವಾಗುವುದೆಂದು ಅವರು ನಂಬಿದ್ದರು.

“ಅನೇಕ ವರ್ಷಗಳಿಂದ ಬಳಕೆಯಲ್ಲಿರುವ ಕನ್ನಡ ಲಿಪಿಯಲ್ಲಿ ಬದಲಾವಣೆ ಮಾಡಲು ಹೆಚ್ಚು ವಿರೋಧವೇ ಕಂಡುಬಂದುದರಿಂದ ಆ ನಿರ್ಣಯಗಳು ಬರಿಯ ನಿರ್ಣಯಗಳಾಗಿಯೇ ಉಳಿದಿದ್ದುವು. ‘ಶ್ರೀ’ ಅವರು ಅಕ್ಷರಪ್ರಚಾರ ಕಾರ್ಯವನ್ನು ಕೈಗೊಂಡಾಗ ಈ ವಿಷಯವನ್ನು ಮತ್ತೆ ಕೈಗೆತ್ತಿಕೊಂಡರು.

“ಹತ್ತುವರುಷಗಳ ನಂತರ ಈ ವಿಚಾರವನ್ನು ಮುಂದುವರಿಸಿ, ಸಂಸ್ಕರಣವಾದ ಲಿಪಿಯನ್ನು ಜಾಗ್ರತೆಯಾಗಿ ಬಳಕೆಗೆ ತರುವ ಉದ್ದೇಶದಿಂದ ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯವರು ಒಂದು ಉಪಸಮಿತಿಯನ್ನು ರಚಿಸಿ, ಅದಕ್ಕೆ ಈ ಕೆಲಸವನ್ನು ಒಪ್ಪಿಸಿದರು. ಆ ಉಪಸಮಿತಿ ಡಾ॥ ಬಿ. ಕುಪ್ಪುಸ್ವಾಮಿಯವರ ಕಾರ್ಯದರ್ಶಿತ್ವದಲ್ಲಿ ಒಂದು ಸಂಸ್ಕರಣ ಯೋಜನೆಯನ್ನು ರಚಿಸಿತು. ೧೯೪೭ರಲ್ಲಿ ವಿದ್ಯಾಇಲಾಖಾ ಮುಖ್ಯಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆದ ಒಂದು ಸಮ್ಮೇಳನ ಈ ವಿಷಯವನ್ನು ಚರ್ಚಿಸಿ, ಇದನ್ನು ಕೂಲಂಕಷವಾಗಿ ಪರಿಶೀಲಿಸಲು ಇನ್ನೊಂದು ಉಪಸಮಿತಿಯನ್ನು ರಚಿಸಿತು.

“ಆ ಉಪಸಮಿತಿಯ ಸಲಹೆಯಂತೆ ಮತ್ತು ಮಹಾಜನಗಳಿಂದ ಒಪ್ಪಿಗೆ ಪಡೆದ ನಿರ್ಣಯಗಳಂತೆ, ಕನ್ನಡ ಲಿಪಿಯಲ್ಲಿ ಬದಲಾವಣೆಗಳನ್ನು ಮಾಡಿ, ವಯಸ್ಕರ ಶಿಕ್ಷಣ ಸಮಿತಿ, ತಾವು ಪ್ರಕಟಿಸುತ್ತಿರುವ ‘ಪುಸ್ತಕ ಪ್ರಪಂಚ’ ಮಾಸಪತ್ರಿಕೆಯಲ್ಲಿ ಕೆಲವು ಲೇಖನಗಳನ್ನು ಪ್ರಕಟಿಸಿತು. ಪುಟದ ಎಡಭಾಗದಲ್ಲಿ, ಈಗ ಬಳಕೆಯಲ್ಲಿರುವ ಲಿಪಿಯಲ್ಲಿಯೂ ಬಲಭಾಗದಲ್ಲಿ ಸಂಸ್ಕರಣವಾದ ಲಿಪಿಯಲ್ಲೂ ಲೇಖನಗಳನ್ನು ಅಚ್ಚುಮಾಡಿಸಿ ಪ್ರಚಾರಮಾಡಿತು.

"'ಪುಸ್ತಕ ಪ್ರಪಂಚ' ಪತ್ರಿಕೆಯಲ್ಲಿ ಅಚ್ಚುಮಾಡುವುದೊಂದಕ್ಕೇ ಈ ಪ್ರಯೋಗ ಸೀಮಿತವಾಗಿರಲಿಲ್ಲ. ಸಂಸ್ಕರಣವಾದ ಲಿಪಿಯ ಒಂದು ಬೆರಳಚ್ಚುಯಂತ್ರವನ್ನು ಒಬ್ಬ ತಜ್ಞರಿಂದ ತಯಾರಿಸಿ ಅದನ್ನು ಬಳಸಿ ನೋಡಲಾಯಿತು. ಹೊಸ ಲಿಪಿಯಲ್ಲಿ 'ಅಕ್ಷರ ಕಲಿಯುವ ಪುಸ್ತಕ'ದ ಕೆಲವು ಪ್ರತಿಗಳನ್ನು ಅಚ್ಚುಮಾಡಿ, ಪ್ರಾಯೋಗಿಕವಾಗಿ ವಯಸ್ಕರ ಶಾಲೆಯನ್ನೂ ನಡೆಸಲಾಯಿತು.

"ಈ ಪ್ರಯೋಗಗಳು ನಡೆಯುತ್ತಿರುವಾಗಲೇ ಜನತೆಯ ಪ್ರೋತ್ಸಾಹಕ್ಕಿಂತ ವಿರೋಧವೇ ಹೆಚ್ಚಾಗಿ ಕಂಡುಬಂತು. ಕೆಲವು ಮಂದಿ ಪಾಶ್ಚಾತ್ಯ ತಜ್ಞರು 'ಕನ್ನಡ ಲಿಪಿ ತುಂಬ ಸುಂದರವಾಗಿದೆ, ಅದನ್ನು ಇರುವ ಹಾಗೆಯೇ ಉಳಿಸಿಕೊಳ್ಳುವುದು 'ಸೂಕ್ತ' ಎಂದು ಸೂಚಿಸಿದರು. ಇನ್ನು ಕೆಲವರು 'ಯಂತ್ರ ಸೌಲಭ್ಯಕ್ಕಾಗಿ ಲಿಪಿಯನ್ನೇ ವಿರೂಪಗೊಳಿಸುವುದು ಸರಿಯಲ್ಲ : ಲಿಪಿಗೆ ಸರಿಯಾದ ಯಂತ್ರವನ್ನು ತಯಾರಿಸುವುದು ಒಳ್ಳೆಯದು' ಎಂದೂ ಅಭಿಪ್ರಾಯಪಟ್ಟರು. ಒತ್ತಕ್ಷರ ಬಂದಲ್ಲೆಲ್ಲ ಅರ್ಧಾಕ್ಷರಗಳ ಬಳಕೆ ಹೆಚ್ಚಾಗಿರುವುದನ್ನು ಗಮನಿಸಿ ಕೆಲವರು ವಿನೋದಕ್ಕಾಗಿ 'ಕನ್ನಡ ಉಗ್ಗು ಭಾಷೆ ಆಯಿತು' ಎಂದದ್ದೂ ಉಂಟು. ಅದ್ದರಿಂದ ಅಕ್ಷರ ಸಂಸ್ಕರಣದ ಕಾರ್ಯವನ್ನು ಅಲ್ಲಿಗೇ ನಿಲ್ಲಿಸಲಾಯಿತು.

"ಆದರೆ, ಈ ವಿಷಯವನ್ನು ಪರಿಶೀಲಿಸುವಾಗ, ಕನ್ನಡ ಲಿಪಿಯನ್ನು ಸರಳಗೊಳಿಸಿಯಾದರೂ ಕನ್ನಡಿಗರನ್ನೆಲ್ಲ ಬೇಗ ಅಕ್ಷರಸ್ಥರನ್ನಾಗಿ ಮಾಡಬೇಕು ಎಂಬ ಕಳಕಳಿ 'ಶ್ರೀ' ಅವರಿಗೆ ಅಗಾಧವಾಗಿತ್ತು ಎಂಬುದು ಗೊತ್ತಾಗುತ್ತದೆ."

ನಮ್ಮ ದೇಶದಲ್ಲಿ ಶೇ. ೭೦ರಷ್ಟು ಜನ ನಿರಕ್ಷರಕುಕ್ಷಿಗಳು ಸಾಕ್ಷರರಾಗಿ ವಿದ್ಯಾವಂತರಾದಲ್ಲದೆ ನಮ್ಮ ಪ್ರಜಾಪ್ರಭುತ್ವ ಊರ್ಜಿತವಾಗುವುದಿಲ್ಲ. ಶೀಘ್ರವಾಗಿ ಅಕ್ಷರಪ್ರಚಾರ ಆಗಬೇಕಾಗಿರುವ ಸಂದರ್ಭದಲ್ಲಿ ಲಿಪಿಸುಧಾರಣೆಯ ಮಹತ್ವ ಎಷ್ಟೆಂಬುದನ್ನು ನಮ್ಮ ಜನ ಅರಿಯಬೇಕು.

ಮೇಲೆ ಉದ್ಧರಿಸಿರುವ ಲೇಖನಭಾಗದಲ್ಲಿ – "ಕನ್ನಡ ಲಿಪಿ ತುಂಬ ಸುಂದರವಾಗಿದೆ. ಅದನ್ನು ಇರುವ ಹಾಗೆಯೇ ಉಳಿಸಿಕೊಳ್ಳುವುದು ಸೂಕ್ತ" ಎಂಬ ಪಾಶ್ಚಾತ್ಯ ವಿದ್ವಾಂಸರ ಮಾತು ಹಾಗಿರಲಿ. ನಮ್ಮವರೇ ಆದ ಪ್ರಾಚೀನ ಕನ್ನಡಿಗರು ಕೂಡ ಕನ್ನಡ ಲಿಪಿ ಸೌಂದರ್ಯವನ್ನು ಎದೆ ತುಂಬಿ ಹೊಗಳಿದ್ದಾರೆ. ೨ನೆಯ ಗುಣವರ್ಮನ ಪುಷ್ಪದಂತ ಪುರಾಣದ ಪ್ರಕಾರ ನವಿಲ್‌ಗುಂದದ ಮಾದಿರಾಜ ಹೇಳಿರುವುದನ್ನು ನೋಡಿ :

> ಬಿಂದುವಿನೊಂದು ಶೋಭೆ, ತಲೆಕಟ್ಟಿನ ಪೊರ್ಕುಳ ಚೆಲ್ವು, ಮಾತ್ರೆಯೊಳ್
> ನಿಂದ ಬೆಡಂಗು, ಬಳ್ಳಿಯೊಳೊಡಂಬಡುತಿರ್ಪ ನಯಂ, ವಿಸರ್ಗದೊಳ್
> ಪೊಂದಿರಲಕ್ಕರಕ್ಕೆ ಬರೆವಂ ಚದುರರ್ ಪರಿವರ್ಣಿಸಲ್ ನವಿಲ್-
> ಗುಂದದ ಮಾದಿರಾಜ ವಿಬುಧಂ ವಿಬುಧೋದಿತ ನವ್ಯಕಾವ್ಯಮಂ.

ಮೇಲಿನ ಮಾತು ಉತ್ಪ್ರೇಕ್ಷೆಯಲ್ಲ ಎನ್ನುವುದು ನಮ್ಮ ಪ್ರಾಚೀನ ತಾಡವೋಲೆ ಹಸ್ತಪ್ರತಿಗಳನ್ನು ಬರೆದಿರುವ ಲಿಪಿಕಾರರ ಬರಹವನ್ನು ನೋಡಿದರೆ ಗೊತ್ತಾಗುತ್ತದೆ. ಕನ್ನಡ ಲಿಪಿ ಮಾತ್ರವಲ್ಲ – ನಮ್ಮ ದೇಶದ ಯಾವುದೇ ಭಾಷೆಯ ಹಸ್ತಪ್ರತಿಗಳನ್ನು

